# ಕನ್ನಡ ಟೀಕಿನ ವಚನಗಳು : ಒಂದು ಅಧ್ಯಯನ

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ನಾಗರಾಜ ಪ. ನಾಡಗೌಡ
ಕನ್ನಡ ಉಪನ್ಯಾಸಕರು
ಶ್ರೀ ಸಂಗಮೇಶ್ವರ ಪದವಿಪೂರ್ವ ಕಾಲೇಜು, ಕೂಡಲಸಂಗಮ

ಮಾರ್ಗದರ್ಶಕರು
ಡಾ. ಕೆ. ರವೀಂದ್ರನಾಥ
ಸಹ ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ, ಕೂಡಲಸಂಗಮ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - 583 276
2013

# ಕನ್ನಡ ಟೀಕಿನ ವಚನಗಳು : ಒಂದು ಅಧ್ಯಯನ

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು

**ನಾಗರಾಜ ಪ. ನಾಡಗೌಡ**

ಕನ್ನಡ ಉಪನ್ಯಾಸಕರು

ಶ್ರೀ ಸಂಗಮೇಶ್ವರ ಪದವಿಪೂರ್ವ ಕಾಲೇಜು, ಕೂಡಲಸಂಗಮ

ಮಾರ್ಗದರ್ಶಕರು

**ಡಾ. ಕೆ. ರವೀಂದ್ರನಾಥ**

ಸಹ ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ, ಕೂಡಲಸಂಗಮ**

**ಭಾಷಾ ನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ವಿದ್ಯಾರಣ್ಯ - ೫೮೩ ೨೭೬**

ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

**ಡಾ.ಕೆ.ರವೀಂದ್ರನಾಥ**
ಮಾರ್ಗದರ್ಶಕರು

## ದೃಢೀಕರಣ ಪತ್ರ

**ಶ್ರೀ ನಾಗರಾಜ ಪ. ನಾಡಗೌಡ** ಇವರು **"ಕನ್ನಡ ಟೀಕಿನ ವಚನಗಳು : ಒಂದು ಅಧ್ಯಯನ"** ಎಂಬ ಸಂಶೋಧನ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ, ಕೂಡಲಸಂಗಮದ ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರದಲ್ಲಿ ಅಧ್ಯಯನ ನಡೆಸಿ ಸಿದ್ಧಪಡಿಸಿದ್ದಾರೆ. ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿ ಅಥವಾ ಡಿಪ್ಲೋಮಾಗಳಿಗೆ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲಾಗಿದೆ.

**ದಿನಾಂಕ** : ೨೯.೦೭.೨೦೧೩

**(ಡಾ.ಕೆ.ರವೀಂದ್ರನಾಥ)**

# ಪ್ರಮಾಣ ಪತ್ರ

**"ಕನ್ನಡ ಟೀಕಿನ ವಚನಗಳು : ಒಂದು ಅಧ್ಯಯನ"** ಎಂಬ ಮಹಾಪ್ರಬಂಧವನ್ನು ಡಾ.ಕೆ.ರವೀಂದ್ರನಾಥ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಇದನ್ನು ಕೂಡಲಸಂಗಮದ ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರದಲ್ಲಿ ಅಧ್ಯಯನ ನಡೆಸಿ, ಕನ್ನಡ ವಿಶ್ವವಿದ್ಯಾಲಯದ ಭಾಷಾನಿಕಾಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ನಾನು ಯಾವುದೇ ಪದವಿಗಾಗಿ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

(ನಾಗರಾಜ ಜ. ನಾಡಗೌಡ)

ದಿನಾಂಕ : ೨೯.೦೭.೨೦೧೩

ಸ್ಥಳ : ಕೂಡಲಸಂಗಮ

## ಪರಿವಿಡಿ

# "ಕನ್ನಡ ಟೀಕಿನ ವಚನಗಳು : ಒಂದು ಅಧ್ಯಯನ"

***

೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಭಾರತೀಯ ಟೀಕಾಸಾಹಿತ್ಯಕ್ಕೆ ಶ್ರೀಮಂತ ಪರಂಪರೆ ಇದೆ. ಅದಕ್ಕೆ ವೇದಗಳ ಕಾಲದಷ್ಟು ಪ್ರಾಚೀನ ಇತಿಹಾಸವಿದೆ. ಕರ್ನಾಟಕದಲ್ಲಿಯೂ ಕೂಡಾ ಕ್ರಿ.ಶ. ಏಳನೇಯ ಶತಮಾನದಷ್ಟು ಪ್ರಾಚೀನತೆ ಮತ್ತು ಸುದೀರ್ಘ ಪರಂಪರೆ ಇದೆ. ವಚನ ಸಾಹಿತ್ಯಕ್ಕೆ ಅನ್ವಯಿಸಿ ಹೇಳುವುದಾದರೆ ಹನ್ನೆರಡನೆಯ ಶತಮಾನದಿಂದಲೇ ವಚನಗಳ ಮೌಲ್ಯಮಾಪನದ ಚಿಂತನೆ-ಪರಾಮರ್ಶೆಗಳು ನಡೆದಿರಬಹುದಾಗಿದೆ. ಬಸವಣ್ಣನವರ "ಹತ್ತು ಸಾವಿರ ಗೀತವ ಹಾಡಿ ಅರ್ಥವಿಟ್ಟಲ್ಲಿ ಫಲವೇನು ಮುಟ್ಟುವ ತೆರನನರಿಯದನ್ನಕ್ಕ"[೧] ಎಂಬ ಮಾತು ಮತ್ತು "ಮಹಾದೇವಿ ಎಂಬ ಶರಣೆಗೆ ಚನ್ನಮಲ್ಲಪ್ರಭು ಇನ್ನೂರ ಹದಿನಾರು ಸಕೀಲದ ಟಿಪ್ಪಣದರ್ಥವ ಬೋಧಿಸುವ ಸಮಯದಲ್ಲಿ"[೨] ಎಂಬ ಹಸ್ತಪ್ರತಿಯೊಂದರ ಉಲ್ಲೇಖಗಳು ಲಭಿಸುತ್ತವೆ. ಆದರೆ, ವಚನ ಟೀಕಾಗ್ರಂಥಗಳು ಮಾತ್ರ ಲಭಿಸುವದಿಲ್ಲ.

'ಊರು ಕೆಟ್ಟು ಸೂರೆಯಾಗುವಾಗ ಆರಿಗಾರೂ ಇಲ್ಲ'ವೆಂಬಂತೆ ಕಲ್ಯಾಣ ಕ್ರಾಂತಿಯ ಪರಿಣಾಮ ಶಿವಶರಣರು ನಾಡಿನ ಹಲವಾರು ದಿಕ್ಕುಗಳತ್ತ ವಚನ ಕಟ್ಟುಗಳೊಂದಿಗೆ ಚದುರಿ ಹೋದರು. ಪ್ರವಾಹದೋಪಾದಿಯಲ್ಲಿ ಹರಿದು ಬಂದ ವಚನ ಸಾಹಿತ್ಯ ನೆಲದ ಮರೆಯ ನಿಧಾನದಂತಾಗಿತ್ತು. ಇಂತಹ ಸಂದರ್ಭದಲ್ಲಿ ನಾಡಿನ ಮಠ ಮಾನ್ಯಗಳಲ್ಲಿದ್ದ ವಚನ ಕಟ್ಟುಗಳನ್ನು ಪುನಃ ಶೋಧಿಸಿ; ಸಂಗ್ರಹ-ಸಂಕಲನ-ಸಂಪಾದನೆ ರೂಪದಲ್ಲಿ ಸ್ಥಲಕಟ್ಟಿಗನುಗುಣವಾಗಿ ಜೋಡಿಸಿ, ಅವುಗಳಿಗೆ ಟೀಕೆ, ವ್ಯಾಖ್ಯಾನಗಳನ್ನು ಬರೆಯುವ ಕಾರ್ಯ ೧೫ನೇ ಶತಮಾನದ ವಿಜಯನಗರದ ಅರಸ ಪ್ರೌಢದೇವರಾಯನ ಕಾಲದಲ್ಲಿ ನಡೆಯಿತು. ನೂರೊಂದು ವಿರಕ್ತರು ಆರಂಭಿಸಿದ ಈ ಪರಂಪರೆ ಏಳುನೂರೊಂದು ವಿರಕ್ತರಾಧಿಯಾಗಿ ೧೫ರಿಂದ ೧೮ನೇ ಶತಮಾನದ ಕಾಲಾವಧಿಯವರೆಗೆ ವಚನ ಟೀಕು ಸಾಹಿತ್ಯ ಹುಲಸಾಗಿ ಬೆಳೆದು ಬಂತು. ಇಂತಹ ಶ್ರೀಮಂತ ಪರಂಪರೆ ಮತ್ತು ಇತಿಹಾಸವುಳ್ಳ ವಚನ ಟೀಕು ಸಾಹಿತ್ಯಕ್ಕೆ ಶಿಸ್ತುಬದ್ಧವಾದ ನೆಲೆ-ಹಿನ್ನಲೆಯಿದ್ದರೂ ಈ ಕ್ಷೇತ್ರದತ್ತ ಗಂಭೀರವಾದ ಚಿಂತನ-ಮಂಥನ

ನಡೆದಿರಲಿಲ್ಲ. ಈ ದಿಶೆಯಲ್ಲಿ ಪ್ರಸ್ತುತ ಸಂಶೋಧನಾ ಮಹಾಪ್ರಬಂಧ ಶರಣರ ವಚನಗಳಿಗೆ ಶಬ್ದಾರ್ಥ-ಭಾವಾರ್ಥ ಸಹಿತವಾಗಿ ಬರೆಯಲಾದ ಶಾಸ್ತ್ರಸಾಹಿತ್ಯವೆಂದು ಪರಿಗಣಿತವಾದ 'ಟೀಕುಸಾಹಿತ್ಯ'ದ ಕುರಿತು ಶಿಸ್ತುಬದ್ಧವಾದ ಅಧ್ಯಯನ ನಡೆಸಲು ಉದ್ದೇಶಿಸಿದೆ. ಅಂದರೆ, ವಚನಗಳಿಗೆ ಬರೆಯಲಾದ ಟೀಕು ಕೃತಿಗಳ ಹೆಸರು, ಟೀಕಾಕಾರರು, ಅವರ ಕಾಲ, ಟೀಕಾಸ್ವರೂಪ ಕುರಿತು ಇಲ್ಲಿ ಮೊದಲ ಬಾರಿಗೆ ಅಧ್ಯಯನ ಮಾಡುವ ಆಶಯವಿದೆ. ಕಾಲದ ಮರೆಯಲ್ಲಿ ಮಸುಕಾಗಿದ್ದ ಟೀಕಾಸಾಹಿತ್ಯದ ನೆಲೆ-ಬೆಲೆಯನ್ನು, ವೈಶಿಷ್ಟ್ಯಗಳನ್ನು, ಇದರ ಮಿತಿಗಳನ್ನು ಗುರುತಿಸಲು ಮಹಾಪ್ರಬಂಧವು ಪ್ರಯತ್ನಿಸಿದೆ.

ಸಮಗ್ರ ವಚನ ಸಾಹಿತ್ಯದ ಸಂಯೋಜನ ಸ್ವರೂಪವನ್ನು ಇಲ್ಲವೇ ಅಧ್ಯಯನದ ಮಾದರಿಯನ್ನು ಮೂರು ಮುಖ್ಯ ನೆಲೆಗಳಲ್ಲಿ ಗುರುತಿಸುವ ಪ್ರಯತ್ನಗಳು ಕನ್ನಡದಲ್ಲಿ ನಡೆದುಬಂದಿವೆ. ಹೀಗಾಗಿ, ಸಕಲಪುರಾತನರ ವಚನ ಕಟ್ಟುಗಳು, ಸ್ಥಲಕಟ್ಟಿನ ವಚನಗಳು ಮತ್ತು ಶೂನ್ಯ ಸಂಪಾದನೆಗಳು ಎಂದು ಮೂರು ರೀತಿಯಲ್ಲಿ ಪರಿಭಾವಿಸಿಕೊಂಡು ವಚನ ಅಧ್ಯಯನದ ಪ್ರಯತ್ನಗಳು ನಡೆದಿವೆ. ಅಲ್ಲದೇ, ಆ ವಚನಗಳನ್ನು ಸಂಯೋಜಿಸಿದ ಉಪಕ್ರಮಗಳನ್ನು ಕುರಿತು ಅಧ್ಯಯನ ಮಾಡುವ ಸಂದರ್ಭದಲ್ಲಿ ವಚನಗಳ ಸಂಗ್ರಹ, ಸಂಕಲನ ಮತ್ತು ಸಂಪಾದನ ನೆಲೆಗಳು ತುಂಬಾ ಮುಖ್ಯವೆನಿಸುತ್ತವೆ. ವಿದ್ವಾಂಸರಾದ ಡಾ. ಕಲಬುರ್ಗಿಯವರು ಹೇಳುವಂತೆ – "ಸಕಲ ಪುರಾತನರ ವಚನಗಳಂತಹ ಸಂಗ್ರಹದಲ್ಲಿ ಎಲ್ಲ ಶರಣ ವ್ಯಕ್ತಿಗಳಿಗೂ ಸಮಾನ ಸ್ಥಾನ, ಏಕೋತ್ತರ ಶತಸ್ಥಲದಂಥ ಸಂಕಲನದಲ್ಲಿ ಶರಣ ವ್ಯಕ್ತಿಗಳು ಗೌಣ, ಶರಣತತ್ವಗಳಿಗೆ ಪ್ರಧಾನಸ್ಥಾನ, ಸಂಪಾದನೆಯಲ್ಲಿ ಶರಣ ವ್ಯಕ್ತಿಗಳನ್ನು ಸಂದರ್ಶಿಸುತ್ತ ಅವರಿಗೆ ತತ್ವಗಳನ್ನು ಬೋಧಿಸುವ ಪ್ರಭುದೇವನೆಂಬ ವ್ಯಕ್ತಿಗೆ ಪ್ರಧಾನ ಸ್ಥಾನ."[೩] ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದದ್ದು ವಚನ ಸಂಕಲನ ಪ್ರಕಾರವನ್ನು. ವಚನ ಸಂಗ್ರಹ ಕಟ್ಟುಗಳು ಸಿದ್ಧವಾದ ಬಳಿಕ ಈ ವಚನಗಳನ್ನು ಒಂದು ತತ್ವ ಇಲ್ಲವೇ ಸಿದ್ಧಾಂತಕ್ಕೆ ಅನ್ವಯಿಸಿ ಅಧ್ಯಯನ ಮಾಡುವ ಉಪಕ್ರಮಗಳು ನಡೆದವು. ಅಂದರೆ, ಸಂಗ್ರಹಕ್ಕಿಂತ ಸಂಕಲನ ಕಾರ್ಯ ಪಾಂಡಿತ್ಯವನ್ನು, ಪ್ರತಿಭೆಯನ್ನು ಬಯಸುತ್ತದೆ. ಸಂಕಲನ ಕೃತಿಗಳು ಸಾಮಾನ್ಯವಾಗಿ ಸ್ಥಲಕಟ್ಟಿನ ಕೃತಿಗಳಾಗಿ ರೂಪುಗೊಂಡಿವೆ. ಇದಕ್ಕೆ ಕನ್ನಡದಲ್ಲಿ ಸಿಗುವ ಏಕೋತ್ತರ ಶತಸ್ಥಲ ಕಟ್ಟುಗಳು, ಲಿಂಗಲೀಲಾ ವಿಲಾಸ ಚಾರಿತ್ರ, ವಿಶೇಷಾನುಭವ ಷಟಸ್ಥಲ, ಆಚರಣೆಯ ವಚನ, ಶೀಲಸಂಪಾದನೆಯ ವಚನ ಹೀಗೆ ಇನ್ನೂ ಅನೇಕ ಕೃತಿಗಳು ಸೃಷ್ಟಿಗೊಂಡವು. ಇವುಗಳಲ್ಲಿ ಕೆಲವು ಕೃತಿಗಳಿಗೆ ಟೀಕು-ವ್ಯಾಖ್ಯಾನ ಬರೆದಿದ್ದಾರೆ. ಇದರಿಂದಾಗಿ ಸಂಕಲನ ಕೃತಿಗಳಂತೆ ಟೀಕು ಕೃತಿಗಳು ಧಾರ್ಮಿಕ ಕೈಪಿಡಿಯಾಗಿ ಪ್ರಾಚೀನ ಕಾಲಕ್ಕಾಗಲೇ ಮಹತ್ವವನ್ನು ಪಡೆದಿರಬಹುದು.

ಈ ಹಿನ್ನಲೆಯಲ್ಲಿ ಬಸವಣ್ಣನವರ ವಚನಗಳಿಗೆ ಐದು ಜನ ಟೀಕೆ ಬರೆದರೆ, ಬಸವೋತ್ತರ ಯುಗದ ತೋಂಟದ ಸಿದ್ಧಲಿಂಗ ಯತಿಗಳ ವಚನಗಳಿಗೆ ಐದು ಜನ ಟೀಕೆ ಬರೆದರು, ಹಾಗೆಯೇ ಇತರ ಶರಣರ ವಚನಗಳಿಗೆ ಬರೆದಂತಹ ಟೀಕಾ ಕೃತಿಗಳು ಉಪಲಬ್ಧವಿವೆ. ಇದುವರೆಗೆ ವಚನಸಾಹಿತ್ಯವನ್ನು

ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಹಿನ್ನಲೆಯಲ್ಲಿ ವಿದ್ವಾಂಸರು ಅಧ್ಯಯನ ಮಾಡಿದ್ದಾರೆ. ಇದನ್ನು ಹೊರತುಪಡಿಸಿದರೆ ಶೂನ್ಯಸಂಪಾದನೆಗಳನ್ನು ಕುರಿತು ವಿಮರ್ಶೆ ಪರಾಮರ್ಶೆಗಳು ಕೂಡಾ ನಡೆದಿವೆ. ಆದರೆ, ಟೀಕಿನ ವಚನಗಳನ್ನು ಕುರಿತು ಅಧ್ಯಯನ ನಡೆದಿರುವದಿಲ್ಲ. ಅಲ್ಲಲ್ಲಿ ಬಿಡಿಲೇಖನಗಳು ಪ್ರಕಟವಾಗಿದ್ದವು. ಇಂತಹ ಕೊರತೆಯನ್ನು ತೊಡೆದುಹಾಕಲು ಕನ್ನಡ ಟೀಕಿನ ವಚನಗಳು ಹೆಸರಿನ ಈ ಮಹಾಪ್ರಬಂಧ ಸಮಗ್ರ ಅಧ್ಯಯನ ಕೈಗೊಳ್ಳಲು ಉದ್ದೇಶಿಸಿದೆ.

ವಚನ ಸೃಷ್ಟಿಗೂ, ಸೃಷ್ಟಿಗೊಂಡ ವಚನಗಳಿಗೆ ಬರೆದ ಟೀಕೆಗೂ ವ್ಯತ್ಯಾಸವಿದೆ. ಆಧುನಿಕ ಅಧ್ಯಯನ ಶಿಸ್ತುಗಳಲ್ಲಿ ಒಂದಾದ ಕಾವ್ಯವಿಮರ್ಶೆಯ ರೂಪದಲ್ಲಿ ಬೆಳೆದು ಬಂದ ಟೀಕು ಸಾಹಿತ್ಯ ಕನ್ನಡ ಭಾಷಾ ಸಂಪತ್ತಿನ, ಶಬ್ದಸಂಪತ್ತಿನ ಮತ್ತು ರಸಗ್ರಹಣದ ದೃಷ್ಟಿಯಿಂದ ತತ್ವ, ಸಿದ್ಧಾಂತ ಮತ್ತು ಅನುಭಾವದ ನೆಲೆಯಲ್ಲಿ ನಿರ್ವಚನಗೊಂಡ ಪರಿ ಅನನ್ಯವಾದುದು. ಹೀಗಾಗಿ, ಟೀಕಾಸಾಹಿತ್ಯದ ಮೀಮಾಂಸೆ ಮತ್ತು ವಿಮರ್ಶೆಯ ಹೊರ ಮತ್ತು ಒಳ ಮೈಯನ್ನು ಬಿಡಿಸಿ ನೋಡುವುದು ಈ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

ಸಂಸ್ಕೃತ ಸೇರಿದಂತೆ ಹಲವಾರು ಭಾಷೆಗಳ ಪರಿಚಯವಿದ್ದ ವಚನಕಾರರು ಕನ್ನಡ ಭಾಷೆಯಲ್ಲಿ 'ವಚನ'ಗಳನ್ನು ಬರೆದುದರಿಂದ ಇವು ಸರಳ, ನೇರ ಮತ್ತು ಸಂಕ್ಷಿಪ್ತವಾಗಿದ್ದವು. ಆದರೆ, ಮತಧರ್ಮ ಪ್ರಸಾರವು 'ವಚನ ಸಾಹಿತ್ಯ'ದ ಅಂಗವಾದುದರಿಂದ ಧರ್ಮತತ್ವಗಳನ್ನು ಬಹುತೇಕ ವಚನಕಾರರು 'ಬೆಡಗಿನ ವಚನ'ಗಳಲ್ಲಿ ದಾಖಲಿಸುವ ಪ್ರಯತ್ನ ಮಾಡಿದರು. ಇದರಿಂದಾಗಿ 'ವಚನ'ಗಳು ಕೂಡಾ ಕಾಲಾಂತರದಲ್ಲಿ ಅರ್ಥವಾಗದೇ ಹಲವಾರು ಗೊಂದಲಗಳಿಗೆ ಕಾರಣವಾಗಿರಬೇಕು. ಪರಮತೀಯರಂತೂ ಇಂತಹ ಬೆಡಗಿನ ವಚನಗಳನ್ನು ಅಪಾರ್ಥ ಇಲ್ಲವೇ ಕುಚೋದ್ಯ ರೀತಿಯಲ್ಲಿ ಬಳಸಿದ್ದರಿಂದ ಇವುಗಳ ನಿಜವಾದ ಅರ್ಥವನ್ನು ಬಿಡಿಸಿ ಹೇಳುವ ಅಗತ್ಯ ೧೫ನೆಯ ಶತಮಾನದ ವೇಳೆಗೆ ಕಂಡುಬಂದಿರಬೇಕು. ಏಕೆಂದರೆ, ವಿಜಯನಗರದ ಅರಸ ಪ್ರೌಢದೇವರಾಯನ ಕಾಲದಲ್ಲಿದ್ದ ಮಹಾಲಿಂಗದೇವ, ಜಕ್ಕಣಾರ್ಯ, ಕುಮಾರ ಬಂಕನಾಥ, ಕಲ್ಲುಮಠದ ಪ್ರಭುದೇವ ಮುಂತಾದವರು ವಚನಗಳ ಸಂಗ್ರಹ, ಸಂಕಲನ, ಸಂಪಾದನೆಯ ಜೊತೆಜೊತೆಗೆ ವ್ಯಾಖ್ಯಾನಗಳನ್ನು ಬರೆಯುವದಕ್ಕೆ ಸಮರೋಪಾದಿಯಲ್ಲಿ ಕಾರ್ಯ ಮಾಡಿದರು. ಶಿವಶರಣರ ಬೆಡಗಿನ ವಚನಗಳನ್ನು ಟೀಕಿಸುತ್ತಿದ್ದ ಪರಧರ್ಮೀಯರಿಗೆ ಈ ಸಂಕಲನಕಾರರು ಅಂದಿನ ಸಭೆ-ಸಮಾರಂಭಗಳಲ್ಲಿ ವಚನಟೀಕು ಇಲ್ಲವೇ ವ್ಯಾಖ್ಯಾನ ಹೇಳುವ ಮೂಲಕ ತಕ್ಕುದಾದ ಉತ್ತರವನ್ನು ನೀಡಿರಬೇಕು. ಈ ರೀತಿ ಆರಂಭಗೊಂಡ ಈ ಪ್ರಕ್ರಿಯೆಯು ಧಾರ್ಮಿಕ ಸಂಘರ್ಷಗಳಿಗೂ ಎಡೆಮಾಡಿಕೊಟ್ಟಿರಬೇಕು. ಈ ಎಲ್ಲ ಸಮಸ್ಯೆಗಳಿಗೆ ಮತ್ತು ಸಂಘರ್ಷಗಳಿಗೆ ಇತಿಶ್ರೀ ಹಾಡಲು 'ಟೀಕು' ಇಲ್ಲವೇ 'ವ್ಯಾಖ್ಯಾನ' ಬರೆಯಲು ಪ್ರೇರಣೆಯಾದುದರಿಂದ ಟೀಕಾಕಾರರು ಮುಕ್ತಕ ಸಾಹಿತ್ಯವಾಗಿದ್ದ ವಚನಸಾಹಿತ್ಯವನ್ನು 'ಲಿಂಗಾಯತ ಸಾಹಿತ್ಯ'ವೆಂದು ಪರಿಗಣಿಸುತ್ತಲೇ 'ಲಿಂಗಾಯತ ಧರ್ಮ'ವೊಂದಕ್ಕೆ ಸಾಂಸ್ಥಿಕವಾದ ಚೌಕಟ್ಟಿನ ಬುನಾದಿಯನ್ನು ಹಾಕುವಂತಾದುದು ಕಾಲದ ಅನಿವಾರ್ಯತೆಯಾಗಿರಲು ಸಾಧ್ಯವಿದೆ ಎನ್ನಬಹುದು.

ಜೈನ ಮತ್ತು ವೈದಿಕ ಧರ್ಮಗಳ ತೀವ್ರವಾದ ಪೈಪೋಟಿಯನ್ನು ಮೆಟ್ಟಿ ನಿಲ್ಲಲು ಬಸವಾದಿ ಶಿವಶರಣರ ವಚನಗಳನ್ನು ವೇದಾಗಮಶಾಸ್ತ್ರ ಪ್ರಮಾಣಗೊಳಿಸುವ ಕಾರ್ಯ ನಡೆಯುವುದರ ಜೊತೆಗೆ ಅವನ್ನು 'ಷಟಸ್ಥಲ'ಗಳಲ್ಲಿ ವಿಭಾಗಿಸಿ 'ಲಿಂಗಾಯತ' ಧರ್ಮದ ತಾತ್ವಿಕ ಸಿದ್ಧಾಂತವನ್ನಾಗಿ ಪ್ರತಿಪಾದಿಸಲು ಸಂಕಲ್ಪಮಾಡಿದರು. ಹೀಗಾಗಿ, ತತ್ವಪ್ರದಾನವಾದ ಬೆಡಗಿನ ವಚನಗಳಿಗೆ ಅನೇಕರು ಟೀಕು ಬರೆಯುವ ಮೂಲಕ 'ವಚನ ಸಾಹಿತ್ಯ'ದ ಮೂಲ ಉದ್ದೇಶವನ್ನು ಕಳಚಿಹಾಕಿದರು. ಪರಿಣಾಮ ವಚನಗಳು ಕೇವಲ ಲಿಂಗಾಯತ ಧರ್ಮದ ಚೌಕಟ್ಟಿನಲ್ಲಿ ಬಂಧಿಸಲ್ಪಟ್ಟವು. ಇದಕ್ಕೆ ಉದಾಹರಣೆಯೆಂದರೆ ವಚನಗಳಿಗೆ ಬರೆದ ಕನ್ನಡ ಟೀಕಾ ಸಾಹಿತ್ಯವೆನ್ನಬಹುದು.

ಟೀಕು ಇಲ್ಲವೇ ವ್ಯಾಖ್ಯಾನ ಕೃತಿಗಳ ರಚನೆಗೆ ಆ ಕಾಲದ ಅಧ್ಯಯನ ವ್ಯವಸ್ಥೆಯು ಕಾರಣವಾಗಿದೆ. ಪ್ರಾಚೀನ ವಿದ್ಯಾಕೇಂದ್ರಗಳಲ್ಲಿ ವೇದಾದ್ಯಯನಗಳಂತೆ ಇವುಗಳಿಗೆ ಬರೆದ ವ್ಯಾಖ್ಯಾನಗಳನ್ನು ವಿದ್ಯಾರ್ಥಿಗಳಿಗೆ ಬೋಧಿಸಲಾಗುತ್ತಿತ್ತು. ೧೦ನೇ ಶತಮಾನದ ಕಾಡಿಯೂರಿನ ಅಗ್ರಹಾರದಲ್ಲಿ

"ವ್ಯಾಕರಣಮರ್ಥಶಾಸ್ತ್ರ
ನೀಕಂ ಸಾಹಿತ್ಯ ವಿದ್ಯೆ ಎತಿಹಾಸಂ ಮಿ
ಕ್ಕೇ ಕಾಕರಮಿನಿತರ್ಕ
ಟೀಕಂ ಬರೆಯಲ ಸಮಗ್ರರಭ್ಯಾಸಿಸುವರಂ"

ಂದು ಹೇಳಲಾಗಿದೆ. ಅಂದರೆ, ಪ್ರಾಚೀನ ವಿದ್ಯಾಕೇಂದ್ರಗಳು ಸಾಹಿತ್ಯ, ಇತಿಹಾಸ, ವ್ಯಾಕರಣ ಮತ್ತು ಶಾಸ್ತ್ರಗಳ ಅಧ್ಯಯನದ ಜೊತೆಗೆ ಟೀಕು, ವ್ಯಾಖ್ಯಾನಗಳನ್ನು ಉನ್ನತ ಅಧ್ಯಯನದಲ್ಲಿ ಅಳವಡಿಸಿಕೊಂಡಿರಬೇಕು. ಇದನ್ನು ಗುರುವರ್ಗವು 'ಟಿಕಾಸ್ಥಾನಗಳಲ್ಲಿ ತಾವು ಬೋಧಿಸುವ ವಿಷಯಗಳಿಗೆ ಟಿಪ್ಪಣ, ಟೀಕೆ, ವ್ಯಾಖ್ಯಾನ, ಭಾವಾರ್ಥ ಬರೆದುಕೊಳುವ ಪದ್ಧತಿ ಇರಬೇಕು. ಹೀಗೆ, ಕನ್ನಡ ಟೀಕಾಸಾಹಿತ್ಯವು ಪ್ರಾಚೀನ ಅಧ್ಯಯನದ ಶಿಸ್ತಾಗಿ ಮತ್ತು ಧರ್ಮವೊಂದಕ್ಕೆ ತಾತ್ವಿಕ ಸ್ವರೂಪ ನೀಡುವ ಉದ್ದೇಶದಿಂದ ವ್ಯಾಪಕವಾಗಿ ರಚನೆಯಾಗಿದ್ದನ್ನು ಕಾಣುತ್ತೇವೆ.

ಅಂದರೆ, ಬಸವಣ, ಅಲ್ಲಮಪ್ರಭುದೇವ, ತೋಂಟದ ಸಿದ್ಧಲಿಂಗೇಶ್ವರ, ಕಾಡಸಿದ್ದೇಶ್ವರರಂತಹ ಕವ್ಯಕ್ತಿ ವಚನಗಳಿಗೆ ಅನೇಕರು ಬರೆದಿರುವ ಟೀಕಾಕೃತಿಗಳು ಮತ್ತು ಅನೇಕ ವ್ಯಕ್ತಿ ವಚನಗಳಿಗೆ ಕಲ್ಲುಮ 'ದ ಪ್ರಭುದೇವ, ಸಿಂಗಳದ ಸಿದ್ಧಬಸವರಾ , ಕೋತ್ತರ ಶತಸ್ಥಲ ಟೀಕಾಕೃತಿಗಳು ಹೀಗೆ ಬರೆಯಲಾದ ಟೀಕು ಕೃತಿಗಳನ್ನು ಸಮಗ್ರವಾಗಿ ಗುರುತಿಸಿ, ಇಲ್ಲಿ ದಾ ಲಿಸಿ ಪರಮಾರ್ಶಿಸುವ ಉದ್ದೇಶ ಇಟ್ಟುಕೊಳಲಾಗಿದೆ. ಅಂದರೆ, ತುಂಬಾ ನಿರ್ಲಕ್ಷ್ಯಕ್ಕೆ ಳಗಾಗಿರುವ ಟೀಕಾಸಾಹಿತ್ಯವನ್ನು ಇದೇ ಮೊದಲ ಬಾರಿಗೆ ಅಧ್ಯಯನಕ್ಕೆ ಳಪಡಿಸಿ ಟೀಕಾಸಾಹಿತ್ಯದ ಮಹತ್ವವನ್ನು ರು ುವಾತುಪಡಿಸಲು ಉದ್ದೇಶಿಸಲಾಗಿದೆ. ಇದಲ್ಲದೇ, ೧ ನೇ ಶತಮಾನದ ನೂರೊಂದು ವಿರಕ್ತರು, ಅನಂತರದ ಳುನೂರೊಂದು ವಿರಕ್ತರುಗಳಲ್ಲಿ ಅನೇಕರು ಟೀಕುಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡಿರುವುದನ್ನು, ಇವರಿಗೆ ಪ್ರೇರಣೆ

ನೀಡಿದ ಪರಂಪರೆಯನ್ನು ಗುರುತಿಸಲಾಗಿದೆ. ಏಕೆಂದರೆ, ನಾಡಿನ ಮಠ-ಮಂದಿರ-ಬಸದಿಗಳಲ್ಲಿ ಅಜ್ಞಾತವಾಗಿದ್ದ ವಚನಟೀಕಾ ಹಸ್ತಪ್ರತಿಗಳನ್ನು ವಿಶ್ವವಿದ್ಯಾಲಯಗಳ ವಿದ್ವಾಂಸರು 'ಹಸ್ತಪ್ರತಿಸೂಚಿ'ಗಳಲ್ಲಿ ಪ್ರಕಟಿಸಿದ್ದಲ್ಲದೇ, ಬಹುತೇಕ ಟೀಕುಗಳನ್ನು ಸಂಪಾದಿತ ಕೃತಿಗಳಾಗಿ ಪ್ರಕಟಿಸುವ ಮಹತ್ತರ ಕಾರ್ಯಮಾಡಿದ್ದರು. ಇವೆಲ್ಲಾ ಒಂದೆಡೆ ಸಮನ್ವಯಗೊಳ್ಳದೇ ಇದ್ದುದರಿಂದ ಪ್ರಸ್ತುತ ಅಧ್ಯಯನದಲ್ಲಿ ಟೀಕಾಸಾಹಿತ್ಯ ಅಧ್ಯಯನದ ನೆಲೆಯನ್ನು ಒಂದು ಶಿಸ್ತಿಗೆ ಒಳಪಡಿಸಿ, ಇದಕ್ಕೊಂದು ಸ್ವರೂಪ ನೀಡುವ ಉದ್ದೇಶವನ್ನು ಈ ಅಧ್ಯಯನ ಹೊಂದಿರುತ್ತದೆ.

ವಚನಸಾಹಿತ್ಯವನ್ನು ಕುರಿತು ಬಹುಮುಖ ನೆಲೆಗಳಲ್ಲಿ ಸಂಶೋಧನೆಗಳು ನಡೆದಿವೆ. ಆದರೆ ಶರಣರ ವಚನಗಳಿಗೆ ಬರೆಯಲಾದ ಟೀಕಾಕೃತಿಗಳನ್ನು ಆಧಾರವಾಗಿಟ್ಟುಕೊಂಡು ಇಲ್ಲಿವರೆಗೆ ಅಧ್ಯಯನಗಳು ನಡೆದಿಲ್ಲ. ಇಲ್ಲಿ ಟೀಕಿನವಚನಗಳನ್ನು ಕುರಿತು ಸಂಶೋಧನೆ ಮಾಡಿರುವುದರಿಂದ ಪ್ರಸ್ತುತ ಅಧ್ಯಯನವು ವಚನಸಾಹಿತ್ಯದ ಬಹುಮುಖ ಅನನ್ಯತೆಯನ್ನು, ಟೀಕು ರಚನೆಯ ಪ್ರಸ್ತುತ ಅಗತ್ಯವನ್ನು, ಟೀಕಾಕಾರರ ವಿದ್ವತ್ ಪರಂಪರೆಯನ್ನು, ಟೀಕೆಗಳ ಗದ್ಯ ಭಾಷೆಯ ಸೊಗಡನ್ನು, ಟೀಕಾಕಾರರ ಜೀವನ ವಿಧಾನ ಮತ್ತು ಸಂಸ್ಕೃತಿಯನ್ನು ಅರಿಯುವ ಮೂಲಕ ಟೀಕಾಕಾರರ ಇತಿಹಾಸದ ಮೇಲೆ ಬೆಳಕು ಚೆಲ್ಲಲು ಕಾರಣವಾಗಿರುವ ಅಂಶಗಳನ್ನು ಇಲ್ಲಿ ಪ್ರಥಮಬಾರಿಗೆ ಗುರುತಿಸುವ ಉದ್ದೇಶವಿದೆ.

ವಚನಸಾಹಿತ್ಯ ಅಧ್ಯಯನದಿಂದ ದೂರವುಳಿದುಕೊಂಡಿದ್ದ ವಚನಟೀಕಾ ಸಾಹಿತ್ಯದ ಬಗ್ಗೆ ನಾಡಿನ ವಿದ್ವಾಂಸರು ಬಿಡಿಯಾದ ಲೇಖನಗಳಲ್ಲಿ ಪ್ರಕಟಿಸಿದ್ದರೆ ಹೊರತು ಇಡಿಯಾಗಿ ಪ್ರಕಟಿಸಿರಲಿಲ್ಲ. ಹೀಗೆ, ಅಜ್ಞಾತವಾಗಿ, ನಿರ್ಲಕ್ಷಕ್ಕೆ ಒಳಗಾಗಿದ್ದ ಟೀಕಾಸಾಹಿತ್ಯವನ್ನು ಸಮಗ್ರವಾಗಿ ಅಧ್ಯಯನ ಮಾಡುತ್ತ, ಟೀಕುಗಳ ಮಹತ್ವ ಮತ್ತು ಇದರ ಇತಿಮಿತಿಗಳ ಕುರಿತು ಇದೇ ಮೊದಲ ಪ್ರಯತ್ನವಾಗಿ ಚರ್ಚಿಸುವ ಮೂಲಕ ಈ ಕ್ಷೇತ್ರದ ಅಧ್ಯಯನ ಕೈಗೊಳ್ಳುವವರಿಗೆ ಪೂರಕ ಆಕರ ಸಾಮಗ್ರಿ ಒದಗಿಸುವ ಪ್ರಯತ್ನ ಮಾಡಲಾಗಿದೆ.

ವಚನಸಾಹಿತ್ಯಕ್ಕೆ ಪ್ರಾಚೀನರು ಬರೆದ ಟೀಕುಹಸ್ತಪ್ರತಿಗಳನ್ನು ಬಸವಣ್ಣನವರ ವಚನಗಳಿಗೆ ಸಂಬಂಧಿಸಿದಂತೆ ಸಮಗ್ರವಾಗಿ ಎರಡು ಸಂಪುಟಗಳಲ್ಲಿ ಪ್ರಕಟಿಸಿದ ಡಾ.ಎಂ.ಎಂ. ಕಲಬುರ್ಗಿ, ತೋಂಟದಾರ್ಯರ ವಚನಗಳಿಗೆ ಸಂಬಂಧಿಸಿದಂತೆ ಬರೆಯಲಾದ ಟೀಕುಗಳನ್ನು ಸಮಗ್ರವಾಗಿ ಪ್ರಕಟಿಸಿದ ಡಾ. ವೀರಣ್ಣ ರಾಜೂರ, ಶಿವಸಂಗಮ ಕೃತಿಯನ್ನು ಸಂಪಾದಿಸಿದ ಡಾ. ಬಿ. ವಿ. ಶಿರೂರ ಅವರು ಕನ್ನಡದ ಎಲ್ಲ ಸಾಹಿತ್ಯ ಪ್ರಕಾರಗಳಿಗೆ ಬರೆಯಲಾದ ಟೀಕು ಕೃತಿಗಳ ಸಮೀಕ್ಷೆ, ಕನ್ನಡ ಟೀಕಾ ಸಾಹಿತ್ಯ ಕುರಿತು ಮೊದಲ ಬಾರಿಗೆ ಗಂಭೀರ ಚಿಂತನೆ ಮಾಡಿದ ಡಾ. ಕೆ. ರವೀಂದ್ರನಾಥ ಅವರು ಬರೆದ 'ಕನ್ನಡ ಟೀಕಾ ಸಾಹಿತ್ಯ' ಕೃತಿ ಹೀಗೆ ಟೀಕುಸಾಹಿತ್ಯದ ಬಗ್ಗೆ ನಾಡಿನ ಗಮನ ಸೆಳೆದವರಲ್ಲಿ ಪ್ರಮುಖರು. ಇದೆಲ್ಲವನ್ನು ಅನುಲಕ್ಷಿಸಿಕೊಂಡು ವಿಪುಲ ಮತ್ತು ವ್ಯಾಪಕವಾಗಿ ಬೆಳೆದುಬಂದ ಕನ್ನಡ ಟೀಕಾಸಾಹಿತ್ಯದಲ್ಲಿ ವಚನ ಸಾಹಿತ್ಯಕ್ಕೆ ಬರೆಯಲಾದ ಟೀಕಾಕೃತಿಗಳನ್ನು ಮಾತ್ರ ಅನುಲಕ್ಷಿಸಿ ಅಧ್ಯಯನ

ಮಾಡಲಾಗಿದೆ. ಇದರಿಂದ ಶಾಸ್ತ್ರ ಸಾಹಿತ್ಯ ಪ್ರಕಾರವಾದ ಟೀಕು ಸಾಹಿತ್ಯದ ಬೆಳವಣಿಗೆಯನ್ನು ಗುರುತಿಸುವ ಮತ್ತೊಂದು ಪ್ರಯತ್ನವಾಗಿದೆ ಈ ಅಧ್ಯಯನ.

೧೨ನೇ ಶತಮಾನದ ವಚನಕಾರರ ವಚನಗಳಿಗೆ ನಂತರದ ಕಾಲಘಟ್ಟದಲ್ಲಿ ರಚನೆಯಾದ ಕನ್ನಡ ಟೀಕಿನ ವಚನಗಳ ಪ್ರಕಟಿತ ಕೃತಿಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಇದರಿಂದ ೧೫ನೇ ಶತಮಾನದ ವಿಜಯನಗರ ಅರಸ ಪ್ರೌಢದೇವರಾಯನ ಕಾಲದಿಂದ ೧೯ನೇ ಶತಮಾನದ ಮೈಸೂರು ಅರಸರವರೆಗೆ ಬರೆಯಲಾಗಿರುವ ವಚನಟೀಕುಗಳನ್ನು ಗಮನಿಸಲಾಗಿದೆ. ವಿಶೇಷವಾಗಿ ಬಸವಣ್ಣ, ಅಲ್ಲಮಪ್ರಭು, ತೋಂಟದಾರ್ಯರು, ಕಾಡಸಿದ್ದೇಶ್ವರ ಮತ್ತು ಅನೇಕ ವಚನಕಾರರ ವಚನಗಳಿಗೆ ಬರೆಯಲಾದ ಟೀಕುಕೃತಿಗಳನ್ನು ಮಾತ್ರ ಅಧ್ಯಯನ ವ್ಯಾಪ್ತಿಯಲ್ಲಿ ಮುಖ್ಯವಾಗಿ ಪರಿಗಣಿಸಲಾಗಿದೆ.

ಇದರಿಂದ ವಚನ ಟೀಕಾಕಾರರು, ಅವರ ಪರಂಪರೆ, ಟೀಕಾಕಾರರ ಧ್ಯೆಯೋದ್ದೇಶಗಳನ್ನು ಅರಿಯಲು ಸಹಾಯಕವಾಗಿದೆ. ಪ್ರಾಚೀನ ಕಾಲದಲ್ಲಿ ಉನ್ನತ ಶಿಕ್ಷಣ ನೀಡುತ್ತಿದ್ದ ಘಟಿಕಾಸ್ಥಾನಗಳಲ್ಲಿ 'ಟೀಕು ಸಾಹಿತ್ಯ' ಅಧ್ಯಯನ ವಿಷಯವಾಗಿ ಆರಂಭಗೊಂಡು ಕಾಲದ ಅಗತ್ಯಕ್ಕೆ ತಕ್ಕಂತೆ ಬೆಳೆದು ಬಂದ ಬಗೆಯನ್ನು, ವಚನಸಾಹಿತ್ಯವನ್ನು ಮತಧರ್ಮದ ಸೀಮಿತ ಚೌಕಟ್ಟಿನಲ್ಲಿ ಬಂಧಿಸಿ ತಾತ್ವಿಕ ನೆಲೆಯಲ್ಲಿ ಮಾತ್ರ ಟೀಕುಗಳನ್ನು ಬರೆದ ಸಾಂಪ್ರದಾಯಿಕವಾದ ಪರಂಪರೆಯನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ. ಬಸವ, ಅಲ್ಲಮರಂತಹ ಪ್ರಮುಖ ವಚನಕಾರರ ವಚನಗಳಿಗೆ ಮಾತ್ರ ಟೀಕು ಬರೆಯಲಾಗಿದೆ ಎಂಬ ಆರೋಪವನ್ನು ತಳ್ಳಿಹಾಕುವ ರೀತಿಯಲ್ಲಿ ಕಲ್ಲುಮಠದ ಪ್ರಭುದೇವರು 'ಲಿಂಗಲೀಲಾ ವಿಲಾಸ ಚಾರಿತ್ರ್ಯದಲ್ಲಿ ೩೮ ವಚನಕಾರರ ೭೨೯ ವಚನಗಳಿಗೆ ಟೀಕು ಬರೆದು ತಳವರ್ಗದ ವಚನಕಾರರ ವಚನಗಳಿಗೂ ಟೀಕು ಬರೆದು ಸಮನ್ವಯದ ಉತ್ತರ ನೀಡಿರುವುದನ್ನು ಅಧ್ಯಯನದ ವ್ಯಾಪ್ತಿಯಲ್ಲಿ ಖಚಿತಪಡಿಸಲಾಗಿದೆ. ಅದಕ್ಕಾಗಿ ೭ ಅಧ್ಯಾಯಗಳನ್ನು ವಿಂಗಡಿಸಿಕೊಂಡು ಟೀಕಿನ ವಚನಗಳ ವ್ಯಾಪ್ತಿಯನ್ನು ಗುರುತಿಸಲಾಗಿದೆ.

ಕನ್ನಡ ಸಾಹಿತ್ಯದಲ್ಲಿ ವಿಪುಲವಾದ ಕಾವ್ಯ ಪರಂಪರೆ ಇರುವಂತೆ ಅದರ ಜೊತೆಜೊತೆಗೆ ಶಾಸ್ತ್ರ ಸಾಹಿತ್ಯ ಪರಂಪರೆಯು ಬೆಳೆದು ಬಂದಿದೆ. ಪಂಪ, ಪೊನ್ನ, ರನ್ನರ ಕಾವ್ಯ ರಚನೆಗೂ ಪೂರ್ವದಲ್ಲಿ ೯ನೆ ಶತಮಾನದಲ್ಲಿ ಶ್ರೀ ವಿಜಯನು 'ಕವಿರಾಜಮಾರ್ಗ' ಎಂಬ ಕಾವ್ಯಲಕ್ಷಣವುಳ್ಳ ಅಲಂಕಾರಿಕ ಶಾಸ್ತ್ರಗ್ರಂಥವೊಂದನ್ನು ರಚಿಸಿರುವುದು ಅಂದಿನಿಂದ ಇಂದಿನವರೆಗೂ ಸಮಸ್ತ ಕನ್ನಡಿಗರ ಆತ್ಮವಿಶ್ವಾಸ ಮತ್ತು ಗೌರವ ಹೆಚ್ಚಲು ಆಧಾರಸ್ತಂಭವಾಗಿದೆ. ಅದರಂತೆ ಸಂಸ್ಕೃತ, ಪ್ರಾಕೃತ ಮತ್ತಿತರ ಭಾಷೆಗಳಲ್ಲಿ ರಚನೆಯಾದ ಸಾಹಿತ್ಯ ಮತ್ತು ವೇದೋಪನಿಷತ್ತುಗಳಿಗೆ ಟೀಕನ್ನು ಬರೆಯುವ ಸಂಪ್ರದಾಯವಿತ್ತು. ಆದರೆ, ವೈದಿಕ, ಜೈನ ಧರ್ಮಗಳ ಟೀಕಾಕೃತಿಗಳ ಸ್ವರೂಪಕ್ಕೆ ತಕ್ಕಂತೆ ಅನ್ವಯವಾಗುವ ಅರ್ಥವನ್ನು ಭಿನ್ನಭಿನ್ನ ಹೆಸರಿನಲ್ಲಿ ಕರೆದಿರುವುದನ್ನು ಈ ಅಧ್ಯಾಯದಲ್ಲಿ ವಿವರವಾಗಿ ಪ್ರಸ್ತಾಪಿಸಲಾಗಿದೆ. ಹಾಗೂ ಪದ್ಯ, ಗದ್ಯ ಮತ್ತು ವಚನಗಳಿಗೆ ಬರೆದ ಟೀಕುಗಳು ಬೇರೆ ಬೇರೆಯಾಗಿರುವುದರಿಂದ ಅವುಗಳಲ್ಲಿಯ ಭಿನ್ನಸ್ವರೂಪವನ್ನು ಉದಾಹರಣೆ ಸಹಿತವಾಗಿ ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಟೀಕು, ಟಿಪ್ಪಣಿ, ವ್ಯಾಖ್ಯಾನ, ಭಾಷ್ಯ, ವೃತ್ತಿ, ಚೂರ್ಣಿ, ನಿರ್ಮೂಕ್ತಿ, ಪದ್ಧತಿ, ನ್ಯಾಸ, ಸಾರ ಹಾಗೂ ಪ್ರವಚನ ಎಂದು ಗುರುತಿಸಲಾಗಿದೆ. ಅಂದರೆ, ಟೀಕಾಸಾಹಿತ್ಯಕ್ಕೆ ಪರ್ಯಾಯವಾದ ಹೆಸರು ಬಳಕೆಗೊಂಡರೂ ಕೂಡಾ ಕೃತಿಯೊಂದರ ಅಂತರಂಗವನ್ನು ಭಾವಾರ್ಥರೂಪದಲ್ಲಿ ಇಲ್ಲವೇ ಶಬ್ದಾರ್ಥರೂಪದಲ್ಲಿ ಎಲ್ಲರಿಗೂ ಸರಳವಾಗಿ ಅರ್ಥವಾಗಲೆಂಬ ಉದ್ದೇಶದಿಂದ ರಚಿಸಲಾದ ವಿವರಣಾ ಸಾಹಿತ್ಯವೆಂದು ತಿಳಿಯಲಾಗಿದೆ.

ಭಾರತದ ಸಾಹಿತ್ಯದಲ್ಲಿ ಸಂಸ್ಕೃತ ಭಾಷೆಯಲ್ಲಿನ ವ್ಯಾಖ್ಯಾನ ಸಂಪ್ರದಾಯ ಆರಂಭಗೊಂಡದ್ದು ವೇದದ ಕಾಲದಲ್ಲಿ. ವೇದಗಳನ್ನು ಅರ್ಥಮಾಡಿಕೊಳ್ಳಲು ಅವಕ್ಕೆ ಬರೆದ 'ವ್ಯಾಖ್ಯಾನ'ಗಳು ಸಹಾಯ ಮಾಡುತ್ತವೆ. ಸಂಸ್ಕೃತದಲ್ಲಿ ಯಾಸ್ಕರಾಚಾರ್ಯರು, ಅನ್ನಂಭಟ್ಟರು, ಸ್ವಯಂ ಭಟ್ಟೋಜಿ, ಗೌಡಬ್ರಹ್ಮಾನಂದ, ಮಲ್ಲಿನಾಥ, ಸಾಯಣಾಚಾರ್ಯ, ನಾಚಿರಾಜ ಮುಂತಾದವರು ವೇದಗಳಿಗೆ, ರಾಮಾಯಣ, ಮಹಾಭಾರತಗಳಿಗೆ ವ್ಯಾಖ್ಯಾನ ಬರೆದಿರುವುದರಿಂದ ಸಂಸ್ಕೃತ ವ್ಯಾಖ್ಯಾನ ಸಾಹಿತ್ಯ ತುಂಬಾ ಪ್ರಾಚೀನವಾಗಿದೆ.

ಅದರಂತೆ ಪ್ರಾಕೃತ ವ್ಯಾಖ್ಯಾನ ಸಾಹಿತ್ಯವು ಕ್ರಿ.ಶ. ೧ನೇ ಶತಮಾನದಲ್ಲಿ ಕವಿ ಗುಣಾಢ್ಯನು 'ಬೃಹತ್ಕಥೆ'ಯನ್ನು ಪೈಶಾಚೀ ಪ್ರಾಕೃತದಲ್ಲಿಯೂ, ಹಾಲನ ಗಾಥಾಸಪ್ತಸತಿಯನ್ನು ಮಹಾರಾಷ್ಟ್ರೀಯ ಪ್ರಾಕೃತದಲ್ಲಿಯೂ ರಚಿಸಿರುವುದು ತಿಳಿಯುತ್ತದೆ. ಜೈನಾಗಮ ಗ್ರಂಥಗಳ ಮೇಲೆ ಪ್ರಾಕೃತದಲ್ಲಿ ರಚನೆಯಾದ ವ್ಯಾಖ್ಯಾನಗಳು ನಿರ್ಯುಕ್ತಿ, ಭಾಷ್ಯ, ಚೂರ್ಣಿ, ಟೀಕಾ ಸ್ವರೂಪದಲ್ಲಿ ಲಭ್ಯವಾಗಿರುವುದನ್ನು ವಿವರಿಸುತ್ತಾ ಸಂಸ್ಕೃತ ಮತ್ತು ಪ್ರಾಕೃತ ಭಾಷೆಯಲ್ಲಿಯ ಟೀಕನ್ನು ಅನುಸರಿಸಿ ಕನ್ನಡದಲ್ಲಿ ಟೀಕೆಗಳು ಉಗಮವಾದುದನ್ನು ಪ್ರಸ್ತಾಪಿಸಲಾಗಿದೆ. ಡಾ. ಎಂ.ಎಂ. ಕಲಬುರ್ಗಿಯವರು ಹೇಳುವಂತೆ "ಯಾವುದೇ ಭಾಷೆಯ ಸಾಹಿತ್ಯ ಮೊದಲು ಅನುವಾದ, ಟೀಕೆಗಳ ಮೂಲಕ ಇನ್ನೊಂದು ಭಾಷೆಯಲ್ಲಿ ಪ್ರವೇಶ ಪಡೆದು, ಆಮೇಲೆ ಆ ಭಾಷೆಯಲ್ಲಿ ಸ್ವತಂತ್ರ ಸಾಹಿತ್ಯ ಸೃಷ್ಟಿಗೆ ನೆಲೆಯನ್ನು ಮಾಡಿಕೊಳ್ಳುತ್ತದೆ. ಈ ಮೇರೆಗೆ ಕನ್ನಡದಲ್ಲಿ ಸ್ವತಂತ್ರ ಸಾಹಿತ್ಯ ನಿರ್ಮಾಣವಾಗುವುದಕ್ಕೆ ಮೊದಲು ಪ್ರಾಕೃತ-ಸಂಸ್ಕೃತ ಭಾಷೆಗಳಲ್ಲಿರುವ ಜೈನಸಾಹಿತ್ಯಕ್ಕೆ ಕನ್ನಡ ಟೀಕೆ ಬರೆಯುವ ಕಾರ್ಯವೇ ನಡೆದಿರಬೇಕು" ಎಂಬ ಅಭಿಪ್ರಾಯವನ್ನು ಆಧಾರವಾಗಿಟ್ಟುಕೊಂಡು ಕನ್ನಡ ಸಾಹಿತ್ಯದಲ್ಲಿ ಕೃಷಿ ಮಾಡಿದ ಜೈನರಿಂದ ಟೀಕಾಸಾಹಿತ್ಯ ಉಗಮವಾಗಿರುವುದನ್ನು ಗುರುತಿಸಲಾಗಿದೆ. ಅಲ್ಲದೇ ೧೦ನೇ ಶತಮಾನದ ಕಾಡಿಯೂರಿನ ಅಗ್ರಹಾರದಲ್ಲಿ ನಡೆಯುತ್ತಿದ್ದ ಶಿಕ್ಷಣ ಪದ್ಧತಿಯನ್ನು "…..ಟೀಕಂ ಬರೆಯಲ್ ಸಮಗ್ರರಭ್ಯಾಸಿಸುವರ್" ಎಂದು ಶಾಸನದಲ್ಲಿ ಉಲ್ಲೇಖವಾಗಿದೆ. ಅದರಂತೆ ಬಳ್ಳಿಗಾವಿಯ ಕೋಡಿಮಠದ ಮಹತ್ವ ವಿವರಿಸುವ ಶಿಕಾರಿಪುರದ ಶಾಸನದಲ್ಲಿ "ಕೌಮಾರ, ಪಾಣಿನಿಯ, ಶಕಟಾಯನ, ಶಬ್ದಾನುಶಾಸನಾದಿ, ವ್ಯಾಕರಣ ವ್ಯಾಖ್ಯಾನಸ್ಥಾನಮು ನ್ಯಾಯವೈಶೀಷಿಕ ಮೀಮಾಂಸಾ, ಸಾಂಖ್ಯ, ಬೌದ್ಧಾದಿ ಷಡುದರ್ಶನ ವ್ಯಾಖ್ಯಾನಸ್ಥಾನಮುಂ" ಎಂದು ಉಲ್ಲೇಖಿಸಿರುವುದನ್ನು ಗಮನಿಸಿ ಟೀಕಾಸಾಹಿತ್ಯದ ಉಗಮವನ್ನು ಗುರುತಿಸಲಾಗಿದೆ. ಜೊತೆಗೆ ಯಾವುದೇ ಸಾಹಿತ್ಯ ರಚನೆಯ ಕಾಲದಲ್ಲಿಯೇ ಟೀಕೆಯನ್ನು ಬರೆಯುವ

ಮತ್ತು ಪ್ರಾಚೀನ ಶಿಕ್ಷಣ ಪದ್ಧತಿಯಲ್ಲಿ ಇದೊಂದು ವಿಷಯವಾಗಿ ಅಭ್ಯಾಸಮಾಡುವ ವ್ಯವಸ್ಥೆ ಇದ್ದುದನ್ನು ಇಲ್ಲಿ ಗುರುತಿಸಬಹುದಾಗಿದೆ.

ಟೀಕಾ ಸಾಹಿತ್ಯವು ಶಾಸ್ತ್ರಸಮ್ಮತವಾಗಿದ್ದು ಹಲವಾರು ಶಾಸ್ತ್ರಕೃತಿಗಳಂತೆ ಇದು ಕೂಡಾ ತನ್ನದೇ ಆದ ಲಕ್ಷಣಗಳನ್ನು ಹೊಂದಿದೆ. ಟೀಕಾಚಾರ್ಯರು ಬಹುಶಾಸ್ತ್ರ ಪಂಡಿತರಾದುದರಿಂದ ಅವರು ಬರೆದ ಟೀಕಾಕೃತಿಗಳು ವಿಭಿನ್ನವಾದ ಲಕ್ಷಣಗಳನ್ನು ಹೊಂದಿರುವುದನ್ನು ಇಲ್ಲಿ ಗುರುತಿಸಲಾಗಿದೆ.

೧. ಲೌಕಿಕತೆಗಿಂತ ಅಲೌಕಿಕ ಇಲ್ಲವೇ ತಾತ್ವಿಕ ಪ್ರಧಾನವಾದವು.

೨. ಶಬ್ದಾರ್ಥ ಮತ್ತು ಭಾವಾರ್ಥಗಳುಳ್ಳ ಟೀಕು.

೩. ಏಕಾರ್ಥದ ಟೀಕು: ಇದರಲ್ಲಿ ೭ ರೀತಿಯ ಲಕ್ಷಣವುಳ್ಳ ಟೀಕೆಗಳನ್ನು ಗುರುತಿಸಲಾಗಿದೆ.

೪. ಶುದ್ಧ ವಾಚ್ಯಾರ್ಥದಲ್ಲಿಯ ಪ್ರತಿಪದಾರ್ಥ. ಇದು ನಿಘಂಟು ಸ್ವರೂಪದ್ದಾಗಿದೆ.

೫. ವಾಚ್ಯಾರ್ಥದಲ್ಲಿರುವ ವಿವರಣರೂಪದ ಪ್ರತಿಪದಾರ್ಥ. ನಿಘಂಟು ಸ್ವರೂಪದಲ್ಲಿದ್ದರೂ ಒಂದೊಂದು ಪದಕ್ಕೆ ವಿವರಣೆ ನೀಡಿರುವುದಾಗಿದೆ.

೬. ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ತಾತ್ವಿಕಾರ್ಥ. ನುಡಿಗಟ್ಟುಗಳಂತೆ ಇಲ್ಲಿಯ ಭಾವ. ಉದಾ: ಕೈಬಿಸಿಮಾಡು=ಲಂಚಕೊಡು.

೭. ಸಾರವತ್ತಾದ ಸಂಗ್ರಹರೂಪದ ತಾತ್ಪರ್ಯಾರ್ಥ. ಅಂದರೆ ಹತ್ತು ಕಟ್ಟುವ ಕಡೆಗೆ ಮುತ್ತು ಕಟ್ಟುವ ಪ್ರಯತ್ನ. ತಾತ್ವಿಕಾರ್ಥದ ಬದಲಿಗೆ ಅದರ ಸಾರಾಂಶವನ್ನು ಸಂಗ್ರಹಿಸುವ ಮಾದರಿಯುಳ್ಳದ್ದು.

೮. ಪ್ರತಿಪದಾರ್ಥ ಹಾಗೂ ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ತಾತ್ವಿಕಾರ್ಥ. ಅಂದರೆ, ಶಬ್ದಾರ್ಥ ಇಲ್ಲವೇ ವಾಕ್ಯದ ತಾತ್ಪರ್ಯಾರ್ಥಕ್ಕೆ ಕಟ್ಟುಬೀಳದೇ ಒಟ್ಟು ವಿಷಯದ ತಾತ್ವಿಕತೆಯನ್ನು ಚರ್ಚಿಸುವುದಾಗಿದೆ.

೯. ಕೆಲವು ಪದಗಳಿಗೆ ಮಾತ್ರ ಬರೆದ ಅರ್ಥ. ಅಂದರೆ, ಇಡೀ ಕಾವ್ಯಕ್ಕೆ ಶಬ್ದಾರ್ಥ ಬರೆಯದೇ ಅಲ್ಲಿಯ ಕಠಿಣ ಪದಗಳಿಗೆ ಅರ್ಥ ನೀಡುವುದು.

೧೦. ಕೆಲವು ವಚನಗಳಿಗೆ ಟೀಕೆ ಬರೆಯದೇ "ಈ ವಚನ ಕಾಣಬಂದರ್ಥ" ಎಂದು ಹೇಳಿರುವುದು; ಕೆಲವು ವಚನಗಳಲ್ಲಿ ಭಾಗಶಃ ಟೀಕೆ ಬರೆದರೆ "ಹಿಂದಕ್ಕೆ ಕಾಣಬಂದರ್ಥ" "ಮುಂದಕ್ಕೆ ಕಾಣಬಂದರ್ಥ" ಎಂದು ಹೇಳಲಾಗಿದೆ.

೧೧. ಕಾವ್ಯಗಳಲ್ಲಿಯ ಆಚರಣೆ, ಧರ್ಮ, ಸಂಪ್ರದಾಯಗಳಿಗೆ ಸಂಬಂಧಿಸಿದ ಪರಿಭಾಷೆಗಳಿಗೆ ಅಂದರೆ ವಿಶಿಷ್ಟ ಪದಗಳಿಗೆ ಮಾತ್ರ ಅರ್ಥ ಬರೆದಿರುವುದು. ಉದಾ:ಮಹಾಮನೆ =ಅನುಭವ ಮಂಟಪ.

೧೨. ಪ್ರತಿಪದಾರ್ಥ ರೂಪದ ವಾಚ್ಯಾರ್ಥ ಹಾಗೂ ತಾತ್ವಿಕಾರ್ಥ. ಇದೇ ಪ್ರತಿಪದಾರ್ಥಗಳಿಗೆ ಸಾರರೂಪದ ತಾತ್ವಿಕಾರ್ಥವುಳ್ಳ ಉಭಯಾರ್ಥ ಟೀಕುಗಳು.

೧೩. ವಚನಗಳಿಗೆ ಕ್ವಚಿತ್ತಾಗಿ ಬರೆದ ಒಂದು ವಾಚ್ಯಾರ್ಥ ಹಾಗೂ ಎರಡು ತಾತ್ವಿಕಾರ್ಥವುಳ್ಳ ಟೀಕುಗಳು.

೧೪. ಟೀಕಾಸಾಹಿತ್ಯ ಗದ್ಯದಲ್ಲಿರುವುದರಿಂದ "ವ್ಯಾಖ್ಯಾನ ಗದ್ಯ"ವೆಂಬ ವಿಶಿಷ್ಟ ಪ್ರಕಾರ ಸೃಷ್ಟಿಯಾಯಿತೆನ್ನುವ ಡಾ.ಕೆ. ರವೀಂದ್ರನಾಥ ಅವರ ಹೇಳಿಕೆಯಿಂದ ಟೀಕೆಗಳು ಆಯಾಕಾಲದ ಕನ್ನಡ ಗದ್ಯ ಸ್ವರೂಪ ಹಾಗೂ ಬೆಳವಣಿಗೆಯನ್ನು ಅರಿಯಲು ಸಹಾಯಕವಾಗಿವೆ.

೧೫. ಟೀಕೆಯ ಲಕ್ಷಣಗಳಲ್ಲಿ ಒಂದೇ ಬಗೆಯ ವಾಕ್ಯ ಪುನರಾವರ್ತನೆಯನ್ನು ಡಾ.ಎಂ.ಎಂ. ಕಲಬುರ್ಗಿಯವರು "ಬಸವಣ್ಣನವರ ಟೀಕಿನ ವಚನಗಳು, ಪ್ರಸ್ತಾವನೆ xv ರಲ್ಲಿ ಗುರುತಿಸುತ್ತಾರೆ. ಉದಾಹರಣೆಗೆ "ಗಜದ ಹಿಂಡಿನೊಳಗೆ ಕಂಠೀರವ ಹೊಕ್ಕ ಹಾಂಗೆ, ಹುಲ್ಲೆ ಹಿಂಡಿನೊಳಗೆ ಹುಲಿಹೊಕ್ಕ ಹಾಂಗೆ, ಕುರಿ ಹಿಂಡಿನೊಳಗೆ ತೋಳ ಹೊಕ್ಕ ಹಾಂಗೆ" ವಾಕ್ಯಗಳನ್ನು ನೋಡಬಹುದು.

೧೬. ಶುದ್ಧ ದೇಶಿಯ ವಚನಗಳಿಗೆ ಬರೆದ ಟೀಕಾಕಾರರಲ್ಲಿ ಏಕತಾನತೆಯ ವ್ಯಾಖ್ಯಾನ ರೀತಿ ಬೆಳೆದಿರುವುದು.

೧೭. ಟೀಕಾಸಾಹಿತ್ಯವು ಹಾಡು, ಪದಗಳಿಗೆ ಅಂದರೆ ಮಂತ್ರಗೋಪ್ಯ ಸಾಹಿತ್ಯಕ್ಕೆ, ಬೆಡಗಿನ ವಚನಗಳಿಗೆ, ವೇದಾಗಮ ಪುರಾಣಗಳಿಗೆ, ಶ್ಲೋಕ–ಸ್ತೋತ್ರ–ಶಾಸ್ತ್ರಸಾಹಿತ್ಯ ಪ್ರಕಾರಗಳಿಗೆ ಬರೆದುದರ ಕಾರಣವಾಗಿ ಅವುಗಳ ಅಂತರಂಗದ ಹೊಳಹುಗಳನ್ನು ಪ್ರಕಟಿಸುವುದರಿಂದ ಇದೊಂದು ಸೃಜನಸಾಹಿತ್ಯ ಪ್ರಕಾರವಾಗಿದೆ ಎನ್ನಬಹುದು.

೧೮. ಅಮರಕೋಶದಂತಹ ನಿಘಂಟು, ವ್ಯವಹಾರಗಣಿತ, ಬೇಹಾರ–ಗಣಿತಗಳಿಗೆ ಟೀಕುಗಳು ರಚನೆಯಾಗಿರುವುದರಿಂದ ಈ ವ್ಯಾಖ್ಯಾನಗಳು ಲೋಕೋಪಯೋಗಿಯಾದ ಹೊರಗಿನ ಜ್ಞಾನವನ್ನು ಕನ್ನಡಿಗರಿಗೆ ತಿಳಿಸುವಲ್ಲಿ ಸಹಾಯಕವಾಗಿವೆ.

೧೯. ಬಸವಣ್ಣ, ಅಲ್ಲಮಪ್ರಭು, ತೋಂಟದಾರ್ಯರ ವಚನಗಳಿಗೆ ಐದಕ್ಕೂ ಹೆಚ್ಚು ಟೀಕಾಕಾರರು ಟೀಕೆ ಬರೆದಿದ್ದರೂ ಅವುಗಳೆಲ್ಲಾ ಒಂದೇ ರೀತಿಯ ಲಕ್ಷಣ ಹೊಂದಿರದೇ ವಿಭಿನ್ನವಾಗಿರುವುದು ಟೀಕುಗಳ ವೈವಿಧ್ಯ–ವಿಸ್ತಾರಕ್ಕೆ ಕಾರಣವಾಗಿವೆ.

೨೦. ಬಹುತೇಕ ಟೀಕಾಕೃತಿಗಳು ತಾತ್ವಿಕ ಪ್ರಧಾನವಾಗಿವೆಯಾದರೂ ಕೆಲವೊಂದು ಟೀಕಾಕಾರರು ತಮ್ಮ ಲೋಕಾನುಭವದ ಕೆಲವು ಘಟನೆಗಳನ್ನು ಟೀಕೆಗಳ ಅರ್ಥಸ್ಪಷ್ಟತೆಗೆ ಹೇಳಿರುವುದರಿಂದ ನಾಡಿನ ಇತಿಹಾಸ, ಧರ್ಮ, ಸಂಸ್ಕೃತಿ, ಆಚಾರ–ವಿಚಾರ, ರಾಜಕೀಯ ಸ್ಥಿತಿ, ಆರ್ಥಿಕ ಜೀವನ ಹೀಗೆ ಸಮಕಾಲೀನ ಸಮಾಜದ ಚಿತ್ರಣವನ್ನು ಕಟ್ಟಿಕೊಟ್ಟಿವೆ.

ಹೀಗೆ, ಸಾಹಿತ್ಯ ರಚನೆಯ ಜೊತೆಜೊತೆಗೆ ಒಂದು ಸೃಜನಶೀಲ ಪ್ರಕ್ರಿಯೆಯಾಗಿ ರೂಪುಗೊಂಡ ಟೀಕಾಸಾಹಿತ್ಯವು ವಿಶಿಷ್ಟ ಲಕ್ಷಣ ಮತ್ತು ಸ್ವರೂಪಗಳಿಂದಾಗಿ ಸ್ವತಂತ್ರ ಅಧ್ಯಯನದ ಶಿಸ್ತಾಗಿ ಬೆಳೆದುಬಂದಿರುವ ರೀತಿಯನ್ನು ಸಾಧಾರಪೂರ್ವಕವಾಗಿ ಚರ್ಚಿಸುವ ಉದ್ದೇಶ ಈ ಮಹಾಪ್ರಬಂಧದ್ದಾಗಿದೆ.

ಕನ್ನಡ ಟೀಕಾ ಸಾಹಿತ್ಯದ ಪ್ರಥಮ ಬೇಸಾಯಗಾರರಾದ ಜೈನರ ಧಾರ್ಮಿಕ ಕಾವ್ಯ ಮತ್ತು ಶಾಸ್ತ್ರಗ್ರಂಥಗಳಿಗೆ ೬–೭ನೇ ಶತಮಾನದಲ್ಲಿ ಪ್ರಾಕೃತ ಭಾಷೆಯಲ್ಲಿ ರಚನೆಯಾಗಿದ್ದ ಟೀಕುಗ್ರಂಥಗಳು ಮತ್ತು ೮ನೇ ಶತಮಾನದ ಸಂಸ್ಕೃತ ಟೀಕಾ ಗ್ರಂಥಗಳು ಪ್ರೇರಕವಾದುದನ್ನು ಗುರುತಿಸಲಾಗಿದೆ. ಕ್ರಿ.ಶ. ಸುಮಾರು ೪೦೦ರಲ್ಲಿದ್ದ ಸಮಂತಭದ್ರನ ಸಂಸ್ಕೃತ–ಪ್ರಾಕೃತ ಗ್ರಂಥಗಳಿಗೆ ಹಳೆಗನ್ನಡದಲ್ಲಿ ವ್ಯಾಖ್ಯಾನಗಳಿರುವುದನ್ನು ಮತ್ತು ಈ ಟೀಕಾ ಪರಂಪರೆಯ ಇತಿಹಾಸವನ್ನು ನಿರೂಪಿಸುವ ಮತ್ತೊಂದು ಉದ್ದೇಶ ಈ ಮಹಾಪ್ರಬಂಧದ್ದಾಗಿದೆ.

ಅಲ್ಲದೇ ಟೀಕು ಬರೆದವರು ಸ್ವತಃ ಕಾವ್ಯರಚನೆಯ ಸಾಮರ್ಥ್ಯವುಳ್ಳವರಾಗಿದ್ದರು. ಬಹುಭಾಷಾ ಪಂಡಿತರಾಗಿ, ಶ್ರೇಷ್ಠ ವಿದ್ವಾಂಸರಾಗಿದ್ದರೆಂಬುದನ್ನು ತಿಳಿಸಲಾಗಿದೆ. ಸಾಹಿತ್ಯದ ಎಲ್ಲ ಪ್ರಕಾರದ ಕೃತಿಗಳಿಗೆ ವ್ಯಾಖ್ಯಾನ ಬರೆದಿರುವ ಜೈನ ಟೀಕಾಕಾರರು ಕ್ರಿ.ಶ.ಸು. ೪೦೦ರಿಂದ ೧೮೬೬ರ ವರೆಗೂ ಈ ಪರಂಪರೆ ಮುಂದುವರಿಸಿರುವುದನ್ನು ಇಲ್ಲಿ ಗುರುತಿಸಲಾಗಿದೆ. ಜೊತೆಗೆ ನಿರ್ಲಕ್ಷಿತಗೊಂಡಿರುವ ಪ್ರಾಚೀನ ಟೀಕುಗಳ ಅಪ್ರಕಟಿತ ಹಸ್ತಪ್ರತಿಗಳನ್ನು ಪ್ರಮಾಣ ಹಾಗೂ ಮೌಲ್ಯಗಳ ಕಡೆಗೆ ವಿದ್ವಾಂಸರ ಗಮನವನ್ನು ಸೆಳೆಯುವ ಉದ್ದೇಶವನ್ನು ಇಲ್ಲಿ ಮಾಡಲಾಗಿದೆ.

೧೧ನೆಯ ಶತಮಾನದ ಮಧ್ಯಭಾಗದ ವೇಳೆಗೆ ಜೈನಧರ್ಮ ರಾಜಾಶ್ರಯದಿಂದ ದೂರವಾದುದರಿಂದ ಸಹಜವಾಗಿ ಲಿಂಗಾಯತ ಧರ್ಮ ಪ್ರಾಬಲ್ಯಕ್ಕೆ ಬರುವಂತಾಯಿತು. ಹಲವಾರು ಜಾತಿ–ಮತ–ಧರ್ಮಗಳ ಸಿದ್ಧಾಂತಗಳ ಪ್ರತಿಪಾದನೆಗೆ ತೀವ್ರ ಪೈಪೋಟಿ ಎದುರಾಯಿತು. ಇದರಿಂದ ಶಿವಶರಣರ ವಚನ ಸಾಹಿತ್ಯ ಮತ್ತು ಇದರ ಜೊತೆಜೊತೆಯಾಗಿ ಟೀಕಾಸಾಹಿತ್ಯ ಬೆಳೆದು ಬಂದುದನ್ನು ಇಲ್ಲಿ ಗುರುತಿಸಲಾಗಿದೆ.

ಅಲ್ಲದೇ, ಸಂಸ್ಕೃತಪಾಠ, ಕನ್ನಡ ಟೀಕೆಯನ್ನೊಳಗೊಂಡ 'ನಾಮ ಲಿಂಗಾನುಶಾಸನ' ತಾಡೋಲೆ ಹಸ್ತಪ್ರತಿಯನ್ನು ಕ್ರಿ.ಶ.೧೧೩೦ರಲ್ಲಿ ಪ್ರತಿಮಾಡಿರುವುದರಿಂದ ಲಿಂಗಾಯತ ಪರಂಪರೆಯ ಮೊದಲ ಲಭ್ಯ ಟೀಕಾಕೃತಿ ಎಂದು ತಿಳಿಸಲಾಗಿದೆ. ನಂತರ ೧೧೬೦ರಲ್ಲಿ ಓಲೆಶಾಂತನ ಸಕೀಲಗಳ ಟಿಪ್ಪಣಿ, ವಚನಕಾರ ಶಿವಲೆಂಕ ಮಂಚಣ್ಣನ ಅಜ್ಜನಾದ ಸೋಮಶಂಭುದೇಶಿಕನು "ಪ್ರೇಮದಾ ವೃತ್ತಿ ದೀಪಿಕೆಗಳಂ ಬಿತ್ತರಿಸಿದ...... ಸಕಲಾಗಮಾಚಾರ್ಯ"ನಾಗಿದ್ದನೆಂಬುದನ್ನು ತಿಳಿಸಲಾಗಿದೆ.

ಹೀಗೆ ಆರಂಭವಾದ ಲಿಂಗಾಯತ ಟೀಕಾ ಸಾಹಿತ್ಯ ೧೫ನೇ ಶತಮಾನದ ಪ್ರೌಢದೇವರಾಯನ ಕಾಲದ ನೂರೊಂದು ವಿರಕ್ತರು, ಎಡೆಯೂರು ತೋಂಟದಾರ್ಯರ ಕಾಲದ ಏಳನೂರೊಂದು ವಿರಕ್ತರು, ಅನಂತರದಲ್ಲಿ ಬೆಳೆದು ಬಂದ ಟೀಕಾಸಾಹಿತ್ಯ ಪರಂಪರೆಯನ್ನು ಇಲ್ಲಿ ಗುರುತಿಸಲಾಗಿದೆ. ಹಾಗೂ

ಶಿವಶರಣರ ವಚನಗಳು, ಕಾವ್ಯಶಾಸ್ತ್ರಗಳು ಮತ್ತು ವೀರಶೈವ ಸಂಸ್ಕೃತ ಗ್ರಂಥಗಳಿಗೆ ಕನ್ನಡ ಟೀಕುಗಳು ಬರೆಯಲ್ಪಟ್ಟದ್ದರಿಂದ ಕನ್ನಡ ಸಾಹಿತ್ಯ ಚರಿತ್ರೆಯ ಇತಿಹಾಸದಲ್ಲಿ ಲಿಂಗಾಯತ ಟೀಕಾ ಸಾಹಿತ್ಯ ಪರಂಪರೆ ತುಂಬಾ ಶ್ರೀಮಂತವಾಗಿರುವುದನ್ನು ಗುರುತಿಸಲಾಗಿದೆ. ಒಂದರ್ಥದಲ್ಲಿ 'ವಚನಸಂಕಲನ'ಯುಗದ ಆಶಯವನ್ನು ಪುನಾರಚಿಸುವುದರ ಕಡೆಗೆ ಈ ಅಧ್ಯಯನ ಗಮನಸೆಳೆಯುತ್ತದೆ.

'ಬ್ರಾಹ್ಮಣ ಟೀಕಾ ಸಾಹಿತ್ಯ' ಪರಂಪರೆಯಲ್ಲಿ ಕ್ರಿ.ಪೂ.೬-೫ನೇ ಶತಮಾನಗಳಲ್ಲಿ ವೈದಿಕ ಧರ್ಮ ಕರ್ನಾಟಕಕ್ಕೆ ಕಾಲಿಟ್ಟಿರುವುದನ್ನು ಗುರುತಿಸಲಾಗಿದೆ. ವೈದಿಕ ಟೀಕಾ ಸಾಹಿತ್ಯಕ್ಕೆ ಭಾರತದಲ್ಲಿ ಪ್ರಾಚೀನ ಪರಂಪರೆ ಇದೆ. ಆದರೆ, ಕರ್ನಾಟಕದಲ್ಲಿ ೧೫ನೆಯ ಶತಮಾನದ ವೇಳೆಗೆ ಧರ್ಮಪ್ರಸಾರದ ಉದ್ದೇಶದಿಂದ ಪ್ರವೇಶ ಪಡೆದು ಹರಿದಾಸರಾದಿಯಾಗಿ ಬ್ರಾಹ್ಮಣ ಟೀಕಾ ಸಾಹಿತ್ಯ ಪರಂಪರೆಗೆ ನಾಂದಿ ಹಾಡಿದರು. ನಂತರ ೧೯ನೇ ಶತಮಾನದ ಮೈಸೂರು ಅರಸರ ಕಾಲಾವಧಿಯವರೆಗೂ ಬ್ರಾಹ್ಮಣ ಟೀಕಾಸಾಹಿತ್ಯ ಹುಲುಸಾಗಿ ಬೆಳೆದುಬಂದಿರುವುದನ್ನು ಗುರುತಿಸಲಾಗಿದೆ.

'ಸಂಕೀರ್ಣ ಟೀಕಾ ಸಾಹಿತ್ಯ' ಪರಂಪರೆಯಲ್ಲಿ ಟೀಕಾ ಗ್ರಂಥವು ಲಭಿಸಿದರೆ ಟೀಕಾಕಾರನ ಹೆಸರು ಲಭಿಸದಿರುವುದು ಮತ್ತು ಅನಾಮಧೇಯಕೃತ ಟೀಕಾ ಕೃತಿಗಳು ಹೆಸರು ಲಭಿಸಿದರೂ ಈತನ ಮತಧರ್ಮ ತಿಳಿಯದಿರುವುದರಿಂದ ಅವುಗಳನ್ನು ಈ ಭಾಗದಲ್ಲಿ ಗುರುತಿಸುವ ಮೂಲಕ ಇದನ್ನು ಸಂಕೀರ್ಣ ಟೀಕಾ ಸಾಹಿತ್ಯ ಪರಂಪರೆ ಎಂದು ಗುರುತಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕನ್ನಡ ಟೀಕಾ ಸಾಹಿತ್ಯ ಪರಂಪರೆಯನ್ನು ಲಭ್ಯ ಆಕರಗಳ ಮೂಲಕ ದಾಖಲಿಸಲು ಪ್ರಯತ್ನಿಸಲಾಗಿದೆ. ಈ ದಿಶೆಯಲ್ಲಿ ರಾಜ್ಯ ಮತ್ತು ಹೊರರಾಜ್ಯದ ವಿಶ್ವವಿದ್ಯಾಲಯಗಳು ಪ್ರಕಟಿಸಿರುವ 'ಹಸ್ತಪ್ರತಿ ಸೂಚಿ'ಯ ಸಮಗ್ರ ಸಂಪುಟಗಳನ್ನು, ಸೂಚೀಕರಣವಾಗದೇ ಉಳಿದಿರಬಹುದಾದ ಹಸ್ತಪ್ರತಿಗಳನ್ನು ಸಮಗ್ರವಾಗಿ ಸಂಗ್ರಹಿಸಿ, ಶೋಧಿಸಿ ಪ್ರಕಟಿಸಿದಲ್ಲಿ ಕನ್ನಡ ಟೀಕಾ ಪರಂಪರೆಯ ನಾನಾ ಕವಲುಗಳನ್ನು, ಅವುಗಳ ವೈವಿಧ್ಯತೆಯನ್ನು ಅರಿಯಲು ಸಹಾಯಕವಾಗಲಿದೆ.

ಕರ್ನಾಟಕದಲ್ಲಿ ವಚನ ಟೀಕಾ ಸಾಹಿತ್ಯದ ಪ್ರಕಟಣಾ ಇತಿಹಾಸ ಕುರಿತು ಇಲ್ಲಿ ೧೨ನೇ ಶತಮಾನ ಮತ್ತು ನಂತರದಲ್ಲಿ ರಚನೆಯಾದ ವಚನಗಳಿಗೆ ಪ್ರಾಚೀನರು ಮತ್ತು ಆಧುನಿಕರು ವ್ಯಾಖ್ಯಾನ, ಟೀಕು ಇಲ್ಲವೇ ಭಾವಾರ್ಥ ಬರೆದಿದ್ದರೆ ಅಂತಹ ಎಲ್ಲ ಟೀಕಾಕಾರರು ಮತ್ತು ಪ್ರಕಟಿತ ಕೃತಿಗಳ ಇತಿಹಾಸವನ್ನು ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಪ್ರಾಚೀನ ಟೀಕು ಕೃತಿಗಳಾಗಿದ್ದರೆ ಅವು ಸಂಪಾದಿಸಿ ಪ್ರಕಟಿಸಿದವುಗಳಾಗಿವೆ. ಆಧುನಿಕವಾಗಿದ್ದರೆ ಪ್ರಾಚೀನ ವಚನಗಳಿಗೆ ಆಧುನಿಕ ಮಾದರಿಯಲ್ಲಿ ಭಾವಾರ್ಥ ಬರೆದು ಸ್ವತಂತ್ರವಾಗಿ ಪ್ರಕಟಿಸಿದ ಕೃತಿಗಳು ಇವೆ. ಈ ರೀತಿಯ ಪ್ರಯತ್ನ ಡಾ. ಫ. ಗು. ಹಳಕಟ್ಟಿ, ಹರ್ಡೇಕರ ಮಂಜಪ್ಪನಂತಹ ಅನೇಕ ಮಹನೀಯರಿಂದ ಮತ್ತು ಮೈಸೂರಿನ ಸುತ್ತೂರು ಮಠ, ಗದಗಿನ ತೋಂಟದಾರ್ಯ ಮಠಗಳಿಂದ ಸಾಮೂಹಿಕ ಚರ್ಚೆಯ ಪ್ರತಿಫಲವಾಗಿ ಆಧುನಿಕ ವಚನ ಟೀಕಾ ಸಾಹಿತ್ಯ ವ್ಯಾಪಕವಾಗಿ ಬೆಳೆದು ಬಂದ ಮತ್ತು ಬೆಳೆಯುತ್ತಿರುವ ಸಂಗತಿಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಕನ್ನಡ ಟೀಕಿನ ವಚನ ಕೃತಿಗಳ ಸಮೀಕ್ಷೆಯನ್ನು ೨ ಭಾಗವಾಗಿ ವಿಂಗಡಿಸಲಾಗಿದೆ. ಒಂದು, ಏಕವ್ಯಕ್ತಿ ವಚನಗಳಿಗೆ ಬರೆದ ಟೀಕಾ ಕೃತಿಗಳು ಎರಡು, ಅನೇಕ ವ್ಯಕ್ತಿ ವಚನಗಳಿಗೆ ಬರೆದ ಟೀಕಾ ಕೃತಿಗಳೆಂದು ಅಧ್ಯಯನದ ಅನುಕೂಲಕ್ಕಾಗಿ ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಮೊದಲಭಾಗದಲ್ಲಿ ಬಸವಣ್ಣನವರ ಟೀಕಿನ ವಚನಗಳು, ಅಲ್ಲಮಪ್ರಭುದೇವರ ಟೀಕಿನ ವಚನಗಳು, ತೋಂಟದ ಸಿದ್ಧಲಿಂಗೇಶ್ವರರ ಟೀಕಿನ ವಚನಗಳು, ಕಾಡಸಿದ್ಧೇಶ್ವರರ ಟೀಕಿನ ವಚನಗಳೆಂದು ಪ್ರಮುಖವಾಗಿ ಗುರುತಿಸಿ, ಟೀಕಾಕಾರರ ಕಾಲ, ಟೀಕಾಕಾರರು, ಕೃತಿ ಸ್ವರೂಪ, ಟೀಕು ಸ್ವರೂಪ ಮುಂತಾದ ಅಂಶಗಳನ್ನು ಉದಾಹರಣೆಸಹಿತವಾಗಿ ಚರ್ಚಿಸಲಾಗಿದೆ. ಎರಡನೇ ಭಾಗದಲ್ಲಿ ಕಲ್ಲುಮಠದ ಪ್ರಭುದೇವರು ಬರೆದ 'ಲಿಂಗಲೀಲಾವಿಲಾಸ ಚಾರಿತ್ರ್ಯ', ಸಿಂಗಳದ ಸಿದ್ಧಬಸವರಾಜನ ಸಕಲ ಪುರಾತನರ ಬೆಡಗಿನ ವಚನಗಳ ಟೀಕು, ಏಕೋತ್ತರ ಶತಸ್ಥಲಗಳಿಗೆ ಅನೇಕರು ಬರೆದ ಟೀಕಾಕೃತಿಗಳು ಮತ್ತು ಟೀಕಾಕಾರರ ಬಗ್ಗೆ ವಿವರವಾಗಿ ಬರೆಯಲಾಗಿದೆ. ಲಭ್ಯವಾದ ವಿವರಗಳೊಂದಿಗೆ ಇವರನ್ನು ಕಾಲಾನುಕ್ರಮದಲ್ಲಿ ಅಳವಡಿಸಲಾಗಿದೆ. ಇದರಿಂದಾಗಿ ೧೨ನೇ ಶತಮಾನ ಮತ್ತು ಅನಂತರ ಕಾಲಘಟ್ಟದ ಬಹುತೇಕ ವಚನಕಾರರ ವಚನಗಳಿಗೆ ಟೀಕು ಬರೆದ ಒಟ್ಟು ಟೀಕಾಕಾರರು, ಅವರ ಪರಂಪರೆ, ಟೀಕುಗಳ ಮಹತ್ವ ಮತ್ತು ಟೀಕುಸಾಹಿತ್ಯದ ಇತಿಮಿತಿಗಳನ್ನು ಅರಿಯಲು ಪ್ರಸ್ತುತ ಅಧ್ಯಾಯದಲ್ಲಿ ಪ್ರಯತ್ನಿಸಲಾಗಿದೆ.

ಸಾಂಸ್ಕೃತಿಕವಾಗಿ ಟೀಕೀನ ವಚನಗಳಲ್ಲಿ ಅಭಿವ್ಯಕ್ತವಾದ ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಹಿತ್ಯಿಕ ಮತ್ತು ಭಾಷಿಕ ವಿಷಯಗಳಿಗೆ ಸಂಬಂಧಿಸಿದ ಸಾಂಸ್ಕೃತಿಕ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಚರ್ಚಿಸುವುದು ಈ ಪ್ರಬಂಧದ ಮತ್ತೊಂದು ಉದ್ದೇಶವಾಗಿದೆ.

ಕನ್ನಡ ನಾಡಿನ ಮಧ್ಯಕಾಲೀನ ಸಂದರ್ಭದ ಜನಜೀವನ, ಧರ್ಮ, ಆಚಾರ-ವಿಚಾರ, ಆಡಳಿತ ವ್ಯವಸ್ಥೆ, ಆರ್ಥಿಕ-ವ್ಯವಹಾರಿಕ ಬದುಕು, ಭಾಷೆಯ ಬಳಕೆ, ಸಂಪ್ರದಾಯಗಳು, ನಂಬಿಕೆಗಳು ಮುಂತಾದ ವಿಷಯಗಳನ್ನು ಅರಿತುಕೊಳ್ಳಲು ಕೆಲವು ಟೀಕಾಕಾರರು ವಚನಗಳನ್ನು ಕೇವಲ ಧಾರ್ಮಿಕ ಚೌಕಟ್ಟಿನ ಮಿತಿಯಲ್ಲಿ ಅರ್ಥೈಸಿದರೆ ಹೊರತು ಅವುಗಳ ಸಾಮಾಜಿಕ ಇಲ್ಲವೇ ಲೌಕಿಕವಾದ ಅಂಶಗಳನ್ನು ಅರ್ಥೈಸದಿರುವದರಿಂದ ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸಕ್ಕೆ ಕತ್ತಲೆ ಆವರಿಸುವಂತಾಯಿತು. ಆದರೂ, ಕೂಡಾ ಕೆಲವು ಟೀಕಾಕಾರರು ಟೀಕು ಬರೆಯುತ್ತಲೇ ತಮ್ಮ ಕಾಲಘಟ್ಟದ ಹಲವಾರು ಘಟನೆಗಳನ್ನು, ಸಾಮಾಜಿಕ ಸ್ಥಿತಿಗತಿಗಳನ್ನು ಕ್ವಚಿತ್ತಾಗಿ ಬಳಸಿರುವ ಪರಿಣಾಮ ಅಲ್ಪಮಟ್ಟಿಗಾದರು ಆ ಕಾಲದ ಜನಜೀವನದ ಮೇಲೆ ಬೆಳಕು ಚೆಲ್ಲಲು ಪ್ರಯತ್ನಿಸಲಾಗಿದೆ. ಇದರಿಂದ ಕರ್ನಾಟಕದ ಮಧ್ಯಕಾಲೀನ ಸಂಸ್ಕೃತಿಯನ್ನು ಇನ್ನಷ್ಟು ಖಚಿತಪಡಿಸಿಕೊಳ್ಳಲು ಟೀಕಿನ ವಚನಗಳು ಅಂಜನದಂತೆ ಕೆಲಸ ಮಾಡುತ್ತವೆ. ಜೊತೆಗೆ, ನಂಬಲರ್ಹವಾದ ಆಕರಗಳಾಗಿ ಗಮನ ಸೆಳೆಯಬಹುದಾದ ಟೀಕಿನ ವಚನಗಳನ್ನು ಹಲವು ಉದಾಹರಣೆಗಳ ಮೂಲಕ ಪ್ರಸ್ತಾಪಿಸಲಾಗಿದೆ. ತನ್ಮೂಲಕ ಕನ್ನಡ ಟೀಕಿನ

ವಚನಗಳಿಗೆ ಲಭ್ಯವಾದ ಶ್ರೀಮಂತ ಪರಂಪರೆ ಮತ್ತು ವೈಶಿಷ್ಟ್ಯಗಳನ್ನು ಗುರುತಿಸಲು ಕೈಗೊಂಡ ಪ್ರಯತ್ನವೇ 'ಕನ್ನಡ ಟೀಕಿನ ವಚನಗಳು: ಒಂದು ಅಧ್ಯಯನ.

**ಅಡಿಟಿಪ್ಪಣಿ**

೧. ಬಸವಣ್ಣನವರ ವಚನ ಸಂಪುಟ : ಸಂ. ಡಾ. ಎಂ.ಎಂ. ಕಲಬುರ್ಗಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧, ವಚನ–೭೯೮.

೨. ಬಸವಣ್ಣನವರ ವಚನ ಟೀಕುಗಳು : ಡಾ. ಬಿ.ವಿ. ಮಲ್ಲಾಪೂರ, ಶಿವಸಂಗಮ, ಪುಟ ೪೯

೩. ಮಾರ್ಗ ಸಂಪುಟ–೧, ಡಾ. ಎಂ. ಎಂ. ಕಲಬುರ್ಗಿ, ಪುಟ–೩೭೨

***

ಅಧ್ಯಾಯ ಎರಡು

# ಟೀಕಾ ಸಾಹಿತ್ಯ: ಅರ್ಥ–ಉಗಮ–ಲಕ್ಷಣ

೧. ಟೀಕಾ ಸಾಹಿತ್ಯದ ಅರ್ಥ

೨. ಟೀಕಾ ಸಾಹಿತ್ಯದ ಉಗಮ

೩. ಟೀಕಾ ಸಾಹಿತ್ಯದ ಲಕ್ಷಣ

೨

## ಟೀಕಾ ಸಾಹಿತ್ಯ: ಅರ್ಥ-ಉಗಮ-ಲಕ್ಷಣ

ಕನ್ನಡ ಸಾಹಿತ್ಯ ಕಾವ್ಯ, ಪುರಾಣಗಳಿಂದ ತುಂಬಿ ಹೋಗಿದೆ. ಆಯಾ ಧರ್ಮದ ಕವಿಗಳು ಕಾವ್ಯ ಪುರಾಣಗಳನ್ನು ರಚಿಸುವುದರ ಮೂಲಕ ಸಾಹಿತ್ಯ ಚರಿತ್ರೆಯ ನಿರ್ಮಾಣಕ್ಕೆ ಭಾಜನರಾಗಿದ್ದಾರೆ. ಈ ಕಾವ್ಯ ಕ್ರಿಯೆಯ ಜೊತೆಗೆ ಪ್ರಾಚೀನ ಕಾಲದ ಶಿಕ್ಷಣ ಪದ್ಧತಿಯಲ್ಲಿ ವ್ಯಾಕರಣ, ಛಂದಸ್ಸು, ಅಲಂಕಾರ, ಜೋತಿಷ್ಯ, ಇತಿಹಾಸ ಅನೇಕ ರೂಪದಲ್ಲಿ ಪ್ರಚಲಿತದಲ್ಲಿದ್ದವು. ಇವುಗಳ ಜೊತೆಗೆ ಒಂದು ಕಾವ್ಯದ ಇಲ್ಲವೇ ಪುರಾಣದ ಅದರಲ್ಲೂ ವಿಶೇಷವಾಗಿ ಶಾಸ್ತ್ರ ಸಾಹಿತ್ಯದ ತಿಳುವಳಿಕೆಯನ್ನು ಜನಸಮ್ಮುಖ ಗೊಳಿಸುವ ಉದ್ದೇಶದಿಂದಲೋ ಏನೋ ಆ ಕೃತಿಗಳಿಗೆ ವಿವರಣಾ ರೂಪದ ಟೀಕು, ವ್ಯಾಖ್ಯಾನಗಳನ್ನು ಬರೆಯುವ ಪರಿಪಾಠವು ರೂಢಿಯಲ್ಲಿತ್ತು. ಇತರ ಸಾಹಿತ್ಯ ಪ್ರಕಾರಗಳಂತೆ ಟೀಕಾ ಸಾಹಿತ್ಯ ಒಂದು ಸ್ವತಂತ್ರ ಅಧ್ಯಯನದ ವಿಷಯವಾಗಿ, ಶಿಕ್ಷಣದ ಪಠ್ಯವಾಗಿ, ಪ್ರಾಚೀನ ಕಾಲದಲ್ಲಿ ಬಳಕೆಗೆ ಬಂದಿತು. ಹೀಗಾಗಿ, ನಾಡಿನಾದ್ಯಂತ ಟೀಕಾಚಾರ್ಯರು, ಟೀಕಿನ ಮತಗಳು ಕಂಡುಬರುತ್ತವೆ.

ಪ್ರಸ್ತುತ ಅಧ್ಯಾಯದಲ್ಲಿ ಟೀಕಾಸಾಹಿತ್ಯದ ಅರ್ಥ, ಉಗಮ, ಹಾಗೂ ಲಕ್ಷಣಗಳನ್ನು ಚರ್ಚಿಸಲಾಗಿದೆ.

ಕನ್ನಡ ಟೀಕಾ ಸಾಹಿತ್ಯಕ್ಕೆ ಒಂದು ಪರಂಪರೆ ಇದೆ. ಸಾಹಿತ್ಯ ಚರಿತ್ರೆಯ ಅಧ್ಯಯನದ ಹಿನ್ನಲೆಯಲ್ಲಿ ಜೈನ, ವೀರಶೈವ, ವೈದಿಕ ಸಾಹಿತ್ಯಕ್ಕೆ ಬರೆದ ವಿಪುಲವಾದ ಟೀಕಾಕೃತಿಗಳು ರಚನೆಯಾಗಿವೆ. ಇಂತಹ ಟೀಕಾ ಕೃತಿಗಳಿಗೆ ಟೀಕೆ, ವ್ಯಾಖ್ಯಾನ, ಭಾಷ್ಯ, ಟಿಪ್ಪಣಿ, ವೃತ್ತಿ, ವಿವರಣೆ, ನಿರ್ವಚನ ಎಂದು ಮುಂತಾದ ಹೆಸರುಗಳಿಂದ ಕರೆಯಲಾಗಿದೆ.

ಆಯಾ ಧರ್ಮದ ಟೀಕಾಕೃತಿಗಳ ಸ್ವರೂಪ ಮತ್ತು ಆ ಸ್ವರೂಪಕ್ಕೆ ಅನ್ವಯವಾಗುವ ಅರ್ಥವನ್ನು ಟೀಕಾ ಸಾಹಿತ್ಯದಲ್ಲಿ ಗುರುತಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಕನ್ನಡ ಟೀಕಾ ಸಾಹಿತ್ಯದ ಅರ್ಥ, ಉಗಮ, ಲಕ್ಷಣಗಳು ಧರ್ಮದಿಂದ ಧರ್ಮಕ್ಕೆ, ಸಾಹಿತ್ಯದಿಂದ ಸಾಹಿತ್ಯಕ್ಕೆ, ಭಿನ್ನ ಹೆಸರಿನಲ್ಲಿ ರಚನೆಯಾಗಿರುವುದನ್ನು ಅನುಲಕ್ಷಿಸಬಹುದಾಗಿದೆ.

## ೧. ಟೀಕಾ ಸಾಹಿತ್ಯದ ಅರ್ಥ

ಕನ್ನಡ ನಿಘಂಟುವಿನಲ್ಲಿ 'ಟೀಕೆ' ಎಂದರೆ ವ್ಯಾಖ್ಯಾನ, ವಿವರಣೆ, ಟಿಪ್ಪಣಿ, ಭಾವಾರ್ಥ, ತಪ್ಪನ್ನು ಎತ್ತಿ ತೋರಿಸುವುದು ಮತ್ತು ವಿಮರ್ಶಾತ್ಮಕ ವಿವರಣೆ ಎಂದು ಮುಂತಾಗಿ ಅರ್ಥೈಸಲಾಗಿದೆ. ಅಂದರೆ, ಈ ಮೇಲಿನ ನಿಘಂಟು ಅರ್ಥದ ಮೂಲಕ ಮೂಲ ಕೃತಿಗೆ ಬರೆದ ಸರಳವಾದ ಅರ್ಥ ವಿವರಣೆ ಎಂದಾಗುತ್ತದೆ. ವಿಶೇಷವೆಂದರೆ, ಪದ್ಯ ಪ್ರಕಾರಕ್ಕೆ ಬರೆದ ಟೀಕುಗಳು, ಗದ್ಯ ಪ್ರಕಾರಕ್ಕೆ ಬರೆದ ಟೀಕುಗಳು ಅಥವಾ ವಚನಗಳಿಗೆ ಬರೆದ ಟೀಕುಗಳು ಬೇರೆ ಬೇರೆಯಾಗಿರುವುದರಿಂದ ಅವುಗಳ ಹೆಸರಿನಲ್ಲಿಯು ಭಿನ್ನತೆ ಕಂಡುಬರುತ್ತದೆ. ಹೀಗಾಗಿ, ಟೀಕು, ಟಪ್ಪಣೆ, ವ್ಯಾಖ್ಯಾನ, ಭಾಷ್ಯ, ವೃತ್ತಿ, ಚೂರ್ಣಿ, ನಿರುಕ್ತಿ, ಪದ್ಧತಿ, ನ್ಯಾಸ, ಸಾರ, ಪ್ರವಚನ, ಮತ್ತು ನುಡಿ ಎಂಬ ಬೇರೆ ಬೇರೆ ಹೆಸರಿನಿಂದ ಕರೆಯುವ ರೂಢಿ ಟೀಕಾಸಾಹಿತ್ಯ ಪರಂಪರೆಯಲ್ಲಿದೆ. ಹೀಗೆ, ಹೆಸರುಗಳು ಭಿನ್ನವಾಗಿ ಗೋಚರಿಸಿದರೂ ಈ ಎಲ್ಲ ಪದಗಳ ಅರ್ಥ ಒಂದೆಯಾಗಿದೆ. ಒಂದು ಪದದ ಇಲ್ಲವೇ ಕಾವ್ಯದ ಶಬ್ದಾರ್ಥ ಮತ್ತು ಭಾವಾರ್ಥಗಳನ್ನು ಗ್ರಹಿಸುವುದೇ ಆಗಿದೆ.

ಟೀಕಾ ಸಾಹಿತ್ಯ ಚರಿತ್ರೆಯಲ್ಲಿ ಈ ಮೇಲಿನ ಭಿನ್ನ ಹೆಸರುಗಳಿಗೆ ಭಿನ್ನ ಅರ್ಥಗಳು ಇರುವುದನ್ನು ಗಮನಿಸಿ ಅವುಗಳ ಅರ್ಥ ವಿವರಣೆಯನ್ನು ಡಾ.ಕೆ. ರವೀಂದ್ರನಾಥ ಅವರು ಈ ಕೆಳಗಿನಂತೆ ನಿರ್ವಚಿಸಿದ್ದಾರೆ.[೧]

### ೧. ಟೀಕು

ಅರ್ಥವಿವರಣೆ ಅದು ಶಬ್ದಾರ್ಥ ಇಲ್ಲವೇ ಭಾವಾರ್ಥ ವಿವರಣೆ ಆಗಿರಬಹುದು ಎಂಬ ವಿಚಾರ ಪ್ರಾಚೀನ ಕೃತಿಗಳಲ್ಲಿ ದೊರೆಯುತ್ತದೆ. ಶಾಸ್ತ್ರ ಸಾಹಿತ್ಯಕ್ಕೆ ಬರೆದ ವಿವರಣೆಯನ್ನು ಟೀಕು ಎಂದು ಕರೆದಂತಿದೆ.

"ಲೋಕಕ್ಕಿದರರ್ಥಶಾಸ್ತ್ರದ ಟೀಕೆನಿಸಿದ ತನ್ನ ನುಡಿ ಮನಂಗೊಳಿಸೆ"

"......ಟೀಕುವೇಳ್ಪುದನೆ ಪೇಳ್ದವನುಂ ಕವಿಯೆಂಬ ಲೆಕ್ಕಮೇ"

ಎಂಬ ಕಾವ್ಯಾವಲೋಕನದ ಮಾತು ಕವಿ ಸೃಜನಶೀಲ ವ್ಯಕ್ತಿ, ಕಾವ್ಯ ಆತನ ಸೃಜನಶೀಲ ಅಭಿವ್ಯಕ್ತಿ. ಹೀಗಾಗಿ ಟೀಕಾಕಾರ ಹೇಳಿದ್ದನ್ನೇ ಹೇಳುವವನನ್ನು ಕವಿಯೆನ್ನಲಾಗದು ಎನ್ನುವಲ್ಲಿ ಕವಿ ಸಾಹಿತ್ಯದ ತಿರುಳನ್ನು, ಅರ್ಥವನ್ನು ವಿವರಿಸುವುದು ಟೀಕಾಕಾರನ ಕೆಲಸವೆಂಬುದು ಈ ಮಾತಿನ ಅರ್ಥ. ಈ ಟೀಕೆಗಳಲ್ಲಿ ಸೋಪಾಜ್ಞ ಟೀಕೆ, ಟುಪ್ಪೀಕೆ ಎಂಬ ಪ್ರಭೇದಗಳಿವೆ. ಉನ್ನತಮಟ್ಟದ ಟೀಕೆ ಸೋಪಾಜ್ಞ ಟೀಕೆಯೆನಿಸಿದರೆ, ಟುಪ್ಪೀಕೆಯೆಂಬುದು ಬಹು ಸಂಕ್ಷೇಪವಾದ ವ್ಯಾಖ್ಯಾನವಾಗಿದೆ. ಶಾಬರಭಾಷ್ಯದ ಮೇಲೆ ವ್ಯಾಖ್ಯಾನ ಬರೆದ ಕುಮಾರಿಲಭಟ್ಟ ಟುಪ್ಪೀಕೆ ರಚಿಸಿದ್ದಾನೆ. ಟೀಕೆಯ ರೂಪವನ್ನು ಹೇಳುವ ಬಂಕನಾಥ ಎಂಬುದೀಗ ದೃಷ್ಟ, ವಚನಾನ್ವಯ, ನಿರ್ವಚನ, ಎಂಬುದೀವಚನ ತಾತ್ಪರ್ಯ ಎನ್ನುವಲ್ಲಿ ಟೀಕೆಗೆ ದೃಷ್ಟ, ಅನ್ವಯ, ನಿರ್ವಚನ, ತಾತ್ಪರ್ಯ ಎಂಬ ವೈವಿಧ್ಯ ಪದಪುಂಜಗಳನ್ನು ಪ್ರಯೋಗಿಸಿದ್ದಾನೆ.

## ೨. ಟಿಪ್ಪಣಿ

ವಿವರಣೆ, ವ್ಯಾಖ್ಯಾನ ಎಂಬಂತಹ ಅರ್ಥಗಳಿದ್ದರೂ ಈ ವಿಶಾಲವಾದ ಅರ್ಥ ಇಂದು ಈ ಶಬ್ದಕ್ಕೆ ಹೊಂದಿಕೆಯಾಗುವುದಿಲ್ಲ. ಇಂದು ಟಿಪ್ಪಣಿ ಮಾಡಿಕೊಳ್ಳು ಎನ್ನುವುದಕ್ಕೆ ನೋಟ್ಸ್(Notes) ಮಾಡಿಕೊಳ್ಳು ಎಂದೇ ಅರ್ಥ.

## ೩. ವ್ಯಾಖ್ಯಾನ

ವಿಸ್ತಾರವಾಗಿ ಹೇಳುವುದು, ಕೂಲಂಕಷವಾದ ವರ್ಣನೆ, ವಿವರಣೆ ಎಂದರ್ಥವಾಗುತ್ತದೆ. ಮೀಮಾಂಸೆ ಹಿನ್ನಲೆಯಲ್ಲಿ ವಿವರಿಸುವುದಕ್ಕೆ ವ್ಯಾಖ್ಯಾನವೆಂದು ಕರೆದಂತಿದೆ. ಪೊನ್ನನು

> ಸಾರತರೋಕ್ತಿಗೆ ನೆಲ್ಲುಂ
> ಮೋರುಂಗೋದಂತೆ ನೇರಿ ಕಲ್ತಾರ್ಪರವ॥
> ಗೋರ್ೀರೆನಿಬಂಧನ ಟೀಕಾ
> ಕಾರಂಗಲ್ಲದೆ ಪೆರರಿಂಗೆ ಕೋಳ್ಗೊಳ್ವದಪುದೇ॥ (ಶಾಂತಿಪುರಾಣ ೧೦-೧೮೨)

ಎಂಬ ಪದ್ಯದಲ್ಲಿ ತಾವು ಕಲಿತು ಪಂಡಿತರೆಂದುಕೊಂಡವರು ಭತ್ತ ಮೊಸರು ಕಲಿಸಿದಂತೆ ಸ್ವತಃ ಅರ್ಥ ಪ್ರಸನ್ನತೆಯಿರುವ ಮಾತಿಗೆ ವ್ಯಾಖ್ಯಾನ ಟೀಕೆಗಳನ್ನು ಬರೆಯುವರು ಎಂದಿದ್ದಾನೆ. ಇದರಿಂದ ಅರ್ಥವಾಗದ ಬೆಡಗಿನಿಂದ ಕೂಡಿದ ಗೂಡಾರ್ಥ ಸಾಹಿತ್ಯಕ್ಕೆ ವಿವರ ಬರೆಯುವುದು ವ್ಯಾಖ್ಯಾನವೆನಿಸುತ್ತದೆ. ಇದು ಶಬ್ದಾರ್ಥ, ಸಂದರ್ಭ, ವಿಶೇಷ ವಿವರಣೆಯನ್ನೊಳಗೊಂಡಿರುತ್ತದೆ.

## ೪. ಭಾಷ್ಯ

ವ್ಯಾಕರಣ, ವೇದಾಂತ ಮೊದಲಾದ ಶಾಸ್ತ್ರಗಳ ಮೂಲಭೂತವಾದ ಸೂತ್ರಗಳ ಅರ್ಥವನ್ನು ವಿವರಿಸುವ ಕೃತಿ. ಉದಾಹರಣೆಗೆ ಶ್ರೀಕರಭಾಷ್ಯ, ಶಂಕರಭಾಷ್ಯಗಳೂ, ಶಾಸ್ತ್ರ ಸಮ್ಮತವಾದ ವೇದಾಂತಭಾಷ್ಯ ಗ್ರಂಥಗಳು. ಅಲ್ಲದೇ ಸೂತ್ರಾನುಸಾರವಾದ ಪದಗಳಿಂದ ಸೂತ್ರಾರ್ಥವನ್ನು ವಿವರಿಸುವ ಹಾಗೂ ವಿವರಣೆಗಾಗಿ ಕೊಟ್ಟ ಪದಗಳನ್ನು ಮತ್ತೆ ವಿಸ್ತಾರವಾಗಿ ವಿವರಿಸುವ ಸೂತ್ರ ವ್ಯಾಖ್ಯಾನಗಳು ಭಾಷ್ಯಗಳು. ಯಾವುದೇ ಗಹನವಾದ ಮೂಲ ಗ್ರಂಥದ ವಿವರಣಾತ್ಮಕ ಪ್ರೌಢ ವ್ಯಾಖ್ಯಾನಗಳೇ ಭಾಷ್ಯಗಳು.

ಈ ಭಾಷ್ಯಗಳಲ್ಲಿ ಲಘುಭಾಷ್ಯ, ಮಹಾಭಾಷ್ಯ ಎಂದು ಎರಡು ವಿಧ. ಜೈನ ಪರಿಭಾಷೆಯಲ್ಲಿ ಭಾಸ ಎಂದು ಕರೆಯಲಾಗಿದೆ. ಜೈನ ಕಥಾ ಸಾಹಿತ್ಯ ಮೈದುಂಬಿಕೊಂಡು ಬಂದಿರುವುದು ಈ ಭಾಷ್ಯಗಳಲ್ಲಿ. ಜೈನರಲ್ಲಿ ೪-೫ನೆಯ ಶತಮಾನಕ್ಕೆ ಸೇರಿದ ಭಾಷ್ಯಗಳಲ್ಲಿ ಸಮಾಜೋ-ಧಾರ್ಮಿಕ, ಸಮಾಜೋ-ಸಾಂಸ್ಕೃತಿಕ ಸಾಮಗ್ರಿ ಹೇರಳವಾಗಿ ದೊರೆಯುತ್ತದೆ. ವಿಶೇಷವೆಂದರೆ 'ಅವಶ್ಯಕಭಾಷ್ಯ, ನಿಶೀರ್ಥಭಾಷ್ಯ, ಬೃಹತ್ ಕಲ್ಪಭಾಷ್ಯ' ವ್ಯವಹಾರ ಭಾಷ್ಯಗಳಲ್ಲಿ ಐತಿಹ್ಯಗಳಿವೆ. ನೀತಿಬೋಧಕ ಕಥಾನಕಗಳಿವೆ. ರಿಷಿಚರಿತೆಗಳಿವೆ ಮತ್ತು ಮಿಗಿಲಾದ ಜಾನಪದ ಕಥೆಗಳಿವೆ (ಜೈನ ಕಥಾಕೋಶ ಸಂ- ಹಂಪನಾ, ಪ್ರಸ್ತಾವನೆ ಪು-೧೦) ಎಂಬುದನ್ನು ಗಮನಿಸಿದಾಗ ಭಾಷ್ಯಗಳು ಶಾಸ್ತ್ರ ಲಕ್ಷಣ ಕೃತಿಗಳಂತೆ ರಚನೆಯಾದ

ಒಂದು ಪ್ರಕಾರ. ಈ ಪ್ರಕಾರಕ್ಕೆ ಸೇರಿದ ಜಿನಭದ್ರಸೂರಿಯ ೩೬೦೦ ಗಾಥಾಗಳ ವಿಶೇಷಾವಶ್ಯಕ ಭಾಷ್ಯಕ್ಕೆ ಸೋಪಾಜ್ಞಟೀಕಾವನ್ನು ಬರೆಯಲಾಗಿದೆ. ಸಂಕ್ಷಿಪ್ತ, ಪದಾರ್ಥ, ಸೂತ್ರದ ವಿವರಣೆಯನ್ನು ಭಾಷ್ಯ ಒಳಗೊಂಡಿರುತ್ತದೆ.

**೫. ವೃತ್ತಿ**

ಸೂತ್ರ ರೂಪದಲ್ಲಿರುವ ಮೂಲಗ್ರಂಥಕ್ಕೆ ಭಾಷ್ಯ ಬರೆಯುವುದಕ್ಕೆ ವೃತ್ತಿ ಎನ್ನುತ್ತಾರೆ. ಅಂದರೆ, ಸೂತ್ರದ ಅರ್ಥ ವಿವರಣೆ. ಪಂಪಭಾರತದ "ಸೂತ್ರಿಸಿದ ಸೂತ್ರ (ದ) ವೃತ್ತಿ ನಿಜಾತ್ಮವೃತ್ತಿಮೋಲ್ ಪರಿಣಮಿಸಿತ್ತು" (ಪಂಪಭಾರತ – ೨.೨೪) ಎಂಬ ಮಾತಾಗಲಿ, ತತ್ತ್ವಪ್ರಕಾಶದ "ಅಲ್ಪಾಕ್ಷರಮುಂ ಅಸಂದೇಹಮುಂ ಸಾರವುಳ್ಳುದಂ..." ಅರ್ಥೋತ್ಪತ್ತಿ ನಿಮಿತ್ತಮುಂ ಅಪ್ಪುದು ಸೂತ್ರವೆಂಬುದು ಅದಂ ವಿವರಿಸುವುದು ವೃತ್ತಿ ಗ್ರಂಥ... (ತತ್ವಪ್ರಕಾಶ – ೩). ಅಂದರೆ, ಸಂಕ್ಷೇಪದಿಂದ ಕೂಡಿದ್ದು, ಅರ್ಥವನ್ನು ಗರ್ಭೀಕರಿಸಿಕೊಂಡಿದ್ದು, ಕೆಲವೇ ಅಕ್ಷರಗಳ ಸಮೂಹ ಹೊಂದಿದ್ದು, ಸೂತ್ರ, ಅಂತಹ ಸೂತ್ರವನ್ನು ವಿವರಿಸುವುದು ವೃತ್ತಿ. ಈ ವೃತ್ತಿಗಳಲ್ಲಿ ಅರ್ಥವೃತ್ತಿ, ಅನ್ವಯಿಕವೃತ್ತಿ, ಲಘುವೃತ್ತಿ (ಸುಖಬೋಧಾ), ಬೃಹದ್ ವೃತ್ತಿ (ಶಿಷ್ಯರಹಿತಾ)ಗಳೆಂದು ಭಿನ್ನ ಸ್ವರೂಪಗಳಿವೆ. ಉದಾಹರಣೆಗೆ ನೇಮಿಂದ್ರ ಬರೆದ ಉತ್ತರಾಧ್ಯಯನ ಸುಖಬೋಧಾ ವೃತ್ತಿ (ಲಘುವೃತ್ತಿ) ಶಾಂತಿಸೂರಿ ವಿರಚಿತ ಉತ್ತರಾಧ್ಯಯನದ ಶಿಷ್ಯರಹಿತಾ (ಬೃಹದ್ ವೃತ್ತಿ) ವೃತ್ತಿಗಳನ್ನು ಹೆಸರಿಸಬಹುದು. ಹಾಗೆಯೇ, ಕೇಶಿರಾಜನು ಶಬ್ದಮಣಿ ದರ್ಪಣಕ್ಕೆ ಬರೆದ ವೃತ್ತಿ ಅನ್ವಯಿಕ ವೃತ್ತಿಯಾಗಿದೆ. ಉಳಿದಂತೆ ಕನ್ನಡದಲ್ಲಿ ಅರ್ಥ ವೃತ್ತಿಗಳು ಹೇರಳವಾಗಿವೆ.

**೬. ಚೂರ್ಣಿ**

ಜೈನರಲ್ಲಿ ಗದ್ಯಾತ್ಮಕ ಟೀಕೆಗಳನ್ನು ಚೂರ್ಣಿ (ಚುಣ್ಣಿ) ಎಂದು ಕರೆಯುತ್ತಾರೆ. ಇವು ಅವರ ಆಗಮ ಗ್ರಂಥಗಳಿಗೆ ಸಂಬಂಧಿಸಿದವು. "ಚೂರ್ಣಿಕೆ ಲತಿಕೆ...... ಚಿತ್ರವೆಂಬ ಗದ್ಯಬಂಧದೊಳಂ" (ಅನಂತನಾಥ ಪುರಾಣ ೧೦– ೨೮) ಎಂಬ ಜನ್ನನ ಹೇಳಿಕೆ ಸುಲಭಶೈಲಿಯ ಒಂದು ಗದ್ಯ ಪ್ರಕಾರ. ಜೈನರ ಪ್ರಾಕೃತ ಗದ್ಯರೂಪದಲ್ಲಿ ಚೂರ್ಣಿಗಳು ರಚನೆಯಾಗಿದ್ದು ಲೋಕಜ್ಞಾನ, ಹಾಸ್ಯಪ್ರವೃತ್ತಿ ಸಾರುವ ಕಥಾಚಕ್ರವೇ ಚೂರ್ಣಿಗಳಲ್ಲಿ ಹೆಣೆದುಕೊಂಡಿವೆ.

**೭. ನಿರ್ಯುಕ್ತಿ**

ಜೈನರಲ್ಲಿ ಪದ್ಯಾತ್ಮಕ ಟೀಕೆಗೆ ನಿರ್ಯುಕ್ತಿ ಎಂದು ಕರೆಯುತ್ತಾರೆ. ಜೈನಾಗಮ ಗ್ರಂಥಗಳ ಪಾರಿಭಾಷಿಕ ಶಬ್ದವಿವರಣೆಗಾಗಿ ನಿರ್ಯುಕ್ತಿಗಳನ್ನು ಬರೆಯುವ ರೂಢಿ ಬೆಳೆದು ಬಂದಿತು. ಸಂಸ್ಕೃತದ ಪದ ನಿರ್ಯುಕ್ತಿ ಪ್ರಾಕೃತ ರೂಪ ನಿಜ್ಜುತ್ತಿ. ಅನುಯೋಗದ್ವಾರ ಮುಂತಾದವುಗಳ ಮೇಲೆ ಬರೆದ ವ್ಯಾಖ್ಯಾನದಂತೆ ಇರುವ ಕೃತಿಗಳೇ ನಿರ್ಯುಕ್ತಿಗಳು. ಜೈನಧರ್ಮದ ದಶಾಗಮ ಗ್ರಂಥಗಳಲ್ಲದೇ ಪಿಂಡ ಹಾಗೂ ಓಘ ಎಂಬೆರಡು ಆಗಮಗಳಿಗೆ ನಿರ್ಯುಕ್ತಿಗಳಿವೆ.

೮. ಪದ್ಧತಿ

ಜೈನ ವ್ಯಾಖ್ಯಾನ ಪ್ರಕಾರವಾಗಿದೆ. ಇದನ್ನು ಪಂಜಿಕೆ, ಪಂಚಿಕೆ ಎಂತಲೂ ಕರೆಯುತ್ತಾರೆ. "ಆ ಕೃತಿಗೆ ಪಂಚಿಕೆ ವೇಳ್ವುದದರ್ಕೆ ಟಿಪ್ಪಣಂ ಬೇಳ್ವುದು ಟೀಕುವೇಳ್ವುದೆನೆ ಪೇಳ್ದವನುಂ ಕವಿಯೆಂಬ ಲೆಕ್ಕಮೇ" ಎಂಬ ಕಾವ್ಯಾವಲೋಕನದ (೨೯೯) ಮಾತು "ಪ್ರಾಕೃತ ಸಂಸ್ಕೃತ ಕರ್ಣಾಟಭಾಷಾಯಾ ಪದ್ಧತಿ:ಪರಾ ರಚಿತಾ (ಶ್ರುತಾವತಾರ ೧೬೪) ಎಂಬ ಇಂದ್ರನಂದಿಯ ಮಾತುಗಳಿಂದ ಇದು ವ್ಯಾಖ್ಯಾನ ಪ್ರಬೇಧ. ಜಿನಸೇನಾಚಾರ್ಯರ ಜಯಧವಲಾ ಗ್ರಂಥದ ಪ್ರಕಾರ ಇದರ ಲಕ್ಷಣ – "ವೃತ್ತಿ ಸೂತ್ರ ವಿಸಮ ಪಯಾಭಂಜಿ ಏ ವಿವರಣಾವ ಪದ ಇ ವವೇಸಾದೋ" ಈ ವಾಕ್ಯಕ್ಕೆ "ವೃತ್ತಿ ಸೂತ್ರಕೇ ವಿಷಮ ಪದೋಂ ಕ ಭಂಜನ ಅರ್ಥಾತ್ ವಿಶ್ಲೇಷಣಾತ್ಮಕ ವಿವರಣಕೋ ಪದ್ಧತಿ ಕಹತೆಹೈಂ" ಎಂದು ಹೀರಾಲಾಲ್ ಜೈನರು ವಿವರಣೆ ನೀಡಿದ್ದಾರೆ. ಇದರಿಂದ ಪದ್ಧತಿ, ಪಂಜಿಕೆ, ಪಂಜಿಕೆಗಳೆಂದರೆ ವೃತ್ತಿಸೂತ್ರದ ಕ್ಲಿಷ್ಟ ಪದಗಳಿಗೆ ಬರೆದ ವಿವರಣಾ ರೂಪದ ವ್ಯಾಖ್ಯಾನ ಎಂದಾಗುತ್ತದೆ." "ನಿನ್ನ ಪದ್ಯಕ್ಕೆ ಸದ್ಯಕ್ಕೆ ಟೀಕು, ಟಿಪ್ಪಣಿ, ಪಂಚಿಕೆ ಎಲ್ಲವೂ ಬೇಕು" (ಕ.ಸಾ.ಪ ಕನ್ನಡ ನಿಘಂಟು ಸಂ.೪.ಪು. ೫೦೫೪) ಎನ್ನುವಲ್ಲಿ ಮೇಲಿನ ಅರ್ಥ ಇನ್ನು ಅಧಿಕೃತವೆನಿಸುತ್ತದೆ.

೯. ನ್ಯಾಸ

ವ್ಯಾಖ್ಯಾನವೆಂತಲೂ, ಭಾಷ್ಯ, ಟೀಕೆಯೆಂತಲೂ ಹೆಸರು. "ಭಟ್ಟಾದರ್ಶನ, ನ್ಯಾಸ, ಪ್ರಭಾಕರ ವ್ಯಾಖ್ಯಾತೃಗಳ್ಗೂವರ್ಗ್ಗ ಸರ್ವನಮಸ್ಯಮಾಗಿ ಕೊಟ್ಟ ಕೆಯ್ಮಾಣಿಕೇಶ್ವರದಗಳಿಂಬ ಮತ್ತರು ೧೦೦೦........ ಭಟ್ಟಾದರ್ಶನ ವ್ಯಾಖ್ಯಾತೃಗೆ ಮತ್ತರು ೩೫, ನ್ಯಾಸ ವ್ಯಾಖ್ಯಾತೃಗೆ ಮತ್ತರು ೩೦........" (ನಾಗಾವಿ ಶಾಸನ ಕ್ರಿ.ಶ. ೧೦೫೮) ಎಂಬ ಉಲ್ಲೇಖದಿಂದ ಹಾಗೂ ಈ ನುಡಿ ನಿನಗಲ್ಲದೆ ದಿವಿಜಾನೀಕಕ್ಕಮರದವರ ವಚನಂ ಜಡ ಸಂಸ್ಥಾನ ಮವಿಜ್ಞೇಯಮದರ್ಕೆ ನಾನುಂ ನ್ಯಾಸಕಾರರಂ ತರವೇಳ್ಕುಂ...." (ಶಾಂತಿ ಪುರಾಣ ೧೦-೧೮) ಎನ್ನುವಲ್ಲಿ ವ್ಯಾಖ್ಯಾನ ಎಂಬ ಅರ್ಥ ಪ್ರಾಪ್ತವಾಗುತ್ತದೆ. ನ್ಯಾಸವೆಂದರೆ ಸಂಗೀತದ ಒಂದು ಸ್ವರ ಪ್ರಭೇಧವೂ ಹೌದು. ಹೀಗಾಗಿ, ಭಟ್ಟದರ್ಶನವನ್ನು ಗೇಯಾತ್ಮಕವಾಗಿ, ಪದ್ಯಾತ್ಮಕವಾಗಿ ವ್ಯಾಖ್ಯಾನ ಮಾಡುತ್ತಿದ್ದರೆನಿಸುತ್ತದೆ.

೧೦. ಸಾರ ಹಾಗೂ ಪ್ರವಚನ

ತಿರುಳು, ತಾತ್ಪರ್ಯ ಎಂದು ಸಾರ ಎಂಬುದಕ್ಕೆ ಅರ್ಥವಿದ್ದರೆ, ಪ್ರವಚನಕ್ಕೆ ವ್ಯಾಖ್ಯಾನ ವಿವರಣೆ ಎಂಬರ್ಥವಿದೆ. ಹೀಗಾಗಿ, ಮರುಳದೇವರ ಕಂದಸಾರ, ಷಟಸ್ಥಲಜ್ಞಾನಸಾರಾಮೃತ, ಕೈವಲ್ಯಸಾರ, ಅಕ್ಕನ ವಚನಗಳ ಪ್ರವಚನ ಇತ್ಯಾದಿ ಕೃತಿಗಳು ಈ ವರ್ಗಕ್ಕೆ ಸೇರಿದವು. ಈ ಗುಂಪಿಗೆ ಪರಾಮರ್ಶೆ ಕೃತಿಗಳು ಸೇರುತ್ತವೆ.

ಒಟ್ಟಿನಲ್ಲಿ ಟೀಕಾಸಾಹಿತ್ಯಕ್ಕೆ ಪರ್ಯಾಯವಾಗಿ ಟಿಪ್ಪಣಿ, ವ್ಯಾಖ್ಯಾನ, ಭಾಷ್ಯ, ನ್ಯಾಸ, ವೃತ್ತಿ, ಪದ್ಧತಿ, ಚೂರ್ಣಿ, ನಿರ್ಯುಕ್ತಿ, ಸಾರ, ಪ್ರವಚನ, ಪರಾಮರ್ಶೆಗಳೆಂಬ ಹೆಸರು ಬಳಕೆಗೊಂಡಿದ್ದರೂ ಒಂದು

ಕೃತಿಯ ಅಂತರಂಗವನ್ನು ಭಾವಾರ್ಥರೂಪದಲ್ಲಿ ಇಲ್ಲವೇ ಶಬ್ದಾರ್ಥ ಸ್ವರೂಪದಲ್ಲಿ ಎಲ್ಲರಿಗೂ ಅರ್ಥವಾಗುವಂತೆ ರಚಿಸಿದ ವಿವರಣಾ ಸಾಹಿತ್ಯ ಎಂದು ಹೇಳಬಹುದು.

ಟೀಕವು ನಿಜ್ಜುತ್ತಿ (ನಿರ್ಯುಕ್ತಿ), ಭಾಸ (ಭಾಷ್ಯ), ಚುಣ್ಣಿ (ಚೂರ್ಣಿ) ಎಂದು ಪ್ರಾಕೃತ ಪರಂಪರೆಯಲ್ಲಿ, ಟೀಕೆ, ವ್ಯಾಖ್ಯಾನ, ವಿವರಣ, ವೃತ್ತಿ ಎಂದು ಸಂಸ್ಕೃತದಲ್ಲಿ ಹಾಗೂ ಸಾರ, ಪ್ರವಚನ, ಭಾವಾರ್ಥ ಎಂದು ಕನ್ನಡ ಪರಂಪರೆಯಲ್ಲಿ ಬಳಕೆಯಾಗುತ್ತಿದೆ."

ಹೀಗೆ, ಟೀಕಾಸಾಹಿತ್ಯವು ಆಯಾ ಕಾಲ, ಧರ್ಮ, ಭಾಷೆ, ಸಂಸ್ಕತಿ ಹಿನ್ನೆಲೆಯಲ್ಲಿ ಸೃಜನ ಹಾಗೂ ಸೃಜನೇತರ ನೆಲೆಯಲ್ಲಿ ರಚನೆಯಾಗುತ್ತ ಬಂದಿದೆ. ಆಯಾ ಭಾಷೆಯ ಪದಗಳು ಬೇರೆ ಬೇರೆಯಾಗಿ ಕಂಡರೂ ಕೂಡಾ ಅರ್ಥೈಸುವಿಕೆಯಲ್ಲಿ ಸಾಮ್ಯತೆಗಳು ಕಂಡುಬರುತ್ತವೆ.

ಈ ಹಿನ್ನೆಲೆಯಲ್ಲಿ ಸಂಸ್ಕೃತ, ಪ್ರಾಕೃತ, ಕನ್ನಡ ಭಾಷಾ ಸಾಹಿತ್ಯ ಪರಂಪರೆಯಲ್ಲಿ ಟೀಕಾಸಾಹಿತ್ಯ ಉಗಮವಾಗಿರುವ ಅಂಶಗಳನ್ನು ಅಧ್ಯಯನಗೈಯುವುದು ಅಷ್ಟೇ ಮಹತ್ವದ ವಿಷಯವಾಗಿದೆ.

**೨. ಟೀಕಾ ಸಾಹಿತ್ಯದ ಉಗಮ**

ಸಾಹಿತ್ಯ ಪ್ರಕಾರವಾಗಿ ಕನ್ನಡದಲ್ಲಿ ಬೆಳೆದುಬಂದ ಟೀಕಾ ಸಾಹಿತ್ಯಕ್ಕೆ ಸುಮಾರು ೭ನೇ ಶತಮಾನದ ಪ್ರಾಚೀನತೆಯನ್ನು ವಿದ್ವಾಂಸರು ಗುರುತಿಸುತ್ತಾರೆ. ಅಂದರೆ, ಟೀಕಾಸಾಹಿತ್ಯ ಉಗಮ ಅಷ್ಟು ಪ್ರಾಚೀನವೆಂಬುದು ಕನ್ನಡದ ಮಟ್ಟಿಗೆ ಸದ್ಯದ ಅಭಿಮತವಾಗಿದೆ. ಆದರೆ, ಭಾರತೀಯ ಸಾಹಿತ್ಯ ಚರಿತ್ರೆಯಲ್ಲಿ ಸಂಸ್ಕೃತ, ಪ್ರಾಕೃತ ಭಾಷೆಗಳಿಗೆ ಅತ್ಯಂತ ಪ್ರಾಚೀನ ಇತಿಹಾಸ ಇರುವುದನ್ನು ಗಮನಿಸಿದಾಗ ಟೀಕಾಸಾಹಿತ್ಯದ ಉಗಮವನ್ನು ಆ ಕಾಲಕ್ಕೆ ಕಂಡುಕೊಳ್ಳುವ ಪ್ರಯತ್ನವನ್ನು ವಿದ್ವಾಂಸರು ಮಾಡಿದ್ದಾರೆ. ಸಂಸ್ಕೃತ ಭಾಷೆಯಲ್ಲಿನ ವ್ಯಾಖ್ಯಾನ ಸಂಪ್ರದಾಯ ಆರಂಭಗೊಂಡಿದ್ದು ವೇದದ ಕಾಲದಲ್ಲಿ. ಮೂಲ ವೇದಗಳನ್ನು ಸಂಹಿತೆಗಳೆಂದು ಕರೆಯಲಾಗುತ್ತದೆ. ಇವುಗಳಿಗೆ ಸಂಧಿಯನ್ನು ಬಿಡಿಸಿ ತೋರಿಸುವ ವಾಂಙ್ಮಯವೊಂದು ಉತ್ತರಕಾಲದಲ್ಲಿ ಬೆಳೆದು ಬಂತು. ಇವುಗಳಿಗೆ ಪದಪಾಠಗಳೆಂದು ಹೆಸರು. ಈ ಪದಪಾಠಗಳನ್ನು ಸಂಸ್ಕೃತದ ಆದಿಮ ವ್ಯಾಖ್ಯಾನಗಳೆನ್ನಬಹುದು.

ವೇದದಲ್ಲಿನ ಸುಮಾರು ೨೫೦೦ ಶಬ್ದಗಳನ್ನು ಆಯ್ದು ಪಟ್ಟಿ ಮಾಡಿದ್ದು ಇದನ್ನು ಯಾರು ಮಾಡಿದರೆಂದು ತಿಳಿಯದು. ಆದರೆ ಈ ಪಟ್ಟಿಗೆ ಇಲ್ಲವೇ ನಿಘಂಟುವಿಗೆ ಯಾಸ್ಕಾಚಾರ್ಯ ವಿಸ್ತೃತವಾದ ವ್ಯಾಖ್ಯಾನ ರಚಿಸಿದ್ದಾನೆ. ವೇದವನ್ನು ಅರ್ಥ ಮಾಡಿಕೊಳ್ಳಲು ಈ ವ್ಯಾಖ್ಯಾನ ತುಂಬಾ ಸಹಾಯ ಮಾಡುತ್ತದೆ.

ಸಂಸ್ಕೃತದಲ್ಲಿ ವ್ಯಾಖ್ಯಾನಗಳನ್ನು ಪ್ರಮುಖವಾಗಿ ಶಾಸ್ತ್ರ ವ್ಯಾಖ್ಯಾನ ಹಾಗೂ ಸಾಹಿತ್ಯ ವ್ಯಾಖ್ಯಾನ ಎಂದು ಎರಡು ಬಗೆಯಾಗಿ ವಿಂಗಡಿಸಬಹುದು. ವ್ಯಾಕರಣ, ಛಂದಸ್ಸು, ವೈದ್ಯ, ಜೋತಿಷ್ಯ, ತಂತ್ರ, ಸಾಂಖ್ಯ, ನ್ಯಾಯ ವೈಶೇಷಿಕ ಇತ್ಯಾದಿ ವಿಷಯಗಳಿಗೆ ಬರೆದ ವ್ಯಾಖ್ಯಾನಗಳನ್ನು ಶಾಸ್ತ್ರಸಾಹಿತ್ಯ ವ್ಯಾಖ್ಯಾನವೆಂದು ; ಕಾವ್ಯ, ನಾಟಕ, ಸುಭಾಷಿತ, ಸ್ತೋತ್ರ, ಪುರಾಣಗಳಿಗೆ ಬರೆದ ವ್ಯಾಖ್ಯಾನವನ್ನು ಸಾಹಿತ್ಯ ವ್ಯಾಖ್ಯಾನವೆಂದು ಗುರುತಿಸುತ್ತಾರೆ.

ಸಂಸ್ಕೃತ ಸಾಹಿತ್ಯದಲ್ಲಿ ಬಹುತೇಕ ಶಾಸ್ತ್ರ ಕೃತಿಗಳು ಸೂತ್ರ ರೂಪದಲ್ಲಿರುತ್ತವೆ. ಈ ಸೂತ್ರಗಳಿಗೆ ಅರ್ಥ ವಿವರಣೆ ನೀಡುವುದನ್ನೇ 'ಭಾಷ್ಯ' ಗಳೆಂದು ಕರೆಯುತ್ತಾರೆ. ಈ 'ಭಾಷ್ಯ'ಗಳಿಗೆ ಬರೆದ ವಿಮರ್ಶೆಯನ್ನು ಸಂಸ್ಕೃತದಲ್ಲಿ 'ವಾರ್ತಿಕ'ಗಳೆಂದು ಕರೆಯುವ ರೂಢಿ ಇದೆ.

"ಸಂಸ್ಕೃತದ ಸ್ವತಂತ್ರ ಶಾಸ್ತ್ರಗ್ರಂಥಗಳಲ್ಲಿನ ವ್ಯಾಖ್ಯಾನಗಳಲ್ಲಿ, ಮೂಲವನ್ನು ಆರಂಭ ಬಿಂದುವಿನಂತೆ ಇಟ್ಟುಕೊಂಡು ಅಲ್ಲಿಂದ ಮುಂದೆ ವಿಚಾರವನ್ನು ವಿಸ್ತಾರವಾಗಿ ಸ್ವತಂತ್ರವಾಗಿ ಬೆಳೆಸಿರುವ ಕ್ರಮ ಹೆಚ್ಚಿನ ವ್ಯಾಖ್ಯಾನಗಳಲ್ಲಿ ಕಾಣಸಿಗುತ್ತದೆ. ಮೂಲಗ್ರಂಥಕರ್ತೃವೇ ತನ್ನ ಗ್ರಂಥಕ್ಕೆ ತಾನೇ ವ್ಯಾಖ್ಯಾನ ಬರೆಯುವುದು ಸಂಸ್ಕೃತದಲ್ಲಿ ಅತಿ ಸಾಧಾರಣ ವಿಷಯ. ಉದಾಹರಣೆಗೆ ಅನ್ನಂಭಟ್ಟನು ತಾನು ರಚಿಸಿರುವ ತರ್ಕಸಂಗ್ರಹವೆಂಬ ಗ್ರಂಥಕ್ಕೆ ತಾನೇ ದೀಪಿಕಾ ಎಂಬ ಹೆಸರಿನ ವ್ಯಾಖ್ಯಾನವನ್ನು ಬರೆದಿದ್ದಾರೆ. ಈ ಪಟ್ಟಿಗೆ, ಭಟ್ಟೋಜ ದೀಕ್ಷಿತನ ಸಿದ್ಧಾಂತಕೌಮುದಿಯೆಂಬ ವ್ಯಾಕರಣ ಗ್ರಂಥಕ್ಕೆ ಸ್ವಯಂ ಭಟ್ಟೋಜಿಯೇ ಸಮರ್ಥನ ರೂಪವಾಗಿ ಬರೆದ ಪ್ರೌಢಮನೋರಮಾ ಎಂಬ ಹೆಸರಿನ ವ್ಯಾಖ್ಯಾಗ್ರಂಥವನ್ನು ಉಲ್ಲೇಖಿಸಬಹುದು. ಹೀಗೆಯೇ ವೇದಾಂತದೇಶಿಕರು ರಚಿಸಿದ ತತ್ತ್ವಮುಕ್ತಕಲಾಪವೆಂಬ ವಿಶಿಷ್ಟಾದ್ವೈತ ಗ್ರಂಥಕ್ಕೆ ಸ್ವಯಂ ಅವರೇ ರಚಿಸಿದ ಸರ್ವಾರ್ಥ ಸಿದ್ಧಿ ಎಂಬ ವ್ಯಾಖ್ಯಾನವನ್ನು ಉದಾಹರಣೆಗಾಗಿ ನೀಡಬಹುದು. ಬೇರೆ ವಿದ್ವಾಂಸರು ಮೂಲಕ್ಕೆ ಸ್ವತಂತ್ರವಾಗಿ ವ್ಯಾಖ್ಯಾನ ರಚಿಸಿರುವುದುಂಟು ಅಲ್ಲದೇ ಒಬ್ಬರೆ ವಿದ್ವಾಂಸರು ಮೂಲಕ್ಕೂ ವ್ಯಾಖ್ಯಾನ ಹಾಗೂ ಗ್ರಂಥಕರ್ತೃ ಸ್ವಯಂ ರಚಿಸಿರುವ ವ್ಯಾಖ್ಯಾನಕ್ಕೂ ಉಪವ್ಯಾಖ್ಯಾನ ಹೀಗೂ ರಚಿಸಿರುವುದುಂಟು. ಉದಾ – ತರ್ಕಸಂಗ್ರಹಕ್ಕೆ ಸ್ವತಂತ್ರವಾಗಿ ವ್ಯಾಖ್ಯಾನ ರಚಿಸಿದ ಅನೇಕ ವಿದ್ವಾಂಸರು ಅದರ ದೀಪಿಕಾ ಎಂಬ ಹೆಸರಿನ ಗ್ರಂಥ ಕರ್ತೃರಚಿತ ವ್ಯಾಖ್ಯಾನಕ್ಕೂ ಪ್ರತ್ಯೇಕವಾಗಿ ವ್ಯಾಖ್ಯಾನ ರಚಿಸಿದ್ದಾರೆ. ಒಂದೇ ಗ್ರಂಥಕ್ಕೆ ಎರಡೆರಡು ವ್ಯಾಖ್ಯಾನಗಳನ್ನು ಒಬ್ಬರೇ ವಿದ್ವಾಂಸರು ರಚಿಸಿರುವ ಉದಾಹರಣೆಗಳೂ ಉಂಟು. ಉದಾಹರಣೆಗೆ ಹೇಳುವುದಾದರೆ – ಮಧುಸೂದನ ಸರಸ್ವತಿ ಎಂಬುವರು ರಚಿಸಿರುವ ಅದ್ವೈತಸಿದ್ಧಿ ಎಂಬ ಗ್ರಂಥಕ್ಕೆ ಲಘುಚಂದ್ರಿಕಾ ಹಾಗೂ ಗುರುಚಂದ್ರಿಕಾ ಎಂಬ ಎರಡು ವ್ಯಾಖ್ಯಾನಗಳನ್ನು ಗೌಡಬ್ರಹ್ಮಾನಂದ ಎಂಬ ಒಬ್ಬರೇ ವಿದ್ವಾಂಸರು ರಚಿಸಿದ್ದಾರೆ"[೨].

ಸಾಹಿತ್ಯ ಕೃತಿಗಳಿಗೆ ಬರೆದ ವ್ಯಾಖ್ಯಾನಗಳು ಸಾಮಾನ್ಯವಾಗಿ ಪ್ರತಿಪದದ ಅರ್ಥ, ವ್ಯಾಕರಣ, ಛಂದಸ್ಸು, ಅಲಂಕಾರ ಮುಂತಾದ ಲಕ್ಷಣಗಳನ್ನು ವಿವರಿಸುವ ಕ್ರಮದಲ್ಲಿ ರಚನೆಯಾಗಿರುತ್ತವೆ. ಇದರ ಜೊತೆಗೆ ಅಲ್ಲಿ ಕಥಾ ವಿಮರ್ಶೆಗೂ ಇಂಬುದೊರೆತಿರುತ್ತದೆ. ಈ ಹಿನ್ನೆಲೆಯಲ್ಲಿ ಸಂಸ್ಕೃತದ ಪಂಚಮಹಾಕಾವ್ಯಗಳಿಗೆ ಬರೆದಂಥ ಮಲ್ಲಿನಾಥನೆಂಬ ವ್ಯಾಖ್ಯಾನಕಾರ. ಅದೇ ರೀತಿ ವೇದಗಳಿಗೆ ವ್ಯಾಖ್ಯಾನ ಬರೆದ ಸಾಯಣಾಚಾರ್ಯ, ಅಮರಕೋಶಕ್ಕೆ ವ್ಯಾಖ್ಯಾನ ಬರೆದ ನಾಚಿರಾಜ ಮುಂತಾದವರು ಪ್ರಸಿದ್ಧ ವ್ಯಾಖ್ಯಾನಕಾರರಾಗಿ ಹೆಸರು ಮಾಡಿದ್ದಾರೆ. ವಿಶೇಷವಾಗಿ, ರಾಮಾಯಣ ಮಹಾಭಾರತಗಳಿಗೆ ವ್ಯಾಖ್ಯಾನ ಬರೆದಿರುವುದು ತಿಳಿದುಬರುವುದರಿಂದ ಸಂಸ್ಕೃತದ ವ್ಯಾಖ್ಯಾನ ಸಾಹಿತ್ಯಕ್ಕೆ ತುಂಬಾ ಪ್ರಾಚೀನವಾದ ಇತಿಹಾಸವಿದೆಯೆಂದು ಹೇಳಬಹುದು.

ಸಂಸ್ಕೃತ ಸಾಹಿತ್ಯದಂತೆ ಪ್ರಾಕೃತವು ಕೂಡಾ ವ್ಯಾಖ್ಯಾನ ಸಾಹಿತ್ಯಕ್ಕೆ ಹೆಸರು ಮಾಡಿದೆ. "ಪ್ರಾಕೃತ ಪಕ್ಷಪಾತಿಗಳಾಗಿದ್ದ ಶಾತವಾಹನರ ಕಾಲದಲ್ಲಿಯೇ ಕವಿ ಗುಣಾಢ್ಯನು 'ಬೃಹತ್ಕಥೆ' ಯನ್ನು ಪೈಶಾಚೀಪ್ರಾಕೃತದಲ್ಲಿಯೂ (ಕ್ರಿ.ಶ. ೧ನೇ ಶತಮಾನ) ಹಾಲನು 'ಗಾಥಾಸಪ್ತಶತಿ'ಯನ್ನು ಮಹಾರಾಷ್ಟ್ರೀಯ ಪ್ರಾಕೃತದಲ್ಲಿಯೂ ರಚಿಸಿದರೆಂದು ತಿಳಿದಿದೆ. ಪ್ರಾಭೃತತ್ರಯಾದಿ ಗ್ರಂಥಗಳನ್ನು ರಚಿಸಿದ ಕುಂದಕುಂದಾಚಾರ್ಯರು, 'ಭಗವತೀ ಆರಾಧನಾ' ದ ಶಿವಕೋಟ್ಯಾಚಾರ್ಯರು, ಮೂಲಾಚಾರವೆಂಬ ಶೌರಸೇನಿ, ಪ್ರಾಕೃತ ಗ್ರಂಥದ ಕರ್ತೃ ವಟ್ಟಕೇರರು, 'ಕರಕುಂಡಚರಿಉ' ಎಂಬ ಅಪಭ್ರಂಶ ಗ್ರಂಥದ ಕರ್ತೃ ಕನಾಕಾಮರ ಮುನಿಗಳು ಈ ಮೊದಲಾದವರು ಪ್ರಾಚೀನ ಕರ್ನಾಟಕದಲ್ಲಿದ್ದು ಕೃತಿರಚನೆ ಮಾಡಿದ ಪ್ರಾಕೃತ ಕವಿಗಳೆಂಬುದಾಗಿ ಆರ್.ಎಸ್. ಪಂಚಮುಖಿ ಎಂಬ ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ"[೩].

ಪ್ರಾಯಶಃ ಪಂಚಮುಖಿಯವರ ಈ ಮಾತುಗಳ ಹಿಂದೆ ಪ್ರಾಕೃತ ಸಾಹಿತ್ಯದ ಪ್ರಾಚೀನತೆ ಮನವರಿಕೆಯಾಗುತ್ತದೆ. ಆ ಕಾಲಕ್ಕಾಗಲೇ ಪ್ರಾಕೃತ ಸಾಹಿತ್ಯದ ತಿಳುವಳಿಕೆಯ ವಿಸ್ತಾರಕ್ಕಾಗಿ ಟೀಕು ಉಗಮವಾಗಿರಬಹುದು. ಇದಕ್ಕೆ ಪೂರಕವೆಂಬಂತೆ ಡಾ.ಜಿ.ಎಸ್. ಸಣ್ಣಯ್ಯ ಅವರು – "ಪ್ರಾಕೃತ ಭಾಷೆಯಲ್ಲಿರುವ ಅನೇಕ ಜೈನಾಗಮ ಗ್ರಂಥಗಳ ಮೇಲೆ ವ್ಯಾಖ್ಯಾನಗಳನ್ನು ರಚಿಸಲಾಗಿದೆ. ಈ ವ್ಯಾಖ್ಯಾನಗಳು ನಿರ್ಯುಕ್ತಿ, ಭಾಷ್ಯ, ಚೂರ್ಣಿ ಮತ್ತು ಟೀಕಾ ಎಂಬ ಸ್ವರೂಪದಲ್ಲಿ ಉಪಲಬ್ಧವಿವೆ. ನಿರ್ಯುಕ್ತಿ ಸಾಹಿತ್ಯವು ಜೈನರ ಒಂದು ವಿಶಿಷ್ಟ ರೀತಿಯ ಬರವಣಿಗೆಯಾಗಿದೆ. ಈ ರೀತಿಯ ವ್ಯಾಖ್ಯಾನವು ಪ್ರಾಕೃತವನ್ನು ಬಿಟ್ಟರೆ ಮತ್ತಾವ ಭಾಷೆಯಲ್ಲಿಯೂ ದೊರೆಯುವುದಿಲ್ಲವೆಂದು ತಿಳಿದುಬರುತ್ತದೆ. ಇವುಗಳ ಉದ್ದೇಶವೆಂದರೆ ಮೂಲ ಗ್ರಂಥಗಳಲ್ಲಿ ಕಠಿಣಪದಗಳ ಅರ್ಥವಿವರಣೆಯನ್ನು ನೀಡುವುದಲ್ಲದೆ, ಅನ್ಯಮತಗಳ ಉಲ್ಲೇಖ, ನೀತಿ, ತರ್ಕ, ಕಲೆ, ವಿಜ್ಞಾನ, ಶೃಂಗಾರ ಮೊದಲಾದವುಗಳ ವಿವರಣೆಯನ್ನು ಕೊಡುತ್ತದೆ. ತತ್ವವಿವರಣೆಗೆ ಸಂಬಂಧಪಟ್ಟಂತೆ ಇರುವ ಕಥೆಗಳನ್ನು ಇವು ಒಳಗೊಂಡಿರುತ್ತವೆ. ಜಾನಪದ ಕಥೆಗಳ ಮೂಲವನ್ನಿಲ್ಲಿ ಕಾಣಬಹುದಾಗಿದೆ. ನಿರ್ಯುಕ್ತಿಯಲ್ಲಿ ಬರುವ ಪದಗಳ, ಉಲ್ಲೇಖಿಸಿದ ಪ್ರಸಂಗಗಳ ಸವಿಸ್ತರ ವಿವರಣೆಗಾಗಿ ಭಾಷ್ಯಗಳು ಹುಟ್ಟಿದವು. ನಿರ್ಯುಕ್ತಿ ಮತ್ತು ಭಾಷ್ಯಗಳಲ್ಲಿ ವ್ಯತ್ಯಾಸವನ್ನು ಕಂಡುಹಿಡಿಯುವುದು ಕಠಿಣ. ಏಕೆಂದರೆ ಎರಡೂ ಪ್ರಾಕೃತ ಭಾಷೆಯಲ್ಲಿದ್ದು 'ಗಾಹಾ' ಛಂದಸ್ಸಿನಲ್ಲಿ ಬರೆಯಲಾಗಿದೆ. ನಿರ್ಯುಕ್ತಿಕಾರನು ಕಥೆಯ ಉಲ್ಲೇಖವನ್ನು ಮಾತ್ರ ಮಾಡಿದರೆ, ಭಾಷ್ಯಕಾರನು ಆ ಕಥೆಯನ್ನೇ ನಿರೂಪಿಸುತ್ತಾನೆ. ನಿರ್ಯುಕ್ತಿಗಿಂತ ಭಾಷ್ಯಗಳು ಸುಲಭವಾಗಿವೆ. ಹಾಗೆಯೇ ಇವೆರಡರಿಂದಲೂ ಸುಲಭವಾದುದು ಚೂರ್ಣಿಯಾಗಿದೆ. ಈ ಚೂರ್ಣಿಗಳು ಪ್ರಾಕೃತ ಹಾಗೂ ಸಂಸ್ಕೃತ ಮಿಶ್ರಭಾಷೆಯಲ್ಲಿದ್ದು ನಿರ್ಯುಕ್ತ ಮತ್ತು ಭಾಷ್ಯಗಳಲ್ಲಿರುವ ಪ್ರತಿಯೊಂದು ಪದವನ್ನು ಶಾಸ್ತ್ರೀಯವಾಗಿ ವಿಮರ್ಶಿಸುತ್ತದೆ. ಟೀಕೆಗಳು ಸಂಸ್ಕೃತದಲ್ಲಿ ರಚಿತವಾಗಿವೆ. ಇವುಗಳನ್ನೇ ಅನುಸರಿಸಿ ಕನ್ನಡದಲ್ಲಿಯೂ ಟೀಕೆಗಳು ರಚಿತವಾಗಿವೆ"[೪].

ಈ ಮೊದಲು ಹೇಳಿದಂತೆ ಕನ್ನಡದಲ್ಲಿ ಟೀಕಾಸಾಹಿತ್ಯದ ಉಗಮ ಕ್ರಿ.ಶ. ೭ನೇ ಶತಮಾನ. "ಯಾವುದೇ ಭಾಷೆಯ ಸಾಹಿತ್ಯ ಮೊದಲು ಅನುವಾದ, ಟೀಕೆಗಳ ಮೂಲಕ ಇನ್ನೊಂದು ಭಾಷೆಯಲ್ಲಿ

ಪ್ರವೇಶ ಪಡೆದು, ಆ ಮೇಲೆ ಆ ಭಾಷೆಯಲ್ಲಿ ಸ್ವತಂತ್ರ ಸಾಹಿತ್ಯ ಸೃಷ್ಟಿಗೆ ನೆಲೆಯನ್ನು ಮಾಡಿಕೊಳ್ಳುತ್ತದೆ. ಈ ಮೇರೆಗೆ ಕನ್ನಡದಲ್ಲಿ ಸ್ವತಂತ್ರ ಸಾಹಿತ್ಯ ನಿರ್ಮಾಣವಾಗುವುದಕ್ಕೆ ಮೊದಲು ಪ್ರಾಕೃತ-ಸಂಸ್ಕೃತ ಭಾಷೆಗಳಲ್ಲಿರುವ ಜೈನ ಸಾಹಿತ್ಯಕ್ಕೆ ಕನ್ನಡ ಟೀಕೆ ಬರೆಯುವ ಕಾರ್ಯವೇ ನಡೆದಿರಬೇಕು"[೫] ಎಂಬ ಡಾ. ಕಲಬುರ್ಗಿಯವರ ಮಾತನ್ನು ಗಮನಿಸಿದರೆ ಕನ್ನಡದಲ್ಲಿ ಸಾಹಿತ್ಯ ಸೃಷ್ಟಿಯ ಬೆನ್ನಹಿಂದೆಯೇ ಟೀಕೆ, ವ್ಯಾಖ್ಯಾನಗಳಿಗೆ ಸಂಬಂಧಪಟ್ಟಂಥ ಕೃತಿಗಳು ರಚನೆಯಾಗಿವೆ. ಹೀಗಾಗಿ ಕನ್ನಡ ಸಾಹಿತ್ಯದಲ್ಲಿ ಕೃಷಿ ಮಾಡಿದ ಜೈನರಿಂದ ಟೀಕಾ ಸಾಹಿತ್ಯದ ಉಗಮವನ್ನು ಗುರುತಿಸಬಹುದಾಗಿದೆ. ಈ ಮಾತಿಗೆ ಕನ್ನಡದಲ್ಲಿ ರಚನೆಯಾದಂಥ ಅನೇಕ ವ್ಯಾಖ್ಯಾನ ಕೃತಿಗಳನ್ನು ನೋಡಬಹುದಾಗಿದೆ.

ಇದಕ್ಕೆ ಪೂರಕವೆಂಬಂತೆ ಪ್ರಾಚೀನ ಪತ್ರಕ್ರಮದ ವಿಷಯವಾಗಿ ಟೀಕುಗಳನ್ನು ಬರೆಯುವ ಉಪಕ್ರಮ ಕನ್ನಡ ಪ್ರದೇಶದಲ್ಲಿ ನಡೆದಿರಬೇಕು ಎಂಬುದಕ್ಕೆ ೧೦ನೇ ಶತಮಾನದ ಕಾಡಿಯೂರಿನ ಅಗ್ರಹಾರದಲ್ಲಿ ನಡೆಯುತ್ತಿದ್ದ ಶಿಕ್ಷಣ ಪದ್ಧತಿಯನ್ನು ಶಾಸನವೊಂದು ಹೀಗೆ ಉಲ್ಲೇಖಿಸುತ್ತದೆ.

"ವ್ಯಾಕರಣಮರ್ಥಶಾಸ್ತ್ರ
ನೀಕಂ ಸಾಹಿತ್ಯವಿದ್ಯೆಯಿತಿಹಾಸಂ ಮೀ
ಕ್ಷೇ ಕಾಕ್ಷರಮಿನಿತರ್ಕ
ಟೀಕಂ ಬರೆಯಲ್ ಸಮಗ್ರರಭ್ಯಾಸಿಸುವರ್"[೬]।

ಅದೇ ರೀತಿ ಪ್ರಾಚೀನ ಕರ್ನಾಟಕದ ಶಿಕ್ಷಣ "ಪದ್ಧತಿಯನ್ನು ತಿಳಿಸುವ ಬಳ್ಳಿಗಾವಿಯ ಕೋಡಿಮಠದ ಮಹತ್ವವನ್ನು ವಿವರಿಸುವ ಶಿಖಾರಿಪುರದ ಶಾಸನದಲ್ಲಿ ವಿವಿಧ ವಿಷಯಗಳಿಗೆ ವ್ಯಾಖ್ಯಾನ ಮಾಡುತ್ತಿದ್ದುದನ್ನು ಹೀಗೆ ಉಲ್ಲೇಖಿಸುತ್ತದೆ.." ಕೌಮಾರ, ಪಾಣಿನಿಯ, ಶಕಟಾಯನ, ಶಬ್ದಾನುಶಾಸನಾದಿ, ವ್ಯಾಕರಣ ವ್ಯಾಖ್ಯಾನ ಸ್ಥಾನಮು ನ್ಯಾಯವೈಶೇಷಿಕ ಮೀಮಾಂಸಾ, ಸಾಂಖ್ಯ, ಬೌದ್ಧಾದಿ ಷಡುದರ್ಶನ ವ್ಯಾಖ್ಯಾನಸ್ಥಾನಮುಂ"[೭]

ಒಟ್ಟಿನಲ್ಲಿ ಸಂಸ್ಕೃತವಿರಲಿ, ಪ್ರಾಕೃತವಿರಲಿ ಮತ್ತು ಕನ್ನಡವಿರಲಿ ಆಯಾ ಸಾಹಿತ್ಯ ರಚನೆಯ ಕಾಲದಲ್ಲಿಯೇ ಟೀಕೆಯನ್ನು ಬರೆಯುವುದರ ಮೂಲಕ ಟೀಕಾ ಸಾಹಿತ್ಯದ ಉಗಮಕ್ಕೆ ನಾಂದಿ ಹಾಡಿದರೆಂದು ಮೇಲಿನ ಕಾವ್ಯ ಮತ್ತು ಶಾಸನೋಕ್ತ ಉಲ್ಲೇಖಗಳಿಂದ ಹೇಳಬಹುದಾಗಿದೆ.

### ೩. ಟೀಕಾ ಸಾಹಿತ್ಯದ ಲಕ್ಷಣ

ಸಾಹಿತ್ಯ-ಶಾಸ್ತ್ರಸಾಹಿತ್ಯಕ್ಕೆ ಇರುವ ಲಕ್ಷಣಗಳಂತೆ ಟೀಕಾ ಸಾಹಿತ್ಯಕ್ಕೆ ಕೆಲವು ಲಕ್ಷಣಗಳು ಇರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಈ ಹೊತ್ತು ವಚನಗಳಿಗೆ, ಕೀರ್ತನೆಗಳಿಗೆ ಅಥವಾ ಪುರಾಣಗಳಿಗೆ ಪ್ರವಚನ ಹೇಳುವಂತೆ ಒಂದು ಸಾಹಿತ್ಯ ಕೃತಿಗೆ ಪ್ರಾಚೀನ ಕಾಲದಲ್ಲಿ ಅದನ್ನು ನಿರ್ವಚಿಸುವ ಉದ್ದೇಶದಿಂದ ವ್ಯಾಖ್ಯಾನವನ್ನು ಬರೆಯುವ ಪರಿಪಾಠ ಅಸ್ತಿತ್ವಕ್ಕೆ ಬಂದಿತು. ಹಾಗೆ ನೋಡಿದರೆ ಒಂದು

ಇಡೀ ಕಾವ್ಯದ ಭಾವವನ್ನು ಪ್ರತಿಪಾದಿಸುವ ಭಾವಾರ್ಥ ನೆಲೆಯಲ್ಲಿ ಟೀಕುಗಳು ಉಗಮವಾಗಿರಬಹುದು. ಸಾಮಾನ್ಯವಾಗಿ ಪದ್ಯರೂಪದ ಕಾವ್ಯಗಳ ಭಾವಾನುವಾದ ಗದ್ಯಪ್ರಧಾನವಾಗಿ ರಚನೆಯಾಗಿರಬಹುದು. ಹಾಗೆಯೇ ಸ್ತುತಿ, ಸ್ತೋತ್ರಗಳಂತಹ ಶ್ಲೋಕ ರೂಪದ ಕೃತಿಗಳಿಗೆ ಪದಾರ್ಥ ರೂಪದ ವ್ಯಾಖ್ಯಾನಗಳು ಹುಟ್ಟಿರಬಹುದು. ಅದೇನೇ ಇದ್ದರೂ ಈ ಕೃತಿಯನ್ನು ಕುರಿತು ನಡೆದ ಅಧ್ಯಯನ ಎಂಬ ಅರ್ಥದಲ್ಲಿ ಡಾ.ಕೆ. ರವೀಂದ್ರನಾಥರವರು ಹೀಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. "ಇಂದು ಪಂಪ ಭಾರತ ಒಂದು ಅಧ್ಯಯನ, ವಚನ ಸಾಹಿತ್ಯ ಸಾಂಸ್ಕೃತಿಕ ಅಧ್ಯಯನ ಎಂಬಂತೆ ಟೀಕಾಕಾರರು ಮಾಡಿದ ಸಾಹಿತ್ಯ ಕೃತಿಗಳ ಅಧ್ಯಯನವಾಗಿದೆ ಟೀಕಾಸಾಹಿತ್ಯ"[೮]

ಟೀಕು ಬರೆಯುವುದು ಒಂದು ಶಾಸ್ತ್ರಸಮ್ಮತವಾದ ಕ್ರಿಯೆ. ಹೀಗಾಗಿ ಟೀಕಾ ಸಾಹಿತ್ಯಕ್ಕೆ ತನ್ನದೇ ಆದ ಇತರ ಶಾಸ್ತ್ರ ಕೃತಿಗಳಂತೆ ಲಕ್ಷಣಗಳನ್ನು ಹೊಂದಿದೆ. ಈ ಲಕ್ಷಣಗಳ ವೈವಿಧ್ಯತೆಗೆ ಟೀಕಾಚಾರ್ಯರ ಪಾಂಡಿತ್ಯ- ಪ್ರತಿಭೆಗಳು ಕಾರಣವೆಂಬುದನ್ನು ಮರೆಯುವಂತಿಲ್ಲ. ಏಕೆಂದರೆ, ಟೀಕಾಚಾರ್ಯರು ಬಹುಶಾಸ್ತ್ರ ಪಂಡಿತರಾಗಿದ್ದರು. "ತತ್ವಾರ್ಥಸೂತ್ರ ವೃತ್ತಿಕಾರ ದಿವಾಕರಣಂದಿಯನ್ನು (ಸು. ಕ್ರಿ.ಶ. ೧೦೬೭) ಶಾಸನದಲ್ಲಿ 'ಉಭಯ ಸಿದ್ಧಾಂತ ರತ್ನಾಕರ' ಎಂದು ಕರೆದಿದೆ. ಪ್ರತಿಷ್ಠಾ ಕಲ್ಪದ ಟಿಪ್ಪಣಿ ಕರ್ತೃವಾದ ಕುಮುದಚಂದ್ರನು (ಕ್ರಿ.ಶ. ಸು. ೧೧೦೦) ತನ್ನನ್ನು 'ಚತುರ್ವಿಧ ಪಾಂಡಿತ್ಯ ಚಕ್ರವರ್ತಿ' ಎಂದೂ ವಿಶ್ಲೇಷಿಸಿಕೊಂಡಿದ್ದಾನೆ. ಮಾಘನಂದಿ (ಕ್ರಿ.ಶ.ಸು. ೧೨೫೩) ತನ್ನನ್ನು 'ಚತುರನು ಯೋಗಕುಶಲ' ನೆಂದೂ, 'ಸಿದ್ಧಾಂತವರ್ಧನ ಸುಧಾಕರ' ನೆಂದೂ ಕರೆದುಕೊಂಡಿದ್ದಾನೆ. ಗುರುನಂಜನೆಂಬ ವೀರಶೈವ ಟೀಕಾಕಾರನು 'ಸ್ಮೃತಿ ಪುರಾಣಶಾಸ್ತ್ರ ದರ್ಶನ ನಿರಂಜನಸಿದ್ದ ಎಂದು ಕರೆದುಕೊಂಡಿದ್ದಾನೆ. ಬಸವಾರಾಧ್ಯನೆಂಬುವವನು ಕ್ರಿ.ಶ. ೧೭೦೦ ಶ್ರೀ ಮದ್ವೇದ ವೇದಾಂತಾಗಮ ಪುರಾಣಸ್ಮೃತೀತಿಹಾಸ ಪ್ರತಿಪಾದಿತ ಶ್ರೀ ವೀರಶೈವ ಮಾರ್ಗ ಸ್ಥಾಪನಾಚಾರ್ಯ ಎಂದು ಹೇಳಿಕೊಂಡಿದ್ದಾನೆ. ಬ್ರಾಹ್ಮಣ ವ್ಯಾಖ್ಯಾನಕಾರರಲ್ಲಿ ಅಮರಕೋಶದ ಟೀಕಾಕರ್ತೃ ಕವಿ ವಿಠ್ಠಲನನ್ನು ಕ್ರಿ.ಶ. ಸು. ೧೬೦೦ ಅಮರಸಿಂಹನ ಮತ್ತು ಸರಸ್ವತಿಯ ಅಪರಾವತಾರನೆಂದು ಸ್ತುತಿಸಿದೆ. ಚಿಕ್ಕದೇವರಾಜನು ಸಾಹಿತ್ಯ 'ವಿದ್ಯಾನಿಕಷ ಪ್ರಸ್ತರಂ' ಎಂಬುದಾಗಿಯೂ, ಆತನ ಆಶ್ರಯದ ಕವಿಶ್ರೇಷ್ಠ ಚಿಕುಪಾದ್ಯಾಯನು 'ಅಧೀಶ ಸಕಲ ವೇದಶಾಸ್ತ್ರ ಪುರಾಣ ಮುಖ್ಯ ನಾನಾವಿದ್ಯನು' ಎಂಬುದಾಗಿಯೂ ಕೀರ್ತಿಸಿದ್ದಾರೆ. ಮುಮ್ಮಡಿ ಕೃಷ್ಣರಾಜನು 'ಉಬಯಕವಿತಾ ಲಕ್ಷಣ ವಿಚಕ್ಷಣ' ಎಂದು ತನ್ನನ್ನು ವಿಶ್ಲೇಷಿಸಿಕೊಂಡಿದ್ದಾನೆ".[೯]

ಹೀಗೆ ಟೀಕಾಕಾರರ ವಿಶೇಷತೆಗಳು ಅವರ ಟೀಕಾ ಕೃತಿಗಳಲ್ಲಿ ಬೇರೆ ಬೇರೆ ಸ್ವರೂಪದಲ್ಲಿ ಅನಾವರಣಗೊಂಡಿರುವುದನ್ನು ಗುರುತಿಸಬಹುದಾಗಿದೆ.

೧. "ಲೌಕಿಕತೆಗಿಂಥ ಅಲೌಕಿಕತೆಗೆ ಇಲ್ಲವೇ ತಾತ್ವಿಕತೆ ಪ್ರಧಾನವಾಗಿರುವುದು ಟೀಕೆಗಳ ಲಕ್ಷಣಗಳಲ್ಲಿ ಒಂದು ಎಂಬುದು ಡಾ. ರವೀಂದ್ರನಾಥ ಅವರ ಅಭಿಪ್ರಾಯ".[೧೦]

ಈ ಮೇಲಿನ ಅಭಿಪ್ರಾಯ ಆಯಾ ಧರ್ಮದ ಆಗಮಿಕ ಕೃತಿಗಳಿಗೆ ಅಥವಾ ಸಾಹಿತ್ಯ ಕೃತಿಗಳಿಗೆ ಅನ್ವಯವಾಗಬಹುದೇ ಹೊರತು ಶಾಸ್ತ್ರಸಾಹಿತ್ಯ ಕೃತಿಗಳಿಗೆ ಅದರಲ್ಲೂ ಲೌಕಿಕ ಶಾಸ್ತ್ರ ಸಾಹಿತ್ಯ ಕೃತಿಗಳಿಗೆ

ಅನ್ವಯವಾಗುವುದಿಲ್ಲವೆಂದು ಅವರು ಅಭಿಪ್ರಾಯಪಡುತ್ತಾರೆ. ಈ ಮಾತಿಗೆ ಉದಾಹರಣೆಯಾಗಿ ಮಹಾಲಿಂಗದೇವನು ಬರೆದ ಅಲ್ಲಮ ಪ್ರಭುವಿನ ವಚನವೊಂದನ್ನು ಉದಾಹರಿಸುತ್ತಾರೆ.

"ಶಿಲೆಯೊಳಗಣ ಪಾವಕನಂತೆ ಉದಕದೊಳಗಣ ಪ್ರತಿಬಿಂಬದಂತೆ ಬೀಜದೊಳಗಣ ವೃಕ್ಷದಂತೆ ಶಬ್ದದೊಳಗಣ ನಿಶ್ಶಬ್ದದಂತೆ ಗುಹೇಶ್ವರಾ ನಿಮ್ಮ ಶರಣರ ಸಂಬಂಧ" ಈ ವಚನಕ್ಕೆ ಬರೆದ ಟೀಕುವಿನ ವಿಸ್ತಾರವಾಗುವ ರೀತಿ ಟೀಕಾಸಾಹಿತ್ಯದ ಪ್ರಮುಖ ಲಕ್ಷಣವೆನ್ನಬಹುದು.

**ಟೀಕು:**

ಶಿಲೆಯೊಳಗಿರ್ಪ ಅಗ್ನಿ ಮೈದೋರದ ಹಾಂಗೆ ಪರಬ್ರಹ್ಮವು ಪಿಂಡಸ್ಥವಾಗಿರ್ದು ಕಾಣಿಸದೆಂಬುದೀಗ ಶಿಲೆಯೊಳಗಣ ಪಾವಕನಂತೆ ಎಂಬ ಶಬ್ದಕ್ಕರ್ಥ.

ಆವುದಾನೊಂದು ಪ್ರತಿಬಿಂಬ ಉದಕದೊಳಗಿರ್ದು ಆ ಉದಕದ ಗುಣಧರ್ಮ ಕರ್ಮದ ಹೊದ್ದದ ಹಾಂಗೆ ಆ ಪರಬ್ರಹ್ಮವು ಪಿಂಡಸ್ಥವಾಗಿರ್ದು, ಆ ಪಿಂಡದ ಗುಣಧರ್ಮ ಕರ್ಮವ ಹೊಂದುದಿರ್ಪುದೀಗ ಉದಕದೊಳಗಣ ಪ್ರತಿಬಿಂಬದಂತೆ ಎಂಬ ಶಬ್ದಕ್ಕರ್ಥ.

ಶಬ್ದದೊಳಗೆ ನಿಶ್ಶಬ್ದವಾಗಿರ್ದುದನು ಭೇದಿಸಬಾರದ ಹಾಂಗೆ ಆ ಪರಬ್ರಹ್ಮವು ಪಿಂಡಸ್ಥವಾಗಿರ್ದು ಅಭೇದ್ಯವಾಗಿರ್ಪುದೆಂಬುದೀಗ ಶಬ್ದದೊಳಗಣ ನಿಶ್ಶಬ್ದದಂತೆ ಎಂಬ ಶಬ್ದಕ್ಕರ್ಥ. ಇದು ಪಿಂಡಸಂಭವ ನಿರ್ವಚನ".

೨. ಟೀಕಾಸಾಹಿತ್ಯಕ್ಕೆ ಎರಡು ಮಗ್ಗಲುಗಳಿವೆ. ೧. ಶಬ್ದಾರ್ಥ ಟೀಕು. ೨. ಭಾವಾರ್ಥ ಟೀಕು. ಹೀಗಾಗಿ ಇದು ಕೂಡಾ ಟೀಕಾ ಸಾಹಿತ್ಯದ ಲಕ್ಷಣವಾಗಿ ಕಂಡುಬರುತ್ತದೆ. ಸಾಮಾನ್ಯವಾಗಿ ಸಂಸ್ಕೃತ–ಪ್ರಾಕೃತ ಮತ್ತು ಕನ್ನಡದಲ್ಲಿ ಈ ರೀತಿಯ ಎರಡು ರೂಪದ ಟೀಕಾ ಲಕ್ಷಣಗಳು ಗೋಚರಿಸುತ್ತವೆ.

ಜೈನಾಗಮ ಗ್ರಂಥಗಳಿಗೆ ನಿರ್ಯುಕ್ತಿ, ಬಾಷ್ಯ, ಚೂರ್ಣಿ ಮತ್ತು ಟೀಕು ಎಂಬ ಸ್ವರೂಪದಲ್ಲಿ ಬರೆದ ಟೀಕಾಕೃತಿಗಳು ರಚನೆಯಾಗಿವೆ. ಈ ನಾಲ್ಕು ಪ್ರಕಾರಗಳಿಗೆ ಅದರದೇ ಆದ ಲಕ್ಷಣಗಳಿರುವುದನ್ನು ಡಾ.ಬಿ.ಎಸ್. ಸಣ್ಣಯ್ಯ ಗುರುತಿಸುತ್ತಾರೆ. ".....ನಿರ್ಯುಕ್ತಿ ಸಾಹಿತ್ಯವು ಜೈನರ ಒಂದು ವಿಶಿಷ್ಟ ರೀತಿಯ ಬರವಣಿಗೆಯಾಗಿದೆ. ಈ ರೀತಿಯ ವ್ಯಾಖ್ಯಾನವು ಪ್ರಾಕೃತವನ್ನು ಬಿಟ್ಟರೆ ಮತ್ತಾವ ಭಾಷೆಯಲ್ಲಿಯೂ ದೊರೆಯುವುದಿಲ್ಲವೆಂದು ತಿಳಿದುಬರುತ್ತದೆ. ಇವುಗಳ ಉದ್ದೇಶವೆಂದರೆ ಮೂಲಗ್ರಂಥಗಳಲ್ಲಿನ ಕಠಿಣ ಪದಗಳ ಅರ್ಥವಿವರಣೆಯನ್ನು ನೀಡುವುದಲ್ಲದೆ ಅನ್ಯಮತಗಳ ಉಲ್ಲೇಖ, ನೀತಿ, ತರ್ಕ, ಕಲೆ, ವಿಜ್ಞಾನ, ಶೃಂಗಾರ ಮೊದಲಾದವುಗಳ ವಿವರಣೆಯನ್ನು ಕೊಡುತ್ತವೆ. ತತ್ವವಿವರಣೆಗೆ ಸಂಬಂಧಪಟ್ಟಂತೆ ಇರುವ ಕಥೆಗಳನ್ನು ಇವು ಒಳಗೊಂಡಿರುತ್ತವೆ. ಜಾನಪದ ಕಥೆಗಳ ಮೂಲವನ್ನಿಲ್ಲಿ ಕಾಣಬಹುದಾಗಿದೆ. ನಿರ್ಯುಕ್ತಿಯಲ್ಲಿ ಬರುವ ಪದಗಳ, ಉಲ್ಲೇಖಿಸಿದ ಪ್ರಸಂಗಗಳ ಸವಿಸ್ತಾರ ವಿವರಣೆಗಾಗಿ ಭಾಷ್ಯಗಳು ಹುಟ್ಟಿದವು. ನಿರ್ಯುಕ್ತಿ ಮತ್ತು ಭಾಷ್ಯಗಳಲ್ಲಿನ ವ್ಯತ್ಯಾಸಗಳನ್ನು ಕಂಡುಹಿಡಿಯುವುದು ಕಠಿಣ. ಏಕೆಂದರೆ ಎರಡೂ ಪ್ರಾಕೃತ ಭಾಷೆಯಲ್ಲಿದ್ದು, 'ಗಾಹಾ' ಛಂದಸ್ಸಿನಲ್ಲಿ ಬರೆಯಲಾಗಿದೆ. ನಿರ್ಯುಕ್ತಿಕಾರನು ಕಥೆಯ

ನಾನು ಮುಳುಗಿ ಶಿವಶಿವ ಎನುತ ನಿನ್ನಲ್ಲಿ ಬೆರೆದೆನು. ಸಮುದ್ರದ ಎಂದರೆ ನೀರಿನಿಂದಾದ ಆಲಿಕಲ್ಲು ಕೊನೆಗೆ ಸಮುದ್ರದಲ್ಲಿಯೇ ಬೆರೆತು ಹೋಗುವಂತೆ ಲಿಂಗಮೂರ್ತಿಯಿಂದ ಬಂದ ಅಂಗವೆಂಬ ಜೀವನು ಕೊನೆಗೆ ಲಿಂಗದೊಳಗೆ ಬಯಲಾದನು"[೯] ಎಂದು ವ್ಯಾಖ್ಯಾನಿಸಿದ್ದಾರೆ. ಇವರ ವ್ಯಾಖ್ಯಾನದ ಮಾದರಿಗಳನ್ನು ನೋಡಿದಾಗ ಶರಣರ ವಚನಗಳ ತಾತ್ವಿಕ ಸಿದ್ಧಾಂತವನ್ನು ತುಂಬಾ ಸರಳೀಕರಿಸಿ ವಿವರಿಸಿರುವುದು. ಜೊತೆಗೆ, ಶರಣರ ಸಿದ್ದಾಂತ ವೇದೋಪನಿಷತ್ತುಗಳಿಗೇನು ಕಡಿಮೆಯಲ್ಲದ, ವೈಚಾರಿಕ ಅನುಭಾವವಿರುವ ಮೌಲಿಕ ಸಿದ್ಧಾಂತವೆಂಬುದನ್ನು ದೃಢಪಡಿಸಲು ಪ್ರಾಚೀನ ಸಂಸ್ಕೃತ ಶ್ಲೋಕಗಳನ್ನು ಉಲ್ಲೇಖಿಸಿ ಓದುಗರಲ್ಲಿ ಅಪಾರ ಆತ್ಮವಿಶ್ವಾಸವನ್ನು ತುಂಬಲು ಪ್ರಯತ್ನಿಸಿದಂತೆ ಕಾಣುತ್ತದೆ. ಇದೆ ಕಾರಣವೋ ಏನೋ ಈ ಕೃತಿಯು ಟೀಕಾಕಾರ ಹರ್ಡೇಕರ ಮಂಜಪ್ಪನವರಿಂದಲೇ ೧೯೨೩ರಲ್ಲಿ ಮೊದಲ ಆವೃತ್ತಿ ಪ್ರಕಟವಾಯಿತು. "೧೯೫೧ರಲ್ಲಿ ಮರು ಮುದ್ರಣಗೊಂಡಿತು. ನಂತರ ಬೆಂಗಳೂರಿನ ಬಸವ ಸಮಿತಿ, ಅನಂತರ ಗದಗಿನ ತೋಂಟದಾರ್ಯ ಮಠದಿಂದ ೧೯೮೬ರಲ್ಲಿ ಪ್ರಕಟವಾಯಿತು. ಪುನಃ ಪ್ರತಿಗಳು ಖಾಲಿಯಾದಾಗ ಈ ಸತ್ವಶಾಲಿ ಕೃತಿ ಎಲ್ಲರ ಕೈಗೆ ತಲುಪುವುದು ಅವಶ್ಯವಿದೆ"[೧೦] ಎಂದರಿತ ಜಗದ್ಗುರು ಮಾತೆಮಹಾದೇವಿಯವರು ತಮ್ಮ ವಿಶ್ವಕಲ್ಯಾಣ ಮಿಷನ್ ಸಂಸ್ಥೆಯಿಂದ ೨೦೦೪ರಲ್ಲಿ ಪ್ರಕಟಿಸಿ ನಾಡಿನ ಬಸವಾಭಿಮಾನಿಗಳ ಕೈಗೆ ನೀಡಿದ್ದಾರೆ.

ಈ ಹಿನ್ನೆಲೆಯಲ್ಲಿ ಶಿವಶರಣರ ವಚನಗಳಿಗೆ 'ಭಾವಾರ್ಥ' (ಟೀಕು) ಬರೆದವರು ಡಾ.ಫ.ಗು.ಹಳಕಟ್ಟಿ ಮತ್ತು ಹರ್ಡೇಕರ ಮಂಜಪ್ಪನವರು. ಇಬ್ಬರೂ ಸಮಕಾಲೀನರಾಗಿರುವುದರಿಂದ ವಚನಗಳ ಆಧುನಿಕ ಟೀಕಾಕರರಾಗಿ ಗುರುತಿಸಿಕೊಂಡ ಮೊದಲಿಗರೆನ್ನಬಹುದು. ಈ ಹಿನ್ನಲೆಯಲ್ಲಿ ಈ ಕಾಲಘಟ್ಟದ ವೈಶಿಷ್ಟ್ಯ ಕುರಿತು ಪ್ರಸ್ತಾಪಿಸುವ ಡಾ.ಬಿ.ಎಸ್.ಬಿರಾದಾರರು "ವಚನಗಳ ಪ್ರಕಟನೆಯೊಂದಿಗೆ ಅವುಗಳಿಗೆ ಪ್ರಾಚೀನ ಟೀಕೆ ಇದ್ದರೆ ಅದನ್ನು ಕೊಟ್ಟಿರುವುದು, ಇಲ್ಲದಿದ್ದಲ್ಲಿ ಹೊಸದಾಗಿ ಅವುಗಳಿಗೆ ಟೀಕೆ ಬರೆದು ಪ್ರಕಟಿಸಿರುವುದನ್ನು ಈ ಅವಧಿಯಲ್ಲಿ ಪ್ರಕಟವಾದ ಕೃತಿಗಳಲ್ಲಿ ಕಾಣುತ್ತೇವೆ. ಉದಾ: ಫ.ಗು ಹಳಕಟ್ಟಿಯವರು ವಚನಶಾಸ್ತ್ರಸಾರ ಮುಂತಾದ ಕೃತಿಗಳಲ್ಲಿ ವಚನಗಳಿಗಿರುವ ಪ್ರಾಚೀನ ಟೀಕೆಯನ್ನು ಸಂಗ್ರಹಿಸಿರುವರಲ್ಲದೇ, ದೇವರ ದಾಸಿಮಯ್ಯ ಇತ್ಯಾದಿ ಕೃತಿಗಳಿಗೆ ಹೊಸಗನ್ನಡ ಭಾವಾರ್ಥ ಬರೆದಿದ್ದಾರೆ. ಹೀಗೆ ವಚನಗಳಿಗೆ 'ಭಾವಾರ್ಥ'ವನ್ನು ಮೊದಲು ಬರೆದವರು ಹರ್ಡೇಕರ ಮಂಜಪ್ಪನವರು (ಬಸವಬೋಧಾಮೃತ ೧೯೨೬)[೧೧] ಎಂದು ಹೇಳಿರುವುದರಿಂದ ಇವರ ನಿಲುವನ್ನು ಪರಾಮರ್ಶಿಸಬೇಕಾಗಿದೆ.

**ಎಂ.ಆರ್. ಶ್ರೀನಿವಾಸಮೂರ್ತಿಯವರು** 'ವಚನಧರ್ಮಸಾರ' (೧೯೪೪) ವಚನ ಸಂಕಲನ ಕೃತಿ ರಚಿಸಿದರು. ಇದರಲ್ಲಿ ವಚನಗಳನ್ನು ವಿಮರ್ಶಾತ್ಮಕ ಚಿಂತನೆಗೆ ಒಳಪಡಿಸಿ ವಿವರಿಸಿರುವುದನ್ನು ಕಾಣಬಹುದು. ಅಲ್ಲದೇ ಹಲವಾರು ಆವೃತ್ತಿಗಳಲ್ಲಿ ಪ್ರಕಟಗೊಂಡಿರುವ **ಆರ್.ಆರ್.** ದಿವಾಕರ ರವರ 'ವಚನಶಾಸ್ತ್ರ ರಹಸ್ಯ' (೧೯೨೬) ಕೃತಿ ಎರಡು ಭಾಗ ಹೊಂದಿದೆ. ಮೊದಲಭಾಗದಲ್ಲಿ ವಚನಗಳ ಸಂಗ್ರಹವಾದರೆ, ಎರಡನೇ ಭಾಗವು ವಚನ ವಿಶ್ಲೇಷಣೆ – ವಿಮರ್ಶೆಯನ್ನು ಒಳಗೊಂಡಿದೆ. ಹೀಗಾಗಿ ವಚನಗಳಿಗೆ ಭಾವಾರ್ಥ, ವಿಮರ್ಶೆಯನ್ನು ಬರೆದವುಗಳ ಸಾಲಿನಲ್ಲಿ ಈ ಕೃತಿಗಳನ್ನು ಪರಿಗಣಿಸಬಹುದಾಗಿದೆ.

**ಉದಾ:** ದೇವಲೋಕ-ಕೈಲಾಸ ಲೋಕವು, ಕೇವಲ ಜ್ಞಾನ - ಮೋಕ್ಷ ಹೊಂದುವುದು, ವೃಂದಾವನ - ವೈದಿಕಯತಿಗಳ ಸಮಾಧಿ ಸ್ಥಳ.

**೨. ವಾಚ್ಯಾರ್ಥದಲ್ಲಿರುವ ವಿವರಣರೂಪದ ಪ್ರತಿಪದಾರ್ಥ**

ಈ ವ್ಯಾಖ್ಯಾನ ನಿಘಂಟು ಸ್ವರೂಪದಲ್ಲಿದ್ದರೂ ವಿವರಣೆ ನೀಡಿ ಅರ್ಥ ಸ್ಪಷ್ಟಪಡಿಸುವುದಾಗಿದೆ.

**ಉದಾ:** ಷಡ್ಗುಣ=ರಾಜನೀತಿಯ ಆರು ಗುಣಗಳು. ಅವುಗಳಲ್ಲಿ ಸಂಧಿ=ವಸ್ತುವಾಹನಗಳನ್ನು ಕೊಟ್ಟು ಶತ್ರುಗಳನ್ನು ಸಂಧಾನಗೊಳಿಸುವುದು. ಅದೇ ರೀತಿ ವಿಗ್ರಹ, ಯಾನ, ಆಸನ, ದ್ವೈವೀಭಾವ, ಎಂಬುವುಗಳಿಗೆ ವಿವರಣಾತ್ಮಕ ಅರ್ಥ ಕೊಡುವುದು.

**೩. ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ತಾತ್ವಿಕಾರ್ಥ**

ಇಲ್ಲಿ ತಾತ್ವಿಕಾರ್ಥ ಪ್ರಧಾನ, ಶಬ್ದಾರ್ಥ ಅಪ್ರಧಾನ. ನುಡಿಗಟ್ಟುಗಳಂತೆ ಇಲ್ಲಿಯ ಭಾವ,

**ಉದಾ:** ಮುಖ ಕಪ್ಪಾಗು = ಅಪಮಾನದಿಂದ ಕಳೆಗುಂದು, ಕೈ ಬಿಸಿಮಾಡು=ಲಂಚಕೊಡು, ಮೂಗಿಗೆ ತುಪ್ಪಹಚ್ಚು = ಆಸೆ ತೋರಿಸು.

**೪. ಸಾರವತ್ತಾದ ಹಾಗೂ ಸಂಗ್ರಹ ರೂಪದ ತಾತ್ಪರ್ಯಾರ್ಥ**

ಇದು ವ್ಯಾಖ್ಯಾನ ಲಘುವೃತ್ತಿ, ಲಘುಭಾಷ್ಯ ಹಾಗೂ ಟುಪ್ ಟೀಕೆಯ ರೂಪದ್ದು. ಹತ್ತು ಕಟ್ಟುವ ಕಡೆಗೆ ಮುತ್ತುಕಟ್ಟುವ ಪ್ರಯತ್ನ ಇಲ್ಲಿದೆ. ತಾತ್ವಿಕಾರ್ಥವನ್ನು ಹೇಳುವ ಬದಲು ಸಂಕ್ಷಿಪ್ತವಾಗಿ ಅದರ ಸಾರಾಂಶವನ್ನು ಸಂಗ್ರಹಿಸಿಕೊಡುವ ಶಬ್ದಾರ್ಥ ತಾತ್ಪರ್ಯ ಇದಾಗಿದೆ.

**ಉದಾ:** ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ

ಮನೆಯೊಳಗೆ ಮನೆಯೊಡೆಯನಿಲ್ಲಾ! ಎಂಬುದಕ್ಕೆ ಮನುಷ್ಯ ಸಹಜವಾದ ದೌರ್ಬಲ್ಯಗಳನ್ನು ಬಿಡಲಾಗದ ದೇಹಿ ಜೀವಾತ್ಮನ ಕುರುಹುಗಳನ್ನರಿಯಲಾಗದು. ಕಾರಣ ತನುವೆಂಬ ಮನೆಯಲ್ಲಿ ಆತ್ಮನೆಂಬ ಯಜಮಾನ ಇದ್ದಂತಿಲ್ಲವೆಂಬುದು ಇಲ್ಲಿಯ ಅರ್ಥ.

**೫. ಪ್ರತಿಪದಾರ್ಥ ಹಾಗೂ ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ತಾತ್ವಿಕಾರ್ಥ**

ಇಲ್ಲಿ ವ್ಯಾಖ್ಯಾನಕಾರ ಶಬ್ದಾರ್ಥ ಇಲ್ಲವೇ ವಾಕ್ಯದ ತಾತ್ಪರ್ಯಾರ್ಥಕ್ಕೆ ಕಟ್ಟುಬೀಳದೇ ಒಟ್ಟು ವಿಷಯದ ತಾತ್ವಿಕತೆಯನ್ನು ಚರ್ಚಿಸುತ್ತಾನೆ. **ಉದಾ:** "ಕುಂಬಳದ ಕಾಯಿಗೆ ಕಬ್ಬುನದ ಕಟ್ಟುಕೊಟ್ಟಡೆ ಕೊಳೆವುದಲ್ಲದೇ ಬಲುಹಾಗಬಲ್ಲುದೆ? ಎಂಬುದಕ್ಕೆ ವ್ಯಾಖ್ಯಾನಕಾರ ಬರೆಯುವ ಟೀಕು–ಪ್ರಪಂಚಿನಿಂದ ಅದೃಢವಾದಾತ್ಮನಿಗೆ ಗುರುಪದೇಶದಿಂದಂಗದ ಮೇಲೆ ಲಿಂಗಸಂಬಂಧವ ಮಾಡಲು ವೇಷಾಡಂಬರ–ವಳವಡುವುದಲ್ಲದೇ ಲಿಂಗಭಕ್ತಿಯಲ್ಲಿ ದೃಢವಂಕುರಿಗೊಳ್ಳಲರಿಯದು". ಇಲ್ಲಿ ಲೌಕಿಕ ವಸ್ತುವಿನ ಮೂಲಕ ತಾತ್ವಿಕಾರ್ಥದ ಅಲೌಕಿಕವಾದ ಗೂಡಾರ್ಥವು ಬಿಚ್ಚಿಕೊಳ್ಳುತ್ತದೆ.

೬. ಕೆಲವೊಂದು ಪದಗಳಿಗೆ ಮಾತ್ರ ಬರೆದ ಅರ್ಥ

ಒಂದು ವಾಕ್ಯದ ಕೆಲವು ಪದ್ಯಗಳಿಗೆ ಅವುಗಳಲ್ಲಿಯ ಕೆಲವು ಪದಗಳಿಗೆ ಅರ್ಥ ಬರೆದಿರುವುದು ಕಂಡುಬರುತ್ತದೆ.

**ಉದಾ:** ರಾಜಶೇಖರ ವಿಳಾಸದ ಗಟ್ಟಿ ಗಟ್ಟಿ ನುಡಿಗಳ ಅರ್ಥ, ಭಾವಚಿಂತಾರತ್ನದ ಗಟ್ಟಿ ನುಡಿಗಳು ಇತ್ಯಾದಿಯಾಗಿ ಇಡಿಯಾದ ಕಾವ್ಯಕ್ಕೆ ಶಬ್ದಾರ್ಥ ಬರೆಯದೇ ಕಠಿಣ ಪದಗಳಿಗೆ ಅರ್ಥ ನೀಡುವದು.

ಅಡ್ಡವಿಭೂತಿಯಿಲ್ಲದವರ ಮುಖಹೊಲ್ಲ, ನೋಡಲಾಗದು – ವೇದತ್ರಯ ಅಧಿದೈವತ್ರಯ ಅಕ್ಷರತ್ರಯವೆಂಬ ತಿರ್ಯಕ್ಕಾಗಿ ಧರಿಸುವಂಥ ಮೂರು ರೇಖೆಯಲ್ಲಿ ವಿಭೂತಿಯಿಲ್ಲದವರ ವಕ್ತ್ರವು ಕೆಟ್ಟಂಥಾದು, ನಿರೀಕ್ಷಿಸಲಾಗದು. ಮುಂದಕ್ಕೆ ಕಾಣಬಂದರ್ಥ.

ಇವಲ್ಲದೆ ಕೆಲವೊಂದು ವಚನಗಳಿಗೆ "ಈ ವಚನ ಕಾಣಬಂದರ್ಥ" ಎಂದು ಹೇಳಿ ಮುಂದುವರಿಯಲಾಗಿದೆ. ಕೆಲವು ವಚನಗಳಿಗೆ ಇಡಿಯಾಗಿ ವ್ಯಾಖ್ಯಾನ ಬರೆಯದೇ, ಭಾಗಶಃ ಬರೆಯಲಾಗಿದೆ. ಆಗ ಆರಂಭದಲ್ಲಿ –"ಹಿಂದಕ್ಕೆ ಕಾಣಬಂದರ್ಥ" ಎಂದು, ಅಂತ್ಯದಲ್ಲಿ "ಮುಂದಕ್ಕೆ ಕಾಣಬಂದರ್ಥ" ಎಂದೂ ಸೂಚಿಸಲಾಗಿದೆ. ಇಂಥ ಸಂದರ್ಭದಲ್ಲಿ ವಚನಗಳನ್ನು ಅಪೂರ್ಣ ಬರೆಯಲಾಗಿರುತ್ತದೆ. ಉದಾ: ಷಟ್‌ಸ್ಥಲ ಜ್ಞಾನಸಾರಾಮೃತ ಟೀಕೆ(ವ.ಸಂ.೮ ಹಾಗೂ ೧೦).

೭. ಕೆಲವು ವಿಶಿಷ್ಟ ಪದಗಳಿಗೆ ಮಾತ್ರ ಬರೆದ ಅರ್ಥ

ಕಾವ್ಯಗಳಲ್ಲಿ ಆಚರಣೆ, ಧರ್ಮ, ಸಂಪ್ರದಾಯ ಮುಂತಾದವುಗಳಿಗೆ ಸಂಬಂಧಿಸಿದಂತೆ ಕೆಲವು ಗಮನಾರ್ಹ ಪರಿಭಾಷೆಗಳಿರುತ್ತವೆ. ಅವುಗಳಿಗೆ ಮಾತ್ರ ಅರ್ಥ ಬರೆಯುವ ಪರಿಪಾಠವಿದೆ.

**ಉದಾ:** ಚಿಂತಾತ್ಮ=ಶಿವ ಸ್ಮರಣೆಯುಳ್ಳಾತ್ಮ, ಗಗನಮಂಟಪ=ಆತ್ಮಾನುಭವ, ಮಹಾಮನೆ=ಅನುಭವ ಮಂಟಪ ಇತ್ಯಾದಿ.

೨. ಉಭಯಾರ್ಥ ಟೀಕುವಿನ ವಿವಿಧ ರೀತಿಗಳು

೧. ಪ್ರತಿಪದಾರ್ಥ ರೂಪದ ವಾಚ್ಯಾರ್ಥ ಹಾಗೂ ತಾತ್ವಿಕಾರ್ಥ.

೨. ಪ್ರತಿಪದಾರ್ಥ ಹಾಗೂ ಸಾರರೂಪದ ತಾತ್ವಿಕಾರ್ಥ.

**ಉದಾ:** ಪ್ರಣವನುಚ್ಚರಿಸುವ ಅಪ್ರಮಾಣಿಕರೆಲ್ಲರೂ ಪ್ರಣವ ಮಂತ್ರವನೋದಿ ಮಂತ್ರಾರ್ಥವನರಿಯರು ಎಂಬುದಕ್ಕೆ ಪ್ರತಿಪದಾರ್ಥದ ವಾಚ್ಯಾರ್ಥ ಹಾಗೂ ಸಾರರೂಪದ ವ್ಯಾಖ್ಯಾನವನ್ನು ಹೀಗೆ ಮಾಡಲಾಗಿದೆ. **ಟೀಕು: ಪ್ರಣವನುಚ್ಚರಿಸುವ:** ಪ್ರಣವ=ಗಾಯತ್ರಿ ಪ್ರಣವವನ್ನು, ಉಚ್ಚರಿಸುವ=ಜಪಿಸುವ, ಅಪ್ರಮಾಣಿಕರೆಲ್ಲರೂ=ಪ್ರಮಾಣಹೀನರಾದ ವಿಪ್ರರೆಲ್ಲರೂ, ಪ್ರಣವ=ಗಾಯತ್ರಿ ಪ್ರಣವದ ಮಂತ್ರವ ಓದಿ=ಜಪಿಸಿ, ಮಂತ್ರಾರ್ಥವನರಿಯರು=ಗಾಯತ್ರಿ ಮಂತ್ರದ ಅನ್ವಯಂಗಳನು ತಿಳಿಯರು. ಇದು ಪ್ರತಿಪದಾರ್ಥ ರೂಪದ ವಾಚ್ಯಾರ್ಥ.

ದೇವನೊಚಿಸುವ ಪ್ರಮಾಣ ಹೀನರೆಲ್ಲರೂ ತಾರಕ ಮಂತ್ರವನು ಪಠಿಸಿ ಪ್ರಣವ ಸಂಚಿತಕ್ರೀಯನು ತಿಳಿಯರು ಎಂಬುದು ಪ್ರತಿಪದಾರ್ಥದ ಸಾರರೂಪ. ಹೀಗೆ ಟೀಕಾಕಾರರು ಒಂದೇ ಕೃತಿಯಲ್ಲಿ ಎಕಾರ್ಥ ರೂಪ ಮತ್ತು ಉಭಯಾರ್ಥ ರೂಪದ ಟೀಕುಗಳನ್ನು ಬರೆದಿರುವುದು ಟೀಕಾಸಾಹಿತ್ಯದ ಸ್ವರೂಪದಿಂದ ಗಮನಾರ್ಹವೆನಿಸುತ್ತದೆ.

**೩. ವಚನಗಳಿಗೆ ಕ್ವಚಿತ್ತಾಗಿ ಬರೆದ ಒಂದು ವಾಚ್ಯಾರ್ಥ ಹಾಗೂ ಎರಡು ತಾತ್ವಿಕಾರ್ಥ**

ತಂದೆ ನೀನು ತಾಯಿ ನೀನು : ತಂದೆ–ಎನ್ನ ಜನಕನು, ನೀನು–ಪರಶಿವಲಿಂಗವು, ತಾಯಿ–ಎನ್ನಜನನಿಯು, ನೀನು–ಪರಶಿವಲಿಂಗವು.

ತಂದೆ ನೀನು: ತಂದೆ–ತನುವಿನಲ್ಲಿ ಗುರುವಾಗಿ ನೆಲೆಗೊಂಡಿರುವಾತನು, ನೀನು–ನಿ:ಕಲಬ್ರಹ್ಮವು. ತಾಯಿ ನೀನು: ತಾಯಿ–ಮನದಲ್ಲಿ ಲಿಂಗವಾಗಿ ನೆಲೆಗೊಂಡಿರುವಾತನು, ನೀನು–ನಿ:ಕಲಬ್ರಹ್ಮವು.

ತಾಯಿನೀನು: ತಾಯಿ–ಬಹಿರಂಗದಲ್ಲಿ ಕ್ರಿಯಾ ಮಾತೃಸ್ವರೂಪವಾದ ಇಷ್ಟಲಿಂಗವಾಗಿ ನೆಲೆಗೊಂಡಿರಲ್ಪಟ್ಟಾತನು, ನೀನು ಮಹಾಲಿಂಗಮೂರ್ತಿಯು. ತಂದೆನೀನು: ತಂದೆ–ಅಂತರಂಗದಲ್ಲಿ ಜನಕಸ್ವರೂಪವಾಗಿ ನೆಲೆಗೊಂಡಿರಲ್ಪಟ್ಟಾತನು, ನೀನು–ಮಹಾಲಿಂಗಮೂರ್ತಿಯು.

**೪. ಕೆಲವು ವ್ಯಾಖ್ಯಾನಗಳ ರಚನೆಯಲ್ಲಿ ವಿಶಿಷ್ಟವಾದ ಶಿಲ್ಪ (ಆಕಾರ) ಕಂಡುಬರುತ್ತದೆ.**

ಆರಂಭದಲ್ಲಿ ಮುಂದಿನ ವಿಷಯ ಪ್ರಸ್ತಾವನೆಯ ಕನ್ನಡ ಅವತರಣಿಕೆ ಕೊಟ್ಟು, ಆ ಮೇಲೆ ಸಂಸ್ಕೃತ ಶ್ಲೋಕಗಳನ್ನು ಉದಾಹರಿಸಿ ಆ ಶ್ಲೋಕಗಳಿಗೆ ಟೀಕು ಬರೆದು, ಇಂತಿ ಪುರಾಣ, ವಾಕ್ಯಂಗಳನು ಶ್ರೀಗುರು ಪುರಾತನರಿಗೆ ಉಪದೇಶವಿತ್ತ ಠಾವು ಎಂದು ಮುಗಿಸಿ ಇನ್ನು ಈ ಪುರಾತನರು ಗುರುವಾಕ್ಯ ತಪ್ಪದೇ ನಡೆದು ನುಡಿದ ವಚನಂಗಳಿಂದು ಕನ್ನಡ ವಚನಗಳನ್ನು ಉದಾಹರಿಸಿ ಟೀಕು ಮುಗಿಸುತ್ತಾರೆ. ಉದಾ: ಕ್ರಿಶ. ೧೪೭೦ರಲ್ಲಿದ್ದ ಗುಬ್ಬಿಯ ಮಲ್ಲಣಾರ್ಯನು ಗಣಭಾಷ್ಯರತ್ನಮಾಲೆಯಲ್ಲಿ ಬರೆದ ಕಳವು ನಿರಸನ ಸ್ಥಲವನ್ನು ನೋಡಬಹುದು.

"ಇಂತೀ ಪ್ರಕಾರದಿಂ ಶಿವಭಕ್ತರು ತಮ್ಮ ಸ್ವಸ್ತ್ರೀಯರ ಸಂಗವಲ್ಲದೆ ಅನ್ಯ ಸ್ತ್ರೀಯರ ಸಂಗವ ಮಾಡಲಾಗದೆಂದು ಪ್ರತಿಷ್ಠೆಯಂ ಮಾಡಿ ನುಡಿದರ್ ಮಹಾಪುರಾತನರ್, ಇಂಥ ಪರದಾಮಂ ಬಿಟ್ಟು ಲಿಂಗಸಾಹಿತ್ಯವಾದೇನೆಂಬಾತಂಗೆ ಕಳವು ಶೌಚ್ಯಮಂ ಕೆಡಿಸುವುದೆಂಬುದನರಿದು ಇನ್ನು ಕಳವ ಶಿವಭಕ್ತರು ಬಿಡಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದ ವಚನಂಗಳಿಂ ಮುಂದೆ ಕಳವು ನಿರಸನ ಸ್ಥಲವಾದುದು.

**ಶಿವಧರ್ಮೇ:** "ತೃಣಂ ವಾಯದಿವಾಕಾಶಂ ಮೃದಂ ವಾಜಲಮೇವಚ
ಪರಸ್ಯಾ ಪಹರೇಜ್ಜಂ ತುರ್ನರಕಂ ಚ ಪ್ರಪದ್ಯತೇ"

**ಟೀಕೆ:** ಹುಲ್ಲುಕಡ್ಡಿಯಷ್ಟಾದೊಡಂ, ಆಕಾಶದಷ್ಟಾದೊಡಂ ಒಂಪಿಡಿ ಮಣ್ಣಾದೊಡಂ ಒಕ್ಕುಡಿತೆ ಉದಕವಾದೊಡಂ ಲೋಗರ ಸೊಮ್ಮುಕಾಣಲೀಯದೆ ಬಲುಹಿಂದೆ ಕೊಂಡವಂಗೆ ಎಂದೂ ಕೇಡಿಲ್ಲದ

ನರಕವಹುದು. ಇಂತೀ ಪುರಾಣ ವಾಕ್ಯಂಗಳನು ಶ್ರೀಗುರು ಪುರಾತನರಿಗೆ ಉಪದೇಶವಿತ್ತ ಠಾವು. ಇನ್ನು ಈ ಪುರಾತನರು ಗುರುವಾಕ್ಯ ತಪ್ಪದೆ ನಡೆದ ನುಡಿದ ವಚನಂಗಳು.

ಕುಳಿತು ಲಿಂಗವ ಪೂಜಿಸಿ ಅಲ್ಲದಾಟವನಾಡುವರಯ್ಯಾ
ಬೆಳ್ಳೆತ್ತಿನ ಮರೆಯಲ್ಲಿ ಹುಲ್ಲೆಗಂಬ ತೊಡಚುವಂತೆ ಲೋಗರರ್ಥವ
ಕಳುವ ಕಳ್ಳರ ಕೈಯ್ಯ ಪೂಜೆಯನೊಲ್ಲ ನೋಡಾ ನಮ್ಮ ಕೂಡಲಸಂಗಮದೇವಾ

೪. ಟೀಕಾ ಸಾಹಿತ್ಯದ ಕೆಲವು ಲಕ್ಷಣಗಳನ್ನು ಟೀಕಾಕೃತಿಗಳ ಅಧ್ಯಯನದ ಹಿನ್ನಲೆಯಲ್ಲಿ ಡಾ.ಕೆ.ರವೀಂದ್ರನಾಥ ಅವರು ಹೀಗೆ ಗುರುತಿಸುತ್ತಾರೆ."[೨]

೧. ಟೀಕಾ ಸಾಹಿತ್ಯ ಗದ್ಯದಲ್ಲಿರುವುದರಿಂದ 'ವ್ಯಾಖ್ಯಾನ ಗದ್ಯ'ವೆಂಬ ವಿಶಿಷ್ಟ ಪ್ರಕಾರವೇ ಸೃಷ್ಠಿಯಾಯಿತು. ಇದರಿಂದ ಬೇರೆ ಬೇರೆ ಕಾಲದಲ್ಲಿ ಬರೆದ ಟೀಕಾಕೃತಿಗಳಿಂದ ಆಯಾಕಾಲದ ಕನ್ನಡ ಗದ್ಯದ ಸ್ವರೂಪವನ್ನರಿಯಲು ಸಹಾಯವಾಗಿದೆ.

೨. ಟೀಕೆಯ ಲಕ್ಷಣಗಳಲ್ಲಿ ಒಂದೇ ಬಗೆಯ ವಾಕ್ಯ ಪುನರಾವರ್ತನೆಯನ್ನು ಡಾ.ಎಂ.ಎಂ. ಕಲಬುರ್ಗಿಯವರು ಗುರುತಿಸುತ್ತಾರೆ. (ಬಸವಣ್ಣನವರ ಟೀಕಿನ ವಚನಗಳು, ಪ್ರಸ್ತಾವನೆ xv). ಉದಾಹರಣೆಗೆ –"ಗಜದ ಹಿಂಡಿನೊಳಗೆ ಕಂಠೀರವ ಹೊಕ್ಕಹಾಂಗೆ, ಹುಲ್ಲೆ ಹಿಂಡಿನೊಳಗೆ ಹುಲಿ ಹೊಕ್ಕಹಾಂಗೆ, ಕುರಿ ಹಿಂಡಿನೊಳಗೆ ತೋಳ ಹೊಕ್ಕಹಾಂಗೆ....." ಎಂಬಂತಹ ವಾಕ್ಯ ರಚನೆಗಳನ್ನು ನೋಡಬಹುದು.

೩. ಶುದ್ಧ ದೇಶಿಯ ವಚನಗಳಿಗೆ ಬರೆದ ಟೀಕಾಕೃತಿಕಾರರಲ್ಲಿ ಏಕತಾನತೆಯ ವ್ಯಾಖ್ಯಾನ ರೀತಿ ಬೆಳೆದು ಬಂದಿದೆ. ಉದಾ: ಸ್ಥಲ ನಿರ್ದೇಶನ, ಆ ಸ್ಥಲಕ್ಕೆ ಸಂಬಂಧಿಸಿದ ವಚನಗಳು, ಆ ವಚನಗಳಿಗೆ ಪ್ರತಿಪದದ ಟೀಕು ರಚನೆಯಾಗಿರುವುದನ್ನು ಬಂಕನಾಥನ ಪ್ರಭುದೇವರ ವಚನ ವ್ಯಾಖ್ಯಾನಗಳಲ್ಲಿ ಕಾಣಬಹುದು. ಅಂದರೆ, ಒಂದು ಸ್ಥಲ ಕುರಿತು ಪ್ರಶ್ನಾರ್ಥಕವಾಗಿ ಕೇಳುವ ವಚನಗಳು, ಅಂಥ ವಚನಗಳಿಗೆ ಸ್ಥಲ ನಿರ್ದೇಶನ ಮಾಡುವ ವಚನಗಳು, ಅದಕ್ಕೆ ಶಬ್ದಾರ್ಥ – ಭಾವಾರ್ಥಗಳು ಹೀಗೆ ಸ್ಥಲಕಟ್ಟಿಗನುಗುಣವಾಗಿ ವಿಂಗಡಣೆ, ಅವುಗಳ ಭಾವ ನಿರೂಪಣೆ ಇಲ್ಲಿಯ ವಿಶೇಷ ಲಕ್ಷಣವಾಗಿದೆ.

೪. ಟೀಕಾ ಸಾಹಿತ್ಯ ಹಾಡು, ಪದಗಳಿಗೆ ಅಂದರೆ ಮಂತ್ರಗೋಪ್ಯ ಸಾಹಿತ್ಯಕ್ಕೆ, ಬೆಡಗು–ಬಿನ್ನಾಣಗಳಿಂದ ಕೂಡಿದ ವಚನಗಳಿಗೆ, ಸಿದ್ಧಾಂತ ವೇದಾಂತಗಳಾದ ಆಗಮ ಪುರಾಣಗಳು, ಶ್ಲೋಕ–ಸ್ತೋತ್ರ–ಶಾಸ್ತ್ರ ಸಾಹಿತ್ಯ ಪ್ರಕಾರಗಳಿಗೆ ಬರೆದ ಕಾರಣವಾಗಿ ಅವುಗಳ ಅಂತರಂಗದ ಹೊಳಹುಗಳನ್ನು ಪ್ರಕಟಿಸುವುದರ ಮೂಲಕ ಇದು ಸೃಜನ ಸಾಹಿತ್ಯ ಪ್ರಕಾರವಾಗಿರುವುದು ಅಷ್ಟೇ ನಿಜ.

೫. ಅಮರಕೋಶದಂತಹ ನಿಘಂಟುವಿಗೆ ವ್ಯಾಖ್ಯಾನ ರಚನೆಯಾಗುವುದೆಂದರೆ – ಈ ಸಾಹಿತ್ಯ ಅರ್ಥಕೋಶದ ಅರ್ಥಕೋಶ. ಹಾಗೆಯೇ ಸಾಹಿತ್ಯೇತರ ಕೃತಿಗಳಾದ ವ್ಯವಹಾರ ಗಣಿತ,

ಬೇಹಾರಗಣಿತಗಳಿಗೆ ಟೀಕುಗಳು ರಚನೆಯಾಗಿರುವುದನ್ನು ಗಮನಿಸಿದರೆ ಈ ವ್ಯಾಖ್ಯಾನಗಳು ಲೋಕೋಪಯೋಗಿಯಾದ ಹೊರಗಿನ ಜ್ಞಾನವನ್ನು ಕನ್ನಡದಲ್ಲಿ ಪೃಥಕ್ಕರಣಗೊಳಿಸಿವೆ.

೬. ಒಂದು ಸಾಹಿತ್ಯ ಕೃತಿಗೆ ಹಲವು ಟೀಕಾ ಗ್ರಂಥಗಳೂ ರಚನೆಗೊಂಡಿವೆ. ಉದಾಹರಣೆಗೆ ಬಸವಣ್ಣನವರ ವಚನಗಳಿಗೆ ೫ ಟೀಕುಗಳು, ತೋಂಟದ ಸಿದ್ಧಲಿಂಗಯತಿಗಳ ಷಟ್‌ಸ್ಥಲಜ್ಞಾನ ಸಾರಾಮೃತಕ್ಕೆ ೫ ಟೀಕುಗಳು ರಚನೆಯಾಗಿವೆ. ಕರ್ನಾಟಕದಲ್ಲಿ ಸಂಗ್ರಹವಾಗಿರುವ ಹಸ್ತಪ್ರತಿಗಳಲ್ಲಿ ಒಂದೇ ಕೃತಿಯ ಹಲವು ಟೀಕಾಗ್ರಂಥಗಳನ್ನು ಒಬ್ಬನೇ ವ್ಯಾಖ್ಯಾನಕಾರ ಬರೆದಿರುವುದಿಲ್ಲವೆಂಬುದು ಇಲ್ಲಿಯ ಸಂಗತಿ.

ಒಟ್ಟಾರೆ ಪ್ರಾಕೃತ ಸಾಹಿತ್ಯದಲ್ಲಿ ಚೂರ್ಣಿ, ನಿರ್ಯುಕ್ತಿ, ಭಾಷ್ಯ, ಪದ್ಧತಿ, ಹೆಸರಿನಲ್ಲಿ; ಸಂಸ್ಕೃತ ಸಾಹಿತ್ಯದಲ್ಲಿ ವ್ಯಾಖ್ಯಾನ, ತಾರ್ಕಿಕ, ಕೃತಕ, ತಾತ್ಪರ್ಯ, ನಿರ್ಣಯ, ವೃತ್ತಿ, ನ್ಯಾಸ ಇತ್ಯಾದಿ ಹೆಸರುಗಳಲ್ಲಿ ಮತ್ತು ಕನ್ನಡದಲ್ಲಿ ಸಾರ, ಸಾರಾಮೃತ, ನುಡಿ, ನಿರ್ವಚನ, ಪ್ರವಚನ, ವಿವೇಚನ, ಅನ್ವಯ ಇತ್ಯಾದಿ ಹೆಸರುಗಳಲ್ಲಿ ಪ್ರಚಲಿತಕ್ಕೆ ಬಂದ ಟೀಕಾಸಾಹಿತ್ಯ ತನ್ನದೇ ಆದ ಸ್ವರೂಪದಲ್ಲಿ ಸ್ವತಂತ್ರ ಅಧ್ಯಯನದ ಶಿಸ್ತಾಗಿ ಬೆಳೆದುಬಂದಿರುವುದನ್ನು ನೋಡಬಹುದು. ಸಾಹಿತ್ಯ ರಚನೆಯ ಜೊತೆಜೊತೆಗೆ ಅದು ಒಂದು ಸೃಜನಶೀಲ ಪ್ರಕ್ರಿಯೆಯಾಗಿ ರೂಪುಗೊಂಡ ಟೀಕಾಸಾಹಿತ್ಯದ ಮೀಮಾಂಸಾ ಲಕ್ಷಣಗಳನ್ನು ಸ್ವತಂತ್ರ ಅಧ್ಯಯನವನ್ನಾಗಿ ಮಾಡುವ ಎಲ್ಲ ಅವಕಾಶಗಳು ಇವೆ ಎನ್ನುವುದರಲ್ಲಿ ಸಂದೇಹವಿಲ್ಲ.

**ಅಡಿ ಟಿಪ್ಪಣಿಗಳು**

೧. ಕನ್ನಡ ಟೀಕಾ ಸಾಹಿತ್ಯ, ಡಾ.ಕೆ. ರವೀಂದ್ರನಾಥ, ೨೦೦೬, ಪು.೫

೨. ಸಂಸ್ಕೃತ ಗ್ರಂಥಗಳ ವ್ಯಾಖ್ಯಾನಗಳು, ಒಂದು ಸಂಕ್ಷಿಪ್ತ ಟಿಪ್ಪಣಿ (ಅಪ್ರಕಟಿತ ಲೇಖನ) ಡಾ.ಎಸ್. ಜಗನ್ನಾಥ.

೩. ಕರ್ನಾಟಕದ ಇತಿಹಾಸ, ಆರ್.ಎಸ್. ಪಂಚಮುಖಿ ಪು.೧೪೩

೪. ಜೈನಿಜಂ ಎ ಸ್ಟಡಿ – (ಪ್ರಾಕೃತ ಗ್ರಂಥಗಳಿಗೆ ಕನ್ನಡ ಟೀಕುಗಳು ಲೇಖನ) ಡಾ.ಬಿ.ಎಸ್. ಸಣ್ಣಯ್ಯ ಪು.೧೦೦

೫. ಬಸವಣ್ಣನವರ ಟೀಕಿನ ವಚನಗಳು, ಸಂ. ಡಾ.ಎಂ.ಎಂ. ಕಲಬುರ್ಗಿ ಪ್ರಸ್ತಾವನೆ ಪುಟ.iiiiv

೬. ಕನ್ನಡ ಟೀಕಾ ಸಾಹಿತ್ಯ – ಡಾ.ಕೆ. ರವೀಂದ್ರನಾಥ, ಪು.೫

೭. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಾ.ಎಚ್. ತಿಪ್ಪೇರುದ್ರಸ್ವಾಮಿ, ಪು.೨೨೭.

೮. ಕನ್ನಡ ಟೀಕಾ ಸಾಹಿತ್ಯ, ಡಾ.ಕೆ. ರವೀಂದ್ರನಾಥ, ೨೦೦೬. ಪು.೫

೯. ಶಾಸ್ತ್ರೀಯ ಸಂಪುಟ-೩. ಟಿ.ವಿ. ವೆಂಕಟಾಚಲಶಾಸ್ತ್ರಿ, ಪು. ೬೭

೧೦. ಕನ್ನಡ ಟೀಕಾ ಸಾಹಿತ್ಯ ಡಾ.ಕೆ. ರವೀಂದ್ರನಾಥ, ೨೦೦೬, ಪು.೧೧

೧೧. ಜೈನಿಜಂ ಎ ಸ್ಟಡಿ (ಪ್ರಾಕೃತ ಗ್ರಂಥಗಳಿಗೆ ಕನ್ನಡ ಟೀಕುಗಳು ಲೇಖನ) ಡಾ.ಬಿ.ಎಸ್. ಸಣ್ಣಯ್ಯ ಪು.೧೦೦

೧೨. ಗೌರವ (ಸಂ.ಶಿ. ಭೂಸನೂರಮಠ ಅಭಿನಂದನಗ್ರಂಥ) ಸಂ. ಡಾ. ಬಿ.ವಿ. ಶಿರೂರ ಪು. ೫೬೪-೫೬೭

೧೩. ಕನ್ನಡ ಟೀಕಾ ಸಾಹಿತ್ಯ, ಡಾ.ಕೆ. ರವೀಂದ್ರನಾಥ, ೨೦೦೬ ಪು.೧೬

***

ಅಧ್ಯಾಯ ಮೂರು

# ಕನ್ನಡ ಟೀಕಾ ಸಾಹಿತ್ಯ ಪರಂಪರೆ

೧. ಜೈನ

೨. ಲಿಂಗಾಯತ

೩. ಬ್ರಾಹ್ಮಣ

೪. ಸಂಕೀರ್ಣ

೩

## ಕನ್ನಡ ಟೀಕಾ ಸಾಹಿತ್ಯ ಪರಂಪರೆ

ಭಾರತೀಯ ಸಾಹಿತ್ಯದಲ್ಲಿ ಸಂಸ್ಕೃತ ಭಾಷೆಗೆ ದೇವಭಾಷೆ ಎಂಬ ಮನ್ನಣೆ ಇದೆ. ಸಂಸ್ಕೃತ ಭಾಷೆಯಲ್ಲಿ ರಚಿತವಾದ ವೇದ ಉಪನಿಷತ್ತುಗಳು, ರಾಮಾಯಣ-ಮಹಾಭಾರತಗಳಂತಹ ಕೃತಿಗಳು ಜಗತ್ತಿನ ಬೇರೆ ಬೇರೆ ಭಾಷೆಗೆ ಅನುವಾದಗೊಂಡಿವೆ. ಆದರೆ ಸಂವಹನ ದೃಷ್ಟಿಯಿಂದ ಸಾಮಾನ್ಯರಿಗೆ ಹತ್ತಿರವಾಗದೇ ಉಳಿಯಿತು. ಈ ಸಂವಹನ ಕ್ರಿಯೆಯಿಂದಲೋ ಏನೋ ಆಯಾ ದೇಶಭಾಷೆಯಲ್ಲಿ ಸಾಹಿತ್ಯ ಕೃತಿಗಳು ರಚನೆಗೊಂಡವು. ಅದೇನೆ ಇದ್ದರೂ ಕನ್ನಡ ಸಾಹಿತ್ಯ ಚರಿತ್ರೆಯ ಅಧ್ಯಯನದ ದೃಷ್ಟಿಯಿಂದ ಸಂಸ್ಕೃತ ಮತ್ತು ಪ್ರಾಕೃತ ಸಾಹಿತ್ಯ ಪ್ರೇರಣೆಯಾಗಿರುವುದನ್ನು ಗಮನಿಸಬಹುದು. ಈ ಸಂಸ್ಕೃತ ಮತ್ತು ಪ್ರಾಕೃತ ಭಾಷಾ ಸಾಹಿತ್ಯ ಮೊದಮೊದಲು ಅನುವಾದ, ಟೀಕುಗಳ ಮೂಲಕ ಕನ್ನಡಕ್ಕೆ ಪ್ರವೇಶ ಪಡೆದವು. ಯಾಕೆಂದರೆ, ವಿದ್ವಾಂಸರಾದ ಡಾ.ಎಂ.ಎಂ. ಕಲಬುರ್ಗಿಯವರು ಅಭಿಪ್ರಾಯಪಡುವಂತೆ "ಕರ್ನಾಟಕದ ಬ್ರಾಹ್ಮಣರ ಮಾತೃಭಾಷೆ ಕನ್ನಡ, ಧರ್ಮಭಾಷೆ ಸಂಸ್ಕೃತ; ಜೈನರ ಮಾತೃಭಾಷೆ ಕನ್ನಡ, ಧರ್ಮಭಾಷೆ ಪ್ರಾಕೃತ; ಆದರೆ, ವೀರಶೈವರ ಧರ್ಮಭಾಷೆಯು ಕನ್ನಡ, ಮಾತೃಭಾಷೆಯು ಕನ್ನಡ"[೧] ಹೀಗಾಗಿ ಕನ್ನಡ ಜೈನ ಮತ್ತು ಬ್ರಾಹ್ಮಣ ಸಾಹಿತ್ಯ ಪ್ರಾಕೃತ ಮತ್ತು ಸಂಸ್ಕೃತದಿಂದ ಕನ್ನಡಕ್ಕೆ ರೂಪಾಂತರ ಇಲ್ಲವೇ ಭಾಷಾಂತರಗೊಂಡವು. ಇನ್ನೂ ಕೆಲವು ಸಲ ಕಾವ್ಯಗಳಿಗೆ ಟೀಕು-ವ್ಯಾಖ್ಯಾನ ಬರೆಯುವದರ ಮೂಲಕ ಕನ್ನಡದಲ್ಲಿ ಟೀಕಾ ಸಾಹಿತ್ಯದ ಆದ್ಯರೆನಿಸಿದರು. ಆ ಪರಂಪರೆಯ ವಾರಸುದಾರರಾಗಿ ಹೆಸರು ಮಾಡಿದರು. ಹೀಗಾಗಿ ಕನ್ನಡ ಟೀಕಾ ಸಾಹಿತ್ಯಕ್ಕೆ ಒಂದು ಪ್ರಾಚೀನವಾದ ಪರಂಪರೆ ಇದೆ ಎಂದು ಹೇಳಬಹುದು. ಕನ್ನಡ ಟೀಕಾ ಸಾಹಿತ್ಯ ಪರಂಪರೆಯನ್ನು ಸಾಹಿತ್ಯ ಚರಿತ್ರೆಯ ಬೆಳವಣಿಗೆಯ ದೃಷ್ಟಿಯಿಂದ ಅಧ್ಯಯನದ ಅನುಕೂಲಕ್ಕಾಗಿ ಜೈನ ಟೀಕಾ ಸಾಹಿತ್ಯ, ಲಿಂಗಾಯತ ಟೀಕಾ ಸಾಹಿತ್ಯ ಮತ್ತು ಬ್ರಾಹ್ಮಣ ಟೀಕಾ ಸಾಹಿತ್ಯ ಎಂದು ವರ್ಗೀಕರಿಸಬಹುದು. ಇದನ್ನೇ ಭಾಷಿಕವಾಗಿ ಪ್ರಾಕೃತ, ಸಂಸ್ಕೃತ ಮತ್ತು ಕನ್ನಡ ಟೀಕಾಸಾಹಿತ್ಯದ ಪರಂಪರೆ ಎಂದು ಗುರುತಿಸಬಹುದು.

೧. ಜೈನ ಟೀಕಾ ಸಾಹಿತ್ಯ

ಟೀಕಾ ಸಾಹಿತ್ಯ ಕ್ಷೇತ್ರದಲ್ಲಿ ಪ್ರಥಮ ವ್ಯವಸಾಯಗಾರರಾದ ಜೈನರು ಆಗಮ ಸಿದ್ಧಾಂತ, ತಾತ್ವಿಕ ಮತ್ತು ಶಾಸ್ತ್ರ ಗ್ರಂಥಗಳಿಗೆ ಟೀಕೆಯನ್ನು ಬರೆದಿದ್ದಾರೆ. ಅರ್ಧಮಾಗಧಿ ಆಗಮಗಳ ಮೇಲೆ ಪ್ರಾಚೀನ ಟೀಕಾ ಗ್ರಂಥಗಳು ಪ್ರಾಕೃತ ಭಾಷೆಯಲ್ಲಿ ರಚನೆಯಾಗಿದ್ದವು. ಕ್ರಿ.ಶ. ೬-೭ನೇ ಶತಮಾನದ ಸರಿ ಸುಮಾರಿನಲ್ಲಿ ಪ್ರಾಕೃತ ಟೀಕಾ ಸಾಹಿತ್ಯ ಸೃಷ್ಠಿಯಾಯಿತೆಂಬುದಕ್ಕೆ ಜೈನರ ಭಗವತಿ ಆರಾಧನಾ ಕೃತಿ ನಿದರ್ಶನವಾಗಿದೆ. ಅಲ್ಲಿಯ ೨೧೭೦ ಗಾಹೆಗಳಿಗೆ ಪ್ರಾಕೃತ ವ್ಯಾಖ್ಯಾನ ಹುಟ್ಟಿಕೊಂಡಿತು. ತದನಂತರದಲ್ಲಿ ೮ನೇ ಶತಮಾನದ ಸರಿಸುಮಾರಿನಲ್ಲಿ ಆಗಮಗಳಿಗೆ ಸಂಸ್ಕೃತ ಟೀಕಾಗ್ರಂಥಗಳು ಹುಟ್ಟಿಕೊಂಡವು. ಭೂತಬಲಿ ಆಚಾರ್ಯವಿರಚಿತ 'ಜೀವಟ್ಠಾಣ' ಕೃತಿಗೆ ಜೀವಸಿದ್ಧಿಯೆಂಬ ಸಂಸ್ಕೃತ ಟೀಕಾ ಕೃತಿ ೮ನೇ ಶತಮಾನದಲ್ಲಿ ರಚನೆಯಾಗಿದೆ. ಅದೇ ರೀತಿ ಸುಮಂತ ಭದ್ರರು ಬರೆದ 'ಗಂಧಹಸ್ತಿ-ಮಹಾಭಾಷ್ಯ' ಎಂಬುದು ಉಮಾಸ್ವಾಮಿಯ ತತ್ವಾರ್ಥಸೂತ್ರ ಎಂಬ ಸಂಸ್ಕೃತ ಕೃತಿಗೆ ಬರೆದ ಟೀಕಾಗ್ರಂಥವಾಗಿದೆ. ಅದೇ ರೀತಿ ಅಕಲಂಕನು ತತ್ವಾರ್ಥದ 'ರಾಜವಾರ್ತಿಕ'ಕ್ಕೆ ಟೀಕು ಬರೆದಿದ್ದಾನೆ. ಜೈನೇಂದ್ರ ವ್ಯಾಕರಣಕ್ಕೆ ನ್ಯಾಸ, ವೃತ್ತಿ, ಭಾಷ್ಯ ಹಾಗೂ ವ್ಯಾಖ್ಯಾನ ಬರೆದಿರುವ ಸಂಗತಿ 'ಪಂಚವಸ್ತು' ಕೃತಿಯಿಂದ ತಿಳಿದುಬರುತ್ತದೆ. "ಶಿವಮೊಗ್ಗ ಜಿಲ್ಲೆಯ ೪೬ನೇ ಶಾಸನದಿಂದ ಪೂಜ್ಯಪಾದನು ತನ್ನ ವ್ಯಾಕರಣ ಕೃತಿಯಾದ 'ಜೈನೇಂದ್ರ'ಕ್ಕೆ ಸಂಜ್ಞಕ ನ್ಯಾಸವನ್ನು, ಪಾಣಿನಿಯ ವ್ಯಾಕರಣಕ್ಕೆ ಶಬ್ದಾವತಾರ 'ನ್ಯಾಸ'ವನ್ನು ಬರೆದಿರುವುದು ತಿಳಿದುಬರುತ್ತದೆ.[೨] ಈತನು ಜೀವಿಸಿದ್ದ ಕಾಲ ಕ್ರಿಶ.೬೦೦ ಎಂದು ತಿಳಿದುಬಂದಿದೆ.

ಪೂಜ್ಯಪಾದರ 'ಜೈನೇಂದ್ರ' ವ್ಯಾಕರಣಕ್ಕೆ ಅಭಯನಂದಿಯ ಮಹಾವೃತ್ತಿ, ಪ್ರಭಾಚಂದ್ರರ ಶಬ್ದಾಂಬೋಜ ಭಾಸ್ಕರ ನ್ಯಾಸ, ಆರ್ಯ ಶ್ರುತಕೀರ್ತಿಯ ಪಂಚವಸ್ತು ಪ್ರಕ್ರಿಯಾ ಮತ್ತು ಮಹಾಚಂದ್ರನ ಲಘು ಜೈನೇಂದ್ರ ಹೆಸರಿನ ನಾಲ್ಕು ಟೀಕಾ ಗ್ರಂಥಗಳು ಉಪಲಬ್ಧವಿವೆ. ಸು.೧೧೬೦ರಲ್ಲಿದ್ದ ವೃತ್ತವಿಲಾಸನು ಪೂಜ್ಯಪಾದರನ್ನು "ಭರದಿಂ ಜೈನೇಂದ್ರಮಂ ಭಾಸುರಮೆನಲೊರೆದಂ ಪಾಣನೀಯಕ್ಕೆ ಟೀಕಂ ಬರೆದಂ ತತ್ತ್ವಾರ್ಥಮಂ ಟಿಪ್ಪಣದಿನರುಪಿದಂ" ಎಂದು ಬಣ್ಣಿಸಿದ ವಿವರವನ್ನು ಕವಿಚರಿತೆಯಲ್ಲಿ ಕಾಣುತ್ತೇವೆ.

ಜೈನ ಸಮಂತಭದ್ರನು(ಸು.೪೦೦) "ಕನ್ನಡದಲ್ಲಿ ಗ್ರಂಥಗಳನ್ನು ಬರೆದಿದ್ದಾನೋ ಇಲ್ಲವೋ ತಿಳಿಯದು. ಈತನ ಸಂಸ್ಕೃತ ಪ್ರಾಕೃತ ಗ್ರಂಥಗಳಿಗೆ ಹಳಗನ್ನಡದ ವ್ಯಾಖ್ಯಾನಗಳು ದೊರೆತಿವೆ" ಎಂದು ಡಾ. ಭಂಡಾರ್ಕರವರು 'ಸಂಸ್ಕೃತ ಕೋಶ ಸಂಗ್ರಹ'ದ ರೀಪೋರ್ಟ ೧೮೮೩-೧೮೮೪, ಅನುಬಂಧ-II, Iರಲ್ಲಿ ಉಲ್ಲೇಖಿಸಿದ್ದಾರೆ.[೩]

ದುರ್ವಿನೀತ(ಸು.೬೦೦)ನಿಗೆ ಸಂಬಂಧಿಸಿದ ಕೆಲವು ತಾಮ್ರಶಾಸನಗಳಲ್ಲಿ "ಕಿರಾತಾರ್ಜುನಿಯ ಪಂಚದಶಸರ್ಗ ಟೀಕಾಕಾರ" ಎಂಬ ವಿಶೇಷಣಗಳಿರುವುದರಿಂದ ಈತನು ಗುಣಾಢ್ಯನ ಬೃಹತ್ಕತೆಯನ್ನು ಸಂಸ್ಕೃತಕ್ಕೆ ಪರಿವರ್ತಿಸಿದಂತೆಯೂ, ಭಾರವಿಕೃತ ಕಿರಾತಾರ್ಜುನಿಯದ ೧೫ನೆಯ ಸರ್ಗಕ್ಕೆ ಟೀಕೆಯನ್ನು ಬರೆದಂತೆಯೂ ತಿಳಿದುಬರುತ್ತದೆ".[೪] ಜೈನಕವಿ ಶ್ರೀವರ್ಧದೇವನು(ಸು.೬೫೦) ದೇವಚಂದ್ರನ ರಾಜಾವಳೀ

ಕಥೆಯಲ್ಲಿ "ತುಂಬುಲೂರುನಾಮಾಚಾರ್ಯರ್ ಎಂಬತ್ತು ನಾಲ್ಕು ಸಾಸಿರ ಗ್ರಂಥ ಕರ್ತೃಗಳಾಗಿ ಕರ್ನಾಟಕ ಭಾಷೆಯಿಂ ಚೂಡಾಮಣಿ ವ್ಯಾಖ್ಯಾನಮಂ ಮಾಡಿದರ್"[೫] ಎಂದು ಉಲ್ಲೇಖಿಸಲಾಗಿದೆ. ಭಟ್ಟಾಕಳಂಕನು (ಸು.೧೬೦೪) ಶಬ್ದಾನುಶಾಸನದಲ್ಲಿ ಕರ್ನಾಟಕ ಭಾಷೆಯ ಪ್ರಾಶಸ್ತ್ಯವನ್ನು ಹೇಳುವಾಗ "ತತ್ವಾರ್ಥಮಹಾಶಾಸ್ತ್ರ ವ್ಯಾಖ್ಯಾನವು ದೊರೆಯುತ್ತದೆ"[೬] ಎಂದು ಹೇಳಿದ್ದಾರೆ. ಚಾವುಂಡರಾಯನು (ಸು.೯೭೮) ತನ್ನ ಗುರು ನೇಮಿಚಂದ್ರನಿಂದ ರಚಿತವಾದ ಗೊಮ್ಮಟಸಾರಕ್ಕೆ 'ವೀರಮಾರ್ತಾಂಡ' ಎಂಬ ಕನ್ನಡ ವೃತ್ತಿಯನ್ನು ಬರೆದಿರುವುದಾಗಿ ತಿಳಿಯುತ್ತದೆ ಎಂದು ಕರ್ನಾಟಕ ಕೇಸರಿ ೧-೩೯ ಲೇಖನ ಆಧಾರವಾಗಿಟ್ಟುಕೊಂಡು ಕವಿಚರಿತೆಕಾರರಾದ ಆರ್. ನರಸಿಂಹಾಚಾರ್ಯರು ಹೇಳುತ್ತಾರೆ".[೭] ದಿವಾಕರನಂದಿಯು (ಸು.೧೦೬೨) ತತ್ತ್ವಾರ್ಥಸೂತ್ರಕ್ಕೆ ಕನ್ನಡ ವೃತ್ತಿಯನ್ನು ಬರೆದಿದ್ದಾನೆ. ಈ ವಿಷಯವು ೫೭ನೆಯ ಶಾಸನದ "ತತ್ತ್ವಾರ್ಥಸೂತ್ರಕ್ಕೆ ಕನ್ನಡದಿಂ ವೃತ್ತಿಯನೆಲ್ಲಿಗಂ ನೆಗದಿಲ್ವನಂ ಸಿದ್ಧಾಂತ ರತ್ನಾಕರರ್"[೮] ಎಂಬ ಪದ್ಯದಿಂದ ತಿಳಿಯುತ್ತದೆ. ಅಲ್ಲದೇ ಸಂಕ್ಷೇಪವಾಗಿ ಬರೆದು ವ್ಯಾಖ್ಯಾನಗಳಿಗೆ ಲಘುವೃತ್ತಿ ಎಂದು ಕರೆಯಲಾಗಿದೆ. ವಾದಿಕುಮುದಚಂದ್ರ (ಸು.೧೧೦೦)ನು ಜಿನಸಂಹಿತೆಯೆಂಬ ನಾಮಾಂತರವುಳ್ಳ ಪ್ರತಿಷ್ಠಾಕಲ್ಪಕ್ಕೆ ವ್ಯಾಖ್ಯಾನ ಬರೆದ ಜೈನಕವಿ. ವ್ಯಾಖ್ಯಾನದ ಆರಂಭದಲ್ಲಿ "ಶ್ರೀ ಮಾಘನಂದಿ ಸಿದ್ಧಾಂತ ಚಕ್ರವರ್ತಿತನೂಭವಃ। ಕುಮುದೇಂದುರಹಂ ವಚ್ಮಿ ಪ್ರತಿಷ್ಠಾಕಲ್ಪಟಿಪ್ಪಣಂ॥"[೯] ಎಂದು ಹೇಳಲಾಗಿದ್ದು ಶ್ಲೋಕದ ಅಂತ್ಯದಲ್ಲೂ ಈ ಬಗ್ಗೆ ಉಲ್ಲೇಖವಿದೆ.

ಕ್ರಿ.ಶ. ೮೧೪-೮೭೭ರಲ್ಲಿಯ ವೀರಸೇನನು ಪುಷ್ಪದಂತ ಮತ್ತು ಭೂತಬಲಿ ಆಚಾರ್ಯರ 'ಷಟ್‌ಖಂಡಾಗಮ'ದ ಮೊದಲ ೫ ಖಂಡಗಳಿಗೆ ಧವಲಟೀಕೆ ಹೆಸರಿನ ಗ್ರಂಥ ಬರೆದಿದ್ದಾನೆ. ಹಾಗೆಯೇ ಗುಣಾಧರಮುನಿಯ ಕಷಾಯ ಪ್ರಾಭೃತಕ್ಕೆ ಜಯಧವಲ ಹೆಸರಿನ ೨೦ ಸಾವಿರ ಶ್ಲೋಕಗಳ ಟೀಕಾ ಗ್ರಂಥವನ್ನು ಬರೆದು ಮರಣ ಹೊಂದಲು ಇವರ ಶಿಷ್ಯ ಜಿನಸೇನನು ಉಳಿದ ೪೦ ಸಾವಿರ ಶ್ಲೋಕಗಳಿಗೆ ಟೀಕೆ ಬರೆದು ಅದನ್ನು ಪೂರ್ಣಗೊಳಿಸಿದನು. ಗಣಿತಶಾಸ್ತ್ರಕ್ಕೆ ಸಂಬಂಧಿಸಿದ 'ಸಿದ್ಧ ಭೂಪದ್ಧತಿ ಟೀಕಾ' ಇದು ವೀರಸೇನನ ಮತ್ತೊಂದು ವ್ಯಾಖ್ಯಾನವಾಗಿದೆ."[೧೦] ಪೂಜ್ಯಪಾದಕೃತ ಸಮಾಧಿ ಶತಕಕ್ಕೆ ಮೇಘಚಂದ್ರನು (ಸು. ೧೧೪೮) ಕನ್ನಡ ವ್ಯಾಖ್ಯಾನವನ್ನು ಬರೆದುದಾಗಿ ತಿಳಿದುಬರುತ್ತದೆ. (Ind-Ant-XIV-14) ಈ ವ್ಯಾಖ್ಯಾನವನ್ನು ವಿತತಯಶೋನಿಧಿ ಪಂಪನ ಸುತಂಗೆ ತಿಳಿವಂತು ಪೊಚ್ಚಪೊಸಗನ್ನಡದಿಂ ಬರೆದಂತೆ ಹೇಳುತ್ತಾನೆ. ಈ ಪದ್ಯಭಾಗದಲ್ಲಿ ಹೇಳಿರುವ ಪಂಪನು ನಾಗಚಂದ್ರನೇ ಆಗಿದ್ದ ಪಕ್ಷದಲ್ಲಿ ಅವನ ಕಾಲವಾದ ಮೇಲೆ ಅವನ ಮಗನಿಗೋಸ್ಕರ ಈತನು ಈ ವ್ಯಾಖ್ಯಾನವನ್ನು ಬರೆದಿರಬಹುದು."[೧೧] ಮೇಘಚಂದ್ರನ ಶಿಷ್ಯ ವೀರಣಂದಿ (ಸು.೧೧೫೩)ಯು ಸ್ವಕೃತ ಆಚಾರಸಾರಕ್ಕೆ ಕನ್ನಡ ವ್ಯಾಖ್ಯಾನ ಬರೆದಿದ್ದಾನೆ. "........... ೧೦೭೬ ಶ್ರೀಮುಖನಾಮ ಸಂವತ್ಸರದ ಜ್ಯೇಷ್ಠಶುಕ್ಲ ಸೋಮವಾರದಂದು ತಾವು ಮಾಡಿದಾಚಾರಸಾರಕ್ಕೆ ಕರ್ನಾಟಕ ವೃತ್ತಿಯಂ ಮಾಡಿದಪರ್ (Ind-Ant-XLI,-88)ಎಂಬ ಗದ್ಯದಿಂದ ತಿಳಿಯುವುದಾಗಿ ಕವಿಚರಿತೆಕಾರರು ಹೇಳುತ್ತಾರೆ."[೧೨] ಇಂದ್ರನಂದಿಯ ಶ್ರುತಾವತಾರದ ಹೇಳಿಕೆಯಂತೆ ಷಡ್ಖಂಡಾಗಮಕ್ಕೆ ಕನ್ನಡ ಟೀಕು ಬರೆದವರೆಂದರೆ ಶಾಮಕುಂದಾಚಾರ್ಯರು.

ಷಟ್ಖಂಡಾಗಮದ ಕೊನೆಯ ಖಂಡವನ್ನು ಹೊರತುಪಡಿಸಿ ಉಳಿದ ೫ ಖಂಡಗಳಿಗೂ ಹಾಗೂ ಕಷಾಯ ಪ್ರಾಭೃತಕ್ಕೂ ೧೨,೦೦೦ ಗ್ರಂಥ ಪ್ರಮಾಣದ ಪಾಕೃತ, ಸಂಸ್ಕೃತ ಹಾಗೂ ಕನ್ನಡ ಭಾಷೆಯ ಟೀಕು ಬರೆದಿದ್ದಾರೆ.

"ಆರಾಧನ ಕರ್ನಾಟ ಟೀಕಾ' ಗ್ರಂಥವು 'ಭಗವತೀ ಆರಾಧನೆ'ಗೆ ಬ್ರಾಜಿಷ್ಣು ಬರೆದ ಟೀಕಾ ಗ್ರಂಥವಾಗಿದೆ. ರಾಷ್ಟ್ರಕೂಟರ ೩ನೆಯ ಗೋವಿಂದನ ಕಾಲಕ್ಕೆ (೭೯೩–೮೧೪) ಮಾನ್ಯಖೇಟದಲ್ಲಿದ್ದು ಈ ಆರಾಧನಾ ಕರ್ನಾಟ ಟೀಕಾವನ್ನು ಬರೆದಿರಬೇಕೆಂದು ಡಾ.ಎಂ.ಬಿ.ನೇಗಿನಹಾಳರು ಅಭಿಪ್ರಾಯ ಪಡುತ್ತಾರೆ."[೧೩] "ಈ ಪೇಳ್ದ ಪತ್ತೊಂಬತ್ತು ಕಥೆಗಳ್ ಶಿವಕೋಟಾಚಾರ್ಯರ್ ಪೇಳ್ದ ವೊಡ್ಡಾರಾಧನೆಯ ಕವಚ"ವೆಂಬುದಾಗಿ ಟೀಕಾಕಾರ ಕೃತಿಯ ಸ್ವರೂಪ ಮತ್ತು ಹಿನ್ನಲೆಯನ್ನು ಸೂಚಿಸುತ್ತಾನೆ. ಚಾರಿತ್ರ ಪ್ರಧಾನವಾದ ಆರಾಧನಾ ಗ್ರಂಥವು ಜಿನಮುನಿಗಳಿಗೂ, ಶ್ರಾವಕ, ಶ್ರಾವಕಿಯರಿಗೆ ಅನ್ವಯವಾಗುವ ತಪಸ್ಸು, ರತ್ನತ್ರಯಗಳ ಮೋಕ್ಷದ ಪರಿಕಲ್ಪನೆ ಹೊಂದಿದೆ. ಇಲ್ಲಿಯ ೧೯ ಕಥೆಗಳು ಧರ್ಮವೀರರು, ದಯಾವೀರರು ಆದವರು ೨೨ ಪರಿಷಹ, ೪ ಬಗೆಯ ಉಪಸರ್ಗಗಳನ್ನು ಜಯಿಸಿ ಮೋಕ್ಷ ಹೊಂದುವುದನ್ನು ವಿವರಿಸಲಾಗಿದೆ. ಶತ್ರುಗಳಿಂದ ತಪ್ಪಿಸಿಕೊಳ್ಳಲು ಯೋಧರಿಗೆ ಕವಚಗಳಿರುವಂತೆ ಆತ್ಮಕಲ್ಯಾಣ ಬಯಸುವವರಿಗೆ ವಡ್ಡಾರಾಧನೆಯ ಕವಚಗಳು ಶ್ರೀರಕ್ಷೆ ನೀಡುತ್ತವೆಂಬ ಆಶಯ ಇಲ್ಲಿದೆ.

"ಏಕಾಂಗ ಶ್ರುತಧರರಲ್ಲಿ ಕೊನೆಯವನಾದ ಲೋಹಾಚಾರ್ಯನು ೮೪,೦೦೦ ಶ್ಲೋಕಗಳ ಆರಾಧನೆಯನ್ನು ಬರೆದಿದ್ದು, ಈ ಪರಂಪರೆಯನ್ನು ಅನುಸರಿಸಿಯೇ ಶಿವಕೋಟಾಚಾರ್ಯರು (ಸಮಂತಭದ್ರನ ಶಿಷ್ಯ) ಮೂಲಾರಾಧನವನ್ನು ಬರೆದನು. ಇದಕ್ಕೆ ಭಗವತೀ ಆರಾಧನಾ, ಬೃಹಥಾರಾಧನಾ ಎಂಬ ಪರ್ಯಾಯ ನಾಮಗಳು ಚಾಲ್ತಿಯಲ್ಲಿವೆ. ಈ ಆರಾಧನಾ ಗ್ರಂಥ ಪ್ರಾಕೃತದಲ್ಲಿದ್ದು ೨೧೭೦ ಗಾಥೆಗಳನ್ನು ಒಳಗೊಂಡಿದೆ. ಆರಾಧನೆಗೆ ಅಪರಾಜಿತ ಸೂರಿಯ (ಕ್ರಿ.ಶ. ೮ ರಿಂದ ೧೧ನೇ ಶ) ವಿಜಯೋದಯಾ ವ್ಯಾಖ್ಯಾನವೆಂಬ ಸಂಸ್ಕೃತ ಟೀಕೆಯನ್ನು ಬರೆದಿರುವನು. ಮತ್ತು ೧೩ನೆಯ ಶತಮಾನದಲ್ಲಿದ್ದ ಪಂಡಿತ ಆಶಾಧರ ಸೂರಿಯು 'ಮೂಲಾರಾಧನ ದರ್ಪಣ' ಎಂಬ ಟೀಕೆಯನ್ನು ಬರೆದಂತೆ ತಿಳಿದುಬರುತ್ತದೆ. ಕಾಲದ ದೃಷ್ಟಿಯಿಂದ ವಡ್ಡಾರಾಧನೆಯೇ ಅತಿ ಪ್ರಾಚೀನ ಟೀಕೆಯಾಗಿದೆ"[೧೪] ಎಂದು ಡಾ. ಕೆ. ರವೀಂದ್ರನಾಥ ಅವರು ಅಭಿಪ್ರಾಯಪಟ್ಟಿದ್ದಾರೆ. ಅಂದರೆ, ಲಭ್ಯ ಟೀಕಾ ಕೃತಿಯಾಗಿ ವಡ್ಡಾರಾಧನೆ ಮೊದಲ ಟೀಕಾಕೃತಿ ಎನ್ನಬಹುದೇ ಹೊರತು ಇದಕ್ಕೂ ಪೂರ್ವದಲ್ಲಿ ಟೀಕಾಕೃತಿಗಳು ಬರೆಯಲ್ಪಟ್ಟಿದ್ದವು. ಹಸ್ತಪ್ರತಿಗಳು ಅಲಭ್ಯವಾದ ಕಾರಣ ಲಭ್ಯ ಕಾವ್ಯಕೃತಿಗಳನ್ನು ಆಧರಿಸಿ 'ಪ್ರಾಚೀನ ಕನ್ನಡ ಟೀಕೆ'ಯೆಂದು ಹೆಸರಿಸಿರುವುದು ಸಮಂಜಸವಾಗಿದೆ.

ಜೈನ ಟೀಕಾ ಸಾಹಿತ್ಯ ಪರಂಪರೆಯನ್ನು ಅವಲೋಕಿಸಿದಾಗ ಸಂಸ್ಕೃತ–ಪ್ರಾಕೃತ ಕೃತಿಗಳಿಗೆ ಕನ್ನಡ ಟೀಕುಗಳು, ಕನ್ನಡ ಸಾಹಿತ್ಯ ಕೃತಿಗಳಿಗೆ ಸಂಸ್ಕೃತ–ಪ್ರಾಕೃತ ಭಾಷಾ ಟೀಕುಗಳು ರಚನೆಯಾಗಿರುವುದು ತಿಳಿಯುತ್ತದೆ. "ಕನ್ನಡ ಕಾವ್ಯಗಳ ಶಾಸ್ತ್ರಗ್ರಂಥಗಳ ಮೂಲವಸ್ತು ಪ್ರಾಕೃತ ಗ್ರಂಥಗಳಿಂದ ಲಭ್ಯವಾಗಿರುವುದರಿಂದ ಕನ್ನಡ ಗ್ರಂಥಗಳ ಅಭ್ಯಾಸಕ್ಕೆ ಮೂಲಗ್ರಂಥಗಳು ಅವಶ್ಯಕ. ಆದುದರಿಂದ ಕನ್ನಡ ಟೀಕನ್ನೊಳಗೊಂಡ

ಈ ಪ್ರಾಕೃತ ಗ್ರಂಥಗಳು ಇನ್ನೂ ಓಲೆಕಟ್ಟುಗಳಲ್ಲಿಯೇ ಅಡಗಿದ್ದು ಅವುಗಳ ಪ್ರಕಟಣೆ ಆದಷ್ಟು ಬೇಗ ಆಗಬೇಕಾಗಿದೆ. ಕನ್ನಡ ಕಾವ್ಯಗಳ ಪ್ರಕಟಣೆಗೆ ಕೊಡುವ ಪ್ರೋತ್ಸಾಹ, ಮನ್ನಣೆಗಳು ಇವುಗಳಿಗೂ ದೊರೆತರೆ ಅಳಿದುಳಿದ ಕೆಲವು ಗ್ರಂಥಗಳಾದರೂ ಶಾಶ್ವತ ರಕ್ಷಣೆಗೆ ಒಳಗಾಗಿ, ಪ್ರಕಟಣೆಗೆ ಒದಗಿ, ಜನಸಾಮಾನ್ಯರ ಸ್ವತ್ತಾಗಲು ಸಾಧ್ಯವಾಗುತ್ತದೆ"[೧೫] ಎನ್ನುವ ಡಾ. ಸಣ್ಣಯ್ಯನವರ ಅಭಿಪ್ರಾಯದಂತೆ ನಾಡಿನ ವಿಶ್ವವಿದ್ಯಾಲಯಗಳು, ಕನ್ನಡಪರ ಸಂಘ-ಸಂಸ್ಥೆಗಳು, ರಾಜ್ಯ ಸರಕಾರ ಆಸಕ್ತಿಯಿಂದ ಪ್ರಕಟಗೊಳಿಸುವ ತುರ್ತು ಅಗತ್ಯವಿದೆ ಎಂಬ ಅಂಶ ತಿಳಿದುಬರುತ್ತದೆ.

ಹೀಗೆ, ಜೈನ ಟೀಕಾ ಸಾಹಿತ್ಯ ಪರಂಪರೆಯಿಂದ ಕನ್ನಡ ಸಾಹಿತ್ಯದ ಎಲ್ಲ ಪ್ರಕಾರದ ಕೃತಿಗಳಿಗೆ ವ್ಯಾಖ್ಯಾನ ಬರೆದಿರುವುದು ತಿಳಿಯುತ್ತದೆ. ಕವಿಚರಿತೆಕಾರರು ಹೇಳುವಂತೆ "ಇವೆಲ್ಲಾ ಬಲುಮಟ್ಟಿಗೆ ಗದ್ಯ ರೂಪದಲ್ಲಿವೆ. ಸಂಸ್ಕೃತದಲ್ಲಿಯೋ ಪ್ರಾಕೃತದಲ್ಲಿಯೋ ಇರುವ ಮೂಲ ಗ್ರಂಥಗಳ ಸೂತ್ರಗಳಿಗೆ, ಸೂತ್ರಪ್ರಾಯವಾದ ವಾಕ್ಯಗಳಿಗೆ ಅರ್ಥವಿವರಣೆಯನ್ನು ಇಲ್ಲಿ ಮಾಡಿರುತ್ತದೆ. ವಿರಳವಾಗಿ ಅಭಿಪ್ರಾಯವಿಶದತೆಗೆ ಕನ್ನಡ ಜೈನಪುರಾಣಗಳಿಂದ ಆಧಾರಗಳನ್ನು ಕೊಟ್ಟಿರುವುದು ಕಾಣುತ್ತದೆ. ಸಂಸ್ಕೃತದ ಶಾಸ್ತ್ರಗ್ರಂಥಗಳಿಗೆ ಸರಿಸಮಾನವಾದ ಶಾಸ್ತ್ರಮರ್ಯಾದೆಯನ್ನು ಕನ್ನಡದ ಮಹಾಕವಿಗಳ ಪುರಾಣಗ್ರಂಥಗಳಿಗೂ ಕೊಟ್ಟಿರುವುದು ಮೆಚ್ಚತಕ್ಕದ್ದಾಗಿದೆ. ಸುಮಾರು ೧೫ನೆಯ ಶತಮಾನದಲ್ಲಿ ವಚನ ಸಾಹಿತ್ಯದ ವಿಷಯದಲ್ಲಿಯೂ ಅಂದಿನ ವೀರಶೈವ ವಿದ್ವಾಂಸರೂ ಟೀಕಾಕರ್ತೃಗಳೂ ಹೀಗೆಯೇ ಗೌರವದ ಸ್ಥಾನವನ್ನು ಕೊಟ್ಟದ್ದು ಕಂಡುಬರುತ್ತದೆ."[೧೬] ಈ ಹಿನ್ನಲೆಯಲ್ಲಿ ಜೈನ ಟೀಕಾ ಸಾಹಿತ್ಯವು ಕ್ರಿ.ಶ. ಸುಮಾರು ೪೦೦ ರಿಂದ ೧೮೬೬ರವರೆಗೆ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಅಪಾರವಾಗಿ ಬೆಳೆದುಬಂದಿದೆ. ಅಂದಿನ ವಿದ್ವತ್ ಪರಂಪರೆಯ ಜೈನಧರ್ಮದ ಪಂಡಿತರು ಲೌಕಿಕ ಮತ್ತು ಅಲೌಕಿಕವಾದ ತತ್ವಗಳು ಜನಸಾಮಾನ್ಯರಿಗೆ ತಿಳಿಯಲೆಂಬ ಕಾರಣಕ್ಕೆ ಇಲ್ಲವೇ ಅಧ್ಯಯನದ ಅಭಿಲಾಷೆಯುಳ್ಳವರಿಗಾಗಿ ಟೀಕನ್ನು ಬರೆಯುವ ಮೂಲಕ ಕನ್ನಡ ಟೀಕಾ ಸಾಹಿತ್ಯ ಸಂಪತ್ತನ್ನು ಹೆಚ್ಚಿಸುವಲ್ಲಿ ಮೊದಲಿಗರೆನ್ನಬಹುದು.

**೨. ಲಿಂಗಾಯತ ಟೀಕಾ ಸಾಹಿತ್ಯ**

ಕನ್ನಡ ಸಾಹಿತ್ಯದಲ್ಲಿ ಕಾವ್ಯ ಹಾಗೂ ವ್ಯಾಖ್ಯಾನ ಕೃತಿಗಳಿಗೆ ಜೈನರು ಆದ್ಯ ಪುರುಷರಾಗಿದ್ದಾರೆ. ಅದರಂತೆ, ೧೨ನೇ ಶತಮಾನದ ವಚನ ಸಾಹಿತ್ಯ ಹಾಗೂ ಇವುಗಳಿಗೆ ಬರೆದ ವ್ಯಾಖ್ಯಾನ ರಚನೆಗೆ ಲಿಂಗಾಯತರು ಆದ್ಯ ಪುರುಷರು. ಜೈನಧರ್ಮ ಸಾಹಿತ್ಯವು ಇಳಿಮುಖವಾಗುತ್ತಿದ್ದಂತೆ ಲಿಂಗಾಯತ ಧರ್ಮ-ಸಾಹಿತ್ಯವು ವಚನ-ಕಾವ್ಯ-ಪುರಾಣಗಳ ಮಾದರಿಯಲ್ಲಿ ರೂಪ ಪಡೆದವು. ಕಾಲಕ್ರಮೇಣ ಇವುಗಳಿಗೆ ಟೀಕು, ವ್ಯಾಖ್ಯಾನಗಳು ರಚನೆಯಾಗುವ ಮೂಲಕ ಲಿಂಗಾಯತ ಟೀಕಾ ಸಾಹಿತ್ಯ ಪರಂಪರೆಯು ಹುಲುಸಾಗಿ ಬೆಳೆಯಲು ಕಾರಣವಾಯಿತು. ಡಾ.ಎಂ.ಎಂ.ಕಲಬುರ್ಗಿಯವರು "ಜೈನ, ವೀರಶೈವ, ಬ್ರಾಹ್ಮಣ ಈ ಮೂರು ಕರ್ನಾಟಕ ಕಟ್ಟಿದ ಪ್ರಮುಖ ಜನಾಂಗಗಳು. ಇವುಗಳಲ್ಲಿ ಜೈನ ಬ್ರಾಹ್ಮಣ ಮತಗಳು ತಮ್ಮ ಲೌಕಿಕ ವ್ಯವಹಾರಕ್ಕೆ ಕನ್ನಡವನ್ನು, ಧಾರ್ಮಿಕ ಆಲೋಚನೆಗೆ ಕ್ರಮವಾಗಿ

ಪ್ರಾಕೃತ, ಸಂಸ್ಕೃತವನ್ನು ಬಳಸಿಕೊಂಡರೆ ವೀರಶೈವವು ತನ್ನ ಲೌಕಿಕ, ಧಾರ್ಮಿಕಗಳೆಂಬ ಉಭಯ ವ್ಯಾಪಾರಗಳಿಗೆ ಕನ್ನಡವನ್ನೇ ಪ್ರಮಾಣ ಭಾಷೆಯನ್ನಾಗಿ ಬಳಸಿತು. ಹೀಗಾಗಿ ಕರ್ನಾಟಕ ಬ್ರಾಹ್ಮಣರ ಮಾತೃಭಾಷೆ ಕನ್ನಡ; ಧರ್ಮಭಾಷೆ ಸಂಸ್ಕೃತ, ಜೈನರ ಮಾತೃ ಭಾಷೆ ಕನ್ನಡ; ಧರ್ಮ ಭಾಷೆ ಪ್ರಾಕೃತ. ಆದರೆ ವೀರಶೈವರ ಧರ್ಮ ಭಾಷೆಯೂ ಕನ್ನಡ, ಮಾತೃಭಾಷೆಯೂ ಕನ್ನಡ ...... ಭಾಷೆಯ ಬಗೆಗೆ ಇದ್ದ ಈ ಅಪಾರ ಗೌರವ ವೀರಶೈವರಿಗೆ ವಿಪುಲವಾದ ಸೃಜನಸಾಹಿತ್ಯವನ್ನು ಸಾಹಿತ್ಯ ಪ್ರಸಾರದ ವಿಧಾನವಾದ ಟೀಕಾ ಸಾಹಿತ್ಯವನ್ನು ನಿರ್ಮಿಸಲು ಪ್ರಚೋದಿಸಿತು"[೧೭] ಎಂದು ಹೇಳುವ ಮೂಲಕ ಲಿಂಗಾಯತರು ಕನ್ನಡ ಭಾಷೆಯನ್ನು ದೇವಭಾಷೆಯಾದ ಸಂಸ್ಕೃತದ ಎತ್ತರಕ್ಕೇರಿಸಲು ಟೀಕಾಸಾಹಿತ್ಯವನ್ನು ಪ್ರಮುಖ ಸಾಧನವನ್ನಾಗಿ ಬಳಸಿದರೆಂಬುದು ತಿಳಿದುಬರುತ್ತದೆ.

ಕವಿ ಚರಿತೆಕಾರರು ಹೇಳುವಂತೆ "೧೧ನೆಯ ಶತಮಾನದ ಮಧ್ಯಭಾಗದ ಹೊತ್ತಿಗೆ ಜೈನಧರ್ಮಕ್ಕೆ ರಾಜಾಶ್ರಯ ತಗ್ಗಿತು; ಶೈವ, ವೈಷ್ಣವ, ಶಾಕ್ತ ಇತ್ಯಾದಿ ಪ್ರಭೇದಗಳ ಪೌರಾಣಿಕ ಹಿಂದೂ ಧರ್ಮ ಪ್ರಾಭಲ್ಯಕ್ಕೆ ಬಂದಿತು. ಹಿಂದಿನ ಶತಮಾನದಲ್ಲಿ ಒಂದು ಧರ್ಮ ಪ್ರಾಬಲ್ಯಕ್ಕೆ ಬಂದಿತು. ಹಿಂದಿನ ಶತಮಾನದಲ್ಲಿ ಒಂದು ಜಗೆಯ ಸರ್ವಸಮತೆ, ಧರ್ಮಸಹಿಷ್ಣುತೆಗಳು ಕಂಡುಬಂದರೆ, ಈಗ ಮತಮತಗಳಲ್ಲಿ ಪ್ರಾಶಸ್ತ್ಯಕ್ಕೆ ಮೇಲಾಟ ತೊಡಗಿತು; ಆಯಾ ಧರ್ಮಗಳಿಗೆ ಹೆಚ್ಚಿನ ಸ್ಥಿರತೆ ಜನಪ್ರಿಯತೆಗಳನ್ನು ತಂದುಕೊಡಲು, ಅನುಯಾಯಿಗಳನ್ನು ಗಳಿಸಲು ಆರ್ಷ ಸೈದ್ಧಾಂತಿಕ ಗ್ರಂಥಗಳಿಗೆ ಟೀಕೆ-ಟಿಪ್ಪಣಿಗಳು ಬರೆಯಲ್ಪಟ್ಟವು".[೧೮] ಮುಂದುವರಿದು "ವೀರಶೈವ ವ್ಯಾಖ್ಯಾನಗಳು ಸ್ತೋತ್ರಗಳು, ವೇದ ಭಾಷ್ಯಗಳು, ಆಗಮಗಳು, ಪುರಾಣಾಗಮಾದಿಗಳ ಸೂಕ್ತಿಗಳು, ತಾತ್ವಿಕ ಮತ್ತು ಸಿದ್ದಾಂತ ಗ್ರಂಥಗಳು, ಕಾವ್ಯಗಳು, ವ್ಯಾಕರಣ ಈ ಮೊದಲಾದವುಗಳನ್ನು ಆಶ್ರಯಿಸಿ ಹುಟ್ಟಿವೆ. ವೀರಶೈವ ಮತದ ಪ್ರಭಾವವನ್ನು ಪ್ರಸಾರವನ್ನು ಬೆಳೆಸುವುದು, ಸಿದ್ಧಾಂತ ಗ್ರಂಥಗಳನ್ನು ಜನಸಾಮಾನ್ಯರಿಗೆ ಸುಬೋಧವನ್ನಾಗಿ ಮಾಡುವುದು ಇವೇ ಈ ವ್ಯಾಖ್ಯಾನಕಾರರ ಉದ್ದೇಶವಾಗಿರುವಂತೆ ತೋರುತ್ತದೆ. ಇಲ್ಲಿಯೂ ರಚನೆಗೆ ಹೇತುವಾಗಿ ಪ್ರೇರಣೆ-ಪ್ರತಿ ಬೋಧನೆಗಳುಂಟು. ಗುರುನಂಜನು ತಾನು ಯಜುರ್ವೇದ ಭಾಷ್ಯದ ಟೀಕೆಯನ್ನು ಸತಾವರ ಶಾಂತಯೋಗಿಯ ಇಷ್ಟಾನುಸಾರವಾಗಿ ಬರೆದಂತೆ ಹೇಳಿಕೊಂಡಿದ್ದಾನೆ. ಸೋಸಲೆ ರೇವಣಾಚಾರ್ಯನು (ಸು.೧೬೨೩) ಬರೆದ 'ಮಹಿಮ್ನಸ್ತವಟೀಕೆ' ಅರಸನೊಬ್ಬನ ಸಂತೋಷಾರ್ಥವಾಗಿ ಸೋಮಶೇಖರ ಶಿವಯೋಗಿ ಮಾಡಿಸಿದ್ದೆಂದು ತಿಳಿಯುವುದು"[೧೯] ಎಂಬ ಕವಿಚರಿತೆಕಾರರ ಅಭಿಪ್ರಾಯಗಳನ್ನು ಗಮನಿಸಿದಾಗ ಲಿಂಗಾಯತ ಟೀಕಾ ಸಾಹಿತ್ಯ ರಚನೆಯ ಉದ್ದೇಶ, ಕಾಲದ ಅಗತ್ಯತೆ ಮತ್ತು ಕ್ಲಿಷ್ಟಸಾಹಿತ್ಯವನ್ನು ಜನಮುಖಿಗೊಳಿಸಲು ಟೀಕಾಕಾರರು ಮಾಡಿದ ನಾನಾ ಪ್ರಯತ್ನಗಳನ್ನು ಅರಿಯಬಹುದಾಗಿದೆ.

ಲಿಂಗಾಯತ ಟೀಕಾ ಸಾಹಿತ್ಯ ಪರಂಪರೆಯ ಮೂಲ, ಬೆಳವಣಿಗೆ ಮತ್ತಿತರ ವಿಷಯಗಳ ಸ್ಪಷ್ಟತೆಗೆ ಸೃಜನಶೀಲ ಸಾಹಿತ್ಯ ಹಾಗೂ ಶಾಸನಗಳು ಆಕರಗಳಾಗಿವೆ. ಆದರೆ, ತಾಳೋಲೆಗಳಲ್ಲಿ ರಚಿತವಾದ ಸಾಹಿತ್ಯ, ಕಲ್ಲು, ತಾಮ್ರಪಟಗಳಲ್ಲಿ ಬರೆಯಲಾದ ಶಾಸನಗಳು ಲಭಿಸಿದರೂ ಅಸ್ಪಷ್ಟವಾಗಿದೆ. ಇದರಿಂದ, ಸಾಹಿತ್ಯ ಕೃತಿಗಳು ಲಭಿಸಿದರು ಅದನ್ನು ಬರೆದವರು ಯಾರೆಂಬುದು ತಿಳಿಯುವುದಿಲ್ಲ. ಕೆಲವೊಮ್ಮೆ

ಬರೆದವರು ಗೊತ್ತಾದರೂ ಕೃತಿ ಲಭಿಸುವುದಿಲ್ಲ. ಕವಿ ಚರಿತೆಕಾರರು ಹೇಳುವಂತೆ– "ಈಚೆಗೆ ವ್ಯಾಖ್ಯಾನಕಾರರೋ ಕವಿಗಳೋ ಆದ ಕೆಲವರ ಹೆಸರುಗಳು ಅವರ ರಚನೆಗಳ ಸೂಚನೆಗಳು ಸ್ವಲ್ಪಮಟ್ಟಿಗೆ ತಿಳಿದುಬಂದಿರುವುದು ನಿಜ. ಆದರೆ, ರಚನೆಗಳಾಗಲಿ ಅವುಗಳ ಭಾವಗಳಾಗಲಿ ದೊರೆಯದೆ, ಕನ್ನಡ ಸಾಹಿತ್ಯ ಪರಂಪರೆಯ ತಿಳಿವಳಿಕೆಗೆ ಅಷ್ಟುಮಟ್ಟಿಗೆ ದೊಡ್ಡ ನಷ್ಟವೇ ಆಗಿದೆ. ನಿರ್ದಯಿ ಕಾಲಪುರುಷನ ಹಾವಳಿಗೆ ಸಿಕ್ಕು ಅವೆಲ್ಲಾ ಹಾಳಾಗಿರುವ ಸಂಭವವೇ ಹೆಚ್ಚು........ ಕನ್ನಡ ವ್ಯಾಖ್ಯಾನಕಾರರ ಅಥವಾ ಕವಿಗಳ ಇತಿವೃತ್ತ ವಿವರಗಳ ಮತ್ತು ರಚನೆಗಳ ಸಂಬಂಧದಲ್ಲಿ ಹೊಸ ಬೆಳಕು ಬೀಳುವ ಸಂಗತಿಗಳೇನಾದರೂ ದೊರೆತರೆ ಕನ್ನಡ ಸಾಹಿತ್ಯ ಪರಂಪರೆಯ ತಿಳಿವಳಿಕೆ ಹೆಚ್ಚು ಸ್ಪಷ್ಟವಾಗುವುದು ಸಾಧ್ಯ"[೨೦] ಎಂಬ ಅಭಿಪ್ರಾಯವು ಲಿಂಗಾಯತ ಟೀಕಾ ಸಾಹಿತ್ಯ ಪರಂಪರೆಗೂ ಅನ್ವಯವಾಗುತ್ತದೆ.

ಈ ಹಿನ್ನಲೆಯಲ್ಲಿ ಲಿಂಗಾಯತ ಟೀಕಾ ಸಾಹಿತ್ಯ ಪರಂಪರೆಯನ್ನು ಗುರುತಿಸುವಲ್ಲಿ ಬಸವಪೂರ್ವ ಯುಗ, ಬಸವಯುಗ, ಬಸವೋತ್ತರ ಯುಗದ ವಚನ, ಕಾವ್ಯಶಾಸ್ತ್ರಗಳ ಅರಿವು ಮುಖ್ಯ. ಸಾಹಿತ್ಯ ರಚನೆಯ ಸಮಕಾಲೀನ ಸಂದರ್ಭ, ಶೈಕ್ಷಣಿಕ, ಸಾಮಾಜಿಕ, ರಾಜಕೀಯ ಸನ್ನಿವೇಶಗಳು, ಧಾರ್ಮಿಕ ಸ್ಥಿತಿ ಮುಂತಾದ ಅಂಶಗಳು ಲಿಂಗಾಯತ ಟೀಕಾ ಸಾಹಿತ್ಯದ ಬೀಜರೂಪವನ್ನು ಗುರುತಿಸಲು ಪ್ರೇರಕವಾಗಬಹುದು. ತನ್ಮೂಲಕ ಸಾಹಿತ್ಯ ಪರಂಪರೆಯನ್ನು ನಿಖರವಾಗಿ ಹೇಳಲು ಇಲ್ಲಿ ಪ್ರಯತ್ನಿಸಲಾಗುವುದು.

೧೨ನೇ ಶತಮಾನದಲ್ಲಿ ರಚಿತವಾದ ವಚನಗಳಲ್ಲಿ ಕೆಲವು ವಚನಗಳಿಗಾದರೂ ಅಂದೇ ಟೀಕೆ ಬರೆಯುವ ಕಾರ್ಯ ನಡೆದಿರಬೇಕೆಂಬುದಕ್ಕೆ ಶಿವಶರಣರ ಕೆಲವು ವಚನೋಕ್ತಿಗಳೇ ಪುರಾವೆ ಒದಗಿಸುತ್ತವೆ. ಶಿವಲೆಂಕಮಂಚಣ್ಣನ "ಕಾಮಿಕಾದ್ಯಖಿಳ ಶಿವಕಥಿತತಂತ್ರಾವಳಿಗೆ ಪ್ರೇಮದಿಂ ವೃತ್ತಿ ದೀಪಿಕೆಗಳಂ ಬಿತ್ತರಿಸಿದ"[೨೧] ಎಂಬ ಮಾತಿನಿಂದ ಅನ್ಯಭಾಷಾ ಸಾಹಿತ್ಯಕ್ಕೆ ಹಾಗೂ "ಹತ್ತುಸಾವಿರ ಗೀತವ ಹಾಡಿ ಅರ್ಥವಿಟ್ಟಲ್ಲಿ ಫಲವೇನು? ಮುಟ್ಟುವ ತೆರನನರಿಯದನ್ನಕ್ಕ"[೨೨] ಎಂಬ ಬಸವಣ್ಣನವರ ವಚನದ ಸಾಲು ಹಾಗೂ "ಅಕ್ಕಮಹಾದೇವಿಯೆಂಬ ಶಿವಶರಣೆಗೆ ಚೆನ್ನಮಲ್ಲಪ್ರಭು ಇನ್ನೂರ ಹದಿನಾರು ಸಕೀಲದ ಟಿಪ್ಪಣದರ್ಥವ ಬೋಧಿಸುವ ಸಮಯದಲ್ಲಿ"[೨೩] ಎಂಬ ವಚನಗಳ ಸಾಲುಗಳು ಲಿಂಗಾಯತ ಟೀಕಾ ಸಾಹಿತ್ಯದ ಪ್ರಾಚೀನ ಪರಂಪರೆಗೆ ಆಧಾರಗಳಾಗಿವೆ. ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯರು ಹೇಳುವಂತೆ "ವೀರಶೈವ ದಾರ್ಶನಿಕ ಹಾಗೂ ಸಾಹಿತ್ಯಿಕ ಗ್ರಂಥಗಳು ಕೂಡಾ ಮೊದಮೊದಲು ಸಂಸ್ಕೃತದಲ್ಲಿಯೇ ಬಳಕೆಯಲ್ಲಿದ್ದು ಮುಂದೆ ಜನಸಾಮಾನ್ಯರಲ್ಲಿ ಜಾಗೃತಿಯನ್ನುಂಟು ಮಾಡುವ ಸಲುವಾಗಿ ಕನ್ನಡ ನಾಡಿನಲ್ಲಿ ಮೂಲ ಸಂಸ್ಕೃತ ಗ್ರಂಥಗಳನ್ನು ಕನ್ನಡಿಸುವ ಅಥವಾ ಅವುಗಳಿಗೆ ಟೀಕೆ ಬರೆಯುವ ಪರಿಪಾಠ ಬೆಳೆದಂತೆ ತೋರುತ್ತದೆ."[೨೪] ಎಂಬ ಅಭಿಪ್ರಾಯಗಳಿಂದ ಸಂಸ್ಕೃತ ಗ್ರಂಥಗಳಿಗೆ ಕನ್ನಡದಲ್ಲಿ ಟೀಕೆ ಬರೆಯುವ ಪಂಡಿತ ಪರಂಪರೆಯ ಜೊತೆಗೆ ಕನ್ನಡ ಗ್ರಂಥಗಳಿಗೆ ಕನ್ನಡದಲ್ಲಿ ಟೀಕೆ ಬರೆಯುವ ದೇಶಿನೆಲೆಯ ಪಂಡಿತರು ಈ ಕ್ಷೇತ್ರದಲ್ಲಿ ಗಂಭೀರವಾಗಿ ತೊಡಗಿಸಿಕೊಂಡ ಪರಿಣಾಮ ಲಿಂಗಾಯತ ಟೀಕಾ ಸಾಹಿತ್ಯವು ತುಂಬಾ ಹುಲುಸಾಗಿ ಬೆಳೆಯಲು ಕಾರಣವಾಯಿತು.

"ಲಭ್ಯ ಕನ್ನಡ ಹಸ್ತಪ್ರತಿಗಳಲ್ಲಿ ಸಂಸ್ಕೃತ ಪಾಠ, ಕನ್ನಡ ಟೀಕೆಯನ್ನೊಳಗೊಂಡ 'ನಾಮಲಿಂಗಾನುಶಾಸನ', ತಾಡೋಲೆಯಲ್ಲಿದ್ದು, ಅದನ್ನು ಪ್ರತಿ ಮಾಡಿದ ಕಾಲ ಕ್ರಿಶ. ೧೧೩೦"[೨೫] ಎಂದು ಉಲ್ಲೇಖಿಸಿರುವುದರಿಂದ ಈ ಪರಂಪರೆಯ ಮೊದಲ ಲಭ್ಯ ಟೀಕಾಕೃತಿ ಎನ್ನಬಹುದು. ಈ ಹಸ್ತಪ್ರತಿ ತಾಳೋಲೆಯಲ್ಲಿದೆ.

ಬಾದರಾಯಣರ ವೇದಾಂತ ಸೂತ್ರಗಳಿಗೆ ಶಂಕರ – ರಾಮಾನುಜ ಆನಂದತೀರ್ಥರ ಭಾಷ್ಯಗಳಿರುವಂತೆ ವೀರಶೈವ ಆಚಾರ್ಯರಾದ ನೀಲಕಂಠ, ಶ್ರೀಕಂಠ, ಶ್ರೀಪತಿಪಂಡಿತ ಮತ್ತಿತರರ ಭಾಷ್ಯಗಳಿವೆ. ಇಲ್ಲಿ ನೀಲಕಂಠ ಶಿವಾಚಾರ್ಯರು ಮತ್ತು ಶ್ರೀಪತಿ ಪಂಡಿತರಿಬ್ಬರೂ ವಿಶಿಷ್ಟಾದ್ವೈತ ಪರವಾಗಿ ಬ್ರಹ್ಮಸೂತ್ರಗಳಿಗೆ ಭಾಷ್ಯ ರಚಿಸಿದ್ದಾರೆ. "ಆದರೆ, ಈ ಭಾಷ್ಯಗಳು ಬಸವಣ್ಣ, ಅಲ್ಲಮಪ್ರಭುಗಳು ಮೊದಲಾದ ನೂತನ ವಿಚಾರವಾದಿಗಳ "ವೀರಶೈವ ನಿರ್ಣಯ ಪರಮಾವತಾರ"ದ ಅಭಿಪ್ರಾಯಗಳಿಗೆ ಪೂರ್ಣ ಹೊಂದಿಕೆಯಾಗದವುಗಳೆಂದು ವಿದ್ವಾಂಸರ ಅಭಿಪ್ರಾಯ".[೨೬] ಅಂದರೆ, ಶೈವಾಗಮ ತತ್ವ ಪ್ರಣೀತವಾದ ವಾತುಲ ತಂತ್ರಟೀಕೆ, ವೀರಮಾಹೇಶ್ವರಾಚಾರ ಸಾರೋದ್ಧಾರ ಟೀಕೆ, ಸಿದ್ಧಾಂತ ಶಿಖಾಮಣಿ ಟೀಕೆ, ಶಿವಯೋಗ ಪ್ರದೀಪಿಕೆ ಟೀಕೆ, ಶ್ರೀರುದ್ರಭಾಷ್ಯ ಟೀಕೆ, ಶಿವಾನೂಭವಸೂತ್ರ ಟೀಕೆ, ಪುರುಷಸೂಕ್ತ ಟೀಕೆ, ನಮಕ ಚಮಕ ಟೀಕು, ಕೈವಲ್ಯಸಾರ ಟೀಕೆ, ಯಜುರ್ವೇದ ಭಾಷ್ಯ ಟೀಕೆ, ವಿಶೇಷಾರ್ಥ ಪ್ರಕಾಶಿಕೆ ಟೀಕು ಮುಂತಾದವು ವಚನಕಾರರ ಚಿಂತನೆಗಳಿಗೆ ವಿರುದ್ಧವಾಗಿಯೇ ರಚನೆಯಾದಂತಿವೆ. ಹೀಗೆ, ತಾತ್ವಿಕ ಭಿನ್ನಾಭಿಪ್ರಾಯವುಳ್ಳ ಎರಡು ಸಂಪ್ರದಾಯಗಳು ಜನ್ಮತಾಳಿದರೂ ಬಸವಾದಿ ಶಿವಶರಣರ ವಚನ ತತ್ವಾಧಾರಿತ ಟೀಕಾ ಸಂಪ್ರದಾಯವು ಸರ್ವಜನ ಪ್ರಿಯವಾಗಿ ವ್ಯಾಪಕವಾಗಿ ಬೆಳೆದು ಹೆಮ್ಮರದಂತಾಗಿದೆ.

ಸು.೧೧೬೦ರಲ್ಲಿದ್ದ ಶಿವಲೆಂಕ ಮಂಚಣ್ಣ ವಚನಕಾರ. ಅಂಕಿತ ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗ. ಇವನ ಅಜ್ಜ ಸೋಮಶಂಭುದೇಶಿಕ; ತಂದೆ "ಕಾಮಿ ಕಾದ್ಯಖಿಳಶಿವ ಕಥಿತತಂತ್ರಾವಳಿಗೆ। ಪ್ರೇಮದಿಂ ವೃತ್ತಿ ದೀಪಿಕೆಗಳಂ ಚಿತ್ತರಿಸಿ। ಸೋಮಧರ ಸಮಯಮಂ ಧರಣಿಯೊಳ ನಿರ್ಮಿಸಿದ ಸಕಲಾಗಮಾಚಾರ್ಯ"[೨೭] ಎಂದು ಹೇಳಿರುವುದರಿಂದ ಟೀಕಾ ರಚನೆಯ ಸ್ಥಿತಿಯನ್ನು ಅರಿಯಬಹುದು. "ಕ್ರಿಶ. ೧೧೬೦ರಲ್ಲಿದ್ದ ಓಲೆಶಾಂತನು ಸಕೀಲಗಳ ಟಿಪ್ಪಣಿ ಎಂಬ ಗ್ರಂಥ ಬರೆದಿರುವುದು ತಿಳಿಯುತ್ತದೆ. ಈ ವಿಷಯವು ಕವಿಚರಿತೆಯ ಅನುಕ್ತ ಕೃತಿಸೂಚಿಯಿಂದ ತಿಳಿಯುತ್ತದೆ."[೨೮] ಹರಭಕ್ತ(ಸು.೧೨೫೦) ಅನೇಕಂಜನೂರಿನಲ್ಲಿ ಆಂಡಿಯಾಗಿದ್ದನೆಂದೂ ವೇದಭಾಷ್ಯಗಳನ್ನು ಬರೆದನೆಂದೂ ಚೆನ್ನಬಸವಪುರಾಣದ ಪದ್ಯದಿಂದ ತಿಳಿಯುತ್ತದೆ. – "ಹರಭಕ್ತನೆಂಬನೇ ಕಂಜನೂರಾಂಡಿಯಾ ಪರಮವೇದಂಗಳಿಗೆ ಭಾಷ್ಯಮಂ ಮಾಡಿ ತಾ। ...... ನಿರುತಲ್ಲಿ"[೨೯] ಎಂಬ ಉಲ್ಲೇಖವಿದೆ. ಗುರುದೇವ (ಸು.೧೩೫೦) ಮಹಿಮ್ನಾ ಸ್ತೋತ್ರ, ಮಲ್ಹಣಸ್ತೋತ್ರ, ಮಲೆಯ ರಾಜಸ್ತೋತ್ರ, ಅನಾಮಯಸ್ತೋತ್ರ, ಹಲಾಯುಧ ಸ್ತೋತ್ರ, ಭೃಂಗಿಸ್ತವ ಇವುಗಳಿಗೆ ಕನ್ನಡ ವ್ಯಾಖ್ಯಾನ ಬರೆದಿದ್ದಾನೆ. ಟೀಕೆಯ ಕೊನೆಯಲ್ಲಿ " –ಗುರುದೇವಾಖ್ಯೇನ ಕರ್ಣಾಟ ಭಾಷಾ ಕೃತಾ ಟೀಕಾ ಪರಿಸಮಾಪ್ತಾ"[೩೦] ಎಂದಿದೆ. "ನೀಲಕಂಠ ಶಿವಾಚಾರ್ಯ (ಸು.೧೪೦೦) ಬ್ರಹ್ಮಸೂತ್ರಕ್ಕೆ ವ್ಯಾಖ್ಯಾನರೂಪವಾದ ಕ್ರಿಯಾಸಾರವೆಂಬ ಸಂಸ್ಕೃತ ಟೀಕೆ ಬರೆದಿದ್ದಾನೆ. ಇವನು ಕನ್ನಡ ಗ್ರಂಥವನ್ನು ಬರೆದಿರುವಂತೆ ತಿಳಿಯುತ್ತದೆ"[೩೧] ಎನ್ನುತ್ತಾರೆ ಕವಿಚರಿತೆಕಾರರು.

ಕಲ್ಲುಮಠದ ಪ್ರಭುದೇವ (ಸು.೧೪೩೦) ಈತನು ಲಿಂಗಲೀಲಾ ವಿಲಾಸ ಚಾರಿತ್ರ್ಯದಂತಹ ವಚನ ವ್ಯಾಖ್ಯಾನ ಕೃತಿ ರಚಿಸಿದನು. ಅಲ್ಲದೇ ಪ್ರಭುದೇವರ ಮಂತ್ರಗೋಪ್ಯದ ಟೀಕೆಯನ್ನು ರಚಿಸಿದ್ದು, ಇದರಲ್ಲಿ ೨೭ ಪದ್ಯಗಳಿದ್ದು ಅವಕ್ಕೆ ವ್ಯಾಖ್ಯಾನವಿದೆ. ಇಲ್ಲಿ ವಿವರ ಟೀಕೆ, ನಂತರ ಸಂಕ್ಷೇಪದಲ್ಲಿ ತಾತ್ಪರ್ಯವನ್ನು ಬರೆದಿದ್ದಾನೆ. ಮಹಾಲಿಂಗದೇವ (ಸು.೧೪೩೦)ನ ಏಕೋತ್ತರ ಶತಸ್ಥಲ ಮತ್ತು ಪ್ರಭುದೇವರ ಷಟ್ಸ್ಥಲೋಪದೇಶ ಮತ್ತು ಪ್ರಭುದೇವರ ಟೀಕಿನ ವಚನಗಳು ಪ್ರಮುಖವಾಗಿವೆ. ಜಕ್ಕಣಾರ್ಯ(ಸು.೧೪೩೦)ನ ನೂರೊಂದು ಸ್ಥಲ ಸ್ವರವಚನ ಸಮೇತವಾಗಿ ಬರೆದ ವ್ಯಾಖ್ಯಾನ ಗ್ರಂಥವಾಗಿದೆ. ಶ್ರೀಗಿರೀಂದ್ರ (ಸು.೧೪೩೦)ನು ವಾರಣಾಸೀಂದ್ರನ ಉಪದೇಶದಿಂದ ಜಕ್ಕಣ್ಣನು ಬರೆದ ಏಕೋತ್ತರ ಶತಸ್ಥಲಕ್ಕೆ ವ್ಯಾಖ್ಯಾನ ಬರೆದಿರುವುದಾಗಿ ಹೇಳಿಕೊಂಡಿದ್ದಾನೆ. "ಇದೇ ಕಾಲದ ಮಗ್ಗೆಯ ಮಾಯಿದೇವನು 'ಪ್ರಭುಗೀತೆ'ಯನ್ನು ಬರೆದಿರುವುದು ವೀರಶೈವಾಮೃತ ಪುರಾಣದಿಂದ ತಿಳಿಯುತ್ತದೆ."[೩೨] ಪ್ರಾಯಶಃ ಪ್ರಭುದೇವರ ವಚನಗಳಿಗೆ ವೇದ, ಆಗಮ, ನಿಘಂಟು, ಸಮ್ಮತವಾಗಿ ವ್ಯಾಖ್ಯಾನವನ್ನು ಬರೆದಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಕರಸ್ಥಲದ ನಾಗಿದೇವ (ಸು.೧೪೩೦)ನ ನಾಗಿದೇವ ತ್ರಿವಿಧಿ ೩೧ ಪದ್ಯಗಳು ಗೂಢಾರ್ಥದಿಂದ ಕೂಡಿವೆ. ವೀರಶೈವ ಸಿದ್ಧಾಂತ ಬೋಧಿಸುವ ಇದಕ್ಕೆ ಪರ್ವತ ಶಿವಯೋಗಿ (ಸು.೧೬೫೦) ಕನ್ನಡದಲ್ಲಿ ವ್ಯಾಖ್ಯಾನ ಬರೆದಿರುವುದಾಗಿ ಕವಿಚರಿತೆಯಿಂದ ತಿಳಿಯುತ್ತದೆ.[೩೩] ಸಾಸಲ ಚಿಕ್ಕಣಾರಾಧ್ಯ (ಸು.೧೪೫೦) ಪಂಚಬ್ರಹ್ಮೋದಯ ಭಾಷ್ಯವನ್ನು ಬರೆದಿದ್ದಾನೆ. ೯ ಅಧ್ಯಾಯಗಳ ಗದ್ಯಗ್ರಂಥದಲ್ಲಿ ಅಥರ್ವಣ ವೇದಮಂತ್ರ ವ್ಯಾಖ್ಯೆಯೆಂದು ಹೇಳಿದೆ."[೩೪] ಗುಬ್ಬಿಯ ಮಲ್ಲಣಾರ್ಯ(ಸು.೧೪೭೫)ನು ಗಣಭಾಷ್ಯರತ್ನಮಾಲೆ, ವಾತುಲತಂತ್ರಟೀಕೆ ಗ್ರಂಥ ಬರೆದಿದ್ದಾನೆ. ವಾತುಲತಂತ್ರವು ಶೈವಾಗಮಕ್ಕೆ ಬರೆದ ಕನ್ನಡ ವ್ಯಾಖ್ಯಾನವಾಗಿದೆ. ಸ್ವತಂತ್ರ ಸಿದ್ಧಲಿಂಗೇಶ್ವರ (ಸು.೧೪೫೦)ನು ಬರೆದ ಮುಕ್ತ್ಯಾಂಗನೆಯ ಕಂಠಮಾಲೆ ವಚನ ರೂಪವಾಗಿದೆ. ಕನ್ನಡದಲ್ಲಿರುವ ಈ ವ್ಯಾಖ್ಯಾನದಲ್ಲಿ "ವಚನಂಗಳೊಳಗೆ ಅತ್ಯಂತ ಗೋಪ್ಯವಾದ ವಚನಂಗಳನೆ ತೆಗೆದು ಮುಮುಕ್ಷ ಜನಂಗಳ ಹೃದಯಾಂತರಾಳವನೆ ತೊಳಗಿ ಬೆಳಗಲೆಂದು ಕನ್ನಡಿಸಿ ಪೇಳ್ವೆ"[೩೫] ಎಂದಿದ್ದಾನೆ. ಗುಮ್ಮಳಾಪೂರದ ಸಿದ್ಧಲಿಂಗೇಶ್ವರ (ಸು.೧೪೮೦)ನು ಷಟ್‌ಸ್ಥಲದ ಲಿಂಗಾಂಗ ಸಂಬಂಧದ ನಿರ್ವಚನವನ್ನು ಬರೆದಿದ್ದಾನೆ. ಸಾನಂದ ಶಿವಯೋಗಿ(ಸು.೧೪೮೦)ಯು ವೀರಮಾಹೇಶ್ವರಾಚಾರ ಸಾರೋದ್ಧಾರಕ್ಕೆ ಟೀಕೆ ಬರೆದಿದ್ದಾನೆ. ಆನಂದ ಬಸವಲಿಂಗ ಶಿವಯೋಗಿಯು ಬರೆದ (ಸು.೧೫೦೦)ರು ಮಾಚಿದೇವ ಮನೋವಿಲಾಸ ಕೃತಿಯು ಗದ್ಯರೂಪವಾಗಿದೆ. ವೀರಶೈವ ಸಿದ್ಧಾಂತ ನಿರೂಪಣೆ ಇದ್ದು ಅನೇಕ ಸಂಸ್ಕೃತ ಶ್ಲೋಕಗಳನ್ನು ಉದಾಹರಿಸಿ ಅವುಗಳಿಗೆ ಟೀಕೆ ಬರೆದಿದ್ದಾನೆ.

"ನಿಜಗುಣ ಶಿವಯೋಗಿ (ಸು.೧೫೦೦)ಯ ವಿವೇಕ ಚಿಂತಾಮಣಿಯಲ್ಲಿ ಉತ್ತರ ಮೀಮಾಂಸೆಯ ವಿಚಾರವನ್ನು ಹೇಳುವಾಗ ೧೨೫೦ ರಲ್ಲಿದ್ದ ಅಮಲಾನಂದನಿಂದ ರಚಿತವಾದ ಕಲ್ಪತರುವೆಂಬ ವ್ಯಾಖ್ಯಾನದ ಹೆಸರನ್ನು"[೩೬] ಹೇಳುತ್ತಾನೆ. ಅಲ್ಲದೇ "ಚೆನ್ನಸದಾಶಿವಯೋಗಿಕೃತ ಶಿವಯೋಗ ಪ್ರದೀಪಿಕೆಗೆ "ಪರಮಾರ್ಥ ಪ್ರಕಾಶಿಕೆ" ಕನ್ನಡ ವ್ಯಾಖ್ಯಾನ ಬರೆದಿದ್ದಾನೆ. ಪರಿಚ್ಛೇದ ೫ರಲ್ಲಿ –"ಸಂಸ್ಕೃತ ಜ್ಞಾನವಿಲ್ಲದ

ಮೋಕ್ಷಾಪೇಕ್ಷಿಗಳಿಗೆ ಸುಲಭವಾಗಿ ತಿಳಿವಂತೆ ಈ ವ್ಯಾಖ್ಯಾನ"[೩೭] ಬರೆದುದಾಗಿ ಕವಿ ಹೇಳುತ್ತಾನೆ. ಎರಡನೆಯ ಚೆನ್ನಬಸವ (ಸು.೧೫೦೦) ಪದಮಂತ್ರಗೋಪ್ಯಕ್ಕೆ ವಿವರಣವನ್ನು ಬರೆದಿರುವಂತೆ ತೋರುತ್ತದೆ. ಇದೇ ಪದಮಂತ್ರಗೋಪ್ಯಕ್ಕೆ ಬೇರೆ ಒಂದು ಟೀಕೆಯಿದ್ದು, ಅದರ ಅಂತ್ಯದಲ್ಲಿ –"....... ಪರಮಾಮೃತ ವಾಕ್ಯಗಳಿಂದ ಪದವಿಟ್ಟು ನಿರೂಪಿಸಿದ ಮಂತ್ರಗೋಪ್ಯವೆಂಬ ಶಿವಶಾಸ್ತ್ರದಲ್ಲಿ ಸಂಪೂರ್ಣಮಾಗಿರ್ಪ ಶಿವಾನುಭಾವಾರ್ಥಂಗಳೊಳಗೆ ಆ ಸುಜ್ಞಾನ ಗುರು ಚೆನ್ನಬಸವಣ್ಣ ಕರುಣಿಸಿದಷ್ಟು ಅರ್ಥವನರಿದು ಎರಡನೆಯ ಚೆನ್ನಬಸವಣ್ಣನಾದ ಷಟ್ಸ್ಥಲಾನುಭಾವಜ್ಞರು ಪೇಳ್ದ ಪ್ರಸಾದ ವಾಕ್ಯಂಗಳ ಸಮ್ಮತಿಯಿಂದ ನಾನು ಬಲ್ಲಂತೆ ಕನ್ನಡಿಸಿದ ನುಡಿಯೊಳಗೆ"[೩೮] ಎಂದು ಹೇಳಲಾಗಿದೆ.

ಗುರುನಂಜನೆಂಬ ಪ್ರೌಢವ್ಯಾಖ್ಯಾನಕಾರ ಕ್ರಿ.ಶ. ೧೫೦೦ರಲ್ಲಿ ಮೂಗೂರಭಟ್ಟ ಭಾಸ್ಕರ ಕೃತವಾದ ಯಜುರ್ವೇದಭಾಷ್ಯಕ್ಕೆ ಕನ್ನಡ ಟೀಕೆ ಬರೆದಿದ್ದಾನೆ. ಈ ಕೃತಿಯ ಮತ್ತೊಂದು ಹೆಸರು ರಾಜಭಾಷ್ಯವೆಂದಿದೆ. ಇದೇ ಕಾಲದ ಚೆನ್ನವೀರನೆಂಬ ಪಂಡಿತನು "ಸಾರಸ್ವತ ವ್ಯಾಕರಣ ಟೀಕೆ ಇಲ್ಲವೇ ಶಬ್ದಮಣಿ ಟೀಕೆ, ಪುರುಷಸೂಕ್ತ ಟೀಕೆ, ನಮಕಚಮಕ ಟೀಕೆ ಮತ್ತು ವೀರಮಾಹೇಶ್ವರ ತಂತ್ರಟೀಕೆ ರಚಿಸಿದ್ದಾನೆ."[೩೯] ಸಂಪಾದನೆಯ ಗುರುಲಿಂಗದೇವನು (ಕ್ರಿ.ಶ.೧೫೦೦) ಶೀಲವಂತಯ್ಯನ ತ್ರಿವಿಧಿಯ ಟೀಕೆಯನ್ನು ಬರೆದಿದ್ದಾನೆ. ಉಜ್ಜನೀಶನು (ಕ್ರಿ.ಶ.೧೫೫೦) ವೀರಶೈವ ಸಿದ್ಧಾಂತಶಿಖಾಮಣಿಗೂ, ಮಾಯಿದೇವರ ವಿಶೇಷಾರ್ಥ ಪ್ರಕಾಶಿಕೆಗೂ ಟೀಕು ರಚಿಸಿದ್ದಾನೆ. ಕ್ರಿ.ಶ.೧೫೫೦ರಲ್ಲಿದ್ದ ಶ್ರೀಧರಾಂಕನೆಂಬುವವನು ನೀಲಕಂಠನಾಗನಾಥಾಚಾರ್ಯನ ವೀರಮಹೇಶ್ವರಾಚಾರ ಸಂಗ್ರಹಕ್ಕೆ ಟೀಕೆ ಬರೆದಿದ್ದು ತನ್ನ ಟೀಕು ಕುರಿತು ತಾನೇ ಬಣ್ಣಿಸಿಕೊಂಡ ಪದ್ಯ ಹೀಗಿದೆ.

> "ಇದು ಶಿವಭಕ್ತಜಾತಕಚಯಕ್ಕೆ ಮಹಾಬ್ರ ಶಿವೈಕ್ಯ ಚಂದ್ರಕಾಂ ।
> ತದ ನಿವಹಕ್ಕೆ ಚಂದ್ರಿಕೆ ಮನೋಹರ ಭಾಕ್ತಿಕ ಪದ್ಮವೃಂದ ಸಂ ॥
> ಪದಕೆ ಖರಾಂಶು ಸಜ್ಜನ ಸುಚಿತ್ತವನಕ್ಕೆ ವಸಂತ ನಾಡೆ ಸೊಂ ।
> ಪೊದವಿದ ವೀರಶೈವ ಘನತಂತ್ರದ ದೀಪಿಕೆ ಭೂತಳಾಗ್ರದೊಳ್॥"[೪೦]

ಎಂದಿದ್ದಾನೆ. ಹಾಗೂ ಷಟ್ಸ್ಥಲ ಬ್ರಹ್ಮವಾದಿ ವೀರಶೈವಾಗಮ ಸುಧಾರ್ಣವ ಪೂರ್ಣಚಂದ್ರ ಕರ್ಣಾಟದೇಶ ಜನಾ ಜ್ಞಾನನಿರ್ಹರಣಾರಾಧ್ಯವರ್ಯ ಗೊರಕೋಡ ಪುರವರಾಧೀಶ್ವರ ಬೊಪ್ಪಣ್ಣದೇಶಿಕೇಂದ್ರ ತನುಭವನಾದ ಮಲ್ಲಿಕಾರ್ಜುನಾಚಾರ್ಯನ ಆಜ್ಞಾನುಸಾರವಾಗಿ ವ್ಯಾಖ್ಯಾನ ಮಾಡಿದ್ದಾಗಿ ಹೇಳುತ್ತಾನೆ. ಗುರುಲಿಂಗವಿಭುವಿನ (ಸು.೧೫೫೦) ಭಿಕ್ಷಾಟನ ಚರಿತೆಗೆ ಕನ್ನಡ ವ್ಯಾಖ್ಯಾನವಿರುವುದನ್ನು ಕವಿ ಚರಿತೆಕಾರರು ಉಲ್ಲೇಖಿಸುತ್ತಾರೆ.[೪೧] ಆ ವ್ಯಾಖ್ಯಾನದ ಕರ್ತೃ ಇಲ್ಲವೇ ಆತನ ಆಶ್ರಿತ ಚಿಕ್ಕವೀರಭದ್ರಯ್ಯ ನಿರಬೇಕೆಂದು ಈ ಪದ್ಯದಿಂದ ತಿಳಿಯುತ್ತದೆ. "ಭೂಮೀಶ್ವರನಾದ ಸತ್ಯಭಾಷಾ ಭೂಷಣನಾದ, ಪ್ರತಾಪರಂಜಿತನಾದ ಭೂಲೋಕದೇವೆಂದ್ರ ಬಲ್ಲಾಳ ಪುರವರಾಧೀಶ್ವರ ಬೈರವ ಭೂಪಾಲನ ಬುಜಾದಂಡ ಶಿವಭಕ್ತಿ ವಾರ್ಧಿವರ್ಧನ ಪೂರ್ಣಚಂದ್ರ ಸೇನಾಧಿನಾಥ ಚಿಕ್ಕವೀರಭದ್ರಯ್ಯನೇಳಿಸಿದ ಭಿಕ್ಷಾಟನಾ

ಚರಿತೆಯ ವ್ಯಾಖ್ಯಾನ" ಎಂದಿರುವುದರಿಂದ ಈತ ಬಲ್ಲಾಳ ಭೈರವಭೂಪಾಲನ ಸೇನಾಧಿಪತಿ ಚಿಕ್ಕವೀರಭದ್ರಯ್ಯನಾಗಿರಬೇಕು ಎನಿಸುತ್ತದೆ.

ವಿರಕ್ತ ತೋಂಟದಾರ್ಯ (ಸು.೧೫೬೦)ನ ಸಿದ್ಧೇಶ್ವರ ಪುರಾಣ, ಪಾಲ್ಕುರಿಕೆ ಸೋಮೇಶ್ವರ ಪುರಾಣ, ಕರ್ಣಾಟಕ ಶಬ್ಧ ಮಂಜರಿ, ಕಾವ್ಯ ನಿಘಂಟುಗಳ ಜೊತೆಗೆ ಮಗ್ಗೆಮಾಯಿದೇವನ ಶತಕತ್ರಯ ಟೀಕೆ ಗ್ರಂಥ ಬರೆದಿದ್ದಾನೆ. ಇದರಲ್ಲಿ ನಿತ್ಯಮುಕ್ತರಾಗಲೆಂದು ಶಬ್ದಾರ್ಥಂಗಳನೆಲ್ಲರರಿವಂತೆ ಕನ್ನಡಿಸಿ ವ್ಯಾಖ್ಯಾನಮಂ ಮಾಡಿದಪೆಂ"[೪೨] ಎನ್ನುತ್ತಾನೆ. ಮನೋವಿಜಯ ತಾತ್ಪರ್ಯವೆಂಬ ಗುರುಬಸವನ (ಸು.೧೪೩೦) ಕಾವ್ಯಕ್ಕೆ ವ್ಯಾಖ್ಯಾನ ಬರೆದಿದ್ದಾನೆ. ಇದಕ್ಕೆ ಚಂದ್ರಿಕೆ ಎಂದು ಹೆಸರು. ಮೊಗ್ಗೆಯ ಮಾಯಿದೇವರ ಶಿವಾಧವಾ, ಶಿವವಲ್ಲಭಾ ಹಾಗೂ ಮಹದೈಪುರೀಶ್ವರ ಶತಕಗಳಿಗೆ ಶತಕತ್ರಯಟೀಕು, ವೀರಶೈವಾಚಾರ ನಿರೂಪಣೆಯನ್ನು ೧೦ ಪರಿಚ್ಛೇದಗಳಲ್ಲಿ ತಿಳಿಸುವ ಶೈವಸಂಜೀವಿನಿ ಶ್ಲೋಕ ಟೀಕು ಕೃತಿಗಳು ಈತನಿಂದ ರಚನೆಯಾಗಿವೆ. ಚೆನ್ನಮಲ್ಲಿಕಾರ್ಜುನ (ಸು.೧೫೬೦)ನು ಶಿವಮಹಿಮಾಶತಕ ಕಾವ್ಯ ಬರೆದಿರುವ ಇವನು ಶೀಲವಂತಯ್ಯ(ಸು.೧೧೬೦)ನಿಂದ ರಚಿತವಾದ ಗುರುಸ್ತೋತ್ರಕ್ಕೆ ಟೀಕೆಯನ್ನು ಬರೆದಿದ್ದಾನೆ. ಚೆನ್ನರಾಜ(೧೫೭೦)ನು ವೈದ್ಯಸಾರಸಂಗ್ರಹದ ಪ್ರಕರಣ ೧೭ ಸಂಸ್ಕೃತ ಶ್ಲೋಕಗಳನ್ನು ಉದಾಹರಿಸಿ ಅವುಗಳಿಗೆ ಟೀಕೆಯನ್ನು ಬರೆದಿದ್ದಾನೆ. ಮಲ್ಲಿಕಾರ್ಜುನ ಕವಿ(ಸು.೧೫೯೩)ಯು ಶಂಕರ ಕವಿಕೃತ ಬಸವ ಪುರಾಣ (ಸಂಸ್ಕೃತ), ಗುರುರಾಜಕೃತ ಪಂಡಿತಾರಾಧ್ಯ ಚಾರಿತ್ರ್ಯ (ಸಂಸ್ಕೃತ) ಮಗ್ಗೆಮಾಯಿದೇವನ ಶತಕತ್ರಯ ಇವಕ್ಕೆ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾನೆ. ವರತೆ ಸೋಮಣ್ಣ (ಸು.೧೬೦೦)ನ ಪಂಚೀಕರಣದ ಕೃತಿ ಷಟ್ಪದಿಯಲ್ಲಿದೆ. ಪಂಚಭೂತಗಳ ಸೇರುವೆಯನ್ನು ನಿರೂಪಿಸುವ ಇದಕ್ಕೆ ಕನ್ನಡ ವ್ಯಾಖ್ಯಾನವಿದೆ. ವೀರಭದ್ರರಾಜನು (ಸು.೧೬೦೦) ಪಾಲಕಾಪ್ಯಕೃತ ಹಸ್ತಾಯುರ್ವೇದಕ್ಕೆ ಕನ್ನಡ ಟೀಕೆ ಬರೆದಿದ್ದಾನೆ. ಪ್ರತಿ ಅಸಮಗ್ರವಾಗಿದೆ. ತತ್ವಪ್ರಕಾಶಿಕ ಸಂಸ್ಕೃತ ಮೂಲ ಹಾಗೂ ವ್ಯಾಖ್ಯಾನಗಳು ಬೋಜ ಮತ್ತು ಅಘೋರ ಶಿವಾಚಾರ್ಯರಿಂದ ರಚನೆಯಾಗಿದ್ದು ಅದಕ್ಕೆ ಕ್ರಿ.ಶ.೧೬೦೦ರಲ್ಲಿ ವೀರಪರ್ವತೇಶ ಕನ್ನಡ ಟೀಕು ಬರೆದಿದ್ದಾನೆ. ೭೫ ಶ್ಲೋಕಗಳ ಪಾಶುಪತ ಸಿದ್ಧಾಂತ ನಿರೂಪಣೆ ಈ ವ್ಯಾಖ್ಯಾನದ ವಸ್ತು. ಈತನಿಂದ "ಶತರತ್ನವ್ಯಾಖ್ಯಾನ ಹಾಗೂ ದೇವಿಕಾಲೋಕ್ತರಾಗಮದ ಜ್ಞಾನಾಚಾರಬೋಧಕ ಪಟಲಗಳಿಗೆ ಕನ್ನಡ ಟೀಕುಗಳು ಸೃಷ್ಟಿಯಾಗಿವೆ"[೪೩].

ಕ್ರಿ.ಶ. ೧೬೭೩ರಲ್ಲಿಯ ಸೋಸಲೆ ರೇವಣಾಚಾರ್ಯರು ಮಹಿಮ್ನಾಸ್ತವ, ವೀರಶೈವ ಸಿದ್ಧಾಂತ ಶಿಖಾಮಣಿ, ಸದ್ಗುರುರಗಳೆ, ಅಕ್ಷರಮಾಲಿಕಾಗದ್ಯ, ಉದಾಹರಣಗದ್ಯ, ನಮಸ್ಕಾರಗದ್ಯ, ಪಂಚಪ್ರಕಾರದ ಗದ್ಯ, ಶರಣು ಬಸವರಗಳೆ, ಶಿವಾಧಿಕ್ಯಶಿಖಾಮಣಿ, ಪರಮಾತ್ಮ ಪ್ರಕಾಶಿಕೆ, ಶ್ರಿರುದ್ರಗಳಿಗೆ ಕನ್ನಡ ವ್ಯಾಖ್ಯಾನ ಬರೆದಿದ್ದಾನೆ. ಈತನು ಒಂದೊಂದು ವ್ಯಾಖ್ಯಾನ ಕೃತಿಯನ್ನು ತನ್ನ ಆಪ್ತವಲಯದ ಅರಸ, ಯೋಗಿ ಮುಂತಾದವರ ಅಪೇಕ್ಷೆಯ ಮೇರೆಗೆ ಬರೆದೆನೆಂದು ಹೇಳಿಕೊಂಡಿದ್ದಾನೆ. ಪ್ರಾಯಶಃ ಚೋಳರೇಣುಕಾಚಾರ್ಯನೆನಿಸಿದವನು ಸೋಸಲೆ ರೇವಣಾಚಾರ್ಯನಾಗಿರಬೇಕು. ಆತನ ಶಿವಾಧಿಕ್ಯಶಿಖಾಮಣಿಗೆ ಸಿದ್ಧನಂಜಯತಿ (ಸು.೧೬೭೩)ಯು ಕನ್ನಡ ಟೀಕೆ ಬರೆದಿದ್ದಾನೆ. ಕಳಿಲೆ

ಕೆಂಪನಂಜಾರ್ಯನ ಪ್ರಾರ್ಥನಾನುಸಾರವಾಗಿ ಈ ಟೀಕೆ ಬರೆದಂತೆ ಹೇಳುತ್ತಾನೆ. ಇವನ ಟೀಕೆಗೆ ವೀರಭದ್ರಿಯ ಎಂದು ಹೆಸರು.

ಶಾಂತಮಲ್ಲನು (ಕ್ರಿ.ಶ.೧೬೫೦) ತ್ರಿಭುವನತಾತ ಬರೆದ ಗುರುರಗಳೆಗೆ ಟೀಕೆ ಬರೆದಿದ್ದಾನೆ. ನಿರ್ವಾಣಮಂತ್ರಿ ಕ್ರಿಯಾಸಾರಕ್ಕೆ ವ್ಯಾಖ್ಯಾನ ರಚಿಸಿದ್ದಾನೆ. ಈತನು ತೋಂಟದ ಸಿದ್ಧಲಿಂಗರ ಸಂಪ್ರದಾಯದವನೆಂದು ತಿಳಿಯುತ್ತದೆ. ಇದೇ ಕಾಲದ ವೀರಣಾರಾಧ್ಯರು ದಶಗ್ರಂಥಕ್ಕೆ ಕನ್ನಡ ವ್ಯಾಖ್ಯಾನ ಬರೆದಿದ್ದಾನೆ. ಇದಕ್ಕೆ ಶಿವಜ್ಞಾನಪ್ರದೀಪಿಕೆ ಹೆಸರಿನ ಟೀಕು ರಚಿಸಲಾಗಿದೆ.

ಪರ್ವತಶಿವಯೋಗಿಯು (ಸು.೧೬೫೦) ಈ ಕಾಲದ ಪ್ರಮುಖ ಟೀಕಾಕಾರ. ಮುರುಗೆ ಶಾಂತವೀರನ (ಸು.೧೫೩೦) ಪ್ರಭುಲಿಂಗ ಕಂದ ಗ್ರಂಥಕ್ಕೆ, ಬಸವೇಶ್ವರನ ವಚನಾರ್ಥಸಾರ, ಕರಸ್ಥಲ ನಾಗಲಿಂಗನ ತ್ರಿವಿಧಿ, ಗುರುಸ್ತೋತ್ರ ತ್ರಿಪದಿ, ಚನ್ನಬಸವಣ್ಣನವರ ಮಿಶ್ರಾರ್ಪಣ ಮತ್ತು ಕರಣಹಸುಗೆ ಕೃತಿಗಳಿಗೆ ವ್ಯಾಖ್ಯಾನ ರಚಿಸಿದ್ದಾನೆ. ಇದೇ ಕಾಲದ ಅನ್ನದಾನಿ ಮಲ್ಲಿಕಾರ್ಜುನಾಚಾರ್ಯನು ತಾತ್ಪರ್ಯ ಸಂಗ್ರಹ ಟೀಕೆ ಬರೆದಿದ್ದಾನೆ. ಸಂಪಾದನೆಯ ಗುರುಲಿಂಗದೇವನು (ಕ್ರಿ.ಶ.೧೬೭೦) ಶಿಲವಂತಯ್ಯನ ತ್ರಿವಿಧಿಗೆ ಟೀಕು ಬರೆದಿದ್ದಾನೆ. "ವಿಶೇಷವೆಂದರೆ ಗುರುಲಿಂಗದೇವರ ಗುರುಪರಂಪರೆಯನ್ನು ಗಮನಿಸಿದರೆ ೧೭ನೆಯ ಶತಮಾನದ ಕನ್ನಡ ಸಾಹಿತ್ಯ ಸಂಪಾದನಾ ಹಾಗೂ ಟೀಕಾ ಪರಂಪರೆಯೇ ಅವತರಿಸಿದಂತೆ ಭಾಸವಾಗುತ್ತದೆ"[೪೪] ಎಂದು ಡಾ. ಕೆ. ರವೀಂದ್ರನಾಥರು ಸರಿಯಾಗಿ ಗುರುತಿಸಿದ್ದಾರೆ.

ಸೋಮಶೇಖರ ಶಿವಯೋಗಿಯು (ಕ್ರಿ.ಶ.೧೭೦೦) ಬಸವೇಶ್ವರ ಷಟ್‌ಸ್ಥಲದ ವಚನದ ಟೀಕು ಹಾಗೂ ತೋಂಟದ ಸಿದ್ಧಲಿಂಗಯತಿಯ ಷಟ್‌ಸ್ಥಲಜ್ಞಾನಸಾರಾಮೃತದ ವಚನ ಟೀಕು ಬರೆದಿದ್ದಾನೆ. ಇದೇ ಕಾಲದ ಪಟ್ಟುಗಂಬಳಿ ಸಿದ್ಧಲಿಂಗಸ್ವಾಮಿಯು ಗುಬ್ಬಿಯ ಮಲ್ಲಣಾರ್ಯರ ಭಾವಚಿಂತಾರತ್ನಕ್ಕೆ ಕನ್ನಡ ಟೀಕೆ ಬರೆದಿದ್ದಾನೆ. ಶಾಂತಾಚಾರ್ಯರ ಪ್ರಸಾದ ಚಿಂತಾಮಣಿ ಟೀಕೆ, ಬಸವಾರಾಧ್ಯಕವಿಯ ಚೆನ್ನಸದಾಶಿವಯೋಗಿಕೃತ ಶಿವಯೋಗ ಪ್ರದೀಪಿಕಾ ಟೀಕು ಈ ಕಾಲದ ರಚನೆಗಳಾಗಿವೆ.

ನಿಟ್ಟೂರನಂಜಯ್ಯನವರು (ಕ್ರಿ.ಶ.೧೭೨೫) ಕೇಶಿರಾಜನ ಶಬ್ದಮಣಿ ದರ್ಪಣಕ್ಕೆ ಟೀಕು ಬರೆದಿದ್ದಾರೆ. ಕವಿಚರಿತೆಕಾರರು ಹೇಳುವಂತೆ– "ನಂಜಯ್ಯನಿಗಿಂತ ಮೊದಲು ಶಬ್ಧಮಣಿದರ್ಪಣಕ್ಕೆ ವ್ಯಾಖ್ಯಾನ ಬರೆದಿದ್ದಾನೆ. ಒಬ್ಬನು ಲಿಂಗಣಾರಾಧ್ಯ. ಇವನ ವ್ಯಾಖ್ಯಾನಕ್ಕೆ 'ಸೂತ್ರಾನ್ವಯ ರತ್ನಮಾಲೆ' ಎಂದು ಹೆಸರಿದೆ. ಈ ಕೃತಿಯು ಮದ್ರಾಸಿನ ಪ್ರಾಚ್ಯಲಿಖಿತ ಕೋಶಾಗಾರದಲ್ಲಿದೆ"[೪೫] ಎಂದು ತಿಳಿದುಬರುತ್ತದೆ. ಅದರಲ್ಲಿಯ ಗದ್ಯದ ಉಲ್ಲೇಖದಲ್ಲಿ ೫೯ನೆಯ ಸೂತ್ರಕ್ಕೆ ವ್ಯಾಖ್ಯಾನ ಬರೆದ ಲಿಂಗಣಾರಾಧ್ಯರು "......ಸರೇಫಮಿದಿರಾಗೆ ದೋಷಂ ಎಂದು ತಾಂ ಮಾಡಿದ ಶಬ್ದಮಣಿದರ್ಪಣ ವ್ಯಾಖ್ಯಾನದೊಳ್ ಬರೆದಂ....." ಎಂದು ಉಲ್ಲೇಖಿಸಿರುವುದರಿಂದ ತನ್ನ ಪೂರ್ವದಲ್ಲಿ ಅಂದರೆ ಕ್ರಿ.ಶ.೧೫೦೦ಕ್ಕೂ ಹಿಂದೆ ಈ ಕೃತಿಗೆ ಇನ್ನೊಬ್ಬ ವ್ಯಾಖ್ಯಾನಕಾರನು ಟೀಕು ಬರೆದಿರಬೇಕೆಂದು ಕವಿಚರಿತೆಕಾರರು ಅಭಿಪ್ರಾಯ ಪಡುತ್ತಾರೆ.

ಕಳಲೆನಂಜರಾಜನು(ಕ್ರಿ.ಶ.೧೭೪೦) ಮೈಸೂರು ಅರಸರ ದಳವಾಯಿ ದೊಡ್ಡಯ್ಯನವರ ಮೊಮ್ಮಗ. ಕಳಲೆ ವೀರರಾಜಯ್ಯನವರ ಪುತ್ರ. ಈತನು ಸ್ಕಂದ ಪುರಾಣೋಕ್ತವಾದ ಭದ್ರಗಿರಿ ಮಹಾತ್ಮ್ಯದ ಟೀಕೆ, ಸೇತುಮಹಾತ್ಮ್ಯದ ಟೀಕೆ, ಶಿವಧರ್ಮೋತ್ತರದ ಟೀಕೆ, ವೀಘ್ನೇಶ್ವರ ವ್ರತಕಲ್ಪ ಟೀಕೆಗಳನ್ನು ಬರೆದಿರುವುದರಿಂದ ಈತನೊಬ್ಬ ವ್ಯಾಖ್ಯಾನಕಾರನಾಗಿದ್ದನೆಂಬುದು ಇಲ್ಲಿಯ ಟೀಕುಗಳಿಂದ ತಿಳಿದು ಬರುತ್ತದೆ. ವೀರಶೈವಸುಧಾನಿಧಿ ಎಂಬ ಗುರುಬಸವ ದೇಶಿಕೇಂದ್ರರಿಂದ ರಚಿತವಾದ ಕೃತಿಗೆ (ಕ್ರಿ.ಶ.೧೭೫೦)ರಲ್ಲಿ ಸಂಗನಬಸವಪ್ಪನು ವೀರಶೈವಸುಧಾನಿಧಿ ಟೀಕೆ ಬರೆದಿದ್ದಾನೆ. ಇದೇ ಕಾಲದ ಉದ್ದಾನಸಿದ್ಧಲಿಂಗದೇವನು ನಿಟ್ಟೂರು ನಂಜಯ್ಯ ವಿರಚಿತ ವೀರಶೈವ ಚಿಂತಾಮಣಿ ಕೃತಿಗೆ ವೀರಶೈವಚಿಂತಾಮಣಿ ಟೀಕೆಯನ್ನು ಕನ್ನಡದಲ್ಲಿ ಬರೆದಿದ್ದಾನೆ.

ದೇವಲಾಪುರದ ನಂಜುಂಡ (ಸು.೧೮೪೧)ನು ಕೃಷ್ಣರಾಜೇಂದ್ರ ವೃತ್ತ ರತ್ನಾವಳೀ ಟೀಕೆ ಬರೆದಿದ್ದಾರೆ. ವೀರೇಶ್ವರ ಶಾಸ್ತ್ರೀಯು (ಸು.೧೮೬೦) ಸ್ವಕೃತ ವೀರಶೈವಾನ್ವಯ ಚಂದ್ರಿಕೆಗೆ ಕನ್ನಡ ಟೀಕೆ ಬರೆದಿದ್ದಾರೆ. ಗಂಗಾಧರ ಮಡಿವಾಳೇಶ್ವರ (ಸು.೧೮೭೦)ರು ರಾಜಶೇಖರ ವಿಳಾಸ ಟೀಕೆ, ಕೈವಲ್ಯ ಪದ್ಧತಿ ಟೀಕು ಬರೆದಿದ್ದಾರೆ. ಶಾಂತವೀರರಾಜದೇವ ಕಿತ್ತೂರರು (ಕ್ರಿ.ಶ.೧೮೮೦) ರಾಜಶೇಖರ ವಿಳಾಸ ಟೀಕು, ಎನ್ ಆರ್ ಕರಿಬಸವಶಾಸ್ತ್ರೀಗಳು ಸಿದ್ಧಾಂತ ಶಿಖಾಮಣಿ ತಾತ್ಪರ್ಯ ದೀಪಿಕೆ 'ಭಾವಮಂಜರಿ' ವ್ಯಾಖ್ಯಾನ ಬರೆದಿದ್ದಾರೆ. 'ಭಾವಮಂಜರಿ'ಯ ಮೊದಲ ಭಾಗ ೧೯೦೮ರಲ್ಲಿ, ಎರಡನೇ ಭಾಗ ೧೯೨೧ ರಲ್ಲಿ ಪ್ರಕಟವಾದವು. ವ್ಯಾಕರಣದ ಬಿ. ಮಲ್ಲಪ್ಪನವರು ಕಾವ್ಯಾವಲೋಕನದ ಟೀಕು, ಶಿವಪ್ಪಶಾಸ್ತ್ರೀಗಳು ವೀರಶೈವಾಮೃತ ಪುರಾಣ ಹಾಗೂ ಮನೋವಿಜಯ ಕೃತಿಗಳಿಗೆ ಟೀಕು ಬರೆದಿದ್ದಾರೆ. ದಕ್ಷಿಣಾಮೂರ್ತಿಶಾಸ್ತ್ರೀಗಳು ರಾಜಶೇಖರ ವಿಳಾಸ ಹಾಗೂ ಶಂಕರ ವಿಜಯಗಳಿಗೆ ಟೀಕು ಬರೆದಿದ್ದಾರೆ. ಪಟ್ಟದ ಸಿದ್ಧಲಿಂಗಸ್ವಾಮಿಗಳು ಅಭಿಧಾನ ವಸ್ತುಕೋಶಕ್ಕೆ ಟೀಕು ಬರೆದಿರಬೇಕೆಂದು ಎಂ.ಎಸ್. ಬಸವಲಿಂಗಯ್ಯ ಅಭಿಪ್ರಾಯಪಡುತ್ತಾರೆ. ಮೊಗ್ಗೆಮಾಯಿದೇವರ ಶತಕತ್ರಯಗಳಿಗೆ ವೈ. ವಿರುಪಾಕ್ಷಯ್ಯನವರು ಮತ್ತು ಸದ್ಧರ್ಮದೀಪಿಕೆಯ ಸಂಪಾದಕರಾದ ಮಲ್ಲಿಕಾರ್ಜುನ ಮಾಸ್ತರರು ಟೀಕು ಬರೆದರೆ, ವೈ ನಾಗೇಶಶಾಸ್ತ್ರಿಗಳು ಈತನ ಶಿವಾನುಭವ ಸೂತ್ರಕ್ಕೆ ಭಾವಾರ್ಥಬೋಧಿನಿ ಎಂಬ ಕನ್ನಡ ವ್ಯಾಖ್ಯಾನ ರಚಿಸಿದ್ದಾರೆ.

ಕವಿ ಷಡಕ್ಷರಿಯ ಶಿವಸ್ತವನಮಂಜರಿಯ ೧೦೧ ವೃತ್ತಗಳಿಗೆ ಡಾವಣಗೇರಿಯ ಲಿಂ.ನಿಶಾನಿಮಠದ ಶಾಂತವೀರಾರ್ಯರು (೧೯೨೪) ಕನ್ನಡ ಟೀಕು ಬರೆಸಿ ಪ್ರಕಟಿಸಿದ್ದಾರೆ. ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು ೧೮೮೦ ಸಂಸ್ಕೃತದಲ್ಲಿ ಬರೆದ 'ಸಂಸ್ಕೃತಸ್ತವನ ಮಂಜರಿ' (ಸಟೀಕಾ)ಯಲ್ಲಿಯ ನಾಲ್ಕು ಸ್ತೋತ್ರಗಳಿಗೆ ಎಂ.ಜಿ. ನಂಜುಂಡಾರಾಧ್ಯರ ಕನ್ನಡ ಟೀಕೆ ಇದೆ. ಷಡಕ್ಷರದೇವನ ಬಸವರಾಜಸ್ತವಕ್ಕೆ ಶಿವಯೋಗ ಮಂದಿರದಲ್ಲಿದ್ದ ಸದಾಶಿವ ಶಿವಾಚಾರ್ಯ ಪಟ್ಟಾಧ್ಯಕ್ಷರು (೧೯೩೧) ಕನ್ನಡ ಟೀಕೆ ಬರೆದಿದ್ದಾರೆ. ಮೈಸೂರು ಹೊಸಮಠದ ಬಸವಲಿಂಗಸ್ವಾಮಿಗಳು 'ಶಿವಸ್ತವಶಿರೋಮಣಿ' ಎಂಬ ವೇದಾಂತ ಸಮ್ಮತವಾಗಿರುವ ೫೫ ಶ್ಲೋಕಗಳಿಗೆ ಕನ್ನಡ ಟೀಕೆ ಬರೆದಿದ್ದಾರೆ. ಬೋಜದೇವಕೃತ 'ತತ್ವಪ್ರಕಾಶಕ್ಕೆ'

ಸಂಸ್ಕೃತದಲ್ಲಿ ಅಘೋರಶಿವಾಚಾರ್ಯ ಮತ್ತು ಕುಮಾರ ಎಂಬವರು ಬರೆದ ವ್ಯಾಖ್ಯಾನಗಳಿವೆ. ಇದಕ್ಕೆ ಕನ್ನಡದಲ್ಲಿ ಪರ್ವತೇಶ್ವರ ಎಂಬವರು ಟೀಕೆ ಬರೆದಿದ್ದಾರೆ. ಲಿಂ. ಎನ್.ಆರ್. ಕರಿಬಸವಶಾಸ್ತ್ರಿಗಳು ಇದನ್ನು ಸಂಪಾದಿಸಿ ತಮ್ಮ ವೀರಶೈವ ಗ್ರಂಥ ಪ್ರಕಾಶಿಕೆಯಲ್ಲಿ (೧೯೦೮) ಪ್ರಕಟಿಸಿದ್ದಾರೆ. ಮೇಲ್ಕಂಡ ಎಲ್ಲ ವ್ಯಾಖ್ಯಾನಗಳನ್ನು ಅಧಿಕರಿಸಿ ಎಂ.ಜಿ. ನಂಜುಂಡಾರಾಧ್ಯರು 'ಶೈವದರ್ಶನ ಇತಿಹಾಸ' ಎಂಬ ಪೀಠಿಕೆ ಬರೆದು ಪ್ರಕಟಿಸಿದ್ದಾರೆ. (೧೯೭೪) ಮೂಲದಲ್ಲಿಯ ಕಾರಿಕೆಗಳಿಗೆ ಸರಳ ಕನ್ನಡದಲ್ಲಿ ವ್ಯಾಖ್ಯಾನ ಬರೆಯಲಾಗಿದೆ. ಅಲ್ಲದೇ, ಸರ್ಪಭೂಷಣ ಶಿವಯೋಗಿ ವಿರಚಿತ 'ಜ್ಞಾನಶತಕ'ವು ಅದ್ವೈತಪರವಾಗಿದೆ. ಇದಕ್ಕೆ ಶಂಕರಾನಂದ ಸ್ವಾಮಿಗಳು 'ಸುಬೋಧ' ಹೆಸರಿನಲ್ಲಿ ಕನ್ನಡ ವ್ಯಾಖ್ಯೆ (೧೯೫೭)ಯನ್ನು ಬರೆದಿದ್ದಾರೆ.

ಹೀಗೆ ಲಿಂಗಾಯತ ಟೀಕಾ ಸಾಹಿತ್ಯವು ವಚನಸಾಹಿತ್ಯ ರಚನೆಯ ಸಮಕಾಲೀನ ಕಾಲಘಟ್ಟದಿಂದ ಆರಂಭವಾಗಿ ಬೆಳೆದು ಬಂದಿದೆ. ಈಗಾಗಲೇ ಹೇಳಿರುವಂತೆ, ಬಸವಾದಿ ಶರಣರ ವಚನಗಳನ್ನು ಷಟ್‌ಸ್ಥಲ ಇಲ್ಲವೇ ಏಕೋತ್ತರ ಶತಸ್ಥಲ ಮಾದರಿಯಲ್ಲಿ ಸಂಪಾದಿಸಿ, ಜೀವ–ಜಗತ್ತು–ಈಶ್ವರರ ಬಗೆಗೆ ತರ್ಕಬದ್ಧ ತಾತ್ವಿಕ ಆಲೋಚನೆಗೈದು ಅವುಗಳಿಗೆ ವ್ಯಾಖ್ಯಾನ ಬರೆದರು. ಈ ರೀತಿಯ ವ್ಯಾಖ್ಯಾನ ಪರಂಪರೆಯು ವಿಜಯನಗರದ ಪ್ರೌಢದೇವರಾಯನ ಕಾಲದ ನೂರೊಂದು ವಿರಕ್ತರು ಮತ್ತು ಎಡೆಯೂರು ತೋಂಟದಾರ್ಯರ ಕಾಲದ ಏಳುನೂರೊಂದು ವಿರಕ್ತರು ಹಾಗೂ ಇನ್ನಿತರ ವಿದ್ವಾಂಸರಿಂದ ಹುಲುಸಾಗಿ ಬೆಳೆದು ಬಂದಿತು. "ವೀರಶೈವ ವಿರಕ್ತ ಸಂಪ್ರದಾಯದಲ್ಲಿ ಇಂದಿಗೂ ಅವರ ಸಿದ್ಧಾಂತಗ್ರಂಥಗಳೆಂದರೆ ಚೆನ್ನಬಸವಣ್ಣನವರ ಕರಣಹಸುಗೆ, ಮಿಶ್ರಾರ್ಪಣ, ಮಂತ್ರಗೋಪ್ಯ, ಶೂನ್ಯಸಂಪಾದನೆಗಳೇ ವಿನಃ ಬೇರೆ ಅಲ್ಲ. ವಿರಕ್ತಾಶ್ರಮವನ್ನು ನೂತನ ವಟುವಿಗೆ ಕೊಡುವಾಗ ಈ ಗ್ರಂಥಗಳನ್ನೇ ಅವನ ಮಡಿಲಿಗೆ ತುಂಬುವುದು ಉಳಿದು ಬಂದ ಸಂಪ್ರದಾಯ"[೪೬] ಎಂಬ ಅಭಿಪ್ರಾಯವನ್ನು ಡಾ.ಕೆ. ರವೀಂದ್ರನಾಥ ವ್ಯಕ್ತಪಡಿಸಿರುವುದನ್ನು ಮೇಲ್ಕಂಡ ಗ್ರಂಥಗಳಲ್ಲದೇ ಅಕ್ಕಮಹಾದೇವಿಯವರ ಸೃಷ್ಟಿಯ ವಚನಗಳು ಇತ್ಯಾದಿಗಳಿಗೆ ಕನ್ನಡದಲ್ಲಿಯೇ ವ್ಯಾಖ್ಯಾನಗಳು ಹುಟ್ಟಿದ ಕಾರಣ ನಂತರದ ಓದುಗರಿಗೆ ಲಿಪಿಕಾರರು ಪ್ರತಿಮಾಡುತ್ತ ಬಂದರು. ಪರಿಣಾಮವಾಗಿ ಹಲವಾರು ಟೀಕಾ ಕೃತಿಗಳು ಹಸ್ತಪ್ರತಿರೂಪದಲ್ಲಿ ಲಭಿಸುತ್ತವೆ. ಅಲ್ಲದೇ ಕವಿ ಚರಿತೆಯಲ್ಲಿ "ಮಹಾಲಿಂಗದೇವ (ಕ್ರಿ.ಶ.೧೪೨೫)ನ ಏಕೋತ್ತರ ಶತಸ್ಥಲ ಮತ್ತು ಪ್ರಭುದೇವರ ಷಟ್ಸ್ಥಲ ಜ್ಞಾನಚಾರಿತ್ರ ವಚನದ ಟೀಕೆ, ಕುಮಾರ ಭಂಕನಾಥ (ಕ್ರಿ.ಶ.೧೪೩೦)ನ ಷಟ್‌ಸ್ಥಲೋಪದೇಶ ಮತ್ತು ಪ್ರಭುದೇವರ ಟೀಕಿನ ವಚನ; ಜಕ್ಕಣಾರ್ಯರ (ಕ್ರಿ.ಶ.೧೪೩೦) ನೂರೊಂದು ಸ್ಥಲ, ಕಲ್ಲುಮಠದ ಪ್ರಭುದೇವರ ಲಿಂಗ ಲೀಲಾವಿಲಾಸ ಚಾರಿತ್ರ್ಯ ಇವು ಬಸವಾದಿ ಪ್ರಮಥರ ಮಂತ್ರರೂಪವಾದ ವಚನಗಳೆಂಬ ಸೂತ್ರಗಳಿಗೆ ಬರೆದ ಕನ್ನಡ ವ್ಯಾಖ್ಯಾನಗಳು, ಭಾಷ್ಯಗಳು"[೪೭] ಎಂದು ಹೇಳಿರುವ ಅಭಿಪ್ರಾಯಗಳಿಂದ ಲಿಂಗಾಯತ ಟೀಕಾ ಸಾಹಿತ್ಯ ಪರಂಪರೆಯಲ್ಲಿ ಇವುಗಳಿಗಿರುವ ಪ್ರಾಮುಖ್ಯತೆಯ ಅರಿವು ನಮಗಾಗುತ್ತದೆ.

ಬಸವಣ್ಣನವರ ವಚನಗಳಿಗೆ ೫ ಜನರು, ತೋಂಟದ ಸಿದ್ಧಲಿಂಗಯತಿಗಳ ವಚನಗಳಿಗೆ ೫ ಜನರು ವ್ಯಾಖ್ಯಾನ ಬರೆದರು. ಅಲ್ಲಮಪ್ರಭುದೇವರ ವಚನಗಳಿಗೂ ಮಹಾಲಿಂಗದೇವ, ಕುಮಾರ ಬಂಕನಾಥ, ಕಲ್ಲುಮಠದ ಪ್ರಭುದೇವರು ಇಡಿಯಾಗಿ ವಚನ ವ್ಯಾಖ್ಯಾನ ಬರೆದರೆ, ಕೆಲವರು ಸ್ಥಲಕಟ್ಟಿಗೆ ಹೊಂದಿಕೆಯಾದ ಬಿಡಿವಚನಗಳಿಗೆ ಟೀಕೆ ಬರೆದಿದ್ದಾರೆ. ಸಿಂಗಳದ ಸಿದ್ಧಬಸವರಾಜನು ಅಲ್ಲಮನ ಬೆಡಗಿನ ವಚನಗಳಿಗೆ ಮಾತ್ರ ವ್ಯಾಖ್ಯಾನ ಬರೆದಿದ್ದಾನೆ. ಅಚ್ಚರಿಯ ಸಂಗತಿಯೆಂದರೆ ಬಸವಾದಿ ಶರಣರೊಂದಿಗೆ ಪ್ರಮುಖವಾಗಿ ಗುರುತಿಸಿಕೊಂಡ ಅಕ್ಕಮಹಾದೇವಿ, ಸಿದ್ಧರಾಮ ಮತ್ತು ಚೆನ್ನಬಸವಣ್ಣನವರ ವಚನಗಳಿಗೆ ಬಿಡಿಯಾದ ವ್ಯಾಖ್ಯಾನಗಳು ಲಭಿಸಿವೆಯೇ ಹೊರತು ಇಲ್ಲಿವರೆಗೆ ಇಡಿಯಾದ ಸಮಗ್ರ ವಚನ ವ್ಯಾಖ್ಯಾನ ಗ್ರಂಥಗಳು ಲಭಿಸದಿರುವುದು. ಇದಕ್ಕೆ ಆ ಕಾಲದ ಟೀಕಾಕಾರರ ಅವಜ್ಞೆಯು ಕಾರಣವೋ, ಧಾರ್ಮಿಕ ಹರಿಕಾರರ ಮನೋಧರ್ಮ ಕಾರಣವೋ, ಅನಂತರದ ಕಾಲಘಟ್ಟದ ನಿರ್ಲಕ್ಷಧೋರಣೆ ಕಾರಣವೋ ಯಾವುದಕ್ಕೂ ಕಾಲವೇ ಉತ್ತರಿಸಬೇಕು. ಈ ಬಗ್ಗೆ ವ್ಯಾಪಕ ಶೋಧ ನಡೆದಲ್ಲಿ ಮಾತ್ರ ಸಮರ್ಪಕ ಉತ್ತರ ಸಿಗಬಹುದಾಗಿದೆ.

ಹೀಗೆ, ಲಿಂಗಾಯತ ಟೀಕಾಸಾಹಿತ್ಯ ಪರಂಪರೆಯು ೧೨ನೆಯ ಶತಮಾನದ ವಚನಕಾರರ ವಚನಗಳಿಗೆ, ಕಾವ್ಯಶಾಸ್ತ್ರಗಳಿಗೆ, ವೀರಶೈವ ಸಂಸ್ಕೃತ ಗ್ರಂಥಗಳಿಗೆ ಕನ್ನಡ ಟೀಕೆ ಬರೆಯುವ ಮೂಲಕ ಶ್ರೀಮಂತ ಟೀಕಾ ಪರಂಪರೆಗೆ ಕಾರಣವಾಗಿದೆ. ಅಲ್ಲದೆ, ಕನ್ನಡ ಟೀಕಾ ಸಾಹಿತ್ಯವು ಕನ್ನಡ ಸಾಹಿತ್ಯ ಚರಿತ್ರೆಯ ಇತಿಹಾಸಕ್ಕೆ ಮಹತ್ವದ ಆಕರಗಳಾಗಿರುವುದನ್ನು ಮರೆಯುವಂತಿಲ್ಲ. ಅದರಲ್ಲೂ ಶಿವಶರಣರ ವಚನಗಳಿಗೆ ೨೦, ೨೧ನೇ ಶತಮಾನದಲ್ಲೂ ಕೂಡಾ ಅನೇಕ ಮಠಾಧೀಶರು, ಸಾಹಿತಿಗಳು, ಸಂಶೋಧಕರು ಕೂಡಾ ವ್ಯಾಖ್ಯಾನ ಬರೆಯುವ ಮೂಲಕ ಲಿಂಗಾಯತ ಧಾರ್ಮಿಕ ತತ್ವಗಳನ್ನು ಆಧುನಿಕತೆಗೆ ಸಮನ್ವಯಗೊಳಿಸುವ ಪ್ರಯತ್ನಗಳನ್ನು ನಡೆಸಿರುವುದನ್ನು ಮರೆಯಲಾಗದು. ಈ ರೀತಿಯ ಟೀಕಾ ಪರಂಪರೆಯು ಇಂದಿಗೂ ಜೀವಂತವಾಗಿದೆಯಾದರೂ ಟೀಕಾಕಾರರ ಧ್ಯೇಯ ಧೋರಣೆಗಳಲ್ಲಿ ವ್ಯಾಪಕ ಬದಲಾವಣೆಗಳಾಗಿವೆ. ಈ ಕುರಿತು ಡಾ.ಕೆ.ರವೀಂದ್ರನಾಥರು– "ಪ್ರಾಚೀನ ಕಾಲದ ಟೀಕು ವ್ಯಾಖ್ಯಾನಗಳು ಭಾವುಕತನದಲ್ಲಿ ರಚನೆಯಾಗಿದ್ದರೆ ಅವುಗಳಿಗೆ ನಿಷ್ಪಕ್ಷಪಾತವಾದ ವಿವೇಚನೆ ಈ ಕಾಲದಲ್ಲಿ ನೆರವೇರಿತು. ಹೀಗಾಗಿ, ಭಾವಾರ್ಥ ಹಂತದಿಂದ ಹೊರಟ ವ್ಯಾಖ್ಯಾನ ವಿಮರ್ಶಾ ನೆಲೆಯಲ್ಲಿ ಪರಿಪೂರ್ಣಗೊಂಡಿರುವುದು ಟೀಕಾ ಸಾಹಿತ್ಯದ ವೈಚಾರಿಕ ಬೆಳವಣಿಗೆಗೆ ನಿದರ್ಶನವಾಗಿದೆ"[೪೮] ಎಂದು ಅಭಿಪ್ರಾಯಪಟ್ಟಿರುವುದು ಸಹಜವೇ ಆಗಿದೆ ಎನ್ನಬಹುದು.

### ೩. ಬ್ರಾಹ್ಮಣ ಟೀಕಾ ಸಾಹಿತ್ಯ

ಉತ್ತರ ಭಾರತದಲ್ಲಿ ಪ್ರವರ್ಧಮಾನಗೊಂಡ ವೈದಿಕ ಧರ್ಮ ಕರ್ನಾಟಕಕ್ಕೆ ಕ್ರಿ.ಪೂ. ೬–೫ನೇ ಶತಮಾನಗಳಲ್ಲಿ ಕಾಲಿಟ್ಟಿತು. ಆ ವೇಳೆಗಾಗಲೇ ಉತ್ತರಭಾರತದಲ್ಲಿ ಸಂಹಿತೆ, ಬ್ರಾಹ್ಮಣ, ಉಪನಿಷತ್, ವೇದಾಂಗ ಇತ್ಯಾದಿ ಸಾಹಿತ್ಯ ಪ್ರಕಾರಗಳು ಬೆಳೆದಿದ್ದರಿಂದ ಅವುಗಳ ಪ್ರಭಾವ ಕರ್ನಾಟಕದ ಮೇಲಾಯಿತು. ಕವಿಚರಿತೆಕಾರರು ಹೇಳುವಂತೆ –"ಶಿವ, ವಿಷ್ಣು, ಶಕ್ತಿ ಮೊದಲಾದ ದೇವತೆಗಳ ಕಲ್ಪನೆಯೂ

ಭಕ್ತಿಮಾರ್ಗವೂ ರಾಮಾಯಣ ಭಾರತಗಳೂ ಹಲವು ಪುರಾಣಗಳೂ ರೂಪುಗೊಳ್ಳುತ್ತಿದ್ದ ಕಾಲ. ಸಹಜವಾಗಿ ಇವೆಲ್ಲದರ ಅಂಶಗಳು ಕರ್ನಾಟಕದಲ್ಲಿ ಬಹು ಹಿಂದಿನಿಂದಲೇ ಹರಡಲಾರಂಭಿಸಿರಬೇಕು."[೪೯]

ಆದರೆ, ಕ್ರಿ.ಪೂ.೧ನೇ ಶತಮಾನ ಹಾಗೂ ಕ್ರಿ.ಶ.ದ ನಂತರದಲ್ಲಿ ಕರ್ನಾಟಕದಲ್ಲಿ ಲಭಿಸುವ ಶಾಸನಗಳು ಮತ್ತು ತಾಮ್ರಪಟಗಳಲ್ಲಿ ವೈದಿಕರು ಯಜ್ಞ-ಯಾಗಗಳನ್ನು ಮಾಡುತ್ತಿರುವ ಬಗ್ಗೆ ಹಲವಾರು ಉಲ್ಲೇಖಗಳು ಲಭಿಸುತ್ತವೆ. ಶಾತವಾಹನರು, ಕದಂಬ ಅರಸರು ಸ್ವತಃ ವೈದಿಕ ಧರ್ಮಾವಲಂಬಿಗಳಾಗಿದ್ದರು. ಅಲ್ಲದೇ ಚಾಲುಕ್ಯ, ಗಂಗ, ರಾಷ್ಟ್ರಕೂಟ ಅರಸರ ಕಾಲದಲ್ಲಿ ವೈದಿಕ ಧರ್ಮ ತನ್ನದೇ ಆದ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿವೆ ಎಂಬುದಕ್ಕೆ ಆಯಾ ಕಾಲಘಟ್ಟದಲ್ಲಿ ನಿರ್ಮಾಣವಾದ ಬೃಹತ್ ದೇವಾಲಯಗಳು, ಗುಹೆಗಳು ಮತ್ತು ರಾಜರು ಬ್ರಾಹ್ಮಣರಿಗೆ ಕೊಟ್ಟ ದತ್ತಿ ಮತ್ತಿತರ ಅಂಶಗಳಿಂದ ಸ್ಪಷ್ಟವಾಗುತ್ತದೆ.

ವೈದಿಕರ ಧರ್ಮಭಾಷೆ ಮತ್ತು ಮಾತೃ ಭಾಷೆ 'ಸಂಸ್ಕೃತ'ವಾಗಿದ್ದರಿಂದ ಈ ಭಾಷೆಯಲ್ಲಿ ಅಪಾರ ಸಾಹಿತ್ಯ ಗ್ರಂಥಗಳು ರಚನೆಯಾಗಿದ್ದವು. ಉತ್ತರ ಭಾರತದಲ್ಲಿ ಪ್ರಭಾವಿಯಾಗಿದ್ದ ಸಂಸ್ಕೃತ ಭಾಷೆ ವೈದಿಕರು ದಕ್ಷಿಣ ಭಾರತಕ್ಕೆ ಆಗಮಿಸುವ ಮೂಲಕ ಭಾಷೆಯೊಂದಿಗೆ ಸಾಹಿತ್ಯವನ್ನು ಹೊತ್ತು ತಂದ ಪರಿಣಾಮ ಪಾಲಿ, ಪ್ರಾಕೃತ, ಅಪಭ್ರಂಶ ಭಾಷೆಗಳಲ್ಲದೇ ಪಂಚದ್ರಾವಿಡ ಭಾಷೆಗಳ ಮೇಲೆಯೂ ಸಂಸ್ಕೃತ ಪ್ರಭಾವ ಬೀರಿತು. ಇದರಿಂದಾಗಿ ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳು, ಕಾಳಿದಾಸ, ಭಾರವಿ ಮತ್ತಿತರರ ಸಂಸ್ಕೃತ ನಾಟಕಗಳು ಕರ್ನಾಟಕದಲ್ಲಿ ಪ್ರಚಲಿತವಾಗಿರಬೇಕು.

ಕರ್ನಾಟಕದಲ್ಲಿ ೧೫ನೆಯ ಶತಮಾನದಲ್ಲಿ ಹರಿದಾಸ ಪರಂಪರೆಯು ವ್ಯಾಪಕವಾಗಿ ಸಾಹಿತ್ಯ ರಚನೆ ಕೈಗೊಳ್ಳುವ ಮೂಲಕ ವೈದಿಕ ಧರ್ಮ ಸಿದ್ಧಾಂತಗಳನ್ನು ಪ್ರತಿಪಾದಿಸಲು ಪ್ರಯತ್ನಿಸಿತು. ಇದಕ್ಕೂ ಮೊದಲೇ ಶಂಕರಾಚಾರ್ಯರು, ರಾಮಾನುಜಾಚಾರ್ಯರು, ಮದ್ವಾಚಾರ್ಯರು ಕ್ರಮವಾಗಿ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಸಿದ್ಧಾಂತಗಳನ್ನು ಆಚರಣೆಗೆ ತಂದಿದ್ದರು. ಆಯಾ ಕಾಲದ ಅರಸರು ಆಶ್ರಯ ನೀಡಿದುದರಿಂದ ಇವುಗಳ ಪ್ರಭಾವ ನಾಡಿನುದ್ದಗಲಕ್ಕೂ ಪಸರಿಸಿತು. ಆಚಾರ್ಯತ್ರಯರ ಪ್ರಭಾವ ಮತ್ತು ಪ್ರೇರಣೆಯಿಂದ ಜನ್ಮತಾಳಿದ ಹರಿದಾಸ ಪರಂಪರೆಯಲ್ಲಿ ಸಾಹಿತ್ಯ ರಚನೆಗೆ ಸಂಬಂಧಿಸಿದಂತೆ ವ್ಯಾಸಕೂಟ ಮತ್ತು ದಾಸಕೂಟಗಳಾಗಿ ಕವಲೊಡೆದು ಬೆಳೆದವು. ಡಾ.ಕೆ. ರವೀಂದ್ರನಾಥರು ಅಭಿಪ್ರಾಯಪಡುವಂತೆ – "ಮೂಲಸಂಸ್ಕೃತ ಕೃತಿಗಳನ್ನು, ಟೀಕೆ ಟಿಪ್ಪಣಿಗಳನ್ನು ವ್ಯಾಸಂಗ ಮಾಡಿ ಖಂಡನ-ಮಂಡನಗಳಿಂದ ದಿಗ್ವಿಜಯಕ್ಕೆ ಹೊರಟ ಪಂಡಿತ-ಪ್ರಕಾಂಡರು ವ್ಯಾಸಕೂಟದವರಾದರೆ, ಅದರ ಸಾರಭೂತವನ್ನು ಸಂಗೀತ ಸಾಹಿತ್ಯಾದಿ ಪರಿಕರಗಳ ಮೂಲಕ ಪರಿಣಾಮವಾಗಿ ಬೋಧಿಸಿದವರು ದಾಸಕೂಟದವರು."[೫೦] ನರಹರಿತೀರ್ಥರಿಂದ ಆರಂಭವಾದ ಹರಿದಾಸ ಪರಂಪರೆಯು ವ್ಯಾಸತೀರ್ಥರು, ಪುರಂದರದಾಸರು, ಕನಕದಾಸರಿಂದ ಉತ್ತುಂಗಕ್ಕೇರುತ್ತ ಪ್ರಾಣೇಶದಾಸರು, ಗುರುಪ್ರಾಣೇಶದಾಸರು ಮತ್ತಿತರರ ಮೂಲಕ ಬೆಳೆದು ಕನ್ನಡ ಸಾಹಿತ್ಯ ಲೋಕಕ್ಕೆ ಕೀರ್ತನ, ಸುಳಾದಿ, ಉಗಾಭೋಗ, ಕಾವ್ಯಗ್ರಂಥಗಳ ಮೂಲಕ ಸಮಕಾಲೀನ ಸಮಾಜ-ಸಂಸ್ಕೃತಿಯ ಮೇಲೆ ಅಪಾರ ಬೆಳಕು ಚೆಲ್ಲಿವೆ. "ಈ

ಹರಿದಾಸರ ಧರ್ಮ ವಿಶಿಷ್ಟ ಕೃತಿಗಳಿಗೆ ಸಿದ್ಧಾಂತ ಗ್ರಂಥಗಳೇ ಬೇರು, ಟೀಕೆ ಟಿಪ್ಪಣಿಗಳೇ ಕಾಂಡ ಮರಗಳಾಗಿ ಬೆಳೆದು ನಿಂತಿವೆ. ಹೀಗಾಗಿ ಕನ್ನಡದಲ್ಲಿ ಬ್ರಾಹ್ಮಣ ಟೀಕಾ ಸಾಹಿತ್ಯಕ್ಕೆ ಪಾರಂಪರಿಕ ಇತಿಹಾಸವಿದೆ."[೫೧] ಎನ್ನುತ್ತಾರೆ. ಡಾ.ಕೆ. ರವೀಂದ್ರನಾಥ.

ಕ್ರಿ.ಶ.೧೪೫೦ರಲ್ಲಿ ನಾರಾಯಣ ಎಂಬ ತಾತ್ಪರ್ಯಕಾರ ಭಾಗವತ ಸಂಹಿತಾರ್ಥ ಎಂಬ ಭಾಗವತ ಮಹಾಪುರಾಣ ತಾತ್ಪರ್ಯ ರಚಿಸಿದ್ದಾರೆ. ಕ್ರಿ.ಶ.೧೫೩೦ರಲ್ಲಿ ಕೀರ್ತನಕಾರ ವಾದಿರಾಜರು ಮಧ್ವಗುರುಗಳು ಬ್ರಹ್ಮಸೂತ್ರಗಳಿಗೆ ಬರೆದ ಭಾಷ್ಯ ಹಾಗೂ ಅನುವ್ಯಾಖ್ಯಾನಗಳಿಗೆ, ಜಯತೀರ್ಥ ಬರೆದ "ತತ್ವಪ್ರಕಾಶಿಕಾ ಮತ್ತು ನ್ಯಾಯಸುಧಾ" ಎಂಬ ಗ್ರಂಥಗಳಿಗೆ ಗುರ್ವರ್ಥದೀಪಿಕಾ ಹೆಸರಿನ ಟಿಪ್ಪಣಿಗಳನ್ನು ಬರೆದಿದ್ದಾರೆ. ಅಲ್ಲದೇ, ಗೀತಾಭಾಷ್ಯ, ಉಪನಿಷತ್ತು, ಈಶಾವಾಸ್ಯಕ್ಕೆ, ದಶಪ್ರಕರಣದಲ್ಲಿ ಖಂಡನತ್ರಯನಕ್ಕೆ ಉಪನ್ಯಾಸ ಮಾಲಾ ಟೀಕು ಬರೆದಿದ್ದಾನೆ.

ಕ್ರಿ.ಶ. ೧೬೦೦ರಲ್ಲಿದ್ದ ತಿರುಮಲಭಟ್ಟನು ಬರೆದ 'ಶಿವಗೀತೆ'ಯು ವಾರ್ಧಕ ಷಟ್ಪದಿಯಲ್ಲಿದೆ. ಕ್ರಿಶ ೧೬೦೦ರಲ್ಲಿಯ ಕವಿ ವಿಠ್ಠಲನು ಅಮರಕೋಶಕ್ಕೆ ಕನ್ನಡ ವ್ಯಾಖ್ಯಾನ ಬರೆದಿದ್ದಾನೆ. ಆದರೆ, ಈ ವ್ಯಾಖ್ಯಾನವನ್ನು ಪ್ರತಿಮಾಡಿದವನು ಶಾಲ್ಯದ ಕೃಷ್ಣರಾಜನೆಂಬುದಾಗಿ ಇಲ್ಲಿಯ ಶ್ಲೋಕದಿಂದ ತಿಳಿಯುತ್ತದೆ. ಮೈಸೂರು ಅರಸರು ಸ್ವತಃ ಕವಿಗಳಾಗಿ, ವ್ಯಾಖ್ಯಾನಕಾರರಾಗಿ ವೈದಿಕ ಸಾಹಿತ್ಯ – ಸಂಸ್ಕೃತಿಯ ಪೋಷಕರಾಗಿ ಕೆಲಸ ಮಾಡಿದರು. ಅವರಲ್ಲಿ ಕ್ರಿ.ಶ. ೧೬೧೭ರಲ್ಲಿದ್ದ ನರಸರಾಜರ ಮಗ ಚಾಮರಾಜನು ವಾಲ್ಮೀಕಿ ರಾಮಾಯಣ ಟೀಕೆ, ಬ್ರಹ್ಮೋತ್ತರಖಂಡ ಟೀಕೆಯ ಗ್ರಂಥಗಳನ್ನು ಕನ್ನಡದಲ್ಲಿ ಬರೆದಿದ್ದಾನೆ.

ಕ್ರಿ.ಶ. ೧೬೩೦ರಲ್ಲಿ ಜಕ್ಕಭೂಪಾಲನು 'ಭಾರತ ಕಥಾ ಸಂಗ್ರಹ' ಎಂಬ ವ್ಯಾಖ್ಯಾನ ಬರೆದಿರುವುದು ತಿಳಿದು ಬರುತ್ತದೆ. "ಭಾರತದ ಕಥೆಯಷ್ಟನು ಸಹ ವ್ಯಾಖ್ಯಾನಿಸಿದ ಜಕ್ಕನಾಯಕನ ಬೊಲ್ಲಿ" ಎಂದು ವ್ಯಾಖ್ಯಾನದಲ್ಲಿ ಹೇಳಲಾಗಿದೆ. ಸು.ಕ್ರಿ.ಶ. ೧೬೫೦ರಲ್ಲಿದ್ದ ಭಾಸ್ಕರ ಕವಿಯು ಬೇಹಾರಗಣಿತಕ್ಕೆ ಸೂತ್ರ ಟೀಕುಗಳನ್ನು ಬರೆದಿದ್ದಾನೆ.



ಕ್ರಿ.ಶ.ಸು. ೧೬೭೩ ರಿಂದ ೧೭೦೪ರ ವರೆಗೆ ಮೈಸೂರು ಸಂಸ್ಥಾನವನ್ನಾಳಿದ ಚಿಕ್ಕದೇವರಾಜನು ಸಂಸ್ಕೃತ ಭಾಗವತಕ್ಕೆ ಗದ್ಯರೂಪದ ಟೀಕು ಬರೆದು 'ರಾಜಸೂಕ್ತಿ ವಿಲಾಸ' ಎಂದು ನಾಮಕರಣ ಮಾಡಿದ್ದಾನೆ. ಕ್ರಿ.ಶ.ಸು. ೧೬೭೨ರ ಚಿಕ್ಕುಪಾಧ್ಯಾಯನು ಸಂಸ್ಕೃತದ ಕಾಮಾಂದನೀತಿಗೆ, ವೈದ್ಯಾಮೃತಕ್ಕೆ ಕನ್ನಡ ಟೀಕು ಬರೆದಿದ್ದಾನೆ.

ಕ್ರಿ.ಶ.ಸು. ೧೭೦೦ರಲ್ಲಿ ರಾಮಬ್ರಹ್ಮಾನಂದರು ವಿದ್ಯಾರಣ್ಯಕೃತ ವಾಕ್ಯಸುಧೆಗೆ ಕನ್ನಡ ಟೀಕು ಬರೆದು 'ಸ್ವಪ್ರಕಾಶ' ಎಂದು ಹೆಸರಿಸಿದ್ದಾರೆ. ಇದೇ ಕಾಲದ ತಿಮ್ಮರಸನು ಕ್ಷೇತ್ರಗಣಿತವನ್ನು ಕಂದಪದ್ಯದಲ್ಲಿ ಬರೆದಿದ್ದರೂ ಲೆಕ್ಕಗಳ ಸಮಸ್ಯೆಗಳನ್ನು ಬಿಡಿಸುವ ಉತ್ತರವನ್ನು ವ್ಯಾಖ್ಯಾನಮುಖೇನ ಹೇಳಿರುವುದು ವಿಶೇಷವಾಗಿದೆ. ಉದಾಹರಣೆಗೆ–

"ಅಂಗುಲ ಮೂವತ್ತೆರಡು
ಸಂಗತಮಾಗೊಂದು ಹಸ್ತ ಹಸ್ತಗಳೆಂಟು
ಹಿಂಗದೆ ಗಳೆ ತಾನಕ್ಕೂಂ
ತುಂಗಭುಜಾ ಪೇಳೆನಲ್ಕೆ ಗಣಿತಕ್ರಮದಿಂ"

**ಟೀಕೆ–** ಅಂಗುಲ ೩೨ ಒಂದು ಹಸ್ತ; ಅಂತಹ ಹಸ್ತ ೮ ಗಳೆಯೊಂದೆನಿಸುವುದು ಇದು. ಕ್ಷೇತ್ರಗಳನಳೆವ ಶಾಸ್ತ್ರದ ಕಟ್ಟಳೆಯ ಗಳೆಯಕ್ಕೂಂ. ಇದವುಮಲ್ಲದೆ ಇನ್ನುಂ ಗಳೆಗಳುಂಟು. ಒಂದೊಂದು ದೇಶಕ್ಕೆ ಒಂದೊಂದು ಪ್ರಕಾರದ ಗಳೆಯುಂಟು, ದೇಶದೇಶಕ್ಕೆ ತಕ್ಕಹಾಗೆ ಗಳೆಗಳಂ ತಿಳಿದುಕೊಂಬುದು" ಎಂದಿದೆ.

ಹಾಗೆಯೇ ಗಣಿತಕ್ಕೆ ಸಂಬಂಧಿಸಿದ ಮಹಾವೀರಾಚಾರ್ಯನ ಗಣಿತಕ್ಕೆ ದೈವಜ್ಞವಲ್ಲಭ(ಕ್ರಿ.ಶ.ಸು. ೧೭೦೦)ನು ಕನ್ನಡ ವ್ಯಾಖ್ಯಾನ ಬರೆದಿದ್ದಾನೆ. ಮೈಸೂರಿನ ಕೃಷ್ಣರಾಜರ ಮಹಿಷಿ ಚಲುವಾಂಬೆ (ಕ್ರಿ.ಶ.ಸು. ೧೭೩೫)ಯು ತಲಕಾವೇರಿ ಮಹಾತ್ಮೆ ಟೀಕು, ಕೃಷ್ಣಕರ್ಣಾಮೃತದ ಟೀಕಾ ರಚಿಸಿರುವುದು ತಿಳಿದುಬರುತ್ತದೆ.

ಶಾಲ್ಯದ ಕೃಷ್ಣರಾಜ (ಕ್ರಿ.ಶ. ೧೭೪೮–೧೭೭೫) ಕೀರ್ತನೆಗಳಿಗೆ ಟೀಕು ಹಾಗೂ ಬಾಹಟದ ಟೀಕು ಕೃತಿಗಳ ರಚನೆಕಾರನಾಗಿದ್ದಾನೆ. ಕ್ರಿ.ಶ. ೧೮೦೦ರಲ್ಲಿದ್ದ ಲಕ್ಷ್ಮಣಶಾಸ್ತ್ರಿ ಅಮರಸಿಂಹನ ನಾಮಲಿಂಗಾನುಶಾಸನ ನಿಘಂಟಿಗೆ ಕನ್ನಡ ಟೀಕು ಬರೆದಿದ್ದಾನೆ. ಕ್ರಿ.ಶ. ೧೮೦೦ರ ರಾಮಕೃಷ್ಣ ಕವಿ ವ್ಯಾಖ್ಯಾನಕಾರ. ಈತನು ಭಗವದ್ಗೀತೆಗೆ ಟೀಕು ಬರೆದಿದ್ದಾನೆ. ಶಂಕರಭಾಷ್ಯವನ್ನು ಅನುಸರಿಸಿ ಈ ಟೀಕು ಬರೆದಿರುವುದಾಗಿ ಹೇಳಿಕೊಂಡಿದ್ದಾನೆ. ಮುಮ್ಮಡಿ ಕೃಷ್ಣರಾಜನ ಸಂತೋಷಾರ್ಥವಾಗಿ ರಾಮಕೃಷ್ಣಶಾಸ್ತ್ರೀಯು (ಕ್ರಿ.ಶ. ೧೮೦೮) ಭುವನಪ್ರದೀಪಿಕೆಯೆಂಬ ಸಂಸ್ಕೃತದ ತನ್ನ ಕೃತಿಗೆ "ಕೃಷ್ಣರಾಜ ಗುಣರತ್ನಮಾಲಾ" ಹೆಸರಿನ ಕನ್ನಡ ಟೀಕು ಬರೆದಿದ್ದಾನೆ. ಸ್ವತಃ ಮುಮ್ಮಡಿ ಕೃಷ್ಣರಾಜರು (ಕ್ರಿ.ಶ. ೧೭೯೪–೧೮೬೮) ಜಾತಕ ಸಾಮ್ರಾಜ್ಯ ಟೀಕೆ, ಜೈಮಿನಿಭಾರತದ ಅಶ್ವಮೇಧಿಕಪರ್ವಟೀಕೆ, ದೇವಿ ಭಾಗವತ ತಾತ್ಪರ್ಯ ಟೀಕೆ, ಭರತಸಾರ ಸಂಗ್ರಹ ಟೀಕೆ, ರಾಮಾಯಣ ಟೀಕೆ, ರಾಮಾಯಣ ತಾತ್ಪರ್ಯ ದೀಪಿಕಾ ಟೀಕೆ, ಸಂಖ್ಯಾರತ್ನಮಾಲಾ ಟೀಕೆ, ಶಕುಂತಲೋಪಾಖ್ಯಾನ ಮುಂತಾದ ಟೀಕಾಕೃತಿ ರಚಿಸಿದ್ದಾರೆ. ಇವುಗಳಲ್ಲಿ ಶಕುಂತಲೋಪ್ಯಾಖ್ಯಾನ ಶಾಕುಂತಲ ನಾಟಕನವೀನಟೀಕೆ ಎಂದು ಹೆಸರು ಹೊಂದಿದೆ. ಜೊತೆಗೆ, ಮುಮ್ಮಡಿಕೃಷ್ಣರಾಜರು ಕಾಳಿದಾಸನ ವಿಕ್ರಮೋರ್ವಶಿಯಾ, ಮಾಳವಿಕಾಗ್ನಿಮಿತ್ರೀಯ ನಾಟಕಗಳನ್ನು ಕೂಡಿಸಿ ಕೃಷ್ಣರಾಜವಾಣೀವಿಲಾಸರತ್ನಾಕರ ಎಂಬ ಹೆಸರಿನಲ್ಲಿ ನಾಟಕದ್ವಯಗಳಿಗೆ ಟೀಕು ರಚಿಸಿದ್ದಾರೆ.

೧೯ನೆಯ ಶತಮಾನದ ಮಧ್ಯಭಾಗದಲ್ಲಿ ವೆಂಕಟರಮಣಶಾಸ್ತ್ರಿಗಳು ಅಮರುಕ ಶತಕಕ್ಕೆ ಟೀಕು, ರಂಗಶಾಸ್ತ್ರೀಗಳ ಪ್ರಹ್ಲಾದ ಚರಿತ್ರೆಯ ಟೀಕು (ವಿದ್ವತ್ತೋಷಿಣಿ); ವೇದಾಂತ ರಾಘವಾಚಾರ್ಯರ ಶಾಲ್ಯದ ಕೃಷ್ಣರಾಜರ ನಿಜದೀಪಿಕಾರತ್ನ ಟೀಕು, ಗರಣಿ ಕೃಷ್ಣಾಚಾರ್ಯರ ಗಜೇಂದ್ರಮೋಕ್ಷ ಟೀಕು,

ಎಂ.ಬಿ.ಶ್ರೀನಿವಾಸಯ್ಯಂಗಾರ್ ಅವರ ನಿತ್ಯಾನುಸಂಧಾನ ಟೀಕು, ವೆಂಕಟೇಶಶಾಸ್ತ್ರಿಗಳವರ ದ್ವಾದಸಮಂಜರಿಸ್ತೋತ್ರ ಟೀಕು, ಸಿದ್ಧಾಂತಿ ಸುಬ್ರಮಣ್ಯಶಾಸ್ತ್ರಿಗಳ ಕ್ಷತ್ರೀಯ ಪುರಾಣ ಟೀಕೆ, ಟಿ.ಸುಬ್ಬರಾಯಶಾಸ್ತ್ರಿಗಳ ರಾಮಾಯಣ ಟೀಕೆ, ಗುಂಡಾಶಾಸ್ತ್ರೀಯವರ ಚಿದಾನಂದಾವಧೂತ ಟೀಕು, ಜಗನ್ನಾಥದಾಸರ ಹರಿಕಥಾಮೃತಸಾರದ ತತ್ವಪ್ರಯೋಗಗಳ ನಿಗೂಡಾಕೃತಿ ಮೊದಲಾದ ಟೀಕಾಕೃತಿಗಳು ರಚನೆಗೊಂಡಿವೆ.

ಉತ್ತರಾಧಿಮಠದ ವಿದ್ಯಾದೀಶರು ಹರಿಕಥಾಮೃತಸಾರ ಕನ್ನಡದ ಕೃತಿಯೆಂಬ ಕಾರಣಕ್ಕೆ ಅವಜ್ಞೆಯ ಮಾತುಗಳನ್ನಾಡಿದಾಗ ವೇದಶಾಸ್ತ್ರ, ಪುರಾಣೇತಿಹಾಸಗಳೆಲ್ಲ ಇದರಲ್ಲಿ ಅಡಕವಾಗಿವೆ ಎಂಬುದನ್ನು ಮನಗಾಣಿಸಲು ಜಮಖಿಂಡಿಯ ವಾದಿರಾಜಾಚಾರ್ಯರು ಸಂಸ್ಕೃತದಲ್ಲಿ ಟೀಕು ಬರೆದಿದ್ದಾರೆ. ಇದಕ್ಕೆ ಅವರು "ವ್ಯಾಸದಾಸ ಸಿದ್ಧಾಂತ ಕೌಮುದೀ"[೫೨] ಎಂದು ಕರೆದಿರುವುದಾಗಿ ಡಾ.ಕೆ.ರವೀಂದ್ರನಾಥ ಹೇಳಿರುವುದರಿಂದ ೧೯ನೆಯ ಶತಮಾನದಲ್ಲಿಯೂ ವ್ಯಾಸ-ದಾಸಕೂಟಗಳ ಸಂಸ್ಕೃತ ಕನ್ನಡ ಭಾಷೆಗಳ ನಡುವಿನ ಸಂಘರ್ಷ, ಪಾಂಡಿತ್ಯ ಪ್ರದರ್ಶನಗಳು ಮುಂದುವರಿದಿರುವುದಕ್ಕೆ ಸಾಕ್ಷಿಯಂತಿದೆ ಎಂದರೆ ತಪ್ಪಾಗದು. ಕಮಲಾಪತಿ ವಿಠ್ಠಲರು ಕ್ರಿ.ಶ.೧೮೮೪ರಲ್ಲಿ ಮೇಲ್ಕಂಡ ಕೃತಿಗೆ ಭಾವದರ್ಪಣ ಹೆಸರಿನಲ್ಲಿ ಟೀಕು ರಚಿಸಿದ್ದರು.

ಹೀಗೆ, ೧೫ನೇ ಶತಮಾನದಲ್ಲಿ ಆರಂಭಗೊಂಡ ಬ್ರಾಹ್ಮಣ ಟೀಕಾಸಾಹಿತ್ಯ ಹಂತಹಂತವಾಗಿ ಬೆಳೆಯುತ್ತ ೧೯ನೇ ಶತಮಾನದ ಮೈಸೂರು ಅರಸರ ಕಾಲಾವಧಿಯಲ್ಲಿ ಸ್ವತಃ ರಾಜರು ಮತ್ತು ರಾಜಾಶ್ರಯದಲ್ಲಿದ್ದ ಹಲವು ಪಂಡಿತರಿಂದ ಟೀಕಾಸಾಹಿತ್ಯ ಹುಲುಸಾಗಿ ಬೆಳೆದಿರುವುದನ್ನು ಕಾಣುತ್ತೇವೆ.

ಡಾ.ಟಿ.ವಿ. ವೆಂಕಟಾಚಲಶಾಸ್ತ್ರಿ ಅವರು "ಕಾಲಕ್ರಮದಲ್ಲಿ ಸಂಸ್ಕೃತ ಭಾಷಾಭ್ಯಾಸವು ಕಡಿಮೆಯಾಗುತ್ತಾ ಹೋದುದು, ಸ್ವತಂತ್ರ ಕೃತಿ ರಚನೆ ಉತ್ತಮ ಫಲಗಳನ್ನು ಕೊಡದೆ ಹೋದುದು, ಕೃತಿವಸ್ತುಗಳು ಚರ್ವಿತ ಚರ್ವಣವಾಗುತ್ತ ಹೋದುದು, ಮೈಸೂರು ಅರಸರ ಕಾಲದಲ್ಲಿ ವ್ಯಾಖ್ಯಾನ ಗ್ರಂಥಗಳು ಜನಸಾಮಾನ್ಯರ ಪ್ರಯೋಜನಾರ್ಥವಾಗಿ ಅಹಮಹಮಿಕೆಯಿಂದ ರಚಿತವಾದುದು"[೫೩] ಎಂಬ ಕಾರಣಗಳನ್ನು ನೀಡುವ ಮೂಲಕ ಬ್ರಾಹ್ಮಣ ಟೀಕಾ ಸಾಹಿತ್ಯದ ಸ್ಥಿತಿಗತಿ ಮತ್ತು ವೈವಿಧ್ಯತೆಯನ್ನು ತಿಳಿಯಲು ಸಾಧ್ಯವಾಗುತ್ತದೆ.

**೪. ಸಂಕೀರ್ಣ ಟೀಕಾ ಸಾಹಿತ್ಯ**

ಕನ್ನಡ ಸಾಹಿತ್ಯ ಚರಿತ್ರೆಯನ್ನು ಸಮಗ್ರವಾಗಿ ಪರಿಶೀಲನೆ ಮಾಡಿದಾಗ ಹಲವಾರು ಟೀಕಾ ಗ್ರಂಥಗಳ ಹೆಸರುಗಳು ಉಲ್ಲೇಖಗೊಂಡಿರುವುದು ತಿಳಿಯುತ್ತದೆ. ಗ್ರಂಥದ ಹೆಸರು ಉಲ್ಲೇಖವಾದರೂ ಅದರ ಟೀಕಾಕಾರರು ಯಾರು? ಕಾಲ ಯಾವುದು? ಮತ ಧರ್ಮ ಯಾವುದೆಂಬುದು ಮಾತ್ರ ತಿಳಿಯುವುದಿಲ್ಲ. ಇಂತಹ ಅನಾಮಧೇಯಕೃತ ಟೀಕಾ ಗ್ರಂಥಗಳ ಬಗ್ಗೆ ಕವಿಚರಿತೆಕಾರರು ಅನುಬಂಧಗಳಲ್ಲಿ ಉಲ್ಲೇಖಿಸುವ ಮೂಲಕ ಉಪಕಾರ ಮಾಡಿದ್ದಾರೆ.

ವೈದ್ಯಶಾಸ್ತ್ರದ (ಸು. ೧೫೦೦) ಸಂಸ್ಕೃತ ಶ್ಲೋಕಗಳಿಗೆ ಕನ್ನಡ ಟೀಕೆ ಇದೆ. ಪಂಚಕಲ್ಯಾಣಸ್ತೋತ್ರ ಟೀಕೆ(ಸು.೧೫೦೦) "ಅನ್ವಯಾರ್ಥಂ ಪೇಳಲ್ಪಡುಗುಂ; ಪದಚ್ಛೇದಮುಮಂ ಪದಾರ್ಥಮುಮನನ್ವಯಾರ್ಥದ ಸಾಮರ್ಥ್ಯದಿಂದಮೆ ಅರಿವುದು" ಎಂದು ಹೇಳಲಾಗಿದೆ. ಸಿದ್ಧಸ್ತೋತ್ರ ಟೀಕೆ (ಸು. ೧೫೦೦) ಇದ್ದು ಈ ಬಗ್ಗೆ ವಿವರಗಳು ಲಭಿಸಿಲ್ಲ. ಕಾಮಶಾಸ್ತ್ರ ವಿವರಣೆಯುಳ್ಳ ಕಕೋಕಶಾಸ್ತ್ರ ಟೀಕೆ (ಸು. ೧೬೦೦)ಯಲ್ಲಿ "ಕಕೋಕನೆಂಬ ಮಹಾಕವಿ ಋಷಿಪ್ರೋಕ್ತವಾದ ಆ ಕಾಮಶಾಸ್ತ್ರ ಪಂಡಿತಪಾಮರರ್ಗಂ ಅಬಾಲವೃದ್ಧರ್ಗಂ ರಂಜನೆಯಾಗುವಂತೆ ಪೇಳ್ಬಂ" ಎಂದು ಹೇಳಲಾಗಿದೆ. ಷಟ್‌ಸ್ಥಲ ವಿವರಣೆಯುಳ್ಳ ಪರಮರಹಸ್ಯ (ಸು. ೧೬೦೦) ಕೃತಿಯು ೨೬೦ ಸಂಸ್ಕೃತ ಶ್ಲೋಕಗಳಿಗೆ ಕನ್ನಡ ಟೀಕೆ ಇದೆ ಎಂದು ಕವಿಚರಿತೆಕಾರರು ಹೇಳುತ್ತಾರೆ.

'ಉತ್ತರಗೀತಾ' ಟೀಕೆಯ (ಸು. ೧೭೦೦) ಕೊನೆಯಲ್ಲಿ "ಬ್ರಹ್ಮವಿದ್ಯಾಯಾಂ ಕರ್ನಾಟಕ ಭಾಷಾವಿರಚಿತೇ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ" ಎಂದಿದೆ. ಭಾಗವತ ಟೀಕೆ (ಸು. ೧೭೫೦)ಯು ಏಕಾಕಾರ ಟೀಕೆ ಹೆಸರುಳ್ಳ ಹಾಡಿನ ರೂಪವಾದ ವ್ಯಾಖ್ಯಾನ. ವೃತ್ತರತ್ನಾಕರ ಟೀಕೆ (ಸು. ೧೭೭೫)ಯ ಆರಂಭದ ಪದ್ಯದಲ್ಲಿ "ವೃತ್ತಿಯ ನಿಳಾಂಚಿತ ಕನ್ನಡದಿಂದೆ ಪೇಳ್ವೆಂ" ಎಂದು ಉಲ್ಲೇಖಿಸಲಾಗಿದೆ. "ಸಂಸ್ಕೃತ ಕಾದಂಬರಿಯ ಸರಳ ಕನ್ನಡ ಸಂಗ್ರಹಾನುವಾದವುಳ್ಳ ಕನ್ನಡ ಕಾದಂಬರಿ ವ್ಯಾಖ್ಯಾನ ಕೃತಿ ಲಭಿಸಿದ್ದು ಇದರ ಟೀಕಾಕಾರರು ತಿಳಿದಿಲ್ಲವೆನ್ನುತ್ತಾರೆ ಕವಿಚರಿತೆಕಾರರು".[೫೪]

ಕಾಡಸಿದ್ದಪ್ಪನು (ಸು. ೧೮೦೦) ಮುದ್ದುಸಂಗಮುನಿಯ ದೇವಾಂಗಮತ ಪ್ರಕಾಶಿಕೆಗೆ (ಷಟ್ಪದಿಯಲ್ಲಿದೆ) ವ್ಯಾಖ್ಯಾನ ಬರೆದಿದ್ದಾನೆ. ೧೯ನೇ ಶತಮಾನದ ಉತ್ತರಾರ್ಧದಲ್ಲಿದ್ದ ಎಂ. ಬಿ. ಶ್ರೀನಿವಾಸಯ್ಯಂಗಾರರು ಮೈಸೂರು ವಿದ್ಯಾ ಇಲಾಖೆಯಲ್ಲಿ ಟ್ರಾನ್ಸಲೇಟರಾಗಿದ್ದರು. ಇವರು ತಮಿಳು ಗ್ರಂಥಗಳಿಗೆ ನಿತ್ಯಾನುಸಂಧಾನಟೀಕೆ ಬರೆದಿದ್ದಾರೆ. ವೆಂಕಟೇಶಶಾಸ್ತ್ರೀ ಕೃತ ದ್ವಾದಶ ಮಂಜರಿಕಾ ಸ್ತೋತ್ರಟೀಕೆ, ಮೈಸೂರು ಪ್ರಾಚ್ಯಕೋಶಾಲಯದ ಪಂಡಿತ ದಕ್ಷಿಣಾಮೂರ್ತಿಶಾಸ್ತ್ರಿಯವರು ರಾಜಶೇಖರ ವಿಳಾಸಟೀಕೆ, ಶಂಕರವಿಜಯ ವ್ಯಾಖ್ಯಾನ ಬರೆದಿದ್ದಾರೆ. ಮದ್ರಾಸ್ ಪ್ರೆಸಿಡೆನ್ಸಿ ಕಾಲೇಜಿನ ಕನ್ನಡ ಪಂಡಿತ ಸಿದ್ದಾಂತಿ **ಸುಬ್ರಹ್ಮಣ್ಯಶಾಸ್ತ್ರಿಯು** ಜೈಮಿನಿಭಾರತದ ಟೀಕೆ, ಭಾಗವತಟೀಕೆ, ಬೃಹಜ್ಜಾತಕ ಟೀಕೆ ಬರೆದಿದ್ದಾನೆ. **ಲೋಕನಾಥ ಕವಿಯು** ವೈದ್ಯಶತಶ್ಲೋಕಿ ಟೀಕೆ, ಸನತ್ಕುಮಾರ ಗೃಹವಾಸ್ತುದರ್ಪಣ ಟೀಕೆ ಬರೆದಿದ್ದಾನೆ. **ಲಿಂಗಾಯತ ಶಿವಪ್ಪಶಾಸ್ತ್ರಿಯವರು** ವೀರಶೈವಾಮೃತ ಪುರಾಣ ಟೀಕೆ, ಮನೋವಿಜಯ ಟೀಕೆ ಬರೆದಿರುವುದಾಗಿ ಕವಿಚರಿತೆಕಾರರು ಹೇಳುತ್ತಾರೆ. ಸ್ಮಾರ್ತರಾದ **ಟಿ. ಸುಬ್ಬಯ್ಯಶಾಸ್ತ್ರಿಗಳು** ರಾಮಾಯಣ ಟೀಕೆ ಬರೆದಿದ್ದು ಭಾವನಿರೂಪಣವಿದೆ. **ಡಿ. ಸುಬ್ಬಾಶಾಸ್ತ್ರಿಗಳು** ಕ್ಷತ್ರಿಯ ಪುರಾಣ ಟೀಕೆ, **ಸಿದ್ದಾಂತಿ ಪುಸ್ತಕಂ ಅಳಸಿಂಗರಾಚಾರ್ಯನು ನಾಗವರ್ಮನ** ಕರ್ಣಾಟಕ ಭಾಷಾಭೂಷಣಕ್ಕೆ ಟೀಕೆ ಬರೆದರೆ, **ಬೇಗೂರು ಮಲ್ಲಪ್ಪನು** ನಾಗವರ್ಮನ ಕಾವ್ಯಾವಲೋಕನದಲ್ಲಿಯ ಅರ್ಥಾಲಂಕಾರಕ್ಕೆ ಟೀಕೆ ಬರೆದಿದ್ದಾರೆ. **ಎಂ. ಎ. ತಿರುಮಲಾಚಾರ್ಯರು** 'ನಾರದಭಕ್ತಿ ಸೂತ್ರ ಟೀಕೆ' **ಎಂ. ಎ. ನರಸಿಂಹಾಚಾರ್ಯರು** ಯಾಜುಷಸಂಧ್ಯಾಭಾಷ್ಯ ಟೀಕೆ, **ಭಾಷ್ಯಂ ತಿರುಮಲಾಚಾರ್ಯರು** ಸಂಕ್ಷೇಪ ರಾಮಾಯಣದ ಅಂದರೆ ವಾಲ್ಮೀಕಿ ರಾಮಾಯಣದ ಪ್ರಥಮ ಸರ್ಗದ

ಟೀಕೆ, ಮೈಸೂರಿನ **ತಿರುಮಲೆ ಶ್ರೀನಿವಾಸಾಚಾರ್ಯರು** ಕಿಟೆಲ್‌ರಿಗೆ ಮಂಗಳೂರಿನಲ್ಲಿ ಸಹಾಯಕರಾಗಿ ಕಾರ್ಯಮಾಡಿದರಲ್ಲದೇ ಷಡಕ್ಷರಿಯ ವಚನಟೀಕೆ, ಅನುಭವಾಮೃತ ಟೀಕೆ ಬರೆದಿದ್ದಾರೆ. "ರಾಮಾಯಣದ ಕೃತಿಯನ್ನಾಧರಿಸಿ 'ಜಾನಕೀಹರಣ' ಎಂಬ ಸಂಸ್ಕೃತ ಕಾವ್ಯ ರಚಿಸಿದ **ಕುಮಾರದಾಸ** ೬ನೆಯ ಶತಮಾನದವನೆಂದು ಭಾವಿಸಲಾಗಿದೆ. 'ಕಿರಾತಾರ್ಜುನಿಯ'ದ ರಚಕ ಭಾರವಿ ಪೂರ್ವಚಾಲುಕ್ಯ ಚಕ್ರವರ್ತಿ ವಿಷ್ಣುವರ್ಧನನ ಕಾಲದವನೆಂದು ಒಂದು ನಂಬಿಕೆ. ಈ ಕಾವ್ಯದ ೧೫ನೆಯ ಸರ್ಗಕ್ಕೆ ಗಂಗದೊರೆ ದುರ್ವಿನೀತ ವ್ಯಾಖ್ಯಾನ ಬರೆದನೆಂಬುದು ಒಂದು ಐತಿಹ್ಯ....."[೫೫]

"ಮೇಧಾತಿಥಿಯ 'ಮನುಭಾಷ್ಯ' ಯಾಜ್ಞವಲ್ಕ್ಯಸ್ಮೃತಿಯ ಮೇಲೆ ವಿಶ್ವರೂಪ ಬರೆದ 'ಬಾಲಕ್ರೀಡಾ' ಎಂಬ ಟೀಕೆ, ಸೋಮೇಶ್ವರನ 'ನೀತಿ ವಾಕ್ಯಾಮೃತ', 'ಶುಕ್ರನೀತಿಸಾರ' ಮುಂತಾದ ಗ್ರಂಥಗಳು ಮೂಲತಃ ಪ್ರಾಚೀನ ರಾಜನೀತಿ ಗ್ರಂಥಗಳಿಗೆ ಟೀಕೆಗಳು"[೫೬] ಎಂಬ ಉಲ್ಲೇಖಗಳಿಂದ ಟೀಕಾ ಪರಂಪರೆಯ ವ್ಯಾಪ್ತಿ ಮತ್ತು ಬೆಳವಣಿಗೆಯನ್ನು ಗುರುತಿಸಲು ಸಾಧ್ಯವಿದೆ.

"ಅಗಸನ 'ವರ್ಧಮಾನ ಪುರಾಣ'ಕ್ಕೆ ಕನ್ನಡ ವ್ಯಾಖ್ಯಾನವೊಂದು ತಾಳೆಗರಿಯಲ್ಲಿರುವುದನ್ನು ವೆಂ.ಬಿ.ಲೋಕಾಪೂರ ಅವರು ನೋಡಿದ್ದಾರೆ. ಇದರಲ್ಲಿ ವರ್ಧಮಾನ ಪುರಾಣದ ಶ್ಲೋಕಗಳಿಗೆ ಅನ್ವಯ ಮತ್ತು ಅರ್ಥವನ್ನು ಕೊಡಲಾಗಿದೆ. ಅನ್ವಯ ಸಂಕ್ಷಿಪ್ತವಾಗಿರುವುದರಿಂದ 'ವರ್ಧಮಾನ ಪುರಾಣ'ವನ್ನು ಮುಂದಿಟ್ಟುಕೊಂಡು ಓದಿದರೆ ಮಾತ್ರ ವ್ಯಾಖ್ಯಾನ ಸರಿಯಾಗಿ ತಿಳಿಯುತ್ತದೆಂದು ಅವರು ಹೇಳಿದ್ದಾರೆ."[೫೭] ಈ ಮೇಲ್ಕಂಡ ಕನ್ನಡ ವ್ಯಾಖ್ಯಾನವನ್ನು (ಶ್ರವಣ) ಬೆಳ್ಗೊಳ ನಿವಾಸಿ ವಸಿಷ್ಠಗೋತ್ರದ ವಿಜೇ (ವಿಜಯ) ರಾಜನು ಕ್ರಿ.ಶ.೧೪೮೦ರಲ್ಲಿ ಬರೆದನೆಂದು ಕವಿಚರಿತೆಕಾರರಿಂದ ತಿಳಿದುಬರುತ್ತದೆ."[೫೮]

"ಈಚೆಗೆ ಟೀಕೆಯುಳ್ಳ 'ವರ್ಧಮಾನ ಪುರಾಣ'ದ ಹಸ್ತಪ್ರತಿ (ಹುಮ್ಮಚ ನಂ. ೭೦೭) ಯೊಂದನ್ನು ಎಂ.ಎಂ. ಕಲಬುರ್ಗಿಯವರು ನೋಡಿರುವಂತೆ ತಿಳಿಸಿದರೂ ಟೀಕೆ ಕನ್ನಡದಲ್ಲಿಯೇ ಸಂಸ್ಕೃತದಲ್ಲಿಯೇ ಎಂಬುದನ್ನು ತಿಳಿಸಿಲ್ಲ"[೫೯] ಎಂದು ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ ಕೃತಿಯನ್ನಾಧರಿಸಿ ಉಲ್ಲೇಖಿಸಲಾಗಿದೆ. ಕವಿಚರಿತೆಕಾರರು ಅಭಿಪ್ರಾಯಪಡುವಂತೆ ".....ವರ್ಧಮಾನ ಪುರಾಣ'ಕ್ಕೆ ಟೀಕೆ ರಚನೆಯಾಗಿರುವುದನ್ನು ನೋಡಿದರೆ ಅದು ಜನರಲ್ಲಿ ಹೆಚ್ಚು ಪ್ರಸಿದ್ಧವಾಗಿತ್ತೆಂದು ತಿಳಿಯಬಹುದು".[೬೦]

ತಲಕಾಡಿನ **ಗಂಗರ ದೊರೆ ದುರ್ವಿನೀತ** (ಸು. ೪೮೨ ರಿಂದ ೫೨೨)ನು "....ಗಂಗ ತಾಮ್ರಪಟಗಳ ಪ್ರಕಾರ ಪಾಣಿನೀಯ ವ್ಯಾಕರಣಕ್ಕೆ ವಾಖ್ಯೆಯಾದ 'ಶಬ್ದಾವತಾರ' ವೆಂಬ ಒಂದು ವ್ಯಾಕರಣವನ್ನು ಬರೆದನೆಂದು ಆರ್. ನರಸಿಂಹಾಚಾರ್ಯರು ಹೇಳುತ್ತಾರೆ. ಅಲ್ಲದೇ ಭಾರವಿಯ ಸಂಸ್ಕೃತ 'ಕಿರಾತಾರ್ಜುನೀಯ'ಕ್ಕೆ ಮಲ್ಲಿನಾಥ ವಿದ್ಯಾಮಾಧವ ಮುಂತಾದವರು ಬರೆದ ಟೀಕೆಗಳಿಗಿಂತ ದುರ್ವಿನೀತನ ಟೀಕೆ ಪ್ರಾಚೀನವಾದದ್ದು ಎಂಬುದು, ದುರ್ವಿನೀತನ ಬೇರೆ ಕೃತಿಗಳಿಗಿಂತ ಈ ಕೃತಿ ಹೆಚ್ಚು ಬಾರಿ ಉಲ್ಲೇಖಗೊಂಡಿರುವುದು ಗಮನಾರ್ಹ. ಈ ಗ್ರಂಥದ ಭಾಷೆ ಕನ್ನಡವೆಂದು ರೈಸ್ ಹೇಳಿದರೆ,

ರಂ.ಶ್ರೀ, ಮುಗಳಿ ಸಂಸ್ಕೃತದಲ್ಲಿರಬಹುದೆಂದು ಹೇಳುತ್ತಾರೆ."[೬೧] "....ಶೈವ ಮತ್ತು ವೈಷ್ಣವ ಪಂಥಗಳೊಂದಿಗೆ ಜೈನವು ಸ್ಪರ್ಧಿಸಿ, ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವಲ್ಲಿ ಧರ್ಮಪ್ರಸಾರ ಮಾಧ್ಯಮಗಳನ್ನು ಜನಪ್ರಿಯಗೊಳ್ಳುವ ಹಾಗೆ ಸರಳಗೊಳಿಸಿತು. ನೀತಿ ಕಥೆಗಳು, ಉಪಾಖ್ಯಾನ ಕಥೆಗಳು, ಪ್ರಸಿದ್ಧರಾದ ಪ್ರಾಚೀನ ಜೈನಾಚಾರ್ಯರ ಧರ್ಮಗ್ರಂಥಗಳ ಟೀಕೆ, ವ್ಯಾಖ್ಯಾನಗಳು, ತೀರ್ಥಂಕರರ ಚರಿತ್ರೆಗಳು, ವೇದಸಾಹಿತ್ಯ ಗ್ರಂಥಗಳು ಇವು ಆ ಕೆಲಸವನ್ನು ಸಾಧಿಸಲು ನೆರವಾದವು. ವಿಶೇಷವಾಗಿ ಚಾಲುಕ್ಯ ಮತ್ತು ಹೊಯ್ಸಳ ಹಿಡುವಳಿಯ ಸೀಮೆಯಲ್ಲಿದ್ದ ಜೈನಪಂಡಿತ ಕವಿಗಳ ಮೂಲಕ ಅದು ಸಾಧ್ಯವಾಯಿತು"[೬೨] ಎಂದು ಕವಿಚರಿತೆಕಾರರು ಹೇಳುತ್ತಾರೆ.

ಹೀಗೆ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಉಲ್ಲೇಖಿಸಲಾದ ಟೀಕಾಕೃತಿ, ಟೀಕಾಚಾರ್ಯರು ಮತ್ತು ನಾಡಿನ ವಿದ್ವಾಂಸರು ಬರೆದ ಸಂಶೋಧಿತ ಪ್ರಬಂಧಗಳನ್ನು ಆಧರಿಸಿ ಕನ್ನಡ ಟೀಕಾಸಾಹಿತ್ಯ ಪರಂಪರೆಯ ಮೂರು ಹೆದ್ದೊರೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಅಲ್ಲದೇ, ಅನಾಮಧೇಯ ಟೀಕಾಕಾರರ ಅಪಾರ ಹಸ್ತಪ್ರತಿಗಳು ಲಭ್ಯವಾಗಿವೆಯಲ್ಲದೇ, ಅಮರಕೋಶವೊಂದಕ್ಕೆ ೨೦ ಜನ ಟೀಕೆ ಬರೆದಿರುವುದನ್ನು ಗಮನಿಸಿದರೆ ಕಾವ್ಯ, ವಚನಗಳಂತೆಯೇ ಶಾಸ್ತ್ರಸಾಹಿತ್ಯಕ್ಕೂ ಅಪಾರ ಸಂಖ್ಯೆಯಲ್ಲಿ ಟೀಕೆ, ವ್ಯಾಖ್ಯಾನ ಕೃತಿಗಳು ರಚನೆಯಾಗಿರುವುದು ತಿಳಿದುಬರುತ್ತದೆ. ಈ ಹಿನ್ನಲೆಯಲ್ಲಿ "....ಸೃಜನಗೊಂಡ ಕನ್ನಡಸಾಹಿತ್ಯ ಕೃತಿಗಳಿಗೆ ಅರ್ಧದಷ್ಟು ಟೀಕೆಗಳು ರಚನೆಗೊಂಡಿವೆಯೆಂದರೆ ಆಶ್ಚರ್ಯಪಡಬೇಕಾಗಿಲ್ಲ"[೬೩] ಎನ್ನುವ ಡಾ.ಕೆ. ರವೀಂದ್ರನಾಥರ ಅಭಿಪ್ರಾಯದಿಂದ ಕನ್ನಡ ಟೀಕಾ ಸಾಹಿತ್ಯದ ಬೃಹತ್ ಪರಂಪರೆಯು ಹುಲುಸಾಗಿ ಬೆಳೆದುಬಂದಿದೆ ಎಂಬುದು ಮನವರಿಕೆಯಾಗುತ್ತದೆ.

"ಒಂದು ಅಂದಾಜಿನ ಪ್ರಕಾರ ಮೂರು ಸಾವಿರ ವ್ಯಾಖ್ಯಾನ ಪ್ರತಿಗಳು ಕಂಡುಬರುತ್ತವೆ. ಇನ್ನೂ ಸಂಗ್ರಹಗೊಳ್ಳದೇ ಇರುವ ಹಾಗೂ ಸಂಗ್ರಹಗೊಂಡಿದ್ದರೂ ಸೂಚೀಕರಣವಾಗದೇ ಉಳಿದಿರುವ ಹಸ್ತಪ್ರತಿಗಳಲ್ಲಿ ಟೀಕೆಯನ್ನು ಬರೆಸಿಕೊಂಡ ಕೃತಿಗಳ ಬಹುದೊಡ್ಡ ನಿಧಿ ಅಡಗಿಕುಳಿತಿದೆ"[೬೪] ಎಂಬ ಡಾ.ಕೆ. ರವೀಂದ್ರನಾಥರ ಅಭಿಪ್ರಾಯದಲ್ಲಿ ಯಾವುದೇ ಉತ್ಪ್ರೇಕ್ಷೆ ಇಲ್ಲ. ಈ ದಿಶೆಯಲ್ಲಿ ರಾಜ್ಯ ಹಾಗೂ ಹೊರರಾಜ್ಯದ ನಾನಾ ವಿಶ್ವವಿದ್ಯಾಲಯಗಳು, ಖಾಸಗೀ ಪ್ರಕಟನಾ ಸಂಸ್ಥೆಗಳು, ಮಠಮಾನ್ಯಗಳು, ವ್ಯಕ್ತಿಗತವಾಗಿ ವಿದ್ವಾಂಸರು ಪ್ರಕಟಿಸಿದ ಹಸ್ತಪ್ರತಿಗಳ ಸೂಚಿ ಸಂಪುಟಗಳಲ್ಲಿ ಉಲ್ಲೇಖವಾದ ಟೀಕಾ ಸಾಹಿತ್ಯ ಕೃತಿಗಳನ್ನು ಶೋಧಿಸಿ ಪ್ರಕಟಣೆ ಮಾಡಿದಲ್ಲಿ ಕನ್ನಡ ಟೀಕಾ ಸಾಹಿತ್ಯದ ನೈಜವಾದ ಚಿತ್ರಣವನ್ನು ಕಾಲಾನುಕ್ರಮಣಿಕೆ ಮಾದರಿಯಲ್ಲಿ ಗುರುತಿಸಲು ಸಾಧ್ಯವಾಗುತ್ತದೆ.

**ಅಡಿಟಿಪ್ಪಣಿಗಳು**

೧. ಬಸವಣ್ಣನವರ ಟೀಕಿನ ವಚನಗಳು,(ಸಂ.)ಡಾ.ಎಂ.ಎಂ.ಕಲಬುರ್ಗಿ ಪ್ರಸ್ತಾವನೆ ಪುಟ.೪

೨. ನಂಬರ್ ೪೯೦ ಎ ಹಾಗೂ ಆರ್ ಸನ್ ೧೮೭೫-೭೬ನೇ ರಿಪೋರ್ಟ್.

೩. ಕರ್ನಾಟಕ ಕವಿಚರಿತೆ, ಆರ್ ನರಸಿಂಹಾಚಾರ್ಯ ಸಂಪುಟ-೧. ಪು-೪

೪. ಅದೇ, ಪುಟ–೧೧೩ ಅಡಿಟಿಪ್ಪಣಿ

೫. ಅದೇ, ಪುಟ–೮

೬. ಅದೇ, ಪುಟ ೮–೯

೭. ಅದೇ, ಪುಟ ೫೧ ಅಡಿಟಿಪ್ಪಣಿ

೮. ಅದೇ, ಪುಟ–೧೦೩, ೧೦೪

೯. ಅದೇ, ಪುಟ–೧೩೫, ೧೩೬

೧೦. ಅದೇ, ಪುಟ–೬

೧೧. ಅದೇ, ಪುಟ–೧೭೭

೧೨. ಅದೇ, ಪುಟ–೧೮೪, ೧೮೫

೧೩. ಕನ್ನಡ ಟೀಕಾ ಸಾಹಿತ್ಯ, ಡಾ. ಕೆ.ರವೀಂದ್ರನಾಥ. ಕ.ವಿ.ವಿ.ಹಂಪಿ, ೨೦೦೬, ಪುಟ–೨೫.

೧೪. ಅದೇ, ಪುಟ–೨೫.

೧೫. ಅದೇ, ಪುಟ–೧೦೫.

೧೬. ಕರ್ನಾಟಕ ಕವಿಚರಿತೆ, ಆರ್. ನರಸಿಂಹಾಚಾರ್, ಸಂಪುಟ–೧. ಪುಟ–೬೫೨.

೧೭. ಬಸವಣ್ಣನವರ ಟೀಕಿನ ವಚನಗಳು, (ಸಂ.) ಡಾ.ಎಂ.ಎಂ. ಕಲಬುರ್ಗಿ, ಸಂಪುಟ–೨. ಪ್ರಸ್ತಾವನೆ ಪುಟ–೪.

೧೮. ಕರ್ನಾಟಕ ಕವಿಚರಿತೆ, ಆರ್. ನರಸಿಂಹಾಚಾರ್. ಸಂಪುಟ–೩. ಪುಟ–೯೦೦.

೧೯. ಅದೇ, ಸಂಪುಟ–೧. ಪುಟ–೬೫೨–೬೫೩

೨೦. ಅದೇ, ಸಂಪುಟ–೨. ಪುಟ–೮೩೭

೨೧. ಬಸವಣ್ಣನವರ ಟೀಕಿನ ವಚನಗಳು(ಸಂ.)ಡಾ.ಎಂ.ಎಂ.ಕಲಬುರ್ಗಿ, ಸಂಪುಟ–೧, ಪ್ರಸ್ತಾವನೆ, ಪುಟ–೪

೨೨. ಬಸವಣ್ಣನವರ ವಚನಗಳು, ವಚನ ಸಂಖ್ಯೆ: ೭೯೭

೨೩. ಶಿವಸಂಗಮ(ಸಂ.) ಡಾ.ಬಿ.ವಿ.ಶಿರೂರ, ಪುಟ–೪೯

೨೪. ಅರ್ಚನ, ಸುತ್ತೂರು ಜಗದ್ಗುರು ಶಿವರಾಜೇಂದ್ರ ಶ್ರೀ ಪಟ್ಟಾಧಿಕಾರ ಸುವರ್ಣ ಮಹೋತ್ಸವ ಅಭಿನಂದನ ಗ್ರಂಥ, ಸಂ. ಡಾ. ಎಚ್.ಪಿ. ಮಲ್ಲೇದೇವರು, ಪುಟ–೧೦೪೦

೨೫. ಮೈಸೂರು ವಿಶ್ವವಿದ್ಯಾನಿಲಯ, ಹಸ್ತಪ್ರತಿಸೂಚಿ ೨, ಪುಟ–೭೬೮

೨೬. ಕನ್ನಡ ಟೀಕಾ ಸಾಹಿತ್ಯ, ಡಾ.ಕೆ.ರವೀಂದ್ರನಾಥ, ಪುಟ–೩೭

೨೭. ಕರ್ನಾಟಕ ಕವಿಚರಿತೆ ಆರ್. ನರಸಿಂಹಾಚಾರ್, ಸಂಪುಟ ೧. ಪುಟ–೨೪೫

೨೮. ಅದೇ, ಅನುಬಂಧ–೧, ಪುಟ–೨೧

೨೯. ಚೆನ್ನಬಸವ ಪುರಾಣ ಕಾಂಡ ೫ ಸಂಧಿ–೯, ಪದ್ಯ–೬೩

೩೦. ಕರ್ನಾಟಕ ಕವಿಚರಿತೆ ಆರ್.ನರಸಿಂಹಾಚಾರ್, ಸಂಪುಟ-೨ ಪುಟ-೪೪೨

೩೧. ಅದೇ, ಪುಟ-೫೨೨

೩೨. ವೀರಶೈವಾಮೃತ ಪುರಾಣ ಕಾಂಡ-೭ ಸಂಧಿ-೧೮, ಪದ್ಯ-೨೦

೩೩. ಅದೇ, ಸಂಪುಟ-೨, ಪುಟ-೨೮

೩೪. ಅದೇ, ಸಂಪುಟ-೨, ಪುಟ-೫೬

೩೫. ಅದೇ, ಸಂಪುಟ-೨, ಪುಟ-೬೫

೩೬. ಅದೇ, ಸಂಪುಟ-೨, ಪುಟ-೯೩

೩೭. ಅದೇ, ಸಂಪುಟ-೨, ಪುಟ-೧೦೦

೩೮. ಅದೇ, ಸಂಪುಟ-೨, ಪುಟ-೧೦೫

೩೯. ಇಂಡಿಯನ್ ಎಂಟಿಕ್ವರಿ, ಪುಟ-೧೮೩

೪೦. ಕನ್ನಡ ಟೀಕಾ ಸಾಹಿತ್ಯ, ಡಾ.ಕೆ.ರವೀಂದ್ರನಾಥ, ಪುಟ-೪೪

೪೧. ಕರ್ನಾಟಕ ಕವಿಚರಿತೆ ಆರ್.ನರಸಿಂಹಾಚಾರ್, ಸಂಪುಟ ೨. ಪುಟ-೨೧೪

೪೨. ಅದೇ, ಪುಟ-೨೩೭

೪೩. ಕನ್ನಡ ಟೀಕಾ ಸಾಹಿತ್ಯ, ಡಾ.ಕೆ. ರವೀಂದ್ರನಾಥ. ಪುಟ-೪೫

೪೪. ಅದೇ, ಪುಟ-೪೬

೪೫. ಕರ್ನಾಟಕ ಕವಿಚರಿತೆ, ಆರ್.ನರಸಿಂಹಾಚಾರ್, ಸಂಪುಟ-೩, ಪುಟ-೩೬

೪೬. ಕನ್ನಡ ಟೀಕಾ ಸಾಹಿತ್ಯ, ಡಾ.ಕೆ.ರವೀಂದ್ರನಾಥ, ಪುಟ-೩೭

೪೭. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೪. ಭಾಗ ೧ ಪುಟ-೧೩೧

೪೮. ಕನ್ನಡ ಟೀಕಾಸಾಹಿತ್ಯ, ಡಾ.ಕೆ.ರವೀಂದ್ರನಾಥ, ಪುಟ-೪೮

೪೯. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ೨ನೇ ಸಂಪುಟ, ಮೈಸೂರು ವಿಶ್ವವಿದ್ಯಾನಿಲಯ, ಪುಟ.೩೪೯

೫೦. ಕನ್ನಡ ಟೀಕಾ ಸಾಹಿತ್ಯ, ಡಾ.ಕೆ.ರವೀಂದ್ರನಾಥ, ಪುಟ-೪೮

೫೧. ಅದೇ, ಪುಟ-೪೮

೫೨. ಕನ್ನಡ ಟೀಕಾ ಸಾಹಿತ್ಯ, ಡಾ.ಕೆ.ರವೀಂದ್ರನಾಥ, ಪುಟ-೫೨

೫೩. ಶಾಸ್ತ್ರೀಯ ಸಂಪುಟ-೩, ಪುಟ-೬೮-೬೯

೫೪. ಕರ್ನಾಟಕ ಕವಿಚರಿತೆ, ಆರ್.ನರಸಿಂಹಾಚಾರ್, ಸಂಪುಟ-೩, ಅನುಬಂಧ ಪುಟ-೩೦

೫೫. ಅದೇ, ಪುಟ-೧೫೧

೫೬. ಅದೇ, ಪುಟ-೪೦

೫೭. ಅಸಗನ ವರ್ಧಮಾನ ಪುರಾಣದ ಕನ್ನಡ ವ್ಯಾಖ್ಯಾನ, ಜಯಂತಿ, ೧೮-೨ ಜುಲೈ-೧೯೯೫, ಪುಟ-೪೮

೫೮. ಕರ್ನಾಟಕ ಕವಿಚರಿತೆ, ಆರ್.ನರಸಿಂಹಾಚಾರ್, ಸಂಪುಟ-೩, ಪುಟ-೩೦೧

೫೯. ಕರ್ನಾಟಕ ಕವಿಚರಿತೆ, ಆರ್.ನರಸಿಂಹಾಚಾರ್, ಪುಟ-೩೫೫

೬೦. ಕರ್ನಾಟಕ ಕವಿಚರಿತೆ, ಆರ್.ನರಸಿಂಹಾಚಾರ್, ಸಂಪುಟ-೨, ಪುಟ-೫೯೨

೬೧. ಕರ್ನಾಟಕ ಕವಿಚರಿತೆ, ಆರ್.ನರಸಿಂಹಾಚಾರ್, ಸಂಪುಟ-೩, ಪುಟ-೧೮೨೪

೬೨. ಕರ್ನಾಟಕ ಕವಿಚರಿತೆ, ಆರ್.ನರಸಿಂಹಾಚಾರ್, ಸಂಪುಟ-೨, ಪುಟ-೫೯೨

೬೩. ಕನ್ನಡ ಟೀಕಾಸಾಹಿತ್ಯ ಡಾ.ಕೆ.ರವೀಂದ್ರನಾಥ, ಪುಟ-೫೩

೬೪. ಅದೇ, ಪುಟ-೫೩

* * *

೪

## ವಚನ ಟೀಕಾ ಸಾಹಿತ್ಯದ ಪ್ರಕಟಣಾ ಇತಿಹಾಸ

ಕರ್ನಾಟಕದ ಜೈನ, ಲಿಂಗಾಯತ, ಬ್ರಾಹ್ಮಣ ಧರ್ಮಗಳ ಪ್ರಭಾವದಿಂದಾಗಿ ಆಯಾ ಕಾಲಘಟ್ಟಗಳಲ್ಲಿ ಅಪಾರವಾದ ಧಾರ್ಮಿಕ ಸಾಹಿತ್ಯ ರಚನೆಯಾಯಿತು. ಆಯಾ ಧರ್ಮದ ಕಾವ್ಯ ಪುರಾಣ ಗ್ರಂಥಗಳನ್ನು ತಾತ್ವಿಕವಾಗಿ ಅರ್ಥೈಸಲು, ಅರ್ಥೈಸಿಕೊಂಡದ್ದನ್ನು ನಾಡಿನ ಜನಸಾಮಾನ್ಯರಿಗೂ ತಿಳಿಸಲು ಮಾಡಿದ ಪ್ರಯತ್ನಗಳೇ ಟೀಕಾ ಸಾಹಿತ್ಯ ರಚನೆಗೆ ಪ್ರೇರಕವಾಯಿತು. ಈ ಹಿನ್ನಲೆಯಲ್ಲಿ ಜೈನರಿಂದ ಆರಂಭಗೊಂಡ ಕನ್ನಡ ಟೀಕಾ ಸಾಹಿತ್ಯ ೧೫ನೇ ಶತಮಾನದ ಪ್ರೌಢದೇವರಾಯನ ಕಾಲದಲ್ಲಿ ಲಿಂಗಾಯತ ಟೀಕಾ ಸಾಹಿತ್ಯ ಸಮರೋಪಾದಿಯಾಗಿ ರಚನೆಗೊಂಡಿತು. ಶಿವಶರಣರ ವಚನಗಳ ಸಂಕಲನ, ಸಂಪಾದನೆಯ ಜೊತೆಗೆ ಟೀಕೆ-ವ್ಯಾಖ್ಯಾನಗಳನ್ನು ಬರೆಯಲಾಯಿತು. ಕಾರಣ, ವಚನಗಳ ಅರ್ಥವು ಅನರ್ಥವಾಗದೇ, ಅವುಗಳ ನೈಜವಾದ ಅರ್ಥ ಇಲ್ಲವೇ ಭಾವವನ್ನು ತಿಳಿಸುವ ಮೂಲಕ ಧರ್ಮದ ತತ್ವ-ಸಿದ್ಧಾಂತಗಳನ್ನು ಸರಳವಾಗಿ ತಿಳಿಸಿಕೊಡುವ ದೂರದೃಷ್ಟಿ ಟೀಕು ಸಾಹಿತ್ಯದ ರಚನೆಗೆ ಪ್ರೇರಣೆಯಾಗಿರಬೇಕು. ಇದರ ಪರಿಣಾಮವಾಗಿ ಪ್ರಾಚೀನದಿಂದ ಆಧುನಿಕರವರೆಗೂ ರಚಿತವಾದ ಆಯಾ ಧರ್ಮ ಹಾಗೂ ಶಾಸ್ತ್ರಗ್ರಂಥಗಳಿಗೆ ಆಯಾಕಾಲದಲ್ಲಿ ಟೀಕು, ವ್ಯಾಖ್ಯಾನಗಳು ರಚನೆಗೂಂಡವು. ಅದರಂತೆ ನಾಡಿನ ಶಿವಶರಣರ ವಚನಗಳಿಗೆ ಪ್ರಾಚೀನ ಟೀಕೆ, ವ್ಯಾಖ್ಯಾನಗಳು ರಚನೆಯಾಗಿರುವಂತೆ, ಆಧುನಿಕ ಸಂದರ್ಭದಲ್ಲಿಯೂ ಕೂಡಾ ಶಿವಶರಣರ ವಚನಗಳನ್ನು ಈ ನಾಡಿನ ಹಲವಾರು ಮಠಗಳು, ಶ್ರೀಗಳು, ವಿದ್ವಾಂಸರು ವಿಮರ್ಶೆಗೆ ಒಳಪಡಿಸುವ, ವಚನಗಳಿಗೆ ಭಾವಾರ್ಥ ಇಲ್ಲವೇ ಸರಳ ವ್ಯಾಖ್ಯಾನ ಬರೆಯುವ ಮೂಲಕ ಟೀಕಾ ಪರಂಪರೆಯ ಶ್ರೀಮಂತಿಕೆಗೆ ಭಾಜನರಾಗಿದ್ದಾರೆ.

೧೨ನೇ ಶತಮಾನದಲ್ಲಿ ರಚನೆಯಾದ ಶಿವಶರಣರ ವಚನಗಳಿಗೆ ನೂರೊಂದು ವಿರಕ್ತರು, ನಂತರದ ಏಳುನೂರೊಂದು ವಿರಕ್ತರು ಧಾರ್ಮಿಕ ಹಾಗೂ ತಾತ್ವಿಕ ನೆಲೆಯಲ್ಲಿ ಅರ್ಥೈಸುವ ಮೂಲಕ 'ಸ್ಥಲಕಟ್ಟು'ಗಳಲ್ಲಿ ಸಂಕಲಿಸುವ, ಸಂಪಾದಿಸುವ, ವ್ಯಾಖ್ಯಾನಿಸುವ ಸಾಮೂಹಿಕವಾದ ಚಳುವಳಿಯ

ಸ್ವರೂಪವನ್ನು ನೀಡಿದರು. ಇದರ ಪರಿಣಾಮವಾಗಿ ೧೫ ರಿಂದ ೧೯ನೇ ಶತಮಾನದ ಕಾಲಘಟ್ಟದಲ್ಲಿ ಶರಣರ ವಚನ ಸಾಹಿತ್ಯ ಟೀಕು, ವ್ಯಾಖ್ಯಾನಗಳಲ್ಲಿ ರಚನೆಯಾಗುತ್ತ ಈ ನಾಡಿನ ಜನಮನದಲ್ಲಿ ನಿತ್ಯ ಪ್ರವಾಹವಾಗಿಯೇ ಹರಿದುಕೊಂಡು ಬಂದಿತು. ಬಸವಣ್ಣ, ಅಲ್ಲಮ, ತೋಂಟದಾರ್ಯರಂತಹ ಪ್ರಸಿದ್ಧ ವಚನಕಾರರ ವಚನಗಳಿಗೆ ಹಲವಾರು ವಿದ್ವಾಂಸರು ವ್ಯಾಖ್ಯಾನ ಬರೆದರು. 'ಎಲೆಮರೆಯ ಕಾಯಿಯಂತೆ' ನಾಡಿನ ಹಲವಾರು ಮಠಮಾನ್ಯಗಳಲ್ಲಿ, ವ್ಯಕ್ತಿಗಳಲ್ಲಿದ್ದ ಹಸ್ತಪ್ರತಿಗಳು ಕೇವಲ ಪೂಜೆಗೆ, ಮನೆತನದ ಪ್ರತಿಷ್ಠೆಯ ಪ್ರತೀಕವಾಗಿ ಉಳಿದುಕೊಂಡು ಬಂದಿದ್ದವು. ನಾಡಿನ 'ವಚನ ಪಿತಾಮಹ'ರೆಂದೇ ಪ್ರಸಿದ್ಧರಾದ ಡಾ. ಫ.ಗು ಹಳಕಟ್ಟಿಯವರು ತಮ್ಮ ಜೀವನವನ್ನೇ ವಚನ ಹಸ್ತಪ್ರತಿ ಶೋಧ, ಪ್ರಕಟನೆ ಮತ್ತು ಸಂಶೋಧನೆಗಾಗಿ ಮೀಸಲಿಡುವ ಮೂಲಕ ಎಲ್ಲರ ಗಮನ ಸೆಳೆದರು. ವಚನ ಸಾಹಿತ್ಯ ಅಧ್ಯಯನ ಮತ್ತು ಸಂಶೋಧನೆಗೆ ಹಾದಿಮಾಡಿಕೊಟ್ಟರು. ಇದರಿಂದ ಹಲವಾರು ಜ್ಞಾತ-ಅಜ್ಞಾತ ಕೃತಿಗಳು ಬೆಳಕಿಗೆ ಬಂದವು.

೨೦ನೇ ಶತಮಾನದ ಈ ಕಾಲಘಟ್ಟವನ್ನು ವಚನ ಸಾಹಿತ್ಯ ಪ್ರಕಟನೆಯ ಪುನರುಜ್ಜೀವನದ ಮೂರನೇ ಪ್ರಮುಖ ಘಟ್ಟವೆಂದು ಕರೆಯಬಹುದು. ಡಾ.ಫ.ಗು. ಹಳಕಟ್ಟಿಯವರೇ ಈ ಕಾಲಘಟ್ಟದ ಕೇಂದ್ರವ್ಯಕ್ತಿಯಾಗಿ ಅಳಿವಿನ ಅಂಚಿನಲ್ಲಿದ್ದ ವಚನ ಹಸ್ತಪ್ರತಿಗಳನ್ನು ಸಂಗ್ರಹಿಸಿ, ಅವನ್ನು ಸಂಪಾದಿಸುವ, ವಚನಗಳಿಗೆ ಬಾವಾರ್ಥ ಮಾದರಿಯಲ್ಲಿ ಟೀಕು ಬರೆಯುವ, ಶ್ರಮವಹಿಸಿ ಬರೆದದ್ದನ್ನು 'ಶಿವಾನುಭವ' ಪತ್ರಿಕೆಯ ಮೂಲಕ ಪ್ರಕಟಿಸುವ ಸಾಹಸವನ್ನು ಏಕವ್ಯಕ್ತಿ ನೆಲೆಯಲ್ಲಿ ಮಾಡಿದರು. ವಚನಗಳನ್ನು ಅರ್ಥಮಾಡಿಕೊಳ್ಳಲು ಪ್ರಾಚೀನ ಟೀಕಾಕಾರರು ಬರೆದಿದ್ದ ವಚನ ಟೀಕುಗಳನ್ನು ಯಥಾವತ್ತಾಗಿ ಪ್ರಕಟಿಸಿದ ಈ ಕಾಲಘಟ್ಟದ ಮೊದಲಿಗರಾದಂತೆ, ಶಿವಶರಣರ ವಚನಗಳಿಗೆ ಭಾವಾರ್ಥ ಮತ್ತು ಶಬ್ದಾರ್ಥಗಳನ್ನು ಬರೆಯುವ ಮೂಲಕ ಆಧುನಿಕ ಟೀಕಾಕಾರರಾಗಿಯೂ ಗುರುತಿಸಿಕೊಂಡರು. ಇವರ ಸಮಕಾಲೀನರಾಗಿದ್ದ ಹರ್ಡೇಕರ ಮಂಜಪ್ಪನವರು "ವಚನ ಸಂಪಾದನೆಗಿಂತಲೂ ವಚನಗಳ ಪ್ರಚಾರದತ್ತ ಹೆಚ್ಚು ಒಲವನ್ನು ತೋರಿಸಿದರು. ಬಸವಣ್ಣ ಮುಂತಾದ ಶರಣರ ಜೀವನ ಚರಿತ್ರೆಗಳನ್ನು ಬರೆದು ಶರಣ ಧರ್ಮದ ಪ್ರಸಾರಕ್ಕೆ ಕಾರಣೀಕರ್ತರಾದರು. ೧೦೮ ವಚನಗಳ ವ್ಯಾಖ್ಯಾನವನ್ನು ಒಳಗೊಂಡ 'ಬಸವ ಬೋಧಾಮೃತ' ಎಂಬ ವಚನ ವ್ಯಾಖ್ಯಾನ ಗ್ರಂಥವನ್ನು ಇವರು ಪ್ರಕಟಿಸಿದರು."[೧]

ಡಾ. ಫ.ಗು. ಹಳಕಟ್ಟಿಯವರು ಆರಂಭ ಮಾಡಿದ ಆಧುನಿಕ ಕನ್ನಡ ಟೀಕಾ ಸಾಹಿತ್ಯ ಪರಂಪರೆಗೆ ಕಾಲದ ಅಗತ್ಯಕ್ಕೆ ತಕ್ಕಂತೆ ನಾಡಿನ ಹಲವಾರು ವಿದ್ವಾಂಸರು ವಚನಗಳಿಗೆ ಟೀಕೆ, ಭಾವಾರ್ಥ ಬರೆಯುವ ಮೂಲಕ ನಾಂದಿಹಾಡಿದರು. ಡಾ. ಬಿ.ವಿ. ಮಲ್ಲಾಪೂರ ಅವರು "ಈ ಘಟ್ಟದಲ್ಲಿ ಪ್ರಕಟಗೊಂಡಿರುವ ವಚನ ಗ್ರಂಥಗಳ ಸಂಪಾದಕರು ಅಥವಾ ಪರಿಶೋಧಕರು ಹೆಚ್ಚಾಗಿ ಜಂಗಮರು, ಶಾಸ್ತ್ರೀಗಳು, ಸ್ವಾಮಿಗಳು. ಅವುಗಳನ್ನು ಪ್ರಕಟಿಸಿದವರು ವೈಶ್ಯ ಶೆಟ್ಟರು. ಅದರಲ್ಲಿಯೂ ಬಳ್ಳಾರಿಯ ವೈಶ್ಯ ಶೆಟ್ಟರೆ ಅಧಿಕ, ಹದಿನೈದು ಹದಿನಾರನೆಯ ಶತಮಾನದಲ್ಲಿ ಹಂಪೆಯಲ್ಲಿ ನಡೆದ ಅಭೂತಪೂರ್ವ ವಚನ ಸಂಕಲನ ಕಾರ್ಯದ ಪ್ರಭಾವ ಹಾಗೂ ಸಂಸ್ಕಾರಗಳು ಜನಮನದಿಂದ ಸಂಪೂರ್ಣ ಅಳಿಸಿ

ಹೋಗದಿದ್ದುದೆ ಇದಕ್ಕೆ ಕಾರಣವಾಗಿರಬೇಕು"[೨] ಎಂದು ಅಭಿಪ್ರಾಯಪಟ್ಟಿದ್ದಾರೆ. ಇವರ ಹೇಳಿಕೆಯಂತೆ – "ವಚನ ಗ್ರಂಥಗಳ ಸಂಪಾದಕರು, ಪರಿಶೋಧಕರು ಹೆಚ್ಚಾಗಿ ಜಂಗಮರು, ಶಾಸ್ತ್ರೀಗಳು, ಸ್ವಾಮಿಗಳು ಎಂಬುದನ್ನು ಒಪ್ಪುವುದು ಅಸಾಧ್ಯ ಆದರೆ 'ಪ್ರಕಟಿಸಿದವರು ವೈಶ್ಯ ಶೆಟ್ಟರು' ಎಂಬುದನ್ನು ಅಲ್ಲಗಳೆಯಲಾಗದು. ಏಕೆಂದರೆ ಈ ಘಟ್ಟದ ಪ್ರಮುಖರಾದ ಡಾ. ಹಳಕಟ್ಟಿ, ಹರ್ಡೇಕರ ಮಂಜಪ್ಪ, ವಿ.ರು. ಕೊಪ್ಪಳ, ಚೆನ್ನಮಲ್ಲಿಕಾರ್ಜುನರು ಮುಂತಾದ ಜಂಗಮೇತರ ವಿದ್ವಾಂಸರು ವಚನ ಸಾಹಿತ್ಯ ಸಂಪಾದನೆ, ಪ್ರಕಟಣೆಗೆ ಮುಂದಾಗಿರುವುದನ್ನು ಲಕ್ಷಿಸಬಹುದು. ಇವರೊಟ್ಟಿಗೆ ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು, ಸೋಮಶೇಖರ ಶಾಸ್ತ್ರಿ ಹಿರೇಮಠ ಬೆಣಕಲ್ಲು, ಶಿವಲಿಂಗಯ್ಯ ಚಿಕ್ಕೋಡಿ, ಚಂದ್ರಶೇಖರ ದೇವರು ಅಡ್ನೂರು(ಜಚನಿ), ಜಿ.ಶಿವಮೂರ್ತಿ ಶಾಸ್ತ್ರಿಗಳು, ಡಾ. ಆರ್.ಸಿ. ಹಿರೇಮಠ, ಇಮ್ಮಡಿ ಶಿವಬಸವ ಸ್ವಾಮಿಗಳು, ಪ್ರಭುಸ್ವಾಮಿಗಳು ಬೂದಿಸಂಸ್ಥಾನಮಠ, ಡಾ.ಬಿ.ಆರ್. ಹಿರೇಮಠ, ಜಿ.ಎ. ಶಿವಲಿಂಗಯ್ಯ, ಡಾ.ಎಸ್. ವಿದ್ಯಾಶಂಕರ ಡಾ. ವಿ. ಶಿವಾನಂದ ಮುಂತಾದವರು ಕೈಗೊಂಡ ಸಾಧನೆಯನ್ನು ಮರೆಯಲಾಗದು. ಹೀಗೆ ಲಿಂಗಾಯತ ಟೀಕಾ ಸಾಹಿತ್ಯದ ಪ್ರಾಚೀನ ಹಸ್ತಪ್ರತಿಗಳನ್ನು ಸಂಪಾದಿಸಿ ಪ್ರಕಟಿಸುವ ಮಹತ್ತರವಾದ ಕಾರ್ಯಗಳನ್ನು ನಾಡಿನ ವಿದ್ವಾಂಸರು, ವಿಶ್ವವಿದ್ಯಾನಿಲಯಗಳ ಅಧ್ಯಾಪಕರು, ಮಠಮಾನ್ಯಗಳ ಪೂಜ್ಯರು ಕೈಗೊಳ್ಳುವ ಮೂಲಕ ಗಮನಸೆಳೆಯುತ್ತಾರೆ. ವಿಶೇಷವಾಗಿ ಉತ್ತರ ಕರ್ನಾಟಕ ಭಾಗದ ಬಿಜಾಪೂರ, ಆಲಮಟ್ಟಿ, ಶಿವಯೋಗಮಂದಿರ, ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ, ಗದಗ ಶ್ರೀ ತೋಂಟದಾರ್ಯಮಠ, ಹುಬ್ಬಳ್ಳಿಯ ಮೂರುಸಾವಿರಮಠ, ಧಾರವಾಡದ ಮುರುಘಾಮಠ, ಮೈಸೂರು ವಿಶ್ವವಿದ್ಯಾಲಯ, ಮೈಸೂರಿನ ಸುತ್ತೂರು ಮಠ, ಬೆಳಗಾವಿ ನಾಗನೂರು ಶ್ರೀಮಠ ಮುಂತಾದವು ಕನ್ನಡ ಟೀಕಾ ಸಾಹಿತ್ಯದ ಪ್ರಕಟನೆಗೆ, ವಚನಗಳಿಗೆ ಆಧುನಿಕ ಮಾದರಿಯಲ್ಲಿ ವ್ಯಾಖ್ಯಾನಿಸುವಂತೆ ವಿದ್ವಾಂಸರನ್ನು ಪ್ರೋತ್ಸಾಹಿಸಿ ಕೃತಿ ಪ್ರಕಟಿಸುವ ಯೋಜನೆಗೆ ಚಾಲನೆ ನೀಡಿದ ಪರಿಣಾಮ ಆಧುನಿಕ ಟೀಕಾ ಸಾಹಿತ್ಯ ತನ್ನ ಸ್ವರೂಪವನ್ನು ಬದಲಾಯಿಸಿಕೊಂಡು ವ್ಯಾಪಕವಾಗಿ ಪ್ರಕಟವಾಗಿದೆ. ಅಂದರೆ, ಪ್ರಾಚೀನ ಟೀಕಾ ಪರಂಪರೆ ಇವರೆದುರಿಗೆ ಇದ್ದರೂ ಕೂಡಾ ಅವರ ಶಬ್ದಾರ್ಥ ಮಾದರಿಯ ಟೀಕೆಗೆ ಮೊರೆಹೋಗಲಿಲ್ಲ. ಡಾ. ಎಲ್. ಬಸವರಾಜ ಅವರಂತೂ ಶರಣರ ವಚನಗಳಿಗಿರುವ ಪ್ರಾಚೀನ ಟೀಕೆಯ ಮಾದರಿ ಪ್ರಕಟಿಸುವುದರ ಜೊತೆಗೆ ವೈಯಕ್ತಿಕ ಮತ್ತು ಆಧುನಿಕ ನೆಲೆಯಲ್ಲಿ ತಾವು ಕಂಡಂತಹ ಸತ್ಯವನ್ನು ಸಂಕ್ಷೇಪದಲ್ಲಿ ವಿವರಿಸುತ್ತಾರೆ. ವಚನ ಓದುಗರಿಗೆ ತನ್ಮೂಲಕ ನೂತನ ಹೊಳವುಗಳನ್ನು ನೀಡುತ್ತಾರೆ. ಹೀಗೆ, ಕನ್ನಡ ಟೀಕಾಸಾಹಿತ್ಯವು ತೃತೀಯ ಘಟ್ಟ ಇಲ್ಲವೇ ಆಧುನಿಕ ಘಟ್ಟದಲ್ಲಿ ತನ್ನ ಮೂಲ ಸ್ವರೂಪವನ್ನು ಬದಲಿಸಿಕೊಂಡು ಬೆಳೆದುಬಂದ ಬಗೆಯನ್ನು ಇಲ್ಲಿ ವಿವರಿಸಲಾಗುವುದು.

'ವಚನ ಗುಮ್ಮಟ' 'ವಚನ ಪಿತಾಮಹ'ರೆಂದೆ ಹೆಸರುವಾಸಿಯಾಗಿರುವ **ಡಾ.ಫ.ಗು. ಹಳಕಟ್ಟಿಯವರು** ವೀರಶೈವ ಸಾಹಿತ್ಯ ಸಂಪಾದನೆ ಮತ್ತು ಪ್ರಕಟನೆಯನ್ನು ಏಕವ್ಯಕ್ತಿಯಾಗಿ ಕೈಗೊಂಡು ಮಾಡಿರುವ ಬಹುಮುಖ ಸಾಧನೆ ಅವಿಸ್ಮರಣೀಯವಾದುದು. ೧೯೧೦ಳರಲ್ಲಿ ಹಸ್ತಪ್ರತಿಗಳಲ್ಲಿ ಅಡಗಿದ್ದ ವಚನಸಾಹಿತ್ಯವನ್ನು

ಕಂಡು ಅವುಗಳನ್ನು ಪ್ರಕಟಿಸಲೇಬೇಕೆಂಬ ಛಲ ತೋರಿದ್ದರಿಂದ ೧೯೨೩ರಲ್ಲಿ 'ವಚನಶಾಸ್ತ್ರಸಾರ' ಭಾಗ-೧ ಕೃತಿ ಪ್ರಕಟವಾಗಲು ಕಾರಣವಾಯಿತು.

ನಂತರ ೧೨.೧೧.೧೯೨೫ರಲ್ಲಿ ಹಿತಚಿಂತಕ ಪ್ರಿಂಟಿಂಗ್ ಪ್ರೆಸ್, ೧.೨.೧೯೨೬ರಲ್ಲಿ 'ಶಿವಾನುಭವ' ಪತ್ರಿಕೆ ಮತ್ತು 'ಶಿವಾನುಭವ ಗ್ರಂಥ ಮಾಲೆ'ಗೆ ನಾಂದಿ ಹಾಡಿದರು. ಇದರಿಂದಾಗಿ ನಾಡಿನ ಹಲವಾರು ಮಠ ಮನೆಗಳಲ್ಲಿದ್ದ ಅಪ್ರಕಟಿತ ಹಸ್ತಪ್ರತಿಗಳು ಇವರ ಪ್ರಯತ್ನದಿಂದಾಗಿ ಮೊದಲಬಾರಿಗೆ ಪ್ರಕಟನೆಯಾದವು. ನಾಡಿನ ಅಧ್ಯಯನಾಸಕ್ತರಿಗೆ ವಚನ ಸಾಹಿತ್ಯದತ್ತ ಆಸಕ್ತಿ, ಒಲವು ಹೆಚ್ಚಾಗಲು ಕಾರಣೀಭೂತರಾದರು.

ಡಾ. ಹಳಕಟ್ಟಿಯವರ ಬೆಡಗಿನ ವಚನಗಳು, ಬಸವಣ್ಣನವರ ವಚನಗಳು, ಪ್ರಭುದೇವರ ವಚನಗಳು ಟೀಕಾಕೃತಿಗಳಾಗಿವೆ. ಇವರ ವಚನಶಾಸ್ತ್ರ ಸಾರ ಕೃತಿಯಲ್ಲಿ ೧೩೦ ಜನ ವಚನಕಾರ/ಕಾರ್ತಿಯರ ೩೩೨೮ ವಚನಗಳಿವೆ. ಅನೇಕ ಉಪಶೀರ್ಷಿಕೆಗಳ ಅಡಿಯಲ್ಲಿ ಆಯಾ ವಿಷಯಕ್ಕೆ ಸಂಬಂಧಿಸಿದ ವಚನಗಳನ್ನು ಸಂಕಲನ ಮಾಡಿದ್ದಾರೆ. ತಮಗೆ ಲಭ್ಯವಾದ ಪ್ರಾಚೀನ ವಚನಟೀಕೆಗಳನ್ನು ಆಯಾ ವಚನಗಳ ಅಡಿಯಲ್ಲಿಯೇ ಕೊಟ್ಟಿದ್ದಾರೆ.

**ಬಸವೇಶ್ವರನ ವಚನಗಳು** ಕೃತಿಯಲ್ಲಿ ಬಸವಣ್ಣನವರ ೯೫೫ ವಚನಗಳನ್ನು ಷಟ್‌ಸ್ಥಲ ಮಾದರಿಯಲ್ಲಿ ಸಂಕಲಿಸಿದ ಕೃತಿ ಇದು. ೧೯೨೬ರಲ್ಲಿ ಪ್ರಕಟವಾಯಿತು. ಈ ಕೃತಿಯ ಪ್ರಥಮ ಆವೃತ್ತಿಯ ಪ್ರಸ್ತಾವನೆಯಲ್ಲಿ "ಗ್ರಂಥ ಬಾಹುಳ್ಯತೆಯ ಕಾರಣದಿಂದ ಹಳೆಯ ಸಮಗ್ರ ಟೀಕೆಯನ್ನು ಕೊಡಲು ಸಾಧ್ಯವಾಗಿಲ್ಲ"[೩] ಎಂದು ಡಾ. ಹಳಕಟ್ಟಿಯವರು ಹೇಳಿದ್ದಾರೆ. ಇದೇ ಕೃತಿಯ ಎರಡನೇ ಆವೃತ್ತಿಯಲ್ಲಿ ಇಲ್ಲಿನ ಕೆಲವು ವಚನಗಳಿಗೆ ಸರಳಾರ್ಥರೂಪದ ಟಿಪ್ಪಣಿಗಳನ್ನು ಬರೆದಿದ್ದು, ಅದನ್ನು ಗ್ರಂಥದ ಕೊನೆಗೆ ಕೊಟ್ಟಿರುವರು. (ಪುಟ.೧೫೩-೧೮೩). ಇದೇ ಎರಡನೇ ಆವೃತ್ತಿಯ ಪ್ರಸ್ತಾವನೆಯಲ್ಲಿ ಕೈಬರಹದ ಮೂರು ಗ್ರಂಥಗಳಿಂದ ಸಿದ್ಧಗೊಳಿಸಲಾಗಿದೆ. ಎರಡು ಗ್ರಂಥಗಳು ಶಿವಯೋಗ ಮಂದಿರದಿಂದ ದೊರೆತವು. ಮೂರನೇ ಪ್ರತಿಯು ಶ್ರೀ ಶಿವಬಸವ ಸ್ವಾಮಿಗಳು ಹುಕ್ಕೇರಿಮಠ ಮುಕ್ಕಾಂ ಹಾವೇರಿ ಇವರದಿರುತ್ತದೆ. ಈ ಪ್ರತಿಯು ಟೀಕೆಯುಳ್ಳದಿದ್ದು ಇದರಿಂದ ಶುದ್ಧ ಪಾಠಗಳನ್ನು ಕಂಡುಹಿಡಿಯಲು ನಮಗೆ ಬಹಳ ಅನುಕೂಲವಾಯಿತು."[೪] ಎಂದು ಡಾ. ಹಳಕಟ್ಟಿಯವರು ಹೇಳಿರುವುದರಿಂದ ಟೀಕಾಕೃತಿಗಳಿಂದ ವಚನಗಳನ್ನು ಅರ್ಥಮಾಡಿಕೊಳ್ಳುವುದರ ಜೊತೆಗೆ ವಚನಗಳ ಶುದ್ಧಪಾಠವನ್ನು ಕಂಡುಹಿಡಿಯಲು ಸಹಾಯವಾಗಿವೆ ಎಂಬುದು ತಿಳಿದುಬರುತ್ತದೆ.

**ದೇವರ ದಾಸಿಮಯ್ಯನ ವಚನಗಳು** ಡಾ.ಫ.ಗು. ಹಳಕಟ್ಟಿಯವರು ೧೯೨೮ರಲ್ಲಿ ಸಂಪಾದಿಸಿ ಪ್ರಕಟಿಸಿದ ಈ ಕೃತಿ ಆದ್ಯವಚನಕಾರ ದೇವರ ದಾಸಿಮಯ್ಯನ ೧೪೭ ವಚನಗಳ ಸಂಗ್ರಹ ಕೃತಿ. ಶಿವಾನುಭವ ಗ್ರಂಥಮಾಲೆಯ ೧೫ನೇ ಕೃತಿ. ಇಲ್ಲಿಯ ಪ್ರತಿವಚನಕ್ಕೂ ಸರಳವಾದ ಭಾವಾರ್ಥವಿದ್ದು, ಆಯಾ ವಚನಗಳ ಅಡಿಯಲ್ಲಿಯೇ ಕಠಿಣ ಪದಗಳಿಗೆ ಅರ್ಥವನ್ನು ಕೊಟ್ಟಿದ್ದಾರೆ.

ಪ್ರಭುದೇವರ ವಚನಗಳು ಡಾ. ಹಳಕಟ್ಟಿಯವರು ೧೯೩೦-೩೧ರಲ್ಲಿ ಸಂಪಾದಿಸಿ ಪ್ರಕಟಿಸಿದ ಕೃತಿ. ಅಲ್ಲಮಪ್ರಭುದೇವರ ೬೯೩ ಷಟ್‌ಸ್ಥಲದ ವಚನಗಳಿದ್ದು, ಶಿವಾನುಭವ ಗ್ರಂಥಮಾಲೆಯ ೮ನೇ ಕೃತಿ.

ಈ ಕೃತಿಯ ಆರಂಭದಲ್ಲಿ ಪೀಠಿಕಾ ರೂಪದ ೩ ಪುಟಗಳ ಗದ್ಯವಿದೆ. ಷಟ್‌ಸ್ಥಲಕ್ಕೆ ಅನುಗುಣವಾಗಿ (೬ ಸ್ಥಲ) ಒಟ್ಟು ೪೯೩ ವಚನಗಳಿದ್ದು ಪ್ರತಿವಚನಕ್ಕೂ ಪ್ರಾಚೀನ ಟೀಕೆ ಇದೆ. ಆದರೆ, ವಚನಗಳ ಟೀಕಾಕಾರನ ಬಗೆಗೆ ಮಾಹಿತಿ ಲಭ್ಯವಾಗಿಲ್ಲ.

ಅಂಬಿಗರ ಚೌಡಯ್ಯನ ವಚನಗಳು ಶಿವಾನುಭವ ಗ್ರಂಥಮಾಲೆಯ ೪೦ನೇ ಕೃತಿಯಾಗಿ ಸಂಪಾದಿಸಿ ಪ್ರಕಟಿಸಿದ (೧೯೩೩-೩೪) ಅಂಬಿಗರ ಚೌಡಯ್ಯನ ೧೫೦ ವಚನಗಳನ್ನು ಸಂಗ್ರಹಿಸಿಕೊಟ್ಟಿದ್ದಾರೆ. "ವಚನಗಳನ್ನು ಸಂಗ್ರಹಿಸಿ ಅದರ ಅಡಿಯಲ್ಲಿ ಪ್ರತಿ ವಚನದ ಭಾವಾರ್ಥವನ್ನು ಬರೆದಿದ್ದಾರೆ. ಹೀಗೆ, ಈ ಕೃತಿ ಅಂಬಿಗರ ಚೌಡಯ್ಯನ ವಚನಗಳ ಸಂಗ್ರಹ ಹಾಗೂ ವ್ಯಾಖ್ಯಾನವನ್ನೊಳಗೊಂಡಿದೆ."[೫]

ಮೋಳಿಗೆ ಮಾರಯ್ಯನ ವಚನಗಳು 'ನಿಷ್ಕಲಂಕ ಮಲ್ಲಿಕಾರ್ಜುನ' ಅಂಕಿತದ ಮೋಳಿಗೆ ಮಾರಯ್ಯನ ೬೩ ವಚನಗಳ ಸಂಗ್ರಹದ ಈ ಕೃತಿಯನ್ನು ಡಾ. ಹಳಕಟ್ಟಿಯವರು ೧೯೩೬ರಲ್ಲಿ ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಇಲ್ಲಿಯ ವಚನಗಳು ಬೆಡಗಿನ ರೂಪದಲ್ಲಿದ್ದು ಎಲ್ಲ ವಚನಗಳಿಗೂ ಪ್ರಾಚೀನ ಟೀಕೆ ಇದೆ. ಈ ಮಧ್ಯೆ "ಸಕಳೇಶ ಮಾದರಸ ಮತ್ತು ಇತರ ವಚನಗಳು" ಎಂಬ ಕೃತಿಯನ್ನು ಶಿವಲಿಂಗಯ್ಯ ಚಿಕ್ಕೋಡಿಯವರು ಸಂಪಾದಿಸಿದರು. ಈ ಕೃತಿ ೧೯೩೮ರಲ್ಲಿ ಹುಬ್ಬಳ್ಳಿಯ ಚಿಕ್ಕವೀರಯ್ಯನವರ ಅನಾಥ ಬಾಲಕಾಶ್ರಮದಿಂದ ಪ್ರಕಾಶನಗೊಂಡಿದೆ. ಸಕಲೇಶಮಾದರಸನ ೪೮, ಸುಡುಗಾಡಸಿದ್ಧನ ಒಂದು, ಕೀಲಾರದ ಭೀಮಣ್ಣನ ೧೦ ವಚನಗಳನ್ನು ದಂಡ ಚಿಹ್ನೆ ಬಳಕೆಯೊಂದಿಗೆ ಪ್ರಕಟಿಸಲಾಗಿದೆ. ಇದರಲ್ಲಿ ಸುಡುಗಾಡುಸಿದ್ದನ ವಚನಕ್ಕೆ ಮಾತ್ರ ಪ್ರಾಚೀನ ಟೀಕೆ ಇದೆ.

ಶಿವಶರಣರ ಸಂಕೀರ್ಣ ವಚನಗಳು ಭಾಗ - ೧ ೧೯೩೮ರಲ್ಲಿ 'ಶಿವಾನುಭವ' ಪತ್ರಿಕೆಯಲ್ಲಿ ಪ್ರಕಟಿಸಿರುವ ಡಾ. ಹಳಕಟ್ಟಿಯವರು ಗಜೇಶ ಮಸಣಯ್ಯನ ೪೯, ಚಂದಿಮರಸನ ೫೩, ಅರಿವಿನ ಮಾರಿತಂದೆಯ ೧೧೪ ವಚನಗಳಿವೆ. ಒಟ್ಟು ೨೨೬ ವಚನಗಳನ್ನೊಳಗೊಂಡಿರುವ ಈ ಕೃತಿಯಲ್ಲಿ ಅರಿವಿನ ಮಾರಿತಂದೆಯ ವಚನಗಳಿಗೆ ಮಾತ್ರ ಪ್ರಾಚೀನ ಟೀಕೆ ಇದೆ. ಅವನ್ನು ಆಯಾ ವಚನಗಳ ಅಡಿಯಲ್ಲಿ ಪ್ರಕಟಿಸಿದ್ದಾರೆ. ಅದೇ ರೀತಿ ಶಿವಶರಣರ ಸಂಕೀರ್ಣ ವಚನಗಳು ಭಾಗ-೨ ರಲ್ಲಿ ಆರು ಜನ ವಚನಕಾರರ ೨೬೧ ವಚನಗಳನ್ನು ಡಾ. ಹಳಕಟ್ಟಿಯವರು ೧೯೪೦ರಲ್ಲಿ ಸಂಪಾದಿಸಿ, ಶಿವಾನುಭವದಲ್ಲಿ ಪ್ರಕಟಿಸಿದ್ದಾರೆ. ಇಲ್ಲಿಯ ೬ ಜನ ವಚನಕಾರರಲ್ಲಿ ೫ ಜನವಚನಕಾರರ ವಚನಗಳಿಗೆ ಕೆಲವಕ್ಕೆ ಪ್ರಾಚೀನ ಟೀಕೆ ಇದೆ. ಇನ್ನೂ ಕೆಲವಕ್ಕೆ ಡಾ. ಹಳಕಟ್ಟಿಯವರೇ ಭಾವಾರ್ಥ ಬರೆದಿರುವುದು ತಿಳಿಯುತ್ತದೆ. ಹಾವಿನಾಳ ಕಲ್ಲಿದೇವನ ವಚನಗಳಲ್ಲಿ ೬೦ ವಚನಗಳು ಪ್ರಕಟವಾಗಿವೆ. ಈತನ ಅಂಕಿತ ಮಹಾಲಿಂಗ ಕಲ್ಲೇಶ್ವರ. ಪ್ರತಿ ಶಿರ್ಷಿಕೆ ಅಡಿಯಲ್ಲಿ ವಚನಗಳನ್ನು ಸಂಗ್ರಹಿಸಿ, ವಿವರಣೆ ಭಾಗದಲ್ಲಿ ಪ್ರತಿವಚನದ ಭಾವಾರ್ಥವನ್ನು ಬರೆದಿದ್ದಾರೆ. ಮಧುವರಸನ ವಚನಗಳು ಭಾಗದಲ್ಲಿ ಈತನ ೩೫ ವಚನಗಳ ಸಂಗ್ರಹವಿದೆ. ಪ್ರತಿ ವಚನಕ್ಕೂ ಟೀಕೆ ಇದೆ. "ಇವು ಬೆಡಗಿನ ವಚನಗಳಾಗಿದ್ದು ಇವುಗಳಿಗೆ ಯಾರೋ ಒಬ್ಬರು ಭಾವಾರ್ಥ ಬರೆದಿದ್ದಾರೆಂದು"[೬] ಡಾ. ಹಳಕಟ್ಟಿಯವರು ಹೇಳುತ್ತಾರೆ. ಶಿವಲೆಂಕ ಮಂಚಣ್ಣನ ೫೩ ವಚನಗಳನ್ನು ೯ ಶೀರ್ಷಿಕೆಗಳ ಅಡಿಯಲ್ಲಿ ಸಂಗ್ರಹಿಸಿಕೊಟ್ಟಿದ್ದಾರೆ. ಇಲ್ಲಿನ ೮

ವಚನಗಳಿಗೆ ಮಾತ್ರ ಪ್ರಾಚೀನ ಟೀಕೆ ಇದೆ. ಅಷ್ಟಾವರಣ, ಷಟ್‌ಸ್ಥಲಗಳ ಹಿನ್ನಲೆಯಲ್ಲಿ ವಚನಗಳನ್ನು ವಿಭಾಗಿಸಿದ್ದಾರೆ. ಉರಿಲಿಂಗದೇವನ ವಚನಗಳು ವಿಭಾಗದಲ್ಲಿ ೪೯ ವಚನಗಳನ್ನು ಷಟ್‌ಸ್ಥಲಗಳಲ್ಲಿ ಪ್ರಕಟಿಸಿದ್ದು, ಇವುಗಳಿಗೆ ಟೀಕೆ, ಕಠಿಣಪದಗಳ ಅರ್ಥವೂ ಇದೆ. ಬಾಹೂರು ಬೊಮ್ಮಯ್ಯನ ವಚನಗಳು ಕೃತಿಯಲ್ಲಿ ಸಂಗನಬಸವಣ್ಣಪ್ರಿಯ ಬ್ರಹ್ಮೇಶ್ವರಲಿಂಗ ಅಂಕಿತದಲ್ಲಿರುವ ೪೪ ವಚನಗಳು ಪ್ರಕಟವಾಗಿವೆ. ಷಟ್‌ಸ್ಥಲ ಮಾದರಿಯಲ್ಲಿರುವ ಇಲ್ಲಿಯ ಎಲ್ಲ ವಚನಗಳಿಗೂ ಡಾ. ಹಳಕಟ್ಟಿಯವರೇ ವಿವರಣೆ ಬರೆದಿದ್ದು, ವಚನಗಳ ಅರ್ಥ ತಿಳಿಯಲು ತುಂಬಾ ಸಹಕಾರಿಯಾಗಿದೆ.

ಶಿವಾನುಭವ ಸೃಷ್ಟಿಯ ವಚನಗಳು ಕೃತಿಯು ೧೯೪೦ರಲ್ಲಿ ಶಿವಾನುಭವ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಇದರಲ್ಲಿ **'ಮುಕ್ತ್ಯಂಗನಾ ಕಂಠಮಾಲೆ'** ಮತ್ತು **'ಜ್ಯೋತಿಮಯಶಾಂಭವ ಜ್ಞಾನದೀಕ್ಷಾಬೋಧೆ'** ಎಂಬ ಪ್ರಾಚೀನ ಸಂಕಲನವುಳ್ಳ ೨ ಕೃತಿಗಳಿವೆ. ಇದರಲ್ಲಿಯ ಮುಕ್ತ್ಯಂಗನಾ ಕಂಠಮಾಲೆಯು ಸ್ವತಂತ್ರ ಸಿದ್ಧಲಿಂಗೇಶ್ವರನ ೨೧ ವಚನಗಳ ಸಂಕಲನ ಕೃತಿ. ಇದನ್ನು ಸಂಕಲಿಸಿ ವಚನಗಳಿಗೆ ಟೀಕೆ ಬರೆದವನು ಸ್ವತಂತ್ರ ಸಿದ್ಧಲಿಂಗೇಶ್ವರನ ಶಿಷ್ಯ ಚೆನ್ನದೇವನೆಂದು ಡಾ.ಹಳಕಟ್ಟಿಯವರು ಅಭಿಪ್ರಾಯಪಟ್ಟಿದ್ದಾರೆ.

ಡಾ. ಹಳಕಟ್ಟಿಯವರು (೧೯೪೦-೧೯೪೪)ರಲ್ಲಿ ಸಂಪಾದಿಸಿದ ಶರಣರ ಸಂಕೀರ್ಣ ವಚನಗಳು ಭಾಗ-೩ ಕೃತಿಯಲ್ಲಿ ೫ ಜನ ವಚನಕಾರರ ವಚನಗಳಿವೆ. ಇಲ್ಲಿಯ ಮೂರು ಜನರ ವಚನಗಳಿಗೆ ಮಾತ್ರ ಟೀಕೆಗಳಿವೆ. ಭಂಡಾರಿ ಶಾಂತಯ್ಯಗಳ ೩೨ ವಚನಗಳು ಶಿವಾನುಭವ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಪ್ರಸ್ತಾವನೆಯಲ್ಲಿ ವಚನಗಳಿಗಿರುವ ಟೀಕೆ, ವಚನ ವೈಶಿಷ್ಟ್ಯ, ಶಾಂತರಸನ ಜೀವನ ಚರಿತ್ರೆ ವಿವರಿಸಿದ್ದಾರೆ. ಡಾ. ಬಿ.ಎಸ್. ಬಿರಾದಾರ ಹೇಳುವಂತೆ "ತಮಗೆ ಲಭ್ಯವಾದ ಲಿಂಗಲೀಲಾ ವಿಲಾಸಚಾರಿತ್ರ, ಸಟೀಕ ಬೆಡಗಿನ ವಚನಗಳು ಕೃತಿಯಲ್ಲಿಯ ವಚನಗಳಿಗಿರುವ ಟೀಕೆಗಳನ್ನು ಇಲ್ಲಿ ಪ್ರಕಟಿಸಿದ್ದಾರೆ."[೬] 'ಏಲೇಶ ಲಿಂಗ' ಅಂಕಿತದ ಏಲೇಶ ಕೇತಯ್ಯನ ೨೩ ವಚನಗಳನ್ನು ಡಾ. ಹಳಕಟ್ಟಿಯವರು ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಈ ಎಲ್ಲ ವಚನಗಳಿಗೂ ಡಾ. ಹಳಕಟ್ಟಿಯವರೇ ಭಾವಾರ್ಥ ಬರೆದಿದ್ದಾರೆ. 'ಸೊಡ್ಡಳ' ಅಂಕಿತದ ಸೊಡ್ಡಳ ಬಾಚರಸನ ೫೩ ವಚನಗಳನ್ನು ಡಾ. ಹಳಕಟ್ಟಿಯವರು ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಇಲ್ಲಿಯ ಎಲ್ಲಾ ವಚನಗಳಿಗೂ ಭಾವಾರ್ಥವನ್ನು ಬರೆದಿದ್ದಾರೆ.

ಹೀಗೆ ಡಾ. ಫ.ಗು. ಹಳಕಟ್ಟಿಯವರು ಪ್ರಾಚೀನ ವಚನ ಸಾಹಿತ್ಯ ಸಂಪಾದನೆಯ ಜೊತೆಗೆ ಕೆಲವು ವಚನಕಾರರ ವಚನಗಳಿಗೆ ಲಭಿಸಿದ ಪ್ರಾಚೀನ ಟೀಕೆಗಳನ್ನು ಪ್ರಕಟಿಸಿದ್ದಾರೆ. ಟೀಕೆಗಳು ಇಲ್ಲದ ಕೆಲವು ವಚನಕಾರರ ವಚನಗಳಿಗೆ ಸ್ವತಃ ತಾವೇ ಸರಳವಾಗಿ ಟೀಕೆ ಬರೆಯುವ ಮೂಲಕ ವಚನಗಳ ಆಧುನಿಕ ಟೀಕಾಕಾರರಲ್ಲಿ ಮೊದಲಿಗರಾಗಿದ್ದಾರೆ ಎನ್ನಬಹುದು. ಉದಾಹರಣೆಗೆ ದೇವರ ದಾಸಿಮಯ್ಯ, ಅಕ್ಕಮಹಾದೇವಿ, ಏಲೇಶ ಕೇತಯ್ಯ, ಸೊಡ್ಡಳದ ಬಾಚರಸ ಇತ್ಯಾದಿ ವಚನಕಾರರ ವಚನಗಳಿಗೆ ತಾವೇ ಭಾವಾರ್ಥವನ್ನು ಬರೆದಿದ್ದಾರೆ.

**ಹರ್ಡೇಕರ ಮಂಜಪ್ಪ** ಅವರು ವಚನ ಸಂಪಾದನೆಗಿಂತಲೂ ವಚನಗಳ ಪ್ರಚಾರಕ್ಕೆ ಹೆಚ್ಚಿನ ಮಹತ್ವ ನೀಡಿದರು. ಬಸವಾದಿ ಶಿವಶರಣರ ಜೀವನ ಚರಿತ್ರೆ ಬರೆಯುವ ಮೂಲಕ ಆಧುನಿಕ ಜನಾಂಗಕ್ಕೆ ತಲುಪಿಸುವ ಮಹತ್ವಾಕಾಂಕ್ಷೆಯುಳ್ಳವರಾಗಿದ್ದರು. ೧೯೨೭ರಲ್ಲಿ ಪ್ರಕಟವಾದ ಇವರ 'ಬಸವ ಬೋಧಾಮೃತ'

ಎಂಬ ವಚನ ವ್ಯಾಖ್ಯಾನ ಗ್ರಂಥದಲ್ಲಿ ೧೦೮ ವಚನಗಳಿಗೆ ವ್ಯಾಖ್ಯಾನ ಬರೆದು ಆಲಮಟ್ಟಿಯ ವೀರಶೈವ ವಿದ್ಯಾಲಯ ಗ್ರಂಥಮಾಲೆಯ ೧೫ನೇ ಕೃತಿಯಾಗಿ ಪ್ರಕಟಿಸಿದರು. ಈ ವ್ಯಾಖ್ಯಾನ ಕೃತಿ ಕೇವಲ ಬಸವಣ್ಣನವರ ೧೦೮ ಪ್ರಸಿದ್ಧ ವಚನಗಳಿಗೆ ಟೀಕೆ ಬರೆದದ್ದಾಗಿದೆ. ಇಲ್ಲಿ ವಚನಗಳನ್ನು ಸ್ಥಲ ಮತ್ತು ವಚನ ಸಂಖ್ಯೆ ಸಹಿತವಾಗಿ ಕೊಟ್ಟು ನಂತರ ಆ ವಚನಕ್ಕೆ ಸರಳವಾದ ವಿವರಣೆಯನ್ನು ಸಾಮಾನ್ಯರು ತಿಳಿಯುವಂತೆ ಬರೆದಿದ್ದಾರೆ. ಆರು ಅಧ್ಯಾಯಗಳಲ್ಲಿ ವಚನ ವಿಂಗಡಿಸಿದ್ದು ಅವುಗಳಿಗೆ ಯಾವ ನಾಮನಿರ್ದೇಶನವು ಇಲ್ಲ.

ಬಸವಣ್ಣನವರ ವಚನಗಳಿಗೆ ಟೀಕೆ ಬರೆದಿರುವ ಹರ್ಡೇಕರ ಮಂಜಪ್ಪನವರು ಒಂದೊಂದು ವಚನಕ್ಕೆ ಎರಡು ರೀತಿಯಲ್ಲಿ ವಿವರಣಾತ್ಮಕ ಸ್ವರೂಪದಲ್ಲಿ ಭಾವಾರ್ಥ ಟೀಕು ಬರೆದಿದ್ದಾರೆ. ಮೊದಲ ವಿವರಣೆಯಲ್ಲಿ ಸ್ವಚಿಂತನೆಗಳಿಂದ, ಅನುಭಾವದಿಂದ ಕೂಡಿದ ಸಂಕ್ಷಿಪ್ತ ಭಾವಾರ್ಥವಿದ್ದರೆ, ಅದೇ ವಚನಕ್ಕೆ ಅನಾದಿ ವೀರಶೈವ ಸಾರಸಂಗ್ರಹ ಗ್ರಂಥದಲ್ಲಿ ಉದಾಹರಿಸಲ್ಪಟ್ಟ ಶ್ಲೋಕಗಳನ್ನು ಉಲ್ಲೇಖಿಸಿ ಸವಿವರವಾದ ಭಾವಾರ್ಥವನ್ನು ಬರೆಯುವ ಮೂಲಕ ವಚನಗಳನ್ನು ಸರಳವಾಗಿ ಅರ್ಥೈಸಲು ನೆರವಾಗಿದ್ದಾರೆ. ಉದಾಹರಣೆಗೆ –

**ವಚನ** – 'ಉಂಬಲ್ಲಿ ಉಡುವಲ್ಲಿ ಕ್ರಿಯೆ ಅಳಿಯಿತ್ತೆಂಬರು ।
ಕೊಂಬಲ್ಲಿ ಕೊಡುವಲ್ಲಿ ಕುಲವನ್ನರಸುವರು ।
ಎಂತಯ್ಯಾ ಅವರ ಭಕ್ತರೆಂತೆಂಬೆ? ಎಂತಯ್ಯಾ ಅವರ ಯುಕ್ತರೆಂತೆಂಬೆ?
ಕೂಡಲಸಂಗಮದೇವಯ್ಯಾ ಕೇಳಯ್ಯಾ ।
ಹೊಲತಿ ಶುದ್ಧನೀರ ಮಿಂದಂತಾಯಿತ್ತಯ್ಯ ॥

**ವಿವರಣೆ**: ಶಿವದೀಕ್ಷೆಯನ್ನು ಹೊಂದಿ ಇಷ್ಟಲಿಂಗವನ್ನು ಧರಿಸಿದ ನಂತರ ಅವರ ಉದ್ಯೋಗಗಳ ಮೇಲಿಂದ ಶ್ರೇಷ್ಠ ಕನಿಷ್ಠಗಳೆಂಬ ಕುಲಗಳನ್ನು ಕಲ್ಪಿಸಿ, ಅನ್ನೋದಕ ವ್ಯವಹಾರಗಳನ್ನೂ, ದೇಹ ಸಂಬಂಧಗಳನ್ನು ಅನೇಕರು ಮಾಡುವದಿಲ್ಲವಷ್ಟೆ. ಇದು ವೀರಶೈವ ಮತಕ್ಕೆ ವಿರೋಧವಾದ ಆಚರಣೆಯೆಂದು ಈ ವಚನಗದಲ್ಲಿ ಮಹಾನುಭಾವರು ನಿಷೇಧಿಸಿದ್ದಾರೆ. ವೀರಶೈವ ಮತದೀಕ್ಷೆಯಾದ ನಂತರ ಆತನ ಹಿಂದಣ ಕುಲವೇ ಮೊದಲಾದವುಗಳನ್ನಾಗಲಿ ಆತನ ಕಾಯಕಗಳನ್ನಾಗಲಿ ಯೋಚಿಸದೆ ಅವರ ಸಂಗಡ ಅನ್ನೋದಕ ವ್ಯವಹಾರಗಳನ್ನು ಮಾಡಲಿಕ್ಕೂ, ದೇಹಸಂಬಂಧವನ್ನು ಬೆಲೆಸಳೆಕ್ಕೂ ಯಾವ ಅಭ್ಯಂತರವೂ ಇಲ್ಲ.

ಹರಳಯ್ಯ ಮಧುವಯ್ಯಗಳ ಶರೀರ ಸಂಬಂಧವನ್ನು ಬೆಳೆಸಿದುದಾದರೂ ವೀರಶೈವ ಸಿದ್ಧಾಂತದಂತೆಯೇ ಸರಿ. ಮಹಾನುಭಾವರು ಬೋಧಿಸಿದ ಈ ತತ್ವಗಳು ಪ್ರಾಚೀನ ವೈದಿಕ ಗ್ರಂಥಗಳಲ್ಲಿ ವಿವರವಾಗಿ ಪ್ರತಿಪಾದಿಸಲ್ಪಟ್ಟಿವೆ. ಅನಾದಿ ವೀರಶೈವ ಸಾರಸಂಗ್ರಹ ಗ್ರಂಥದಲ್ಲಿ ಉದಾಹರಿಸಲ್ಪಟ್ಟ ವಾತುಲ ತಂತ್ರೋಕ್ತಿಯು "ಇಂಧನಂ ವಹ್ನಿ ಸಂಪರ್ಕಾತ್ಕ್ಷನಾಮ ವಿನಶ್ಯತಿ। ಶಿವಸಂಸ್ಕಾರ ಸಂಪನ್ನೇ ಜಾತಿಭೇದಂ

ನಕಾರಯೇತ್॥" (೨೩-೨೮೧) ಎಂಬುದಾಗಿದೆ. ನಾನಾ ಜಾತಿಯ ಕಟ್ಟಿಗೆಗಳನ್ನು ಬೆಂಕಿಯು ಸುಟ್ಟನಂತರ ಹೇಗೆ ಬೂದಿಯಲ್ಲಿ ಕಟ್ಟಿಗೆಯ ಜಾತಿಗಳುಳಿಯುವುದಿಲ್ಲವೋ, ಹಾಗೆ ಯಾವ ಕುಲದವನಾಗಿದ್ದರೂ ಶಿವದೀಕ್ಷಾ ಸಂಸ್ಕಾರವನ್ನು ಹೊಂದಿದ ನಂತರ ಆತನಲ್ಲಿ ಹಿಂದಿನ ಕುಲಜಾತಿಗಳುಳಿಯುವುದಿಲ್ಲ. ಆದ ಕಾರಣ ಶಿವಭಕ್ತರಲ್ಲಿ ಜಾತಿಭೇದವನ್ನು ಮಾಡಬಾರದು. ಮತ್ತೆ ಇದೇ ಗ್ರಂಥದಲ್ಲಿ ಉದಾಹರಿಸಲ್ಪಟ್ಟ ಸಾಮವೇದ ವಾಕ್ಯವು ಸ್ಪಷ್ಟವಾಗಿಯೇ ಶಿವಭಕ್ತರಲ್ಲಿ ಜಾತಿಭೇದವನ್ನ ಮಾಡದೆ ಅನ್ನೋದಕ ವ್ಯವಹಾರಗಳನ್ನು ಮಾಡಬೇಕೆಂದು ಹೇಳಿದೆ. "ವದೇತ್ತೇನ ವಸೇತ್ತೇನ ವಿಶೇತ್ತೇನ ಪುನಃ ಪುನಃ। ಭುಂಜೀತಸಾಕಂ ಭುಂಜೀತೇತ್ಸಾಹ ಸಾಮಶ್ರುತಿಃಖಲು॥(೨೩-೨೯೭) 'ಶಿವಭಕ್ತರಲ್ಲಿಯೇ ಒಬ್ಬರು ಇನ್ನೊಬ್ಬರಲ್ಲಿ ಊಟಮಾಡಿದರೆ ತಮ್ಮ ಆಚಾರ ಕೆಟ್ಟಿತೆಂದು ಹೇಳುವರಲ್ಲಾ ದೇಹಸಂಬಂಧವನ್ನು ಬೆಳೆಸುವಾಗ ತಮ್ಮ ಕುಲದವರೇ ಬೇಕೆಂದು ಕುಲವನ್ನ ಅರಸುವರಲ್ಲಾ। ಇವರು ಶಿವಭಕ್ತರೆಂದು ನಾನು ಹೇಗೆ ಹೇಳಲಿ? ಇವರು ಶಿವಾಚಾರಯುಕ್ತರೆಂದು ನಾನೆಂತು ಹೇಳಲಿ? ಸಂಗಮನಾಥ, ಕೀಳುಗುಣವುಳ್ಳ ಹೊಲತಿಯು ಶುದ್ಧ ನೀರಿನಲ್ಲಿ ಸ್ನಾನ ಮಾಡಿದ ಮಾತ್ರದಲ್ಲಿ ಹೇಗೆ ಆಕೆಯ ಗುಣಗಳು ನಾಶವಾಗುವದಿಲ್ಲವೋ, ಹಾಗೆಯೇ ಇವರು ಶಿವದೀಕ್ಷೆಯನ್ನು ಹೊಂದಿ ಲಿಂಗವನ್ನು ಧರಿಸಿಕೊಂಡದ್ದಾಯಿತೇ ವಿನಾ, ಆ ಸಂಬಂಧವಾದ ಜ್ಞಾನೋದಯವಾಗಲಿಲ್ಲವಲ್ಲಾ!"[೮] ಹೀಗೆ, ಹರ್ಡೇಕರ ಮಂಜಪ್ಪನವರು ವಚನಗಳ ಶಬ್ದಾರ್ಥಕ್ಕೆ ಒತ್ತು ನೀಡದೇ ಇಡೀ ವಚನದ ಆಶಯವನ್ನು ತಮ್ಮ ಅನುಭಾವದ ನೆಲೆಯಲ್ಲಿ ವಿವರಿಸುತ್ತಾರೆ. ವಚನ ಇನ್ನಷ್ಟು ಜನಮುಖಿಯಾಗಲು ವೇದಗಳ ಉಕ್ತಿ, ಅನಾದಿ ವೀರಶೈವ ಸಾರಸಂಗ್ರಹದಲ್ಲಿ ಬಳಸಲಾದ ಸಂಸ್ಕೃತ ಶ್ಲೋಕಗಳನ್ನು ಆಧಾರವಾಗಿಟ್ಟುಕೊಂಡು ಬಸವಣ್ಣನವರ ವಚನ ರಚನೆಯ ಹಿಂದಿರುವ ತಿರುಳನ್ನು ಬಿಡಿಸುವುದು ಇವರ ಟೀಕುವಿನ ಸ್ವರೂಪವಾಗಿದೆ.

**ವಚನ:** "ದಶದಿಕ್ಕುಧರೆ ಗಗನವೆಂಬುದ ನಾನರಿಯೆನಯ್ಯ
ಲಿಂಗಮಧ್ಯಜಗತ್ಸರ್ವಂ ಎಂಬುದನಾನರಿಯೆನಯ್ಯ
ಲಿಂಗಸೋಂಕಿನ ಸುಖದೊಳಗೆ ಕೂಡಲಸಂಗಮದೇವಯ್ಯ।
ಅಂಬುಧಿಯೊಳಗೆ ಬಿದ್ದ ಆಲಿಕಲ್ಲಿನಂತೆ ಭಿನ್ನಭಾವವರಿಯದೆ
ಶಿವಶಿವ ಎನುತಿರ್ದೇನು ನಾನು॥ (ವಚನ-೧೦೮)

ಈ ವಚನಕ್ಕೆ ಹರ್ಡೇಕರ ಮಂಜಪ್ಪನವರು ಒಂದೇ ಸಲ ವಿವರಣೆ ನೀಡಿದ್ದನ್ನು ಕಾಣಬಹುದು.

**ವಿವರಣೆ:** ಪರಮಾತ್ಮನಲ್ಲಿ ಐಕ್ಯನಾಗುವ ಭಗವದ್ಭಕ್ತನ ಭಾವನೆಯು ಈ ವಚನದಲ್ಲಿ ವ್ಯಕ್ತವಾಗುವುದು. "ಎಂಟು ದಿಕ್ಕುಗಳು ಮತ್ತು ಮೇಲೆ ಕೆಳಗಿನ ಭಾಗ ಈ ಪ್ರಕಾರ ಹತ್ತು ದಿಕ್ಕುಗಳಲ್ಲಿಯೂ, ಭೂಮಿ ಆಕಾಶಗಳಲ್ಲಿಯೂ ನೀನು ವ್ಯಾಪಿಸಿರುವೆಯೆಂಬುದನ್ನಾಗಲಿ ಈ ಜಗತ್ತೆಲ್ಲವೂ ಲಿಂಗದೇವನೇ ನಿನ್ನಲ್ಲಿಯೇ ಇದೆಯೆಂಬುದನ್ನಾಗಲೀ ನಾನರಿಯೆನು. ಸಮುದ್ರದಲ್ಲಿ ಬಿದ್ದ ಆಲಿಕಲ್ಲು ಬೇರೆಯಾಗಿರದೆ ಹೇಗೆ ನೀರಿನಲ್ಲಿಯೇ ಕೂಡಿ ಹೋಗುತ್ತದೆಯೋ ಹಾಗೆಯೇ ಲಿಂಗಸ್ಪರ್ಶದಿಂದುಂಟಾದ ಸುಖಸಮುದ್ರದಲ್ಲಿ

ನಾನು ಮುಳುಗಿ ಶಿವಶಿವ ಎನುತ ನಿನ್ನಲ್ಲಿ ಬೆರೆದೆನು. ಸಮುದ್ರದ ಎಂದರೆ ನೀರಿನಿಂದಾದ ಆಲಿಕಲ್ಲು ಕೊನೆಗೆ ಸಮುದ್ರದಲ್ಲಿಯೇ ಬೆರೆತು ಹೋಗುವಂತೆ ಲಿಂಗಮೂರ್ತಿಯಿಂದ ಬಂದ ಅಂಗವೆಂಬ ಜೀವನು ಕೊನೆಗೆ ಲಿಂಗದೊಳಗೆ ಬಯಲಾದನು"[೯] ಎಂದು ವ್ಯಾಖ್ಯಾನಿಸಿದ್ದಾರೆ. ಇವರ ವ್ಯಾಖ್ಯಾನದ ಮಾದರಿಗಳನ್ನು ನೋಡಿದಾಗ ಶರಣರ ವಚನಗಳ ತಾತ್ವಿಕ ಸಿದ್ಧಾಂತವನ್ನು ತುಂಬಾ ಸರಳೀಕರಿಸಿ ವಿವರಿಸಿರುವುದು. ಜೊತೆಗೆ, ಶರಣರ ಸಿದ್ದಾಂತ ವೇದೋಪನಿಷತ್ತುಗಳಿಗೇನು ಕಡಿಮೆಯಲ್ಲದ, ವೈಚಾರಿಕ ಅನುಭಾವವಿರುವ ಮೌಲಿಕ ಸಿದ್ಧಾಂತವೆಂಬುದನ್ನು ದೃಢಪಡಿಸಲು ಪ್ರಾಚೀನ ಸಂಸ್ಕೃತ ಶ್ಲೋಕಗಳನ್ನು ಉಲ್ಲೇಖಿಸಿ ಓದುಗರಲ್ಲಿ ಅಪಾರ ಆತ್ಮವಿಶ್ವಾಸವನ್ನು ತುಂಬಲು ಪ್ರಯತ್ನಿಸಿದಂತೆ ಕಾಣುತ್ತದೆ. ಇದೆ ಕಾರಣವೋ ಏನೋ ಈ ಕೃತಿಯು ಟೀಕಾಕಾರ ಹರ್ಡೇಕರ ಮಂಜಪ್ಪನವರಿಂದಲೇ ೧೯೨೩ರಲ್ಲಿ ಮೊದಲ ಆವೃತ್ತಿ ಪ್ರಕಟವಾಯಿತು. "೧೯೫೧ರಲ್ಲಿ ಮರು ಮುದ್ರಣಗೊಂಡಿತು. ನಂತರ ಬೆಂಗಳೂರಿನ ಬಸವ ಸಮಿತಿ, ಅನಂತರ ಗದಗಿನ ತೋಂಟದಾರ್ಯ ಮಠದಿಂದ ೧೯೮೬ರಲ್ಲಿ ಪ್ರಕಟವಾಯಿತು. ಪುನಃ ಪ್ರತಿಗಳು ಖಾಲಿಯಾದಾಗ ಈ ಸತ್ವಶಾಲಿ ಕೃತಿ ಎಲ್ಲರ ಕೈಗೆ ತಲುಪುವುದು ಅವಶ್ಯವಿದೆ"[೧೦] ಎಂದರಿತ ಜಗದ್ಗುರು ಮಾತೆಮಹಾದೇವಿಯವರು ತಮ್ಮ ವಿಶ್ವಕಲ್ಯಾಣ ಮಿಷನ್ ಸಂಸ್ಥೆಯಿಂದ ೨೦೦೪ರಲ್ಲಿ ಪ್ರಕಟಿಸಿ ನಾಡಿನ ಬಸವಾಭಿಮಾನಿಗಳ ಕೈಗೆ ನೀಡಿದ್ದಾರೆ.

ಈ ಹಿನ್ನೆಲೆಯಲ್ಲಿ ಶಿವಶರಣರ ವಚನಗಳಿಗೆ 'ಭಾವಾರ್ಥ' (ಟೀಕು) ಬರೆದವರು ಡಾ.ಫ.ಗು.ಹಳಕಟ್ಟಿ ಮತ್ತು ಹರ್ಡೇಕರ ಮಂಜಪ್ಪನವರು. ಇಬ್ಬರೂ ಸಮಕಾಲೀನರಾಗಿರುವುದರಿಂದ ವಚನಗಳ ಆಧುನಿಕ ಟೀಕಾಕರರಾಗಿ ಗುರುತಿಸಿಕೊಂಡ ಮೊದಲಿಗರೆನ್ನಬಹುದು. ಈ ಹಿನ್ನಲೆಯಲ್ಲಿ ಈ ಕಾಲಘಟ್ಟದ ವೈಶಿಷ್ಟ್ಯ ಕುರಿತು ಪ್ರಸ್ತಾಪಿಸುವ ಡಾ.ಬಿ.ಎಸ್.ಜಿರಾದಾರರು "ವಚನಗಳ ಪ್ರಕಟನೆಯೊಂದಿಗೆ ಅವುಗಳಿಗೆ ಪ್ರಾಚೀನ ಟೀಕೆ ಇದ್ದರೆ ಅದನ್ನು ಕೊಟ್ಟಿರುವುದು, ಇಲ್ಲದಿದ್ದಲ್ಲಿ ಹೊಸದಾಗಿ ಅವುಗಳಿಗೆ ಟೀಕೆ ಬರೆದು ಪ್ರಕಟಿಸಿರುವುದನ್ನು ಈ ಅವಧಿಯಲ್ಲಿ ಪ್ರಕಟವಾದ ಕೃತಿಗಳಲ್ಲಿ ಕಾಣುತ್ತೇವೆ. ಉದಾ: ಫ.ಗು ಹಳಕಟ್ಟಿಯವರು ವಚನಶಾಸ್ತ್ರಸಾರ ಮುಂತಾದ ಕೃತಿಗಳಲ್ಲಿ ವಚನಗಳಿಗಿರುವ ಪ್ರಾಚೀನ ಟೀಕೆಯನ್ನು ಸಂಗ್ರಹಿಸಿರುವರಲ್ಲದೇ, ದೇವರ ದಾಸಿಮಯ್ಯ ಇತ್ಯಾದಿ ಕೃತಿಗಳಿಗೆ ಹೊಸಗನ್ನಡ ಭಾವಾರ್ಥ ಬರೆದಿದ್ದಾರೆ. ಹೀಗೆ ವಚನಗಳಿಗೆ 'ಭಾವಾರ್ಥ'ವನ್ನು ಮೊದಲು ಬರೆದವರು ಹರ್ಡೇಕರ ಮಂಜಪ್ಪನವರು (ಬಸವಬೋಧಾಮೃತ ೧೯೨೬)"[೧೧] ಎಂದು ಹೇಳಿರುವುದರಿಂದ ಇವರ ನಿಲುವನ್ನು ಪರಾಮರ್ಶಿಸಬೇಕಾಗಿದೆ.

**ಎಂ.ಆರ್. ಶ್ರೀನಿವಾಸಮೂರ್ತಿಯವರು** 'ವಚನಧರ್ಮಸಾರ' (೧೯೪೪) ವಚನ ಸಂಕಲನ ಕೃತಿ ರಚಿಸಿದರು. ಇದರಲ್ಲಿ ವಚನಗಳನ್ನು ವಿಮರ್ಶಾತ್ಮಕ ಚಿಂತನೆಗೆ ಒಳಪಡಿಸಿ ವಿವರಿಸಿರುವುದನ್ನು ಕಾಣಬಹುದು. ಅಲ್ಲದೇ ಹಲವಾರು ಆವೃತ್ತಿಗಳಲ್ಲಿ ಪ್ರಕಟಗೊಂಡಿರುವ **ಆರ್.ಆರ್. ದಿವಾಕರ** ರವರ 'ವಚನಶಾಸ್ತ್ರ ರಹಸ್ಯ' (೧೯೨೬) ಕೃತಿ ಎರಡು ಭಾಗ ಹೊಂದಿದೆ. ಮೊದಲಭಾಗದಲ್ಲಿ ವಚನಗಳ ಸಂಗ್ರಹವಾದರೆ, ಎರಡನೇ ಭಾಗವು ವಚನ ವಿಶ್ಲೇಷಣೆ – ವಿಮರ್ಶೆಯನ್ನು ಒಳಗೊಂಡಿದೆ. ಹೀಗಾಗಿ ವಚನಗಳಿಗೆ ಭಾವಾರ್ಥ, ವಿಮರ್ಶೆಯನ್ನು ಬರೆದವುಗಳ ಸಾಲಿನಲ್ಲಿ ಈ ಕೃತಿಗಳನ್ನು ಪರಿಗಣಿಸಬಹುದಾಗಿದೆ.

ಶಾಲಾಶಿಕ್ಷಕರಾಗಿದ್ದ **ಶ್ರೀ ಚೆನ್ನಮಲ್ಲಿಕಾರ್ಜುನರು** (ಚನ್ನಮಲ್ಲಪ್ಪ ನೂರಂದಪ್ಪ ಕೋರಿ) ಅವರು ಅಕ್ಕಮಹಾದೇವಿಯ ವಚನಾರ್ಥ ಕೃತಿ (ಪ್ರಥಮ ಭಾಗ -೧೯೪೬-೪೭) ಯನ್ನು ಭಾವಾರ್ಥಸಹಿತವಾಗಿ ಬರೆದರು. ಅಕ್ಕಮಹಾದೇವಿಯ ೧೫೦ ವಚನಗಳಿಗೆ ಬರೆದ ಆಧುನಿಕ ಟೀಕಾಕೃತಿ. ಈ ಕೃತಿಯನ್ನು ಕುರಿತು ಡಾ. ಬಿ.ವಿ. ಮಲ್ಲಾಪೂರ ಅವರು "ಇವರು ಪ್ರಕಟಿಸಿದ ಬಹುತೇಕ ವಚನಗ್ರಂಥಗಳಲ್ಲಿ ಪ್ರತಿವಚನಕ್ಕೆ ಟಿಪ್ಪಣಿ, ತಾತ್ಪರ್ಯಾರ್ಥ, ವಿಶೇಷಾರ್ಥ, ವಿವರಣೆಗಳಿರುವುದು ಗಮನಾರ್ಹ. ಅದರಲ್ಲೂ ಬೆಡಗಿನ ವಚನಗಳಿಗೆ ಸ್ವಾನುಭವದ ಹಿನ್ನಲೆಯಲ್ಲಿ ನೀಡಿರುವ ಅರ್ಥವಿವರಣೆ ತುಂಬಾ ಪರಿಭಾವನಾರ್ಹ. ಈ ಬಗೆಯ ಪ್ರಯತ್ನ ಬಹಳ ಜನರಿಂದ ನಡೆದಿಲ್ಲ. ವಚನಗಳನ್ನು ಒಳಗೊಂಡಿರುವ ತತ್ವಾರ್ಥ ಸಾಮಾನ್ಯರಿಗೂ ತಿಳಿಯಲೆಂಬುದು ಅವರ ಅಪೇಕ್ಷೆಯಾಗಿತ್ತು"[೧೨] ಎಂದು ಹೇಳಿರುವುದರಿಂದ ಶ್ರೀ ಚೆನ್ನಮಲ್ಲಿಕಾರ್ಜುನರ ವಚನಗಳಿಗೆ ಟೀಕೆ ಬರೆಯುವಲ್ಲಿ ಬಲ್ಲಿದರಾಗಿದ್ದರೆನ್ನಬಹುದು.

ದಾವಣಗೇರಿಯ ವಿರಕ್ತಮಠದ **ಪ್ರಭುಸ್ವಾಮಿಗಳು** ಸಂಪಾದಿಸಿದ ಗುಬ್ಬಿಮಲ್ಲಣಾರ್ಯ ವಿರಚಿತ **'ಗಣಭಾಷಿತ ರತ್ನಮಾಲೆ'** ಕೃತಿಯನ್ನು ಧಾರವಾಡ ಮುರುಘಾಮಠದ ಮೃತ್ಯುಂಜಯ ಶ್ರೀಗಳು ೧೯೪೮ರಲ್ಲಿ ಪ್ರಕಟಿಸಿದ್ದಾರೆ. ವೀರಶೈವ ತತ್ವ ವಿವೇಚನೆಯನ್ನು ಸಪ್ರಮಾಣವಾಗಿ ಸಂಯುಕ್ತವಾಗಿ, ಸರಳವಾಗಿ ನಿರೂಪಿಸುವ ವಚನ, ಸಂಸ್ಕೃತ ಶ್ಲೋಕಗಳಿಂದ ಹೆಣೆದ ಸಂಕಲನ ಕೃತಿ. ನೂರೊಂದು ಸ್ಥಲಗಳಲ್ಲಿ ವಚನಗಳನ್ನು ವಿಭಜಿಸಿದ ಈ ಕೃತಿಯಲ್ಲಿ ಅಂಗಸ್ಥಲ ೪೪, ಲಿಂಗಸ್ಥಲ ೪೫ ಮತ್ತು ನಿರಂಗಸ್ಥಲ ೧೨ ಇವೆ. ಅಲ್ಲದೇ ೫೩ ಸಂಸ್ಕೃತ ಗ್ರಂಥಗಳ ೪೮೦ ಶ್ಲೋಕಗಳು, ೩೮ ಜನ ವಚನಕಾರರ ೪೮೫ ವಚನಗಳು ನೂರೊಂದು ಸ್ಥಲಗಳಲ್ಲಿ ಸಂಕಲನಗೊಂಡಿವೆ. ಇಲ್ಲಿಯ ಸಂಸ್ಕೃತ ಶ್ಲೋಕಗಳು ಮತ್ತು ಅವುಗಳಿಗೆ ಕನ್ನಡ ಟೀಕೆಯನ್ನು ಕೊಟ್ಟು ನಂತರ ಆಯಾ ಸ್ಥಲಕ್ಕೆ ಸಂಬಂಧಿಸಿದ ವಚನಗಳನ್ನು ಸಂಕಲಿಸಲಾಗಿದೆ. ಈ ಕೃತಿಯನ್ನು ಕುರಿತು ಡಾ. ಕಲಬುರ್ಗಿಯವರು "ಗುಬ್ಬಿಯ ಮಲ್ಲಣಾರ್ಯನ 'ಗಣಭಾಷಿತ ರತ್ನಮಾಲೆ' ಬೇರೊಂದು ರೀತಿಯ ನೂರೊಂದು ಸ್ಥಲಗಳನ್ನೊಳಗೊಂಡಿದೆ. ವಿಷಾದದ ಸಂಗತಿಯೆಂದರೆ ಇದರಲ್ಲಿ ಕೆಲವು ಪ್ರಕ್ಷಿಪ್ತ ವಚನಗಳಿದ್ದು ಇಂಥ ಸೃಷ್ಟಿಗೆ ಈತನೇ ಮೊದಲಿಗನಾಗಿದ್ದಾನೆ"[೧೩] ಎಂದು ವಿಶ್ಲೇಷಿಸುವ ಮೂಲಕ ವೀರಶೈವ ಧರ್ಮದ ತಾತ್ವಿಕ ಸಿದ್ಧಾಂತಗಳಲ್ಲಿರುವ ಸೂಕ್ಷ್ಮವಾದ ಭಿನ್ನಾಭಿಪ್ರಾಯಗಳ ಬಗೆಗೆ ಗಮನ ಸೆಳೆಯುತ್ತಾರೆ. ಡಾ. ಬಿ.ಎಸ್. ಬಿರಾದಾರ ಅವರು "ಈ ಕಾರಣದಿಂದಲೋ ಏನೋ ಈ ಕೃತಿ ವಿದ್ವತ್ಪರಂಪರೆಯಲ್ಲಿ ಮತ್ತೆ ಪ್ರಕಟವಾಗದಿರುವುದು"[೧೪] ಎಂದು ಹೇಳುವ ಮೂಲಕ ಡಾ. ಎಂ. ಎಂ. ಕಲಬುರ್ಗಿಯವರ ಅಭಿಪ್ರಾಯಗಳಿಗೆ ಬೆಂಬಲವಾಗಿದ್ದಾರೆ.

**ಚೆನ್ನಪ್ಪ ಉತ್ತಂಗಿ ಹಾಗೂ ಸಂ.ಶಿ. ಭೂಸನೂರಮಠ** ಅವರುಗಳು ಸಂಪಾದಿಸಿರುವ ಮೋಳಿಗೆ ಮಾರಯ್ಯ ಮತ್ತು ರಾಣಿ ಮಹಾದೇವಿಯವರ ವಚನಗಳು (೧೯೫೦) ಕೃತಿಯಲ್ಲಿ ಮೋಳಿಗೆ ಮಾರಯ್ಯನ ೮೨, ರಾಣಿಮಹಾದೇವಿಯ ೬೯ ವಚನಗಳಿವೆ. ಕೃತಿಯ ಪ್ರಸ್ತಾವನೆಯಲ್ಲಿ ಸಂ.ಶಿ. ಭೂಸನೂರಮಠ ಅವರು ವಚನ ಸಾಹಿತ್ಯದ ಸಾಧನೆ, ಸಿದ್ಧಿ, ವಚನಕಾರರ ಜೀವನ ಚರಿತ್ರೆ, ವಚನಶೈಲಿ ಕುರಿತು ಪ್ರಸ್ತಾಪಿಸಿದ್ದಾರೆ. ಇಲ್ಲಿಯ ಬೆಡಗಿನ ವಚನಗಳ ಅಜ್ಞಾತ ಟೀಕಾಕಾರನ ಕುರಿತು ಹಲವು

ಆಧಾರಗಳೊಂದಿಗೆ ಚರ್ಚಿಸಿದ್ದಾರೆ. ಅಂದರೆ, ಬೆಡಗಿನ ವಚನಗಳಿಗೆ ಮಾತ್ರ ಟೀಕು ಬರೆದಿರುವುದನ್ನು ನಾವು ಕಾಣುತ್ತೇವೆ.

'ಶ್ರೀ ಬಸವೇಶ್ವರ ವಚನ ಪ್ರದೀಪಿಕೆ' (೧೯೬೭) ಎಂಬ ೨೫೪ ವಚನಗಳ ಪ್ರಾಚೀನ ವ್ಯಾಖ್ಯಾನ ಕೃತಿಯನ್ನು **ಮಾ.ನಂ. ನಂಜಪ್ಪನವರು** ಪ್ರಕಟಿಸಿದ್ದಾರೆ. 'ಬಸವೇಶ್ವರ ವಚನ ವ್ಯಾಖ್ಯಾನ (೧೯೭೧) ಎಂಬ ಕೃತಿಯನ್ನು **ಡಾ. ಎಸ್. ಎಂ. ಹುಣಶ್ಯಾಳ** ಹಾಗೂ **ಸಿ. ಎಚ್. ಅನ್ನದಾನಯ್ಯನವರು** ಸಂಪಾದಿಸಿದ್ದಾರೆ. ಇವರು ಹೆಚ್ಚಾಗಿ "ಪ್ರಾಚೀನ ವಚನ ಸಂಕಲನ ಮತ್ತು ವ್ಯಾಖ್ಯಾನ ಕೃತಿಗಳನ್ನೇ ಸಂಪಾದಿಸಿರುವುದು ವಿಶೇಷವಾಗಿದೆ".[೫೪]

ಪ್ರಸಾದಿ ಬೋಗಣ್ಣಗಳ ವಚನಗಳು (೧೯೫೧-೫೨) ಕೃತಿಯನ್ನು **ಶ್ರೀ ಚೆನ್ನಮಲ್ಲಿಕಾರ್ಜುನರು** ಸಂಪಾದಿಸಿದ್ದಾರೆ. 'ಚೆನ್ನಬಸವಣ್ಣಪ್ರಿಯ ಬೋಗ ಮಲ್ಲಿಕಾರ್ಜುನ ಲಿಂಗ' ಅಂಕಿತವುಳ್ಳ ೧೦೨ ವಚನಗಳು ಇಲ್ಲಿವೆ. ಈ ಕೃತಿಯ ೩೪, ೭೩, ೧೦೧ನೇ ವಚನಗಳು ಬೆಡಗಿನ ವಚನಗಳಾಗಿದ್ದು, ಸಂಪಾದಕರು ಅವುಗಳಿಗೆ ವಿವರವಾದ ಟೀಕೆಯನ್ನು ಬರೆದಿದ್ದಾರೆ. ಅರಿವಿನ ಮಾರಿತಂದೆಯ (೧೯೫೧-೫೨) ವಚನ ಕೃತಿಯನ್ನು **ಡಾ. ಫ.ಗು. ಹಳಕಟ್ಟಿಯವರು** ಸಂಪಾದಿಸಿ, ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಇಲ್ಲಿನ ಬಹಳಷ್ಟು ವಚನಗಳಿಗೆ ಪ್ರಾಚೀನ ಟೀಕೆ ಇದೆ. **ಡಾ. ಆರ್.ಸಿ. ಹಿರೇಮಠರು** ಸಂಪಾದಿಸಿದ 'ವಿಶೇಷಾನುಭವ ಷಟ್‌ಸ್ಥಲ' (೧೯೭೧), **ಪ್ರೊ. ಸಂ.ಶಿ. ಭೂಸನೂರಮಠರ** 'ಲಿಂಗಲೀಲಾ ವಿಲಾಸ ಚಾರಿತ್ರ'(೧೯೫೬), ಡಾ.ಎಂ.ಎಸ್. ಸುಂಕಾಪೂರ ಅವರ 'ಸಕಲಪುರಾತನರ ಬೆಡಗಿನ ವಚನಗಳು(೧೯೭೮), ಡಾ.ಎಂ.ಎಂ.ಕಲಬುರ್ಗಿಯವರ 'ಬಸವಣ್ಣನವರ ಟೀಕಿನ ವಚನಗಳು ಸಂಪುಟ-೧, ಸಂಪುಟ-೨(೧೯೭೯), ಡಾ.ಬಿ.ವಿ. ಶಿರೂರ ಅವರು 'ಷಟ್‌ಸ್ಥಲ ಜ್ಞಾನ ಸಾರಾಮೃತದ ಬೆಡಗಿನ ವಚನದ ಟೀಕೆ' (೧೯೭೭), ಡಾ. ಎಸ್. ವಿದ್ಯಾಶಂಕರ ಅವರು 'ಷಟ್‌ಸ್ಥಲಜ್ಞಾನಸಾರಾಮೃತ ಟೀಕೆ' (೧೯೮೭), ಡಾ. ವೀರಣ್ಣ, ರಾಜೂರ ಅವರು ಸಂಪಾದಿಸಿದ 'ಬಸವ ವಚನ ಸಾರಾಮೃತ' (೨೦೧೧), ಬಿಜಾಪೂರದ ಎಂ.ಕೆ. ಶಿರಗುಪ್ಪಿಯವರು ಶಬ್ದಾರ್ಥಸಹಿತವಾಗಿ ಬರೆದ 'ಶ್ರೀ ಬಸವೇಶ್ವರ ವಚನಗಳು' (೧೯೯೫), ಬಾಲಚಂದ್ರ ಜಯಶೆಟ್ಟಿ ಡಾ. ಎಂ. ಎಂ. ಕಲಬುರ್ಗಿ ಸಂಪಾದಿತ 'ನಿರ್ವಚನ' (೨೦೧೦), ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರು ವ್ಯಾಖ್ಯಾನ ಮಾಡಿದ 'ಬಸವೇಶ್ವರ ವಚನ ದೀಪಿಕೆ' (೧೯೯೫) ಮುಂತಾದವು ಶಿವಶರಣರ ವಚನಗಳಿಗೆ ಸಂಬಂಧಿಸಿದ ಟೀಕೆ, ತಾತ್ಪರ್ಯ ಬರೆದ ಕೃತಿಗಳಾಗಿವೆ.

ಗೂಳೂರು ಸಿದ್ಧವೀರಣ್ಣೊಡೆಯರ **'ಶೂನ್ಯಸಂಪಾದನೆ'** ಕೃತಿಯಲ್ಲಿನ ಮೂರನೇ ಉಪದೇಶವೆಂಬ ಭಾಗವನ್ನು ಈಗ ಪ್ರತ್ಯೇಕವಾಗಿ ಸಂಪಾದಿಸಿದ **ಡಾ. ಫ.ಗು. ಹಳಕಟ್ಟಿಯವರು ೧೯೫೪ರಲ್ಲಿ** ಶಿವಾನುಭವ ಗ್ರಂಥ ಮಾಲೆಯ ೭೭ನೇ ಕೃತಿಯಾಗಿ ಪ್ರಕಟಿಸಿದ್ದಾರೆ. ಇದರ ಹೆಸರು ಸಿದ್ದರಾಮಯ್ಯ ದೇವರ ಸಂಪಾದನೆ. ಈ ಭಾಗದಲ್ಲಿ ಸಿದ್ಧರಾಮ ಮತ್ತು ಪ್ರಭುದೇವರ ಮಧ್ಯದಲ್ಲಿ ನಡೆದ ಸಂವಾದವಿದೆ.

೧೯೩೦ ರಲ್ಲಿ ಪ್ರಕಟವಾದ ಕೃತಿಯ ರೂಪದಲ್ಲಿಯೇ ಈ ಆವೃತ್ತಿ ಇದೆ. ಆದರೆ, ಈ ಆವೃತ್ತಿಯಲ್ಲಿ ಇಲ್ಲಿನ ಎಲ್ಲ ೧೪೦ ವಚನಗಳಿಗೆ ಹೊಸದಾಗಿ ಸರಳವಾದ ಭಾವಾರ್ಥವನ್ನು ಬರೆದಿದ್ದಾರೆ. (ಪುಟ–೨೭–೬೨) ಹಾಗೆಯೇ ಶೂನ್ಯಸಂಪಾದನೆಯ ೧೦ನೇ ಉಪದೇಶವನ್ನು ೧೯೫೪ರಲ್ಲಿ ಪ್ರತ್ಯೇಕ ಪ್ರಕಟಿಸಿರುವ **ಡಾ. ಹಳಕಟ್ಟಿಯವರು ಸಿದ್ಧರಾಮಯ್ಯದೇವರ ಗುರುಕರುಣವೆಂದು** ಹೆಸರಿಸಿ ಶಿವಾನುಭವ ಗ್ರಂಥಮಾಲೆಯ ೭೮ನೇ ಕೃತಿಯಾಗಿ ಪ್ರಕಟವಾಗಿದೆ. ೧೯೩೦ರಲ್ಲಿ ಪ್ರಕಟವಾದ ಆವೃತ್ತಿಯಂತೆಯೇ ಇಲ್ಲಿಯ ೧೦೭ ವಚನಗಳು ಮುದ್ರಣವಾಗಿವೆ. ಈ ಎಲ್ಲ ವಚನಗಳಿಗೆ ಭಾವಾರ್ಥ ಭಾಗದಲ್ಲಿ ವಿವರಣೆಯನ್ನು ಬರೆದಿದ್ದಾರೆ.[೫೬] ಶೂನ್ಯಸಂಪಾದನೆಯ ೩ ಮತ್ತು ೧೦ನೇ ಉಪದೇಶಗಳನ್ನು ಸಂಯುಕ್ತಗೊಳಿಸಿ ೧೯೫೬ರಲ್ಲಿ ಪುನಃ ಪ್ರಕಟಿಸಿದ್ದಾರೆ.

ಡಾ. ಫ.ಗು. ಹಳಕಟ್ಟಿಯವರು ಬಸವಣ್ಣನವರ ೯೨ ವಚನಗಳನ್ನು ಆಯ್ದುಕೊಂಡು, ಪ್ರತಿ ವಚನಕ್ಕೂ ಸರಳವಾದ ವ್ಯಾಖ್ಯಾನವನ್ನು ಬರೆದು ಆ ಕೃತಿಗೆ **'ಸಟೀಕ ಬಸವೇಶ್ವರ ವಚನಗಳು'** ಎಂದು ಕರೆದಿದ್ದಾರೆ. ಡಾ. ಹಳಕಟ್ಟಿಯವರು ಪ್ರಾಚೀನ ಟೀಕಾ ಕೃತಿಗಳನ್ನು ಪ್ರಕಟಿಸುವುದರೊಂದಿಗೆ, ತಾವೇ ವಚನಗಳಿಗೆ ವ್ಯಾಖ್ಯಾನ ಬರೆದು ಪ್ರಕಟಿಸುವ ಮೂಲಕ ಕನ್ನಡ ಟೀಕಾ ಸಾಹಿತ್ಯದ ಮೇಲೆ ತಾವಿಟ್ಟುಕೊಂಡಿರುವ ಅನನ್ಯವಾದ ಕಾಳಜಿಯನ್ನು ತೋರಿಸಿ ಕೊಟ್ಟಿದ್ದಾರೆ.

ಹೀಗೆ ಕನ್ನಡದ ಪ್ರಾಚೀನ ಟೀಕಾ ಸಾಹಿತ್ಯದ ಪ್ರಕಟನೆಯ ಇತಿಹಾಸದಲ್ಲಿ ಡಾ. ಫ.ಗು ಹಳಕಟ್ಟಿಯವರು ಅವಿಸ್ಮರಣೀಯವಾದ ಕಾರ್ಯಮಾಡಿ ನಾಡಿನ ಜನಮನದಲ್ಲಿ ಜೀವಂತವಾಗಿದ್ದಾರೆ. ಜೊತೆಗೆ, ವಚನ ಸಾಹಿತ್ಯ ಸಂಕಲನ, ಸಂಪಾದನ ಮತ್ತು ವಚನ ವ್ಯಾಖ್ಯಾನವೆಂಬ ತ್ರಿಮುಖ ಸಾಧನೆ ಮಾಡಿ ತಮ್ಮ ಬಹುಮುಖ ಪ್ರತಿಭೆ, ಸಂಶೋಧನೆಯ ನಿಷ್ಠೆ, ಶ್ರದ್ಧಾಪೂರ್ವಕ ಕಾರ್ಯಗಳಿಂದ ವಿದ್ವಾಂಸರ ಗಮನ ಸೆಳೆದಿದ್ದಾರೆ.

**ಸಿದ್ಧರಾಮೇಶ್ವರ ಷಟ್‌ಸ್ಥಲದ ಬೆಡಗಿನ ವಚನಗಳು,** (೧೯೫೩) ಇದೊಂದು ವಚನ ವ್ಯಾಖ್ಯಾನ ಕೃತಿ. ಸಿದ್ಧರಾಮೇಶ್ವರರ ೧೧೬ ವಚನಗಳಿಗೆ ಮತ್ತು ಆದಯ್ಯನ ೧೬ ವಚನಗಳಿಗೆ ಸರಳವಾದ ಸಂಕ್ಷಿಪ್ತವಾದ ತಾತ್ಪರ್ಯ ಬರೆಯಲಾಗಿದೆ. ವಚನಗಳಿಗೆ ವ್ಯಾಖ್ಯಾನ ಬರೆದವರು ಕವಿತಾಳದ ಶ್ರೀ ಸಂಗಯ್ಯ ಮುರುಗಯ್ಯಸ್ವಾಮಿ ಹೀರೇಮಠ. ಉಡುತಡಿಯ **ಮಹಾದೇವಿಯಕ್ಕನ ವಚನಾರ್ಥ ಭಾಗ–೨** (೧೯೫೪–೫೯)ನ್ನು ಬರೆದಿರುವ **ಚೆನ್ನಮಲ್ಲಿಕಾರ್ಜುನರು** ಈ ಕೃತಿಯನ್ನು ಸದ್ಧರ್ಮದೀಪಿಕೆ ಪತ್ರಿಕೆಯಲ್ಲಿಯೂ, ಸ್ವತಂತ್ರ ಗ್ರಂಥ ರೂಪದಲ್ಲಿಯೂ ಪ್ರಕಟಿಸಿದ್ದಾರೆ. ಅಕ್ಕಮಹಾದೇವಿಯ ೧೫೦ ವಚನಗಳಿಗೆ ಟೀಕೆ ಬರೆದಿದ್ದಾರೆ. ನಂತರ ಅಕ್ಕಮಹಾದೇವಿಯ ವಚನಾರ್ಥ ಭಾಗ–೧,೨ ಸಂಯುಕ್ತವಾಗಿ ಪ್ರಕಟಿಸಿರುವ ಸಂಪಾದಕರು ಇವುಗಳಿಗೆ ಬಳಸಿದ ಆಕರಗಳನ್ನು ಹೇಳಿದ್ದಾರೆ. "ಹೀಗೆ ಚೆನ್ನಮಲ್ಲಿಕಾರ್ಜುನರು ವಿವಿಧ ಮೂಲಗಳಿಂದ ಲಭ್ಯವಾದ ಅಕ್ಕಮಹಾದೇವಿಯ ೨೨೬ ವಚನಗಳನ್ನು ಈ ಕೃತಿಯಲ್ಲಿ ಪ್ರಕಟಿಸಿ, ಅವೆಲ್ಲ ವಚನಗಳಿಗೂ ತಾತ್ಪರ್ಯ ಬರೆದಿದ್ದಾರೆ."[೧೭]

ಬಸವಣ್ಣನವರ ಷಟ್‌ಸ್ಥಲ ವಚನಗಳು ಭಾಗ–೧ (೧೯೫೪) ನ್ನು **ವಿರುಪಾಕ್ಷಪ್ಪ ಚನ್ನಪ್ಪ. ಮಾಳಗಿ** ಅವರು ಸಂಪಾದಿಸಿದ್ದಾರೆ. ಬಸವಣ್ಣನವರ ಷಟ್‌ಸ್ಥಲದ ೧೧೩ ವಚನಗಳಿಗೆ ವಿವರವಾದ ಆಧುನಿಕ ಟೀಕೆಯನ್ನೊಳಗೊಂಡ ಕೃತಿಯಾಗಿದೆ. ಸಂಪಾದಕರು ಕೃತಿಯ ಪ್ರಸ್ತಾವನೆಯಲ್ಲಿ ಬಸವಣ್ಣನವರ ವಚನಗಳು ಮೇಲ್ನೋಟಕ್ಕೆ ಸುಲಭವಾಗಿ ಕಾಣುತ್ತಿದ್ದು ಬಹು ಭಾವಗರ್ಭಿತ, ಗೂಡಾರ್ಥವುಳ್ಳವಾಗಿವೆ. ಹಳೆಯ ಕಾಲದಲ್ಲಿ ಯಾರೋ ಅವುಗಳಿಗೆ ಟೀಕೆ ಬರೆದಿರುವುದಾಗಿ ಹೇಳಿದ್ದಾರೆ. ಅಂದರೆ, ಪ್ರಾಚಿನ ಟೀಕಾಗ್ರಂಥವನ್ನು ಅನುಲಕ್ಷಿಸಿಕೊಂಡೆ ಹೊಸರೀತಿಯಲ್ಲಿ ಟೀಕನ್ನು ಬರೆದಿದ್ದಾರೆ. ಇಲ್ಲಿಯ ಟೀಕೆ ೩ ಹಂತಗಳಿಂದ ಬರೆಯಲ್ಪಟ್ಟದ್ದು ೧. ವಾಙ್ಮಯ ದೃಷ್ಟಿಯಿಂದ, ೨. ವೇದಾಂತದ ಹಿನ್ನೆಲೆಯಿಂದ, ೩. ಶಿವಾದ್ವೈತ ದೃಷ್ಟಿಯಿಂದ ಕೃತಿಗೆ ಭಾಷ್ಯವನ್ನು ಬರೆದಿದ್ದಾರೆಂದು"[೧೮] ಡಾ. ಬಿ.ಎಸ್. ಬಿರಾದಾರ ಹೇಳಿದ್ದಾರೆ.

ಸೀಳ್ನುಡಿ (೧೯೫೪) ಎಂಬ ವಿವರಣಾತ್ಮಕ ವ್ಯಾಖ್ಯಾನ ಮಾದರಿಯ ಈ ಕೃತಿಯನ್ನು **ಡಾ. ಜ.ಚ.ನಿ. ಯವರು** ಪ್ರಕಟಿಸಿದ್ದಾರೆ. ಬಸವಣ್ಣನವರ ೯ ವಚನಗಳಿಗೆ ವಿವರಣಾತ್ಮಕವಾದ ವ್ಯಾಖ್ಯಾನವಿದೆ. 'ಶರಣ ಸಂದೇಶ' ಪತ್ರಿಕೆಯಲ್ಲಿ ಶ್ರೀಗಳು ಬರೆದ ೫ ವಚನಗಳು ಮತ್ತು ಈ ಕೃತಿ ರಚನೆಗಾಗಿಯೇ ಬರೆದ ೪ ವಚನಗಳ ವಿಮರ್ಶೆ ಇಲ್ಲಿದೆ. "ನಾಟಕೀಯ ಮತ್ತು ಉಪದೇಶಪರ ಮಾದರಿಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ."[೧೯]

ಬಸವಣ್ಣನವರ ೩೨೬ ವಚನಗಳನ್ನು ಭಾವಾರ್ಥಸಹಿತವಾಗಿ ಬರೆದ **ಶ್ರೀಕಂಠಶಾಸ್ತ್ರಿಗಳು ಹಿರೇಮಠರು** ಅದಕ್ಕೆ '**ಭಕ್ತಿ ಭಂಡಾರಿ ಬಸವಣ್ಣನವರ ವಚನಗಳು**' ಎಂದು ಹೆಸರಿಸಿದ್ದಾರೆ. ಸಿಟಿಬುಕ್‌ಸ್ಟಾಲ್ ಹುಬ್ಬಳ್ಳಿಯವರು ೧೯೫೪ರಲ್ಲಿ ಪ್ರಕಟಿಸಿದ್ದಾರೆ. "ಡಾ. ಫ.ಗು. ಹಳಕಟ್ಟಿಯವರು ಸಂಪಾದಿಸಿ ಪ್ರಕಟಿಸಿದ ಕೃತಿಯನ್ನೇ ಆಧರಿಸಿ ವ್ಯಾಪಾರ ದೃಷ್ಟಿಯಿಂದ ಪ್ರಕಟಿಸಿದಂತೆ ತೋರುತ್ತದೆ."[೨೦] ಇಲ್ಲಿನ ವಚನಗಳಿಗೆ ಸರಳವಾಗಿ ಭಾವಾರ್ಥ ಬರೆದಿದ್ದಾರೆ. ಮಹಾದೇವಿಯಕ್ಕನ ೩೯ ವಚನಗಳಿಗೆ ವ್ಯಾಖ್ಯಾನವಿರುವ ಕೃತಿ 'ಅಕ್ಕನ ಅಮರವಾಣಿ' (೧೯೫೫), ಹುನಗುಂದದ 'ವಿಜಯ ಮಹಾಂತೇಶ ಗ್ರಂಥಮಾಲೆ'ಯಿಂದ ಪ್ರಕಾಶನಗೊಂಡ ಈ ಕೃತಿಗೆ **ಸಂಗಣ್ಣ–ಕಲ್ಲೂರ** ಅವರು ಆಧುನಿಕ ವಿವರಣಾತ್ಮಕ ವ್ಯಾಖ್ಯಾನ ಬರೆದಿದ್ದಾರೆ. ೧೩೦ ಪುಟಗಳ ಈ ಕೃತಿಯಲ್ಲಿ ಆಯಾ ವಚನದ ವಸ್ತುವಿಗೆ ಅಗತ್ಯವಾದ ಹಿನ್ನಲೆ ಇದೆ. 'ವಿವರಣೆ'ಯಲ್ಲಿ ವಚನ ಪ್ರತಿಪಾದಿಸುವ ಅರ್ಥವಿಶೇಷತೆಯಿದೆ. ಕೊನೆಯಲ್ಲಿ ಆ ವಚನದ ಒಟ್ಟು ಸಾರಾಂಶವಿದೆ. ವಚನ ಅಧ್ಯಯನ ಮಾಡಬೇಕೆನ್ನುವವರಿಗೆ ಸರಳ ರೀತಿಯಲ್ಲಿ ವಚನಾರ್ಥ ತಿಳಿಸಬಲ್ಲ ವ್ಯಾಖ್ಯಾನ ಕೃತಿ ಎನ್ನಬಹುದು.

**ಶ್ರೀ ಆದಯ್ಯನ ವಚನಗಳು** ೧೯೫೭ರಲ್ಲಿ **ಶ್ರೀ ಉತ್ತಂಗಿ ಚೆನ್ನಪ್ಪನವರಿಂದ** ಸಂಪಾದಿತವಾದ ವಚನ ಕೃತಿಯಾಗಿದೆ. ಬಾಲಲೀಲಾ ಮಹಾಂತ ಶಿವಯೋಗಿಶ್ವರ ಗ್ರಂಥಮಾಲೆಯ ೧೮ನೇಯ ಕೃತಿಯಾಗಿದೆ. ೩೧೦ ಪುಟಗಳ ಈ ಗ್ರಂಥವನ್ನು ಧಾರವಾಡ ಮುರುಘಾಮಠದ ಮೃತ್ಯುಂಜಯ ಶ್ರೀಗಳು ಪ್ರಕಾಶನ

ಮಾಡಿದ್ದಾರೆ. 'ಸೌರಾಷ್ಟ್ರ ಸೋಮೇಶ್ವರ' ಅಂಕಿತದ ಪುಲಿಗೆರೆ ಆದಯ್ಯನ ೩೯೭ ವಚನಗಳನ್ನು ವಿವಿಧ ಆಕರಗಳಿಂದ ಸಂಪಾದಿಸಿರುವ ಕೃತಿಗೆ ವೀ.ರು.ಕೊಪ್ಪಳ ಅವರು ಪ್ರಸ್ತಾವನೆ ಬರೆದಿದ್ದಾರೆ. ಈ ಕೃತಿಯಲ್ಲಿ ೨೫ ಬೆಡಗಿನ ವಚನಗಳಿದ್ದು, ೧೫ ವಚನಗಳಿಗೆ ಪ್ರಾಚೀನ ಟೀಕೆಯನ್ನು ಕೊಟ್ಟಿರುವರು. **ಶ್ರೀ ಜಗಜ್ಯೋತಿ ಬಸವೇಶ್ವರ ಶತಕತ್ರಯ** (೧೯೫೭)ವೆಂಬ ವಚನ ಸಂಕಲನ ಗ್ರಂಥವನ್ನು ಭೀ.ಶಂ. ಪೂಜಾರ ಸಂಗ್ರಹಿಸಿಕೊಟ್ಟಿದ್ದಾರೆ. ಗದಗಿನ ಪಿ.ಸಿ. ಶಾಬಾದಿಮಠ ಪ್ರಕಾಶಕರಾಗಿದ್ದು ೧೮೪ ಪುಟಗಳನ್ನು ಹೊಂದಿವೆ. ಧರ್ಮಶತಕ, ನೀತಿಶತಕ ಮತ್ತು ಮೋಕ್ಷಶತಕ ಮೂರು ವಿಭಾಗಗಳಲ್ಲಿ ನೂರು ನೂರು ವಚನಗಳಿವೆ. ಪ್ರತಿ ವಚನಕ್ಕೆ ಸಂಕ್ಷಿಪ್ತವಾದ ತಾತ್ಪರ್ಯವನ್ನು ಕೊಟ್ಟಿರುವರು. ಹೀಗಾಗಿ ಬಸವಣ್ಣನವರ ವಚನ ಸಂಗ್ರಹದ ಜೊತೆಗೆ ಅವರ ವಚನ ವ್ಯಾಖ್ಯಾನವುಳ್ಳ ಕೃತಿ ಇದಾಗಿದೆ.

**ಚೆನ್ನಮಲ್ಲಿಕಾರ್ಜುನರು 'ಗುರುವರ್ಗದ ವಚನಗಳು'** ಕೃತಿಯನ್ನು ೧೯೫೮ರಲ್ಲಿ ಸಂಪಾದಿಸಿ, ಮೈಸೂರಿನಿಂದ ಪ್ರಕಟಿಸಿದ್ದಾರೆ. "ವೀರಶೈವ ಧರ್ಮದ ಆಚಾರ್ಯ ಪರಂಪರೆಗೆ ಸೇರಿದ ಪಂಚಾಚಾರ್ಯರು ವಚನಗಳನ್ನು ರಚಿಸಿದ್ದಾರೆಂದು ಹೇಳಿ, ಪ್ರಸಾದಿ ಬೋಗಣ್ಣ ಮತ್ತು ಶಿವಲೆಂಕ ಮಂಚಣ್ಣನವರ ವಚನಗಳನ್ನೊಳಗೊಂಡ ಕೃತಿಯಿದು."[೨೧] 'ಚೆನ್ನಬಸವಣ್ಣಪ್ರಿಯಬೋಗಮಲ್ಲಿಕಾರ್ಜುನಲಿಂಗ' ಅಂಕಿತದ ಬೋಗಣ್ಣನ ೧೦೨ ವಚನಗಳನ್ನು ಗದ್ಯರೂಪದಲ್ಲಿ ಪ್ರಕಟಿಸಿದ್ದಾರೆ. ವಚನಗಳಲ್ಲಿ ೪ ವಿಧದ ಚಿಹ್ನೆ ಬಳಸಿದ್ದಾರೆ. ಇಲ್ಲಿಯ ಮೂರು ಬೆಡಗಿನ ವಚನಗಳಿಗೆ ಪ್ರಾಚೀನ ಟೀಕೆ ಇದೆ. ಅದೇ ರೀತಿಯಲ್ಲಿ ಶಿವಲೆಂಕ ಮಂಚಣ್ಣನ ೧೩೧ ವಚನಗಳನ್ನು ಪ್ರಕಟಿಸಿದ್ದಾರೆ. ವಚನಗಳಲ್ಲಿನ ಕಠಿಣ ಪದಗಳಿಗೆ ಅರ್ಥ ಕೊಟ್ಟಿರುವರು, "ಕೃತಿಯ ಕೊನೆಗೆ ಪ್ರಸಾದಿ ಬೋಗಣ್ಣ ಮತ್ತು ಶಿವಲೆಂಕ ಮಂಚಣ್ಣನ ಕೆಲವು ಬೆಡಗಿನ ವಚನಗಳಿಗೆ ಸಂಪಾದಕರೇ ಸರಳ ತಾತ್ಪರ್ಯ ಬರೆದಿದ್ದಾರೆ."[೨೨]

ಶಿವಶರಣರ ವಚನಗಳು, ಕವಿಗಳ ಪದ್ಯಗಳು, ಅನುಭಾವಿಗಳ ಹಾಡುಗಳನ್ನು ಒಳಗೊಂಡ ವಿಷಯಾಧಾರಿತ ವಚನ ಸಂಕಲನ ಕೃತಿ **ಕದಳಿಯ ವಚನಗಳು'** (೧೯೫೯). ೩೬ ಪುಟಗಳ ಈ ಕೃತಿಯನ್ನು ಧಾರವಾಡದ ನವಕಲ್ಯಾಣಮಠ ಪ್ರಕಾಶಿತಗೊಳಿಸಿದ್ದಾರೆ. ಸಂಪಾದಕರ ಹೆಸರು ಇಲ್ಲ. ಶ್ರೀ ಕುಮಾರಸ್ವಾಮಿಗಳು ಈ ಕೃತಿಗೆ ಮುನ್ನುಡಿ ಬರೆದಿದ್ದು 'ಕದಳಿ' ಪದದ ಅರ್ಥ ವಿಶೇಷವನ್ನು ವಚನ ವಿಶ್ಲೇಷಣೆಯೊಂದಿಗೆ ವಿವರಿಸಿದ್ದು, ಅರ್ಥಪೂರ್ಣವಾಗಿದೆ."[೨೩] ಈ ಕೃತಿಯ ಮುಕ್ತಾಯದ 'ಟಿಪ್ಪಣಿ ಭಾಗ'ದಲ್ಲಿ ಆಯಾ ವಚನಗಳ ಅರ್ಥ ವಿಶೇಷವನ್ನು, ಕಠಿಣಪದಗಳ ಅರ್ಥವನ್ನು ಕೊಟ್ಟಿದ್ದಾರೆ.

**ಡಾ.ಎಲ್.ಬಸವರಾಜು** ಅವರು ಅಲ್ಲಮಪ್ರಭುದೇವರ ೧೨೯೪ ವಚನಗಳು ಮತ್ತು ಸ್ವರವಚನಗಳನ್ನು ಸಂಪಾದಿಸಿ ಕೊಟ್ಟ ಪ್ರಮುಖ ಗ್ರಂಥ **'ಅಲ್ಲಮನ ವಚನ ಚಂದ್ರಿಕೆ'** (೧೯೬೦). ಮೈಸೂರಿನ ನಳನೀಶ ಪ್ರಕಾಶನದಿಂದ ಪ್ರಕಟಗೊಂಡ ಈ ಗ್ರಂಥ ಮೌಲಿಕ ಪ್ರಸ್ತಾವನೆ ಸೇರಿದಂತೆ ೫೦೨ ಪುಟಗಳನ್ನೊಳಗೊಂಡಿದೆ. ಈ ಕೃತಿಯಲ್ಲಿನ ವ್ಯಾಖ್ಯಾನದ ಆಕರ ಕುರಿತು ಹೀಗೆ ಹೇಳುತ್ತಾರೆ. "........ಶ್ರೀಯುತರುಗಳಾದ ಎಂ.ಚಿದಾನಂದಮೂರ್ತಿ, ಬಸವರಾಜಶಾಸ್ತ್ರಿಗಳು, ಎಂ.ಡಿ. ಬಸಪ್ಪನವರು ಈ ಮೂರು ಮಹನೀಯರೂ

ತಮ್ಮಲ್ಲಿದ್ದ ಪ್ರಭುದೇವರ ಟೀಕಿನ ವಚನಗಳ ಒಂದೊಂದು ಪ್ರತಿಯನ್ನು ನನಗೆ ಕೊಟ್ಟಿದ್ದಾರೆ."[೨೪] ಹೀಗೆ ಸ್ಮರಿಸಿರುವ ಡಾ. ಎಲ್.ಬಸವರಾಜು ಅವರು ಕೃತಿಯನ್ನು ಡಿ.ಸಿ. ಪಾವಟೆಯವರಿಗೆ ಅರ್ಪಿಸಿದ್ದಾರೆ. ವಚನಗಳ ಪ್ರಾಚೀನತೆ ಮತ್ತು ವ್ಯಾಖ್ಯಾನ ಪರಂಪರೆ ತಿಳಿಯಲು ಆಧಾರಗ್ರಂಥವಾಗಿದೆ.

**ಗಿರಿಜಾಶಂಕರ ಗದಗ** ಅವರು ಅಕ್ಕಮಹಾದೇವಿಯ ೨೧೬ ವಚನಗಳಿಗೆ ವ್ಯಾಖ್ಯಾನ ಬರೆದು ಸಂಪಾದಿಸಿದ ಗ್ರಂಥ. ೧೫೨ ಪುಟಗಳ ಈ ಗ್ರಂಥದಲ್ಲಿ ೧೯೬೨ರಲ್ಲಿ ಗದಗಿನ ಬಿ.ಜಿ. ಸಂಕೇಶ್ವರ ಅವರಿಂದ ಪ್ರಕಾಶನವಾಯಿತು. ಅಕ್ಕನ ೨೧೬ ವಚನಗಳನ್ನು ಪದ್ಯರೂಪದಲ್ಲಿ ಸಂಪಾದಿಸಿರುವ ಗಿರಿಜಾ ಶಂಕರ ಅವರು ಪ್ರತಿ ವಚನಕ್ಕೂ ಸರಳವಾದ ವ್ಯಾಖ್ಯಾನ ಬರೆದಿದ್ದಾರೆ. ಶಿವಯೋಗ, 'ದೃಷ್ಟಿಯೋಗ'ಕ್ಕೆ ಸಂಬಂಧಿಸಿದ ವಚನಗಳ ಸಂಕಲನ ಗ್ರಂಥ **'ದೃಷ್ಟಿಯೋಗ'** ೧೯೬೩ರಲ್ಲಿ ಪ್ರಕಟವಾಗಿದೆ. **ಚ. ಸುಂದರೇಶನ್** ಕೃತಿ ಸಂಕಲನಕಾರರು. ೧೩೪ ಪುಟಗಳ ಈ ಕೃತಿಯಲ್ಲಿ ಬೇರೆ ಬೇರೆ ಶರಣರ ೧೦೧ ವಚನಗಳನ್ನು ಪುಟಕ್ಕೊಂದರಂತೆ ಪ್ರಕಟಿಸಿ, ಅಡಿಯಲ್ಲಿ ವಚನಗಳ ಭಾವಾರ್ಥ, ಕಠಿಣ ಪದಗಳ ಅರ್ಥನೀಡಿದ್ದಾರೆ. ಶಿವಯೋಗದ ನಿಲುವು ಅರಿಯಲು ಈ ವಚನಭಾವಾರ್ಥ ಕೃತಿ ಸಹಾಯಕವಾಗಿದೆ.

**ವೀರಭದ್ರಪ್ಪ ಕೊಪ್ಪಳ** ಅವರು 'ಲಿಂಗವಿಕಳಾವಸ್ಥೆಯ ವಚನಗಳು' ವಚನ ಸಂಕಲನ ಗ್ರಂಥವನ್ನು ೧೯೬೪ರಲ್ಲಿ ಸಂಪಾದಿಸಿ, ಧಾರವಾಡದಿಂದ ಪ್ರಕಟಿಸಿದ್ದಾರೆ. ಈ ಕೃತಿಯ ಕರ್ತೃ ಎಳಮಲೆಯ ಗುರುಶಾಂತದೇವ. ೧೦ ವಚನಕಾರರ ೧೧೦ ವಚನಗಳ ೬೮ ಪುಟಗಳ ಈ ಕೃತಿಯಲ್ಲಿ ಸಂಪಾದಕರು 'ವಿವರವಾದ ಟಿಪ್ಪಣಿ'ಗಳು ಭಾಗದಲ್ಲಿ ಎಲ್ಲ ವಚನಗಳಿಗೆ ಭಾವಾರ್ಥ ಬರೆದಿದ್ದಾರೆ. ಅದೇ ರೀತಿ **'ಲಿಂಗಸ್ತೋತ್ರದ ವಚನಗಳು'** ಎಂಬ ಹೆಸರಿನಲ್ಲಿ ೧೯೬೪ರಲ್ಲಿ **ವೀರಭದ್ರಪ್ಪ ಕೊಪ್ಪಳ** ಅವರು ಸಂಪಾದಿಸಿದ್ದಾರೆ. ಷಟ್‌ಸ್ಥಲಾಚಾರ ಸಾರೋದ್ಧಾರ ಅಭಿದಾನವುಳ್ಳ ಸಿದ್ಧವೀರಣ್ಣದೇವರು ಈ ಕೃತಿಯ ಮೂಲ ಸಂಕಲನಕಾರರು. ೭೯ ಪುಟಗಳ ಈ ಕೃತಿಯಲ್ಲಿ ೨೬ ಜನ ವಚನಕಾರರ ೧೦೮ ವಚನಗಳಿವೆ. ಕೃತಿಯ ಅಂತ್ಯದಲ್ಲಿ ಇಲ್ಲಿನ ಪ್ರತಿಯೊಂದು ವಚನಕ್ಕೂ ಸಾರಾಂಶ ರೂಪದ ಟಿಪ್ಪಣಿ ಕೊಟ್ಟಿರುವರು.

**ಬಸವವಚನಾಮೃತ ಭಾಗ** – ೧ ನ್ನು ಟಿ.ಎನ್. ಮಲ್ಲಪ್ಪ, ಸಿದ್ದಯ್ಯ ಪುರಾಣಿಕ ಹಾಗೂ ಜೀರಗೆ ಕಟ್ಟೆಬಸಪ್ಪನವರು ಸಂಗ್ರಹಿಸಿದ ಬಸವಣ್ಣನವರ ೧೦೮ ವಚನಗಳ ಸಂಗ್ರಹ ಕೃತಿ. ೧೯೬೪ರಲ್ಲಿ ಬೆಂಗಳೂರಿನ ಬಸವಸಮಿತಿ ಪ್ರಕಾಶನಗೊಳಿಸಿದೆ. ಇದೇ ಕೃತಿಯನ್ನು **ಡಾ. ಎಲ್. ಬಸವರಾಜು** ಅವರು ೧೯೬೬ರಲ್ಲಿ ಶಾಸ್ತ್ರಶುದ್ಧವಾಗಿ ಪರಿಷ್ಕರಿಸಿದ್ದಾರಲ್ಲದೇ ಈ ವಚನಗಳಿಗೆ ಹೊಸದಾಗಿ ಸರಳವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಅದೇ ರೀತಿ **ಡಾ. ಎಲ್. ಬಸವರಾಜು** ಅವರು **'ಅಕ್ಕನ ವಚನಗಳು'** ಕೃತಿಯನ್ನು ೧೯೬೬ರಲ್ಲಿ ಸಂಪಾದಿಸಿದ್ದಾರೆ. ಮೈಸೂರಿನ ಗೀತಾಬುಕ್ ಹೌಸ್ ಕೃತಿಯ ಪ್ರಕಾಶಕರು. ೨೭೨ ಪುಟಗಳ ವಚನ ಸಂಕಲನದಲ್ಲಿ ಅಕ್ಕಮಹಾದೇವಿಯ ೧೫ ವಚನಗಳ ಭಾವಾನುವಾದವನ್ನು ಲಿಂಗಲೀಲಾವಿಲಾಸ ಚಾರಿತ್ರದಲ್ಲಿನ ವ್ಯಾಖ್ಯಾನವನ್ನು ಅನುಸರಿಸಿ ಕೆಲವು ವಚನಗಳ ವ್ಯಾಖ್ಯಾನ ಭಾಗದಲ್ಲಿ ಕೊಟ್ಟಿರುವರು. (ಪು.೨೨೫, ೨೨೭)

**ಭೀ.ಶಂ. ಪೂಜಾರ** ಅವರು ೧೯೬೬ರಲ್ಲಿ ಜಗಜ್ಯೋತೀ ಬಸವೇಶ್ವರ ಶತಕತ್ರಯ ವೆಂಬ ಬಸವಣ್ಣನವರ ೩೦೦ ವಚನಗಳ ಸಂಕಲನ ಸಂಗ್ರಹಿಸಿದ್ದಾರೆ. ೧೮೪ ಪುಟಗಳ ಈ ಗ್ರಂಥವನ್ನು ಗದಗಿನ ಪಿ.ಸಿ. ಶಾಬಾದಿಮಠ ಪ್ರಕಟಿಸಿದ್ದಾರೆ. ಇಲ್ಲಿನ ಪ್ರತಿವಚನಕ್ಕೂ ಸರಳಭಾವಾರ್ಥ ಬರೆದಿದ್ದಾರೆ. ಅದರಂತೆ, **ಮಾ.ನಂ. ನಂಜಪ್ಪನವರು** 'ಶ್ರೀ ಬಸವೇಶ್ವರ ವಚನ ಪ್ರದೀಪಿಕೆ' ಎಂಬ ಬಸವಣ್ಣನವರ ೨೫೪ ವಚನಗಳಿಗೆ ಸೊಗಸಾದ ವಿವರಣೆ ಬರೆದ ವಚನ ವ್ಯಾಖ್ಯಾನ ಗ್ರಂಥವಾಗಿದೆ. ಬಂಥನಾಳದ ಸಂಗನಬಸವ ಶಿವಯೋಗಿಗಳವರು ೧೯೬೭ರಲ್ಲಿ 'ಭಗವಾನ್ ಶ್ರೀ ಬಸವೇಶ್ವರರ ಸಂದೇಶ' ಎಂಬ ವಚನ ವ್ಯಾಖ್ಯಾನ ಗ್ರಂಥವನ್ನು ಪ್ರಕಟಿಸಿದ್ದಾರೆ. **ಎಸ್, ನಂಜುಂಡಯ್ಯನವರು** 'ಶರಣರ ವಿಚಾರಧಾರೆ' ಎಂಬ ವ್ಯಾಖ್ಯಾನ ಮಾದರಿಯ ವಚನ ವಿಮರ್ಶೆ – ವಿಶ್ಲೇಷಣೆ ಕೃತಿಯನ್ನು ೧೯೬೭ರಲ್ಲಿ ಪ್ರಕಟಿಸಿದ್ದಾರೆ. ೧೧೨ ಪುಟಗಳ ಈ ಕೃತಿಯಲ್ಲಿ ೧೭ ಜನ ವಚನಕಾರರ ೩೬ ವಚನಗಳನ್ನು ಸರಳ ರೂಪದಲ್ಲಿ ವಿವರವಾಗಿ ವಿಶ್ಲೇಷಿಸಿರುವುದರಿಂದ ವಚನಾಧ್ಯಯನಕ್ಕೆ ಉಪಯುಕ್ತವಾಗಿದೆ.

**'ಮೋಳಿಗೆಯಮಾರಯ್ಯನ ವಚನಗಳು'** ಎಂಬ ಮೋಳಿಗೆ ಮಾರಯ್ಯನ ೫೯೩ ವಚನಗಳ ಕೃತಿಯನ್ನು **ಡಾ. ಬಿ.ಎಸ್. ಸಣ್ಣಯ್ಯನವರು** ಸಂಪಾದಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಕ.ಅ.ಸಂಸ್ಥೆಯು ೧೯೭೯ರಲ್ಲಿ ಪ್ರಕಟಿಸಿದ ಈ ಕೃತಿ ೧೭೯ ಪುಟಗಳನ್ನು ಹೊಂದಿದೆ. ಇಲ್ಲಿರುವ ಬೆಡಗಿನ ವಚನಗಳಿಗೆ ಪ್ರಾಚೀನ ಟೀಕೆ ಇದೆ. **'ದೇವರ ದಾಸಿಮಯ್ಯನ ವಚನಗಳು'** ಎಂಬ ದೇವರ ದಾಸಿಮಯ್ಯನ ೧೫೦ ವಚನಗಳ ಸಂಪಾದನೆ ಕೃತಿಯನ್ನು **ಡಾ.ಎಲ್.ಬಸವರಾಜು** ಅವರು ೧೯೭೦ರಲ್ಲಿ ಪ್ರಕಟಿಸಿದ್ದಾರೆ. ಮೈಸೂರು ಗೀತಾಬುಕ್ ಹೌಸ್ ಪ್ರಕಾಶನ ಮಾಡಿದ ಈ ಕೃತಿ ೧೨೨ ಪುಟಗಳನ್ನು ಹೊಂದಿದೆ. ಇವರೇ ದಾಸಿಮಯ್ಯನವರ ೧೫೯ ವಚನಗಳ ಭಾವಾರ್ಥ ಬರೆದು ಅದಕ್ಕೆ 'ವಚನ ಚಿಂತನ' ಎಂದು ಹೆಸರಿಸಿ ೧೯೮೨ರಲ್ಲಿ ಪ್ರಕಟಿಸಿದ್ದಾರೆ. ಇಲ್ಲಿನ ವಚನಗಳಿಗೆ ಸರಳವಾದ ಭಾಷ್ಯವನ್ನು ಬರೆದಿದ್ದಾರೆ. ಇದರ ಪ್ರಕಾಶಕರು ಮೈಸೂರಿನ ನಳನೀ ಶಂಕರ ಅವರಾಗಿದ್ದಾರೆ.

**ಬಿ.ಎಸ್. ಸಣ್ಣಯ್ಯನವರು** 'ಕೋಲಶಾಂತಯ್ಯ ಮತ್ತು ಮಧುವಯ್ಯಗಳ ವಚನಗಳು' ಕೃತಿಯನ್ನು ೧೯೭೦ರಲ್ಲಿ ಸಂಪಾದಿಸಿ, ಮೈಸೂರು ವಿಶ್ವವಿದ್ಯಾನಿಲಯದ ಕ.ಅ. ಸಂಸ್ಥೆಯಿಂದ ಪ್ರಕಟಿಸಿದ್ದಾರೆ. ೧೨೨ ಪುಟಗಳ ಈ ಗ್ರಂಥದಲ್ಲಿ ಕೋಲಶಾಂತಯ್ಯನ ೬೪ ಸರಳ ವಚನಗಳು, ೩೬ ಬೆಡಗಿನ ವಚನಗಳನ್ನು ಗದ್ಯಾತ್ಮಕವಾಗಿ ಕೊಟ್ಟಿದ್ದಾರೆ. ಇಲ್ಲಿಯ ಎಲ್ಲ ಬೆಡಗಿನ ವಚನಗಳಿಗೆ **ನಡುಗನ್ನಡದ ಟೀಕೆ** ಇದೆ. ಹಾಗೆಯೇ "ಅರ್ಕೇಶ್ವರ ಲಿಂಗ" ಅಂಕಿತದ ಮಧುವಯ್ಯಗಳ ೬೮ ಸರಳವಚನಗಳು, ೩೩ ಬೆಡಗಿನ ವಚನಗಳನ್ನು ಗದ್ಯಾತ್ಮಕವಾಗಿ ಕೊಟ್ಟಿದ್ದಾರೆ. ಇಲ್ಲಿಯ ಎಲ್ಲ ಬೆಡಗಿನ ವಚನಗಳಿಗೆ **ಪ್ರಾಚೀನ ಟೀಕೆ** ಇದೆ. "ಇಲ್ಲಿನ ವಚನಗಳು ಗದ್ಯಾತ್ಮಕವಾಗಿ ಮುದ್ರಣಗೊಂಡಿದ್ದು, ವಚನ ಮತ್ತು ವ್ಯಾಖ್ಯಾನಗಳಿಗೆ ಪಾಠಾಂತರಗಳನ್ನು ಕೊಟ್ಟಿರುವರು"[೨೫] ಎಂಬ ಅಭಿಪ್ರಾಯದಿಂದ ವಚನಗಳಿಗೆ ಮಾತ್ರವಲ್ಲ, ವ್ಯಾಖ್ಯಾನಗಳಿಗೂ ಪಾಠಾಂತರ ಕೊಡುತ್ತಿರುವ ಬಗೆಗೆ ತಿಳಿಯುತ್ತದೆ. ಅಲ್ಲದೇ, ಬಿ.ಎಸ್. ಸಣ್ಣಯ್ಯನವರು ನಡುಗನ್ನಡ ಟೀಕೆ, ಪ್ರಾಚೀನ ಟೀಕೆ ಎಂದು ಹೇಳಿರುವುದನ್ನು ಅಧ್ಯಯನ ಆಕಾಂಕ್ಷೆಯುಳ್ಳವರು ಗಮನಿಸಬೇಕಾಗುತ್ತದೆ.

**'ನೂರೆಂಟು ವಚನಗಳ ಸಂಗ್ರಹ'** ಕೃತಿಯನ್ನು **ಪಂ. ನಾಗಭೂಷಣ** ಶಾಸ್ತ್ರಿಗಳು ಸಂಗ್ರಹಿಸಿದ ಕೃತಿ. ೧೯೭೦ರಲ್ಲಿ ಗದಗಿನ ತೋಂಟದ ಸಿದ್ಧಲಿಂಗೇಶ್ವರರ ೫ನೇ ಶತಮಾನೋತ್ಸವ ಸಂದರ್ಭದಲ್ಲಿ ಪ್ರಕಟವಾಗಿದೆ. ಇದು ತೋಂಟದ ಸಿದ್ಧಲಿಂಗ ಶಿವಯೋಗಿಗಳ ಷಟ್‌ಸ್ಥಲ ಜ್ಞಾನಸಾರಾಮೃತ ಕೃತಿಯಲ್ಲಿರುವ ೧೦೮ ವಚನಗಳ ಸಂಗ್ರಹವಾಗಿದೆ. ೧೨೦ ಪುಟಗಳ ಈ ಕೃತಿಯಲ್ಲಿ ಪುಟಕ್ಕೊಂದರಂತೆ ವಚನ ಮುದ್ರಿಸಿ, ಪ್ರತಿಯೊಂದಕ್ಕು ಸರಳವಾದ ಭಾವಾರ್ಥ ಬರೆದಿದ್ದಾರೆ. **ಡಾ.ಆರ್.ಸಿ. ಹಿರೇಮಠರು** ಸಂಪಾದಿಸಿದ **'ವಿಶೇಷಾನುಭವ ಷಟ್‌ಸ್ಥಲ'** ಕೃತಿ ೧೯೭೧ರಲ್ಲಿ ಧಾರವಾಡ ಕ.ವಿ.ವಿ. ದಿಂದ ಪ್ರಕಾಶಿತವಾಗಿದೆ. ೪೭೫ ಪುಟಗಳ ಈ ಕೃತಿ ಚೆನ್ನವೀರಾರ್ಯನು ಸಂಕಲಿಸಿದ ಪ್ರಾಚೀನ ವಚನ ಸಂಕಲನ ಗ್ರಂಥ. ಸಂಕಲನಕಾರನು ಶರಣರ ವಚನಗಳನ್ನು ೧೫ ಸ್ಥಲಗಳಲ್ಲಿ ವಿಂಗಡಿಸಿ ಇಲ್ಲಿನ ವಚನಗಳಿಗೆ ವ್ಯಾಖ್ಯಾನ ಬರೆದಿದ್ದಾನೆ. ಇದರಲ್ಲಿ ೪೦ ಜನ ವಚನಕಾರರ ೭೪೦ ವಚನಗಳು ಸಂಕಲನಗೊಂಡಿದ್ದು, ಎಲ್ಲ ವಚನಗಳಿಗೂ ಸಂಕ್ಷೇಪದಲ್ಲಿ ಅರ್ಥಪೂರ್ಣವಾದ ಪ್ರಾಚೀನ ಟೀಕೆಗಳಿರುವುದರಿಂದ ವಚನ ಓದುಗರ ಗಮನ ಸೆಳೆಯುತ್ತದೆ.

ಬಸವಣ್ಣನವರ ೫೨೪ ವಚನಗಳಿಗೆ ಪ್ರಾಚೀನ ಅಜ್ಞಾತ ವಚನ ಟೀಕಾಕಾರನು ಬರೆದಿರುವ ವಚನ ಟೀಕಾ ಗ್ರಂಥವನ್ನು ಡಾ. ಎಸ್.ಎಂ. ಹುಣಶ್ಯಾಳ ಅವರು ಬಸವೇಶ್ವರ ವಚನ ವ್ಯಾಖ್ಯಾನ ಭಾಗ-೧ ಎಂದು ೧೯೭೧ರಲ್ಲಿ ಸಂಪಾದಿಸಿದ್ದಾರೆ. ಕವಿತಾಳದ ಸಿದ್ಧಲಿಂಗ ಸ್ವಾಮಿಗಳು ಕಲ್ಮಠ ಅವರು ಪ್ರಕಟಿಸಿದ್ದಾರೆ. ಸಂಪಾದಕರು ಪ್ರಸ್ತಾವನೆಯಲ್ಲಿ "ಈ ಕೃತಿಯು ವ್ಯಾಖ್ಯಾನಕಾರರ ಹೆಸರು ತಿಳಿದುಬರುವುದಿಲ್ಲವೆಂದೂ, ಈತನ ಕಾಲ ೧೫ನೇ ಶತಮಾನವೆಂದೂ, ಈತನ ಸ್ಥಳ ರಾಯಚೂರು ಎಂದು ನಿರ್ಧರಿಸಿದ್ದು, ಇಲ್ಲಿನ ವ್ಯಾಖ್ಯಾನ ವಿಶೇಷ ಕುರಿತು ವಿವರಿಸಿದ್ದಾರೆ".[೨೬] ಬಸವಣ್ಣನವರಿಗೆ ಸಂಬಂಧಿಸಿದ ಪ್ರಾಚೀನ ಟೀಕಾಗ್ರಂಥಗಳಲ್ಲಿ ಇದು ಪ್ರಮುಖವಾದುದಾಗಿದೆ.

**ಡಾ. ಬಿ.ಎಸ್. ಸಣ್ಣಯ್ಯನವರು** ಸಂಪಾದಿಸಿದ **'ಅರಿವಿನ ಮಾರಿತಂದೆ ವಚನಗಳು'** ಮತ್ತು **ಶಿವಲೆಂಕ ಮಂಚಣ್ಣ** ಮತ್ತು **ಡಕ್ಕೆಯ ಬೊಮ್ಮಣ್ಣಗಳ** ವಚನಗಳು ಕೃತಿಗಳು ಮೈಸೂರು ವಿ.ವಿ.ದ ಕ.ಅ. ಸಂಸ್ಥೆಯಿಂದ ೧೯೭೧ರಲ್ಲಿ ಪ್ರಕಟವಾಗಿವೆ. ಅರಿವಿನ ಮಾರಿತಂದೆಯ ೩೦೧ ವಚನಗಳಿವೆ. ೨೫೦ ಸರಳ ವಚನಗಳು, ೫೧ ಬೆಡಗಿನ ವಚನಗಳಿವೆ. ಇಲ್ಲಿಯ ಬೆಡಗಿನ ವಚನಗಳಿಗೆ ಸಿಂಗಳದ ಸಿದ್ಧಬಸವರಾಜದೇವರ ವ್ಯಾಖ್ಯಾನವಿದೆ. ಶಿವಲೆಂಕ ಮಂಚಣ್ಣನ ೧೨೭ ಸರಳ ವಚನಗಳು, ೮ ಬೆಡಗಿನ ವಚನಗಳು ಸೇರಿ ೧೩೫ ವಚನಗಳು ಪ್ರಕಟವಾಗಿವೆ. ಇಲ್ಲಿನ ಬೆಡಗಿನ ವಚನಗಳಿಗೆ ಪ್ರಾಚೀನ ಟೀಕೆ ಇದೆ. ಅದೇ ರೀತಿ ಡಕ್ಕೆಯ ಬೊಮ್ಮಣ್ಣಗಳ ೮೯ ವಚನಗಳು ಪ್ರಕಟವಾಗಿವೆ. ಇದರಲ್ಲಿಯ ೪ ಬೆಡಗಿನ ವಚನಗಳಿಗೆ ಮಾತ್ರ ಟೀಕೆ ಇದೆ.

**ಲಿಂಗಾನಂದ ಸ್ವಾಮಿಗಳು** 'ಕಲ್ಯಾಣಕಿರಣ' ಪತ್ರಿಕೆಯಲ್ಲಿ ಬರೆದ ವಚನ ವ್ಯಾಖ್ಯಾನಗಳ ಸಂಗ್ರಹ ಕೃತಿ **'ವಚನಾಮೃತ'**. ೧೯೭೨ರಲ್ಲಿ ಪ್ರಥಮ ಆವೃತ್ತಿ, ೧೯೮೨ರಲ್ಲಿ ನಾಲ್ಕನೇ ಆವೃತ್ತಿ ಕಂಡ ಈ ಕೃತಿಯನ್ನು ಧಾರವಾಡ ಸುಯಿದಾನ ಗ್ರಂಥಮಾಲೆ ಪ್ರಕಟಿಸಿದೆ. ೧೫೬ ಪುಟಗಳನ್ನು ಹೊಂದಿರುವ

ಈ ಕೃತಿ ವಚನಗಳ ತಾತ್ವಿಕತೆಗೆ ಮಹತ್ವ ನೀಡಿದ ಆಧುನಿಕ ವ್ಯಾಖ್ಯಾನವಾಗಿದೆ. **ಡಾ. ಎಚ್.ಪಿ. ಮಲ್ಲೇದೇವರು** ಸಂಪಾದಿಸಿದ ಸ್ವತಂತ್ರ ಸಿದ್ಧಲಿಂಗೇಶ್ವರನ ಕೃತಿಯು ೧೯೭೫ರಲ್ಲಿ ಧಾರವಾಡದ ಬಸವೇಶ್ವರ ಪೀಠದ ಮೊದಲ ಕೃತಿಯಾಗಿ ಪ್ರಕಟವಾಗಿದೆ. ಈ ಗ್ರಂಥದಲ್ಲಿ ಸ್ವತಂತ್ರ ಸಿದ್ಧಲಿಂಗೇಶ್ವರರ ೪೩೦ ವಚನಗಳಿವೆ. ಇವುಗಳಲ್ಲಿ ೨೧ ವಚನಗಳಿಗೆ ಚೆನ್ನದೇವರು ವ್ಯಾಖ್ಯಾನಿಸಿದ ಟೀಕೆಗಳಿವೆ.

**ಡಾ. ಆರ್.ಸಿ. ಹಿರೇಮಠ** ಮತ್ತು **ಎಂ.ಎಸ್. ಸುಂಕಾಪೂರ** ಅವರ ಉಭಯ ಸಂಪಾದಕತ್ವದಲ್ಲಿ ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಿಂದ ೧೯೭೬ರಲ್ಲಿ ಪ್ರಕಟವಾದ ಕೃತಿ **'ವ್ಯೋಮಮೂರುತಿ ಅಲ್ಲಮಪ್ರಭುದೇವರ ವಚನಗಳು'**. ಇದೊಂದು ಮೌಲಿಕ ಸಂಪಾದಿತ ಕೃತಿಯಾಗಿದ್ದರೂ ಬೆಡಗಿನ ಪದಗಳ ಅರ್ಥಕೋಶ (ಪು. ೬೫೧-೬೯೬), ಕೆಲವು ಬೆಡಗಿನ ವಚನಗಳ ಭಾವಾನುವಾದ (ಪು. ೬೯೭-೭೫೧), ಪ್ರಭುದೇವರ ಪರಮಯೋಗ, ಮಂತ್ರಗೋಪ್ಯ, ಅನುಭಾವಗೀತೆಗಳಿಗೆ ಕಲ್ಲುಮಠದ ಪ್ರಭುದೇವ ಹಾಗೂ ಇನ್ನೊಬ್ಬ ಅಜ್ಞಾತ ಅನುಭಾವಿ ಬರೆದ ವ್ಯಾಖ್ಯಾನ (ಪು. ೭೫೨-೭೬೩)ಗಳನ್ನು ಗ್ರಂಥದ ಕೊನೆಯಲ್ಲಿ ಕೊಡಲಾಗಿದೆ. **ಎಚ್.ಡಿ. ಚಂದನಗೌಡರು** ಸಂಪಾದಿಸಿದ **'ಶರಣರು ಕಂಡ ಬಸವಣ್ಣ'** ಕೃತಿ ಆಧುನಿಕ ವಚನ ಸಂಕಲನ ಕುರಿತು ಹೇಳಿದ ೪೧೫ ವಚನಗಳಿವೆ. ೧೯೭೬ರಲ್ಲಿ ಧಾರವಾಡದ ಲಿಂಗಾಯತ ಅಭಿವೃದ್ಧಿ ಸಂಸ್ಥೆ ಪ್ರಕಟಿಸಿದ್ದು ೪೪೬ ಪುಟಗಳಿವೆ. ಬಸವಣ್ಣನವರ ಸಮಕಾಲೀನ ಶರಣ-ಶರಣೆಯರು ಬರೆದ ಬೆಡಗಿನ ರೂಪದ ವಚನಗಳಿಗೆ. ಪ್ರಾಚೀನ ಟೀಕೆಯನ್ನು ಆಧರಿಸಿ ಭಾವಾನುವಾದವನ್ನು ಬರೆದಿರುವುದು ಈ ಕೃತಿಯ ವಿಶೇಷ.

**ಡಾ. ಬಿ.ವಿ. ಶಿರೂರ** ಅವರು ತೋಂಟದ ಸಿದ್ಧಲಿಂಗೇಶ್ವರರ ಷಟ್‌ಸ್ಥಲ ಜ್ಞಾನಸಾರಾಮೃತಕ್ಕೆ **ಸೋಮಶೇಖರ ಶಿವಯೋಗಿ ಬರೆದ ಬೆಡಗಿನ ವಚನದ ಟೀಕೆ** ಕೃತಿಯನ್ನು ೧೯೭೭ರಲ್ಲಿ ಗದಗಿನ ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠದಿಂದ ಪ್ರಕಟಿಸಿದ್ದಾರೆ. ೧೮೮ ಪುಟಗಳ ಈ ಕೃತಿ ಪ್ರಾಚೀನ ವಚನ ವ್ಯಾಖ್ಯಾನವನ್ನು ಒಳಗೊಂಡಿದೆ. ತೋಂಟದ ಸಿದ್ಧಲಿಂಗ ಶಿವಯೋಗಿಗಳ ೧೫೨ ವಚನಗಳು ಮತ್ತು ಇವಕ್ಕೆಲ್ಲಾ ವ್ಯಾಖ್ಯಾನಗಳಿವೆ. **'ಶ್ರೀ ಜಗದ್ಗುರು ಕಾಡಸಿದ್ದೇಶ್ವರರ ವಚನಾಮೃತ'** ಕೃತಿಯನ್ನು **ಅದೃಶ್ಯ ಕಾಡಸಿದ್ದೇಶ್ವರ** ಸ್ವಾಮಿಗಳು ಸಂಪಾದಿಸಿ, ಪ್ರಕಟಿಸಿದ್ದಾರೆ. ಇದು ಕಾಡಸಿದ್ದೇಶ್ವರರ ೫೦ ವಚನಗಳ ಸಂಗ್ರಹ ಕೃತಿ. ವಚನಗಳು ಪದ್ಯಾತ್ಮಕವಾಗಿವೆ. ಎಲ್ಲ ವಚನಕ್ಕೂ ಸರಳವಾದ ಭಾವಾರ್ಥವನ್ನು ಬರೆದಿದ್ದಾರೆ.

**ಸಿಂಗಳದ ಸಿದ್ಧಬಸವರಾಜದೇವರು ವ್ಯಾಖ್ಯಾನಿಸಿದ 'ಸಕಲ ಪುರಾತನರ ಬೆಡಗಿನ ವಚನಗಳು'** ಎಂಬ ಪ್ರಾಚೀನ ವ್ಯಾಖ್ಯಾನ ಗ್ರಂಥವನ್ನು ಡಾ.ಎಂ.ಎಸ್. ಸುಂಕಾಪೂರ ಅವರು ಸಂಪಾದಿಸಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದ ಕನ್ನಡ ಅಧ್ಯಯನ ಪೀಠದಿಂದ ೧೯೭೮ರಲ್ಲಿ ಪ್ರಕಟಿಸಿದ್ದಾರೆ. ೪೭ ಜನ ವಚನಕಾರರ ೫೪೧ ಬೆಡಗಿನ ವಚನಗಳಿದ್ದು, ಇವಕ್ಕೆ ಸಿಂಗಳದ ಸಿದ್ಧಬಸವರಾಜದೇವರ ವ್ಯಾಖ್ಯಾನವಿದೆ. ಇಲ್ಲಿಯ ವಚನಗಳಿಗೆ ಮತ್ತು ವ್ಯಾಖ್ಯಾನಗಳಿಗೆ ಅಡಿಯಲ್ಲಿ ಪಾಠಾಂತರಗಳನ್ನು ಕೊಟ್ಟಿದ್ದಾರೆ.

ಡಾ. ಎಂ.ಎಂ. ಕಲಬುರ್ಗಿಯವರು 'ಬಸವಣ್ಣನವರ ಟೀಕಿನ ವಚನಗಳು' ಕೃತಿಯನ್ನು ೧೯೭೯ರಲ್ಲಿ ಸಂಪಾದಿಸಿಕೊಟ್ಟ ವಚನ ವ್ಯಾಖ್ಯಾನದ ಮಹತ್ವದ ಗ್ರಂಥವಾಗಿದೆ. ಧಾರವಾಡ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಬಸವೇಶ್ವರ ಪೀಠವು ಇದನ್ನು ಪ್ರಕಟಿಸಿದೆ. ಐದು ಟೀಕಾಕೃತಿಗಳ ಸಂಯುಕ್ತ ಸಂಪುಟವಾಗಿದೆ. ಎರಡು ಸಂಪುಟಗಳಲ್ಲಿ ಪ್ರಕಟವಾಗಿರುವ ಈ ಟೀಕಾ ಕೃತಿಯಲ್ಲಿ ಬಸವಣ್ಣನವರ ಷಟ್‌ಸ್ಥಲದ ವಚನಗಳಿಗೆ ಐದು ಜನ ಟೀಕಾಕಾರರ ಟೀಕೆಗಳನ್ನು ಒಂದರ ಕೆಳಗೊಂದು ಕ್ರಮವಾಗಿ ಪಾಠಾಂತರದೊಂದಿಗೆ ಡಾ. ಕಲಬುರ್ಗಿಯವರು ಸಂಪಾದಿಸಿಕೊಟ್ಟಿದ್ದಾರೆ. ಒಂದೇ ವಚನಕ್ಕೆ ೫ ಜನರು ಕಾಲಾಂತರದಲ್ಲಿ ಹೇಗೆ ಅರ್ಥೈಸಿದರೆಂಬುದನ್ನು ತಿಳಿಯಲು ಈ ಕೃತಿ ಕೈದೀವಿಗೆಯಾಗಿದೆ.

ಎಸ್.ಎಸ್. ಭೂಸರಡ್ಡಿಯವರು ಅಕ್ಕ ನಾಗಮ್ಮನ ವಚನಗಳು ಎಂಬ ಕೃತಿ ಸಂಗ್ರಹಿಸಿದ್ದು ಇದರಲ್ಲಿ ಅಕ್ಕಾನಾಗಮ್ಮನ ೧೪ ವಚನಗಳಿವೆ. ಧಾರವಾಡ ಮುರುಘಾಮಠದ ಮಹಾಂತ ಶ್ರೀಗಳಿಂದ ಪ್ರಕಾಶನಗೊಂಡಿದೆ. ಭಾವಸೌರಭದಲ್ಲಿ ಇಲ್ಲಿನ ಎಲ್ಲ ವಚನಗಳಿಗೆ ಸಾರಾಂಶ ರೂಪದ ಭಾವಾರ್ಥ ಬರೆದಿದ್ದಾರೆ.

ಬೀದರಿನ ಕೌಠಾದ **ಸಿದ್ಧರಾಮ ಶರಣರು ಬೆಲ್ದಾಳ** ಅವರು **'ವಚನ ತತ್ವಸಾರ'** ಎಂಬ ವಚನ ವ್ಯಾಖ್ಯಾನ ಕೃತಿಯನ್ನು ರಚಿಸಿದ್ದಾರೆ. ಔರಾದ ಶಿವಯೋಗಾಶ್ರಮದ ಕೌಠಾ(ಬಿ)ದ ಬಸವಲಿಂಗ ಪ್ರಕಾಶನದಿಂದ ೧೯೮೨ರಲ್ಲಿ ಪ್ರಕಟವಾಗಿದೆ. ಇದೊಂದು ಆಧುನಿಕ ವಚನ ವ್ಯಾಖ್ಯಾನ ಗ್ರಂಥವಾಗಿದ್ದು ೧೮೦ ಪುಟಗಳನ್ನು ಹೊಂದಿದೆ. ಬಸವಣ್ಣನವರ ೩೦ ವಚನಗಳಿಗೆ ಸರಳ ವಿವರಣೆಯ ವ್ಯಾಖ್ಯಾನವುಳ್ಳ ಕೃತಿ **'ಅಣ್ಣನವರ ನುಡಿಮುತ್ತುಗಳು'**. ವಚನಗಳ ವ್ಯಾಖ್ಯಾನಕಾರರು **ಡಾ. ಶಿವಮೂರ್ತಿ ಶಿವಾಚಾರ್ಯ ಶ್ರೀಗಳು**. ಈ ಕೃತಿಯ ಭಾಗ-೧, ಭಾಗ-೨ ಎಂದು ವ್ಯಾಖ್ಯಾನಗಳೊಂದಿಗೆ ೧೯೮೪ರಲ್ಲಿ ತರಳಬಾಳು ಪ್ರಕಾಶನ ಅಣ್ಣನ ಬಳಗ ಸಿರಿಗೆರೆಯಿಂದ ಪ್ರಕಟವಾಗಿದೆ. ಈ ವಚನ ವ್ಯಾಖ್ಯಾನ ಕೃತಿ ರಚನೆಯ ಉದ್ದೇಶವೆಂದರೆ ಸಿರಿಗೆರೆಯ ಅಣ್ಣನ ಬಳಗದಿಂದ ನಡೆಸುತ್ತಿರುವ ವಚನ ಪರೀಕ್ಷೆಗಳ ಪ್ರಥಮ ಮತ್ತು ದ್ವಿತಿಯ ಪಿಯುಸಿ ತರಗತಿಗಳ ವಿದ್ಯಾರ್ಥಿಗಳ ಅಧ್ಯಯನಕ್ಕಾಗಿ ಎರಡು ಭಾಗ ಸೇರಿದಂತೆ ೬೦ ವಚನಗಳಿಗೆ ಸರಳವಾದ, ಆಧುನಿಕ ಭಾಷ್ಯರೂಪದ ವಿವರಣೆ ಇದೆ.

**ಉರಿಲಿಂಗಪೆದ್ದಿಗಳ ಧರ್ಮಪತ್ನಿ ಕಾಳವ್ವೆಯ ೧೩ ವಚನಗಳ** ಸಂಗ್ರಹ ಕೃತಿ **ಉರಿಲಿಂಗಪೆದ್ದಿ ಪುಣ್ಯಸ್ತ್ರೀ ಕಾಳವ್ವೆಯ ವಚನಗಳು'**. ಇದನ್ನು ಎಸ್.ಎಸ್. ಭೂಸರಡ್ಡಿ ಹಾಗೂ ಶ್ರೀಮತಿ ಡಾ. ಎಸ್.ಎಸ್. ಮಟ್ಟಿ ಅವರು ಸಂಗ್ರಹಸಿದ ಸಂಕಲನವಾಗಿದೆ. ಭಾವಸೌರಭದಲ್ಲಿ ಈ ಎಲ್ಲ ವಚನಗಳಿಗೆ ಭಾವಾರ್ಥ ಬರೆದಿದ್ದಾರೆ. ೧೯೮೪ರಲ್ಲಿ ಧಾರವಾಡ ನವ ಪ್ರಕಾಶನದಿಂದ ಪ್ರಕಟಗೊಂಡಿದೆ. ಇವರೇ ಸೂಜಿಕಾಯಕದ ರಾಮಿತಂದೆಗಳ ವಚನಗಳನ್ನು ಮೇಲ್ಕಂಡ ಪ್ರಕಾಶನದಿಂದ ೧೯೮೬ರಲ್ಲಿ ಸಂಗ್ರಹಿಸಿದ್ದಾರೆ. ಸೂಜಿಕಾಯಕದ ರಾಮಿತಂದೆಗಳ ಒಟ್ಟು ೧೦ ವಚನಗಳಲ್ಲಿ ೯ಕ್ಕೆ ಸಿಂಗಳದ ಸಿದ್ಧಬಸವರಾಜ ದೇವರು ಬರೆದ ಟೀಕೆಯನ್ನು ಕೊಟ್ಟಿದ್ದಾರೆ. 'ಭಾವಸೌರಭ'ದಲ್ಲಿ ಎಲ್ಲ ವಚನಗಳಿಗೆ ಭಾವಾರ್ಥಬರೆದಿದ್ದಾರೆ.

**ಬಿಜಾಪೂರದ ಸಿದ್ದೇಶ್ವರ ಶ್ರೀಗಳು** ಸಿದ್ಧರಾಮೇಶ್ವರರ ೨೧ ವಚನಗಳಿಗೆ ಉಪಯುಕ್ತ ಶೀರ್ಷಿಕೆ ಕೊಟ್ಟು, ಪ್ರತಿ ವಚನಗಳಿಗೂ ಸುದೀರ್ಘ ವಿವರಣೆ ನೀಡಿದ್ದಾರೆ. ಹೀಗಾಗಿ, ಈ ಕೃತಿಗೆ **'ಶ್ರೀ ಸಿದ್ದರಾಮೇಶ್ವರರ ವಚನಗಳ ಒಳನೋಟ'** ಎಂದು ಹೆಸರಿಸಿದ್ದಾರೆ. ಬೆಂಗಳೂರಿನ ಮಲ್ಲಿಕಾರ್ಜುನ ಆದ್ಯಾತ್ಮ ಕೇಂದ್ರದಿಂದ ೧೯೮೫ರಲ್ಲಿ ಪ್ರಕಟವಾದ ಈ ಕೃತಿ ೭೦ ಪುಟಗಳನ್ನು ಹೊಂದಿದೆ. ಪೂಜ್ಯರು ಇಲ್ಲಿ ಮೊದಲು ವಚನ ಪಾಠವನ್ನು ಕೊಟ್ಟು ಅದರ ಸಾರಾಂಶವನ್ನು 'ವಿವರಣ' ಭಾಗದಲ್ಲಿ ಕಠಿಣ ಪದಗಳ ಅರ್ಥದೊಂದಿಗೆ ನೀಡಿದ್ದಾರೆ. ಕೆಳಗೆ ವಚನದ ಬಿಡಿ ಬಿಡಿ ಸಾಲುಗಳನ್ನು ಆಯ್ದುಕೊಂಡು ವಿವರವಾಗಿ ಚರ್ಚಿಸಿರುವುದು ಅರ್ಥಪೂರ್ಣವಾಗಿದೆ.

**ಜೋಳದರಾಶಿ ದೊಡ್ಡನಗೌಡರು** ೧೯೮೫ರಲ್ಲಿ **'ಬಯಲ ಗಳಿಕೆಯ ಬೆಳಗು'** ಎಂಬ ವಚನಾಧಾರಿತ ಆಧುನಿಕ ವ್ಯಾಖ್ಯಾನ ಕೃತಿ ಬರೆದಿದ್ದಾರೆ. ಇದು ಗೂಳೂರು ಸಿದ್ಧವೀರಣ್ಣೊಡೆಯರು ಸಂಪಾದಿಸಿದ ಪ್ರಭುದೇವರ ಶೂನ್ಯಸಂಪಾದನೆ ಕೃತಿಯ ವ್ಯಾಖ್ಯಾನವಾಗಿದೆ. ೧೧೭೦ ಪುಟಗಳ ಈ ಗ್ರಂಥವನ್ನು ಬಳ್ಳಾರಿ ಜಿಲ್ಲೆ ಜೋಳದರಾಶಿಯ ರಾಮೇಶ ಪ್ರಕಟನ ಮಂದಿರ ಪ್ರಕಟಿಸಿದೆ. ಆಧುನಿಕ ವ್ಯಾಖ್ಯಾನವುಳ್ಳ ಈ ಕೃತಿಯಲ್ಲಿ ಶೂನ್ಯ ಸಂಪಾದನೆಯ ಎಲ್ಲ ೨೧ ಸಂಪಾದನೆಗಳ ಎಲ್ಲ ವಚನಗಳಿಗೆ ವಿವರಣೆ ವಿವೇಚನೆ ಎಂಬ ಎರಡು ಹಂತಗಳ ಸರಳ ವ್ಯಾಖ್ಯಾನವಿದೆ. ಶೂನ್ಯಸಂಪಾದನೆಗಳ ದಾರ್ಶನಿಕ ಅಧ್ಯಯನಕ್ಕೆ ಮಹತ್ವದ ಆಕರ ಗ್ರಂಥವಾಗಿದೆ ಎನ್ನಬಹುದು.

**ಪಿ.ಎಂ. ಗಿರಿರಾಜು** ಅವರು **'ಬಾಚಿಕಾಯಕದ ಬಸವರಾಜದೇವರ ವಚನಗಳು'** ಕೃತಿಯಲ್ಲಿ ೩೦ ವಚನಗಳನ್ನು ಸಂಪಾದಿಸಿ, ಮೈಸೂರಿನ ಶರಣಸಂತಾನ ಪ್ರಕಾಶನದಿಂದ ೧೯೮೫ರಲ್ಲಿ ಪ್ರಕಟಿಸಿದ್ದಾರೆ. ಇದು ದ್ವಿತಿಯ ಆವೃತ್ತಿಯಾಗಿದೆ. ಕೇವಲ ೨೮ ಪುಟಗಳ ಈ ಕೃತಿಯಲ್ಲಿ ಸಿಂಗಳದ ಸಿದ್ಧಬಸವರಾಜದೇವರು ನಿರ್ವಚಿಸಿದ 'ಸಕಲ ಪುರಾತನರ ಬೆಡಗಿನ ವಚನಗಳು' ಕೃತಿಯಲ್ಲಿಯ ೩ ವಚನಗಳನ್ನು ಮತ್ತು ವಚನಗಳಿಗಿರುವ ಅಜ್ಞಾತ ಕರ್ತೃವಿನ ವ್ಯಾಖ್ಯಾನವನ್ನು (ಅನುಬಂಧ–೧), ಸಕಲ ಪುರಾತನರ ವಚನಗಳು ಕೃತಿಯಲ್ಲಿಯ ಬಾಚಿಕಾಯಕದ ಬಸವರಾಜದೇವರ ೭ ವಚನಗಳನ್ನು ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಇವುಗಳಿಗಿರುವ ಅಜ್ಞಾತ ಕರ್ತೃವಿನ ವ್ಯಾಖ್ಯಾನವನ್ನು (ಅನುಬಂಧ–೨) ಕೊಟ್ಟಿದ್ದಾರೆ.

**ಡಾ. ಇಮ್ಮಡಿ ಶಿವಬಸವಸ್ವಾಮಿಗಳು 'ಅಲ್ಲಮ ಪ್ರಭುದೇವರ ಟೀಕಿನ ವಚನಗಳು'** ಕೃತಿಯನ್ನು ಸಂಪಾದಿಸಿ, ಮೈಸೂರಿನ ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ಪ್ರಕಟಿಸಿದ್ದಾರೆ. ಪ್ರಭುದೇವರ ೭೯೭ ವಚನಗಳಿಗೆ ಮಹಾಲಿಂಗದೇವರ ಟೀಕೆಯನ್ನುಳ್ಳ ಕೃತಿ ಇದು. ೩೮೦ ಪುಟಗಳ ಈ ಗ್ರಂಥ ೧೯೮೬ರಲ್ಲಿ ಪ್ರಕಟವಾಗಿದೆ. ಈ ಬಗ್ಗೆಯು ಪ್ರಭುದೇವರ ಟೀಕಿನ ವಚನ ವ್ಯಾಖ್ಯಾನದಲ್ಲಿ ಚರ್ಚಿಸಲಾಗಿದೆ. ಪ್ರಾಚೀನ **ವಚನ ಸಂಕಲನಕಾರನಾದ ಶಾಂತದೇವರು** ಸಂಕಲಿಸಿದ ವಚನ ಸಂಕಲನ ಆಧರಿಸಿ **ಪಿ.ಎಂ. ಗಿರಿರಾಜು** ಅವರು ೧೯೮೭ರಲ್ಲಿ ಮೈಸೂರಿನ ಶರಣ ಸಂತಾನ ಪ್ರಕಾಶನದಿಂದ ಪ್ರಕಟಿಸಿದ್ದಾರೆ. ೩೬೪ ಪುಟಗಳ ಈ ಕೃತಿಯಲ್ಲಿ ೧೦೬೯ ವಚನಗಳಿವೆ. "ಮೂಲಕೃತಿಯಲ್ಲಿನ ಪ್ರತಿಸ್ಥಲದ ಪ್ರಾರಂಭದಲ್ಲಿರುವ ಸಂಸ್ಕೃತ ಶ್ಲೋಕ ಕೈಬಿಟ್ಟು ಅವುಗಳಿಗಿರುವ ಭಾವಾರ್ಥ ಮಾತ್ರ ಇಲ್ಲಿ ಪ್ರಕಟಿಸಿದ್ದಾರೆ. ಮೂಲ ಕೃತಿಯಲ್ಲಿ

ಸಂಸ್ಕೃತ ಶ್ಲೋಕಗಳು ಮತ್ತು ಅವುಗಳಿಗೆ ಕನ್ನಡ ಟೀಕೆ ಇದೆ. ಇಲ್ಲಿ ಅವುಗಳನ್ನು ಪ್ರಕಟಿಸಿಲ್ಲ. ಸೂತ್ರಸ್ಥಲ ಹೊರತು ಉಳಿದ ಸ್ಥಲದಲ್ಲಿರುವ ಸಂಸ್ಕೃತ ಶ್ಲೋಕಗಳ ಭಾವಾರ್ಥವು ಇರುವುದಿಲ್ಲ. ಕೇವಲ ವಚನ ಪ್ರಕಟಿಸಿದ್ದಾರೆ. ಹೀಗೆ, ಮೂಲಕೃತಿಯಲ್ಲಿರುವ ಸಂಸ್ಕೃತ ಶ್ಲೋಕಗಳು ಮತ್ತು ಅವುಗಳ ಭಾವಾರ್ಥ ಕೈ ಬಿಟ್ಟಿರುವ ಉದ್ದೇಶ ತಿಳಿಯದು”[೨೬] ಎಂದು ಡಾ. ಬಿ.ಎಸ್. ಬಿರಾದಾರ ಹೇಳಿರುವ ಅಭಿಪ್ರಾಯ ಚಿಂತನಾರ್ಹವಾಗಿದೆ. **ಡಾ.ಎಸ್. ವಿದ್ಯಾಶಂಕರ** ಅವರು **ತೋಂಟದ ಸಿದ್ಧಲಿಂಗ ಶಿವಯೋಗಿಗಳ ೨೬೬ ವಚನಗಳಿಗೆ ಅನಾಮಧೇಯ ಪ್ರಾಚೀನ ವ್ಯಾಖ್ಯಾನಕಾರನು ಬರೆದ ಕೃತಿಯನ್ನು ಸಂಪಾದಿಸಿದ್ದಾರೆ.** ೨೧೩ ಪುಟಗಳ ಈ ಕೃತಿ ೧೯೮೭ರಲ್ಲಿ ಬೆಂಗಳೂರಿನ ಪ್ರಿಯದರ್ಶಿನಿ ಪ್ರಕಾಶನದಿಂದ ಪ್ರಕಟವಾಗಿದೆ. ಈ ಕೃತಿಯ ಬಗೆಗೆ ತೋಂಟದ ಸಿದ್ಧಲಿಂಗ ಶ್ರೀಗಳ ವ್ಯಾಖ್ಯಾನ ಗ್ರಂಥಗಳ ಸ್ವರೂಪದಲ್ಲಿ ಚರ್ಚಿಸಲಾಗಿದೆ. ಪ್ರಾಚೀನ ವಚನ ಸಂಕಲನಕಾರ ಶಾಂತದೇವರ ಕೃತಿ ಆಧರಿಸಿ **‘ಷಟ್ಪ್ರಕಾರ ಸಂಗ್ರಹ’** ಹೆಸರಿನಲ್ಲಿ **ಜಿ.ಎ. ಶಿವಲಿಂಗಯ್ಯ**ನವರು ಸಂಪಾದಿಸಿದ್ದಾರೆ. ಗದಗ ತೋಂಟದಾರ್ಯ ಮಠದ ಪ್ರಾಚೀನ ಅಪ್ರಕಟಿತ ಸಾಹಿತ್ಯ ಪ್ರಕಟನಾ ಮಾಲೆಯಲ್ಲಿ ೧೯೮೭ರಲ್ಲಿ ಈ ಗ್ರಂಥ ಪ್ರಕಟವಾಗಿದೆ. “ಷಟ್ಪ್ರಕಾರ ಸಂಗ್ರಹ’ವು ೬೦ ಸ್ಥಲಗಳಿಂದ ಕೂಡಿದ ಒಂದು ದೊಡ್ಡ ಕೃತಿ. ಪ್ರತಿಸ್ಥಲದಲ್ಲಿ ಸಂಸ್ಕೃತ ಶ್ಲೋಕಗಳು, ಅವುಗಳಿಗೆ ಟೀಕೆ ಇದೆ. ಮುಂದಿನ ಭಾಗವು ಹಲವು ಶರಣರ ಹಲವು ವಚನಗಳನ್ನು ಸ್ಥಲಾನುಗುಣವಾಗಿ ಸೇರಿಸಿದೆ”[೨೭] ಎಂದು ನಿವೇದನೆಯಲ್ಲಿ ಹೇಳಿಕೊಂಡಿದ್ದಾರೆ.

**ಬ.ಗಿ. ಯಲ್ಲಟ್ಟಿಯವರು ‘ಕಾಡಸಿದ್ದೇಶ್ವರ ವಚನ ಸಂಗ್ರಹ’** ಎಂಬ ವಚನ ವ್ಯಾಖ್ಯಾನ ಕೃತಿಯನ್ನು ಬನಹಟ್ಟಿಯ ಬಸವಸಮಿತಿಯಿಂದ ೧೯೮೫ರಲ್ಲಿ ಬರೆದು ಪ್ರಕಟಿಸಿದ್ದಾರೆ. ೮೪ ಪುಟಗಳ ಈ ಕೃತಿಗೆ ಆನಂದ ಕುಮಾರ ಅವರು ಉಪಸಂಪಾದಕರಾಗಿದ್ದಾರೆ. ಈ ಮೊದಲು ಹುಬ್ಬಳ್ಳಿಯ ಮೂರು ಸಾವಿರ ಮಠದಿಂದ ಪ್ರಕಟವಾಗಿದ್ದ ‘ಕಾಡಸಿದ್ದೇಶ್ವರ ವಚನಗಳು’ ಕೃತಿ ಆಧರಿಸಿ ಅವುಗಳಿಗೆ ಸರಳವಾದ ವ್ಯಾಖ್ಯಾನ ತಾವೇ ಬರೆದಿರುವುದಾಗಿ ಪ್ರಸ್ತಾವನೆಯಲ್ಲಿ ತಿಳಿಸಿದ್ದಾರೆ.“ಮೂಲ ಗ್ರಂಥದಲ್ಲಿಯ ಟೀಕೆ ಸಾಮಾನ್ಯನಿಗೆ ಅರ್ಥವಾಗುವಂತಿಲ್ಲ. ಆದ್ದರಿಂದ ಸಾಮಾನ್ಯನಿಗೆ ಅರ್ಥವೂ ಆಗಬೇಕು, ವಚನೋದ್ದೇಶಕ್ಕೆ ಲೋಪವು ಬರಬಾರದು. ಈ ದೃಷ್ಟಿಯನ್ನು ಗಮನದಲ್ಲಿರಿಸಿಕೊಂಡು ವಚನಗಳಿಗೆ ಟೀಕೆ ಬರೆಯಲಾಗಿದೆ. ಟೀಕೆ ಎನ್ನುವುದಕ್ಕಿಂತ ತತ್ವವಿವರಣೆ ಎನ್ನುವುದು ಲೇಸು”[೨೮] ಎಂದು ತಾವೇ ಸ್ಪಷ್ಟಪಡಿಸಿದ್ದಾರೆ.

**ಎಸ್.ಎಸ್. ಭೂಸರಡ್ಡಿಯವರು ‘ಆಯ್ದಕ್ಕಿ ಲಕ್ಕಮ್ಮನ ವಚನಗಳು’** ಕೃತಿಯನ್ನು ಸಂಪಾದಿಸಿ, ಹುಬ್ಬಳ್ಳಿ ಜಗದ್ಗುರು ಮೂರುಸಾವಿರ ಮಠದಿಂದ ೧೯೮೭ರಲ್ಲಿ ಪ್ರಕಾಶಪಡಿಸಿದ್ದಾರೆ. ಆಯ್ದಕ್ಕಿ ಮಾರಯ್ಯನ ಪತ್ನಿ ಲಕ್ಕಮ್ಮನ ೨೫ ವಚನಗಳಿವೆ. ಇಲ್ಲಿಯ ಎಲ್ಲ ವಚನಗಳಿಗೆ ಸರಳವಾದ ಭಾವಾರ್ಥವನ್ನು ಭಾವ ಸೌರಭದಲ್ಲಿ ಕೊಟ್ಟಿರುವರು. **ಪಂಡಿತ ಶ್ರೀಕಂಠಶಾಸ್ತ್ರಿ ನಲವಡಿ ಅವರು ಬಸವಣ್ಣನವರ ವಚನಗಳನ್ನು** ಭಾವಾರ್ಥಸಹಿತವಾಗಿ ಸಂಗ್ರಹಿಸಿದ್ದಾರೆ. ೧೩೦ ಪುಟಗಳ ಈ ಕೃತಿಯಲ್ಲಿ ಬಸವಣ್ಣನವರ ೩೫೯ ವಚನಗಳಿವೆ. ಪ್ರತಿವಚನಕ್ಕೂ ಸರಳ ಭಾವಾರ್ಥ ಬರೆಯಲಾಗಿದೆ. ಜನಪ್ರಿಯ ಮಾಲಿಕೆಯ ಕೃತಿ ಇದಾಗಿದ್ದು ಪೀಠಿಕೆ ಬರೆದಿಲ್ಲ. **ಬಸವಣ್ಣನವರ ಭಕ್ತಿಯ ವಚನಗಳು** ಎಂಬ ಸಂಗ್ರಹ ಕೃತಿಗೆ **‘ವಚನಾಂಜಲಿ’**

ಎಂದು ಹೆಸರಿಸಿ ಡಾ. ಶಿವಮೂರ್ತಿ ಶಿವಾಚಾರ್ಯ ಶ್ರೀಗಳು ಸಂಗ್ರಹಿಸಿದ್ದಾರೆ. ಇದು ಧ್ವನಿಸುರುಳಿಯ ಲಿಖಿತ ರೂಪವಾಗಿದೆ. ಚಿತ್ರಗಳು ಮತ್ತು ಭಾವಾರ್ಥದೊಂದಿಗೆ ಇರುವ ಬಸವಣ್ಣನವರ ೧೯ ವಚನಗಳ ಕೃತಿಯಾಗಿದೆ. ಅಂದರೆ, ವಚನ, ಚಿತ್ರ ಭಾವಾರ್ಥಗಳನ್ನು ಒಳಗೊಂಡ ವಿಶೇಷ ಕೃತಿ ಇದಾಗಿದೆ.

**ಡಾ.ಬಿ.ಆರ್. ಹಿರೇಮಠರು ಕಟ್ಟಿಗೆಹಳ್ಳಿ ಸಿದ್ಧಲಿಂಗ ಸ್ವಾಮಿಗಳ 'ಸಂಪಾದನೆಯ ಸಾರಾಮೃತ'** ಪ್ರಾಚೀನ ವಚನ ವ್ಯಾಖ್ಯಾನ ಕೃತಿಯನ್ನು ೧೯೮೮ರಲ್ಲಿ ಸಂಪಾದಿಸಿದ್ದಾರೆ. ಗದಗ ತೋಂಟದಾರ್ಯಮಠದ ವೀರಶೈವ ಅಧ್ಯಯನ ಸಂಸ್ಥೆ ಕೃತಿ ಪ್ರಕಟಿಸಿದೆ. ೧೫೭ ಪುಟಗಳ ವ್ಯಾಪ್ತಿ ಹೊಂದಿದೆ. ಇದರ ಪ್ರಸ್ತಾವನೆಯಲ್ಲಿ ಕೃತಿ ರಚನೆಯ ಉದ್ದೇಶ, ಮೂಲ, ಸ್ಥಲವಿಭಜನೆ, ಟೀಕೆ, ಟೀಕೆಯ ಮೂಲ, ಸಂಪಾದನೆಗೆ ಬಳಸಿದ ಆಕರ ಕುರಿತು ವಿವರಿಸಿದ್ದಾರೆ. "ಶೂನ್ಯಸಂಪಾದನೆಗಳು' ಕೇವಲ ವಚನ ಗದ್ಯಭಾಗವನ್ನು ಒಳಗೊಂಡಿದ್ದರೆ, ಶೂನ್ಯಸಂಪಾದನೆಯ ಸಂಗ್ರಹ ಕೃತಿ ವಚನ ಹಾಗೂ ವ್ಯಾಖ್ಯಾನಗಳಿಂದ ಕೂಡಿರುತ್ತದೆ. 'ಸಂಪಾದನೆ ಸಾರಾಮೃತ'ದಲ್ಲಿಯ ೧೮೧ ವಚನಗಳಿಗೆ ಮಾತ್ರ ಲಿಂಗಲೀಲಾವಿಲಾಸ ಚಾರಿತ್ರ, ಪ್ರಭುದೇವರ ಟೀಕಿನ ವಚನಗಳು, ಸಕಲಪುರಾತನರ ಬೆಡಗಿನ ವಚನ ಟೀಕೆ ಹಾಗೂ ಬಸವಣ್ಣನವರ ಟೀಕಿನ ವಚನಗಳು ಕೃತಿಗಳಲ್ಲಿಯ ವ್ಯಾಖ್ಯಾನಗಳನ್ನು ಬಳಸಿಕೊಳ್ಳಲಾಗಿದೆ."[೩೦] "ಇನ್ನುಳಿದ ೩೯ ವಚನಗಳ ಮೂಲ ಆಕರ ತಿಳಿಯದು. ಈ ವ್ಯಾಖ್ಯಾನಗಳ ಸಂಗ್ರಹ ಕಾರ್ಯದಲ್ಲಿಯೂ ಲೋಪ ಆಗಮ ಪ್ರಕ್ರಿಯೆ ನಡೆದಿರುವುದನ್ನು ಸಂಪಾದಕರು ಗುರುತಿಸಿದ್ದಾರೆ.[೩೧] ಈ ಕೃತಿಯು ೨೨೦ ವಚನಗಳನ್ನು ಹೊಂದಿದೆ. ಇಲ್ಲಿನ ವಚನಗಳಿಗಿರುವ ಮೂಲ ಆಕರವನ್ನು ಸಂಪಾದಕರು ಅವುಗಳ ಅಡಿಯಲ್ಲಿಯೇ ಸೂಚಿಸಿರುವುದರಿಂದ ಅಧ್ಯಯನಾಸಕ್ತರಿಗೆ ಸಹಾಯಕವಾಗಿದೆ.

**ಡಾ. ಎಸ್.ವಿದ್ಯಾಶಂಕರ** ಅವರು 'ಸಿಮ್ಮಲಿಗೆಯ ಚನ್ನರಾಮ' ಅಂಕಿತದ **ಚಂದಿಮರಸನ ೧೫೬ ವಚನಗಳ** ಕೃತಿಯನ್ನು ಸಂಪಾದಿಸಿದ್ದಾರೆ. ೧೨೦ ಪುಟಗಳ ಈ ಕೃತಿಯನ್ನು ಬೆಂಗಳೂರು ಬಸವ ಸಮಿತಿ ೧೯೮೯ರಲ್ಲಿ ಪ್ರಕಾಶನಗೊಳಿಸಿದೆ. ಅನುಬಂಧದಲ್ಲಿ ಇಲ್ಲಿನ ಬೆಡಗಿನ ರೂಪದ ವಚನಗಳಿಗೆ ಲಿಂಗಲೀಲಾ ವಿಲಾಸ ಚಾರಿತ್ರ, ವಿಶೇಷಾನುಭವ ಷಟ್‌ಸ್ಥಲ ಕೃತಿಗಳಲ್ಲಿಯ ಮೂಲ ಟೀಕೆಯನ್ನು ಕೊಟ್ಟಿರುವರು. **ಎಲ್ ಬಸವರಾಜು** ಅವರು **'ಬಸವ ವಚನಾಮೃತ'** ಭಾಗ-೨ ಎಂಬ ಬಸವೇಶ್ವರರ ೧೦೮ ವಚನಾಧಾರಿತ ವ್ಯಾಖ್ಯಾನ ಕೃತಿ ಬರೆದಿದ್ದಾರೆ. ಬೆಂಗಳೂರಿನ ಬಸವ ಸಮಿತಿ ೧೯೮೯ರಲ್ಲಿ ಪ್ರಕಟಿಸಿದೆ. ೧೦೮ ವಚನಗಳಿಗೆ ಸರಳ ರೀತಿಯಲ್ಲಿ ಅರ್ಥಪೂರ್ಣ ತಾತ್ಪರ್ಯ ಬರೆದಿದ್ದಾರೆ.

**ಡಾ. ಸಾ.ಶಿ. ಮರುಳಯ್ಯ** ಅವರು **'ತೋಂಟದಾರ್ಯ ವಚನ ವ್ಯಾಖ್ಯೆ'** ಎಂಬ ಪ್ರಾಚೀನ ವಚನ ವಾಖ್ಯಾನ ಕೃತಿ ಸಂಪಾದಿಸಿದ್ದಾರೆ. ತೋಂಟದ ಸಿದ್ಧಲಿಂಗ ಶಿವಯೋಗಿಗಳ ೭೦೧ ವಚನಗಳಿಗೆ ಅನಾಮಧೇಯಕೃತ ಪ್ರಾಚೀನ ವ್ಯಾಖ್ಯಾನವನ್ನು ಆಕರವಾಗಿಟ್ಟುಕೊಂಡು ಬರೆದಿದ್ದಾರೆ. ಎಡೆಯೂರಿನ ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ ಸೇವಾ ಸಂಘವು ೧೯೯೦ರಲ್ಲಿ ಕೃತಿಯನ್ನು ಪ್ರಕಾಶನ ಮಾಡಿದೆ. ೭೦೪ ಪುಟಗಳ ಈ ವಚನ ವ್ಯಾಖ್ಯಾನ ಕೃತಿಯಲ್ಲಿ ಪದಶಃ ಟೀಕು ಬರೆಯಲಾಗಿದೆ. ಅಂದರೆ, ಒಂದೊಂದು ಶಬ್ದಕ್ಕೂ ಅರ್ಥನೀತಿ ವಿವರಿಸಲಾಗಿದೆ. **ಎಸ್.ಎಸ್. ಭೂಸರಡ್ಡಿ** ಹಾಗೂ

**ಡಾ. ಮಧು ವೆಂಕಾರಡ್ಡಿ** ಅವರು 'ಡಕ್ಕೆಯ ಬೊಮ್ಮಣ್ಣನ ವಚನಗಳು' ಕೃತಿಯನ್ನು ಸಂಗ್ರಹಿಸಿದ್ದಾರೆ. ಡಕ್ಕೆ ಬೊಮ್ಮಣ್ಣನ ೮೯ ವಚನಗಳ ಸಂಗ್ರಹ ಕೃತಿಯನ್ನು ಧಾರವಾಡದ ಲಕ್ಷ್ಮೀನಗರ ನವ ಪ್ರಕಾಶನ ೧೯೯೧ರಲ್ಲಿ ಪ್ರಕಟಿಸಿದೆ. ಕೃತಿಯ ಅನುಬಂಧದಲ್ಲಿ ಇಲ್ಲಿನ ನಾಲ್ಕು ವಚನಗಳಿಗೆ ಸಿಂಗಳದ ಸಿದ್ಧಬಸವರಾಜನು ವ್ಯಾಖ್ಯಾನಿಸಿದ ಬೆಡಗಿನ ವಚನಗಳ ಟೀಕೆಯನ್ನು ಕೊಟ್ಟಿರುವರು.

ಡಾ. ಬಿ.ಆರ್. ಹಿರೇಮಠರು 'ಟೀಕಿನ ಏಕೋತ್ತರ ಶತಸ್ಥಲ' ಎಂಬ ಅಜ್ಞಾತ ಕರ್ತೃವಿನ ಗ್ರಂಥವನ್ನು ಸಂಪಾದಿಸಿದ್ದಾರೆ. ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿಭಂಡಾರದ ಏಕೈಕ ಕಾಗದ ಪ್ರತಿಯಿಂದ (ನಂ. ೨೦೬೮, ಪುಟ-೧೦೪-೧೩೮) ಪರಿಷ್ಕರಣ ಮಾಡಿದ್ದಾರೆ. ಮಹಾಲಿಂಗದೇವನ ಏಕೋತ್ತರ ಶತಸ್ಥಲವನ್ನು ಆಧರಿಸಿ ಈ ಸಂಗ್ರಹ ಕೃತಿ ರೂಪಗೊಂಡಿದೆ. ಅದು 'ಟೀಕಿನ ಏಕೋತ್ತರ ಶತಸ್ಥಲ' ಅಥವಾ 'ಬೊಲ್ಲಿ ಏಕೋತ್ತರ ವಚನ' ಎಂಬ ಹೆಸರನ್ನು ಹೊಂದಿರುತ್ತದೆ. "ಇಲ್ಲಿಯ ಪ್ರತಿಯೊಂದು ವಚನಕ್ಕೂ ವ್ಯಾಖ್ಯಾನವಿದ್ದು ಇವುಗಳನ್ನು ಹೆಚ್ಚಾಗಿ ಕಲ್ಲುಮಠದ ಪ್ರಭುದೇವರ 'ಲಿಂಗಲೀಲಾವಿಲಾಸ ಚಾರಿತ್ರ' ಹಾಗೂ ಮಹಾಲಿಂಗದೇವನ ಪ್ರಭುದೇವರ ಟೀಕಿನ ವಚನಗಳಿಂದ ಆಯ್ದುಕೊಳ್ಳಲಾಗಿದೆ. ಇನ್ನೂ ಕೆಲವು ವಚನಗಳಿಗಿರುವ ವ್ಯಾಖ್ಯಾನದ ಆಕರ ಗೊತ್ತಾಗುವದಿಲ್ಲ. ಈ ವ್ಯಾಖ್ಯಾನವನ್ನು ಈ ಅನಾಮಧೇಯ ಸಂಗ್ರಹಕಾರನೇ ರಚಿಸಿರಬಹುದು. ಇಲ್ಲವೇ ಅನ್ಯ ವ್ಯಕ್ತಿಗಳ ವ್ಯಾಖ್ಯಾನಗಳಿಂದ ಸ್ವೀಕರಿಸಿರಬಹುದೆನಿಸುತ್ತದೆ."[೨] ಎಂದು ಸಂಪಾದಕರು ಅಭಿಪ್ರಾಯಪಟ್ಟಿದ್ದಾರೆ.

**'ಮಾದಾರ ಚೆನ್ನಯ್ಯನ ವಚನಗಳು'** ಎಂಬ ಚೆನ್ನಯ್ಯನ ಕೇವಲ ೧೦ ವಚನಗಳ ಸಂಗ್ರಹಕೃತಿಯನ್ನು **ಪ್ರೇಮಕ್ಕ ಹೊರಟ್ಟಿ** ಪ್ರಕಟಿಸಿದ್ದಾರೆ. ಹುಬ್ಬಳ್ಳಿಯಲ್ಲಿ ೧೯೯೩ರಲ್ಲಿ ಜರುಗಿದ ಬಸವಶಾಂತಿ ಯಾತ್ರೆಯ ಪ್ರಕಟನೆಯ ಈ ಕೃತಿಯಲ್ಲಿ ಚೆನ್ನಯ್ಯನ ಎಲ್ಲ ವಚನಗಳಿಗೂ ಭಾವಾರ್ಥ ಬರೆದಿದ್ದಾರೆ. **ಎಸ್.ಎಸ್. ಭೂಸರಡ್ಡಿ** ಹಾಗೂ ಡಾ. ಮಧು ವೆಂಕಾರೆಡ್ಡಿ ಅವರು 'ಅಜಗಣ್ಣಾ' ಅಂಕಿತದ 'ಮುಕ್ತಾಯಕ್ಕನ ವಚನಗಳು' ಎಂಬ ೩೭ ವಚನಗಳ ಕೃತಿ ಸಂಪಾದಿಸಿದ್ದಾರೆ. ಬೆಂಗಳೂರು ಬಸವ ಸಮಿತಿ ೧೯೯೩ರಲ್ಲಿ ಪ್ರಕಾಶನಗೊಳಿಸಿದೆ. ೧೦೬ ಪುಟಗಳ ಈ ಕೃತಿಯಲ್ಲಿ ಮುಕ್ತಾಯಕ್ಕನ ೩೭ ವಚನಗಳಿಗೆ 'ಭಾವಸೌರಭ'ದಲ್ಲಿ ಭಾವಾರ್ಥ ಬರೆದಿದ್ದಾರೆ. **ಎಂ. ಕೆ. ಶಿರಗುಪ್ಪಿ** ಅವರು **'ಶ್ರೀ ಬಸವೇಶ್ವರ ವಚನಗಳು ಮತ್ತು ಅವರ ಕುರಿತಾದ ಸ್ತುತಿಗಳು'** ಎಂಬ ವಚನಗಳ ಹಾಗೂ ಪದ್ಯಗಳ ಕೃತಿಯನ್ನು ಸಂಗ್ರಹಿಸಿ ವ್ಯಾಖ್ಯಾನ ಬರೆದಿದ್ದಾರೆ. ೩೪೨ ಪುಟಗಳ ಈ ಕೃತಿಯನ್ನು ಬಿಜಾಪೂರದ ಬಸವತತ್ವ ಪ್ರಚಾರ ಸಂಸ್ಥೆ ೧೯೯೫ರಲ್ಲಿ ಪ್ರಕಟಿಸಿದೆ. **'ಸಿದ್ಧರಾಮೇಶ್ವರ ಶರಣರು ಬೆಲ್ದಾಳ ಅವರು 'ವಚನ ತತ್ವಾನುಭವ'** ಎಂಬ ೬೨ ಜನ ವಚನಕಾರರ ೧೬೧೦ ವಚನಗಳ ಬೃಹತ್ತಾದ ವ್ಯಾಖ್ಯಾನ ಕೃತಿ ರಚಿಸಿದ್ದಾರೆ. ಸೃಷ್ಟಿ ರಚನೆಯಿಂದ ಐಕ್ಯಸ್ಥಲದವರೆಗೆ ತಾತ್ವಿಕವಾಗಿ ವಚನಗಳನ್ನು ಜೋಡಿಸಿ, ಎಲ್ಲ ವಚನಗಳಿಗೂ ಸರಳವಾದ, ಅರ್ಥಪೂರ್ಣ ಸಂಕ್ಷಿಪ್ತ ವ್ಯಾಖ್ಯಾನ ಬರೆದಿದ್ದಾರೆ. ೧೯೯೬ರಲ್ಲಿ ಬೀದರ ಜಿಲ್ಲೆ ಔರಾದನ ಮಹಾಮನೆ ಪ್ರಕಾಶನ ಬಸವಯೋಗಾಶ್ರಮ ಕೌಠಾ (ಬಿ) ಇವರಿಂದ ಪ್ರಕಾಶನಗೊಂಡಿದೆ. ೮೪೮ ಪುಟಗಳ ಬೃಹತ್

ಕೃತಿಯಲ್ಲಿ ವಚನಗಳಿಗೆ ಟೀಕೆ ಬರೆದಿರುವುದರಿಂದ ವಚನಗಳ ತಾತ್ವಿಕ ಅಧ್ಯಯನಕ್ಕೆ ಸಹಾಯಕ ಆಕರಗ್ರಂಥವಾಗಿದೆ ಎನ್ನಬಹುದು. ಮುಂಡರಗಿಯ ಅನ್ನದಾನೀಶ್ವರ ಸ್ವಾಮಿಗಳು 'ಅಲ್ಲಮಪ್ರಭುಗಳ ನೂರೆಂಟು ವಚನಗಳು' ಎಂಬ ಕೃತಿಯನ್ನು ೧೯೯೧ರಲ್ಲಿ ಪ್ರಕಟಿಸಿದ್ದಾರೆ. ಕೃತಿಯ ಹೆಸರೆ ಸೂಚಿಸುವಂತೆ ಅಲ್ಲಮರ ೧೦೮ ವಚನಗಳಿಗೆ ಭಾವ ನಿರೂಪಣೆಯ ಶೈಲಿಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಅಲ್ಲದೇ ಅಕ್ಕಮಹಾದೇವಿಯವರ ಯೋಗಾಂಗ ತ್ರಿವಿಧಿ ವ್ಯಾಖ್ಯಾನ' ಸೇರಿದಂತೆ ವೀರಶೈವ ತ್ರಿಪದಿ ಸಾಹಿತ್ಯಕ್ಕೆ ವ್ಯಾಖ್ಯಾನ ಬರೆದು ಗಮನ ಸೆಳೆಯುತ್ತಾರೆ.

ಬಸವಣ್ಣನವರ ೫೦೦ ವಚನಗಳಿಗೆ ಜಿ.ವಿ.ಶಾಸ್ತ್ರೀ ಅವರು ಅರ್ಥಸಹಿತ ಭಾವಾರ್ಥ ಬರೆದಿದ್ದಾರೆ. ಕೃತಿಯನ್ನು ಪಾರು ಪ್ರಕಾಶನ, ಗದಗ ಅವರು ಪ್ರಕಟಿಸಿದ್ದಾರೆ.

**ಮೈಸೂರಿನ ಸುತ್ತೂರು ಶ್ರೀಮಠದ ವಚನ ವ್ಯಾಖ್ಯಾನ ಮಾಲೆ**

೧೫ನೇ ಶತಮಾನದ ಆರಂಭದಲ್ಲಿ ಪ್ರೌಢದೇವರಾಯನ ಅವಧಿಯಲ್ಲಿ ಪ್ರಾಚೀನ ವಚನಕಾರರ ವಚನಗಳನ್ನು 'ಷಟ್‌ಸ್ಥಲ'ಗಳಲ್ಲಿ ವಿಂಗಡಿಸಿ ಅವುಗಳಿಗೆ ಟೀಕು-ವ್ಯಾಖ್ಯಾನಗಳನ್ನು ಅಂದಿನ ಮಹಾಲಿಂಗದೇವರು, ಜಕ್ಕಣಾರ್ಯರು, ಕುಮಾರ ಬಂಕನಾಥ, ಕಲ್ಲುಮಠದ ಪ್ರಭುದೇವರು ಮುಂತಾದವರು ಸಮರೋಪಾದಿಯಲ್ಲಿ ಕೈಗೊಂಡ ಯೋಜನೆ, ಮಾಡಿದ ಸಾಧನೆ ಸದಾ ಸ್ಮರಣೀಯವಾಗಿದೆ. ಅಂತಹ ವಿನೂತನ ಯೋಜನೆ ಮತ್ತೊಮ್ಮೆ ನಿಜವಾಗಿಯೂ ಆರಂಭವಾಗಿದ್ದರೆ ಅದು ಮೈಸೂರಿನ ಸುತ್ತೂರುಮಠದ ಶಿವರಾತ್ರಿದೇಶೀಕೇಂದ್ರ ಶ್ರೀಗಳು ಮತ್ತು ಬಿಜಾಪೂರದ ಜ್ಞಾನಯೋಗಾಶ್ರಮದ ಸಿದ್ದೇಶ್ವರ ಶ್ರೀಗಳವರಿಂದ ಎನ್ನಬಹುದು. ಶ್ರೀದ್ವಯರು ಸ್ವತಃ ಸಾಹಿತ್ಯ ರಚನೆ, ಸಂಶೋಧನೆ ಕಾರ್ಯಗಳಲ್ಲಿ ತೊಡಗಿಸಿಕೊಂಡಿರುವರಲ್ಲದೇ ಸಾಹಿತ್ಯ-ಸಂಸ್ಕೃತಿಯ ಪೋಷಕರಾಗಿ, ಕವಿ-ಕಲಾವಿದ-ವಿದ್ವಾಂಸರಿಗೆ ಮಾರ್ಗದರ್ಶಕರಾಗಿ ಮಾಡಿರುವ, ಈಗಲೂ ಮಾಡುತ್ತಿರುವ ಪ್ರಯತ್ನ ಶ್ಲ್ಯಾಘನೀಯವಾದುದು.

'ಎತ್ತಣ ಮಾಮರ ಎತ್ತಣ ಕೋಗಿಲೆ' ಎಂಬಂತೆ ಬಿಜಾಪೂರದ ಸಿದ್ದೇಶ್ವರ ಶ್ರೀಗಳನ್ನು ಮೈಸೂರು ಸುತ್ತೂರುಮಠದ ಶ್ರೀ ಶಿವರಾತ್ರಿದೇಶಿಕೇಂದ್ರ ಶ್ರೀಗಳು ೧೯೯೧ರ ಶ್ರಾವಣಮಾಸದಲ್ಲಿ 'ಭಗವಚ್ಚಿಂತನ' ವಿಷಯದ ಮೇಲೆ ಶ್ರೀಮಠದಲ್ಲಿ ಪ್ರವಚನಕ್ಕೆಂದು ಆಹ್ವಾನಿಸಿದರು. ಒಂದು ತಿಂಗಳ ಕಾಲನಡೆದ ಪ್ರವಚನದಲ್ಲಿ ನಾಡಿನ ವಿದ್ವಾಂಸರು ಪಾಲ್ಗೊಂಡರು. "ಹೀಗೆ ಎಲ್ಲರೂ ಸೇರಿದಾಗ ಬಸವಣ್ಣನವರ ವಚನಗಳ ಬಗೆಗೆ ಚಿಂತನ-ಮಂಥನ ಮಾಡುವುದು ಸೂಕ್ತವೆಂಬ ಅಭಿಪ್ರಾಯ ಮೂಡಿತು. ಅದನ್ನೇ ಪ್ರಾರಂಭಿಸಿದೆವು. ಹೀಗೆ ಚರ್ಚಿಸುತ್ತಾ ಹೋದಂತೆ ವಚನಗಳಲ್ಲಿ ಹುದುಗಿರುವ ಸೂಕ್ಷ್ಮವಾದ ಅನುಭವಗಳು ನಮ್ಮ ಗಮನಕ್ಕೆ ಬಂದವು. ಈ ಚಿಂತನೆಯಲ್ಲಿ ಮೂಡಿಬಂದ ವಿಷಯಗಳನ್ನು ವಚನಗಳ ವ್ಯಾಖ್ಯಾನ ರೂಪದಲ್ಲಿ ಬರೆದಿಡುವುದು ಸೂಕ್ತವೆಂದು ಜಗದ್ಗುರುಗಳವರು ಸೂಚಿಸಿದರು."[೩೩] ಎಂಬ ಡಾ. ಎಚ್. ತಿಪ್ಪೇರುದ್ರಸ್ವಾಮಿಯವರ ಈ ಅಭಿಪ್ರಾಯದಿಂದ ಶ್ರೀಮಠದ **ಜೆ.ಎಸ್.ಎಸ್ ಗ್ರಂಥಮಾಲೆಯ** ಯೋಜನೆ **'ವಚನ-ವ್ಯಾಖ್ಯಾನ'** ಮಾಲೆಯೂ ಪ್ರಾರಂಭವಾಗಲು ಕಾರಣವಾಯಿತೆಂಬುದನ್ನು ಅರಿಯಬಹುದು.

ಈ ರೀತಿಯ ವಚನಾಧ್ಯಯನ ಚಿಂತನೆಯಲ್ಲಿ ಪಾಲ್ಗೊಂಡು ಡಾ. ಎಚ್. ತಿಪ್ಪೇರುದ್ರಸ್ವಾಮಿಯರು ಬಸವೇಶ್ವರರ ವಚನಗಳಿಗೆ ಮಾಡಿದ ವ್ಯಾಖ್ಯಾನ ಗ್ರಂಥ 'ಬಸವೇಶ್ವರ ವಚನದೀಪಿಕೆ' ೧೯೯೫ರಲ್ಲಿ ಪ್ರಕಟವಾಯಿತು. ಅನಂತರ ಶ್ರೀ ಸಿದ್ದೇಶ್ವರ ಶ್ರೀಗಳವರಿಂದ 'ಅಲ್ಲಮಪ್ರಭುದೇವರ ವಚನ–ನಿರ್ವಚನ' ಎರಡು ಸಂಪುಟಗಳು ೨೦೦೧ ರಲ್ಲಿ ಪ್ರಕಟವಾದವು. ಹಾಗೆಯೇ ೨೦೦೧ರಲ್ಲಿ ಶ್ರೀ ಅನ್ನದಾನೀಶ್ವರ ಶ್ರೀಗಳು ಬರೆದ 'ಮಹಾದೇವಿಯಕ್ಕನ ವಚನ ಚಿಂತನೆ' ಪ್ರಕಟವಾಯಿತು. ನಂತರ ಡಾ. ಎಲ್.ಬಸವರಾಜು ಅವರು ಬರೆದ 'ಪ್ರಭುದೇವರ ಷಟ್‌ಸ್ಥಲದ ವಚನಗಳು' ಎಂಬ ಸಹಸ್ಪಂದನ ವ್ಯಾಖ್ಯಾನ ಗ್ರಂಥವು ೨೦೦೪ರಲ್ಲಿ ಪ್ರಕಟವಾಯಿತು. ಶ್ರೀ ಸಿದ್ದರಾಮ ಶರಣರು ಬೆಲ್ದಾಳರವರು ಬರೆದ 'ಚನ್ನಬಸವಣ್ಣನವರ ವಚನಗಳು' ಎಂಬ ವ್ಯಾಖ್ಯಾನ ಸಹಿತ ಕೃತಿ ೨೦೦೫ರಲ್ಲಿ ಪ್ರಕಟವಾಯಿತು. ಡಾ. ವಿರೇಂದ್ರ ಸಿಂಪಿ ಅವರು 'ಶರಣರ ಆಯ್ದ ವಚನಗಳ ವ್ಯಾಖ್ಯಾನ' ಕೃತಿಯನ್ನು ೨೦೦೯ರಲ್ಲಿ ಜೆ.ಎಸ್.ಎಸ್. ಗ್ರಂಥಮಾಲೆಯ ಮೂಲಕ ಪ್ರಕಟಿಸಿದರು. ಈ ಕೃತಿ 'ವಚನ ವ್ಯಾಖ್ಯಾನ ಮಾಲೆಯ ಸಂಪುಟ–೧೧. ಈ ರೀತಿ ೧೨ನೇ ಶತಮಾನದ ಪ್ರಮುಖ ವಚನಕಾರರು ಸೇರಿದಂತೆ ಇತರ ಶಿವಶರಣರ ವಚನಗಳಿಗೆ ಆಧುನಿಕ ವ್ಯಾಖ್ಯಾನ ಬರೆಯುವ ಮೂಲಕ ಹೊಸ ಅಧ್ಯಾಯವನ್ನು ಆರಂಭಿಸಿದರು. ಇದರ ಪರಿಣಾಮವಾಗಿ ವಚನಕಾರರು ಇಲ್ಲವೇ ಶರಣ ಸಾಹಿತಿಗಳೆಂದು ಗುರುತಿಸಿಕೊಂಡಿದ್ದ ಶ್ರೀ ಸಿದ್ದೇಶ್ವರ ಶ್ರೀಗಳು, ಡಾ.ಎಚ್.ತಿಪ್ಪೇರುದ್ರಸ್ವಾಮಿ, ಡಾ.ಎಲ್. ಬಸವರಾಜು, ಶ್ರೀಅನ್ನದಾನ ಶ್ರೀಗಳು, ಶ್ರೀ ಸಿದ್ಧರಾಮ ಶರಣರು ಬೆಲ್ದಾಳ, ಡಾ.ಜಿ.ಎಸ್. ಕಾಪಸೆ, ಕುಂದೂರು ಮಠದ ಡಾ. ಇಮ್ಮಡಿ ಶಿವಬಸವ ಶ್ರೀಗಳು, ಡಾ. ವಿರೇಂದ್ರ ಸಿಂಪಿ, ಡಾ.ಜಯಶ್ರೀ ದಂಡೆ, ಮಾತೆ ವಾಗ್ದೇವಿ, ಮಾತೆ ಕುಮುದಿನಿ, ಡಾ.ಓ.ಎಲ್.ನಾಗಭೂಷಣಸ್ವಾಮಿ, ಗೊರು.ಚನ್ನಬಸಪ್ಪ, ಡಾ.ವೀರಣ್ಣ ರಾಜೂರ ಮುಂತಾದವರು 'ವಚನ ವ್ಯಾಖ್ಯಾನಕಾರರು' ಎಂದು ಗುರುತಿಸಿಕೊಳ್ಳಲು ಈ ಯೋಜನೆ ಪ್ರೇರಕವಾಯಿತು. ಅಂದು ಸಾಹಿತ್ಯ–ಸಂಸ್ಕೃತಿ ಪ್ರಿಯ ಪ್ರೌಢದೇವರಾಯರು ಮಾಡಿದ್ದ ಸಾಧನೆಯನ್ನು ಇಂದು ಮೈಸೂರಿನ ಸುತ್ತೂರು ಮಠದ ಶ್ರೀ ಶಿವರಾತ್ರಿದೇಶೀಕೇಂದ್ರ ಶ್ರೀಗಳು ಕೇವಲ ಮಾತನಾಡದೇ ಬೃಹತ್ತಾದ ಕಾರ್ಯ ಮಾಡಿ ಧಾರ್ಮಿಕ ಕೇಂದ್ರಗಳ ಘನತೆ–ಗೌರವವು ಉತ್ತುಂಗಕ್ಕೇರಲು ಕಾರಣರಾಗಿದ್ದಾರೆ. ೨೦ನೇ ಶತಮಾನದ ಆರಂಭದಲ್ಲಿ ಡಾ.ಫ.ಗು ಹಳಕಟ್ಟಿ, ಹರ್ಡೇಕರ ಮಂಜಪ್ಪನವರು ಏಕವ್ಯಕ್ತಿಗಳಾಗಿ ಆರಂಭಮಾಡಿದ್ದ ವಚನಗಳ ಆಧುನಿಕ ವ್ಯಾಖ್ಯಾನ ಕಾರ್ಯವನ್ನು ೨೧ನೇ ಶತಮಾನದ ಆರಂಭದಲ್ಲಿ ಸುತ್ತೂರು ಶ್ರೀಗಳ ಆಶ್ರಯದಲ್ಲಿ ಮೇಲ್ಕಂಡ ವಿದ್ವಾಂಸರು ಸಾಮೂಹಿಕ ಬದ್ಧತೆಯಿಂದ ಮಾಡಿದರು. ಹೀಗಾಗಿ ವಚನ ವ್ಯಾಖ್ಯಾನಕಾರರ ೨ನೆಯ ಆಧುನಿಕ ಕಾಲಘಟ್ಟವೆಂದು ಕರೆಯಬಹುದಾಗಿದೆ.

**ವಚನ ವ್ಯಾಖ್ಯಾನಗಳ ಆಧುನಿಕ ಸ್ವರೂಪ**

ಶಿವಶರಣರ ವಚನಗಳಲ್ಲಿಯ ವಾಚ್ಯಾರ್ಥ ಇಲ್ಲವೇ ಗೂಢಾರ್ಥವನ್ನು ಕೇವಲ ಶಬ್ದಾರ್ಥ, ಪ್ರತಿಪದಾರ್ಥ, ವ್ಯಾಕ್ಯಾರ್ಥ ವಿಧಾನದಲ್ಲಿ ಟೀಕು ಇಲ್ಲವೇ ವ್ಯಾಖ್ಯಾನಗಳನ್ನು, ಪ್ರಾಚೀನರು ತಾತ್ವಿಕವಾಗಿ

ಬರೆಯುತ್ತಿದ್ದರು. ವಚನ ವ್ಯಾಖ್ಯಾನ ಗ್ರಂಥಗಳಿಗೆ ಟೀಕಾ ಗ್ರಂಥಗಳು, ವ್ಯಾಖ್ಯಾನ ಬರೆದವರನ್ನು ಟೀಕಾಕಾರರು ಎಂದು ಗುರುತಿಸಲಾಗುತ್ತಿದೆ. ಆದರೆ ಅದೇ ಶಿವಶರಣರ ವಚನಗಳಿಗೆ ಆಧುನಿಕರು ಬರೆಯುವ ವ್ಯಾಖ್ಯಾನ ಸ್ವರೂಪವೇ ಬೇರೆಯಾಗಿದೆ. ಇಂದು ವಚನಗಳಿಗೆ ಬರೆಯುವ ವ್ಯಾಖ್ಯಾನಗಳಿಗೆ ಸಹಸ್ಪಂದನ, ಭಾವ, ತಾತ್ಪರ್ಯ, ವಿವರಣೆ, ಭಾಷ್ಯ, ಅನ್ವೇಷಣೆ, ಚಿಂತನೆ, ದೀಪಿಕೆ, ತತ್ವಾರ್ಥದರ್ಶನ, ಅನುಭಾವ ಹೀಗೆ ಹಲವು ರೀತಿಯಲ್ಲಿ ಕರೆಯಲಾಗುತ್ತಿದೆ. ಅಂದರೆ, ವಚನದ ತಿರುಳನ್ನು ಭಾವ, ಭಾಷ್ಯ, ತಾತ್ಪರ್ಯ, ಚಿಂತನ ಮುಂತಾಗಿ ಹೆಸರಿಸಿ ವಿವರಸುತ್ತಿದ್ದಾರೆ. ಒಂದರ್ಥದಲ್ಲಿ ವಚನಗಳ ವಿಮರ್ಶೆ ಇಲ್ಲಿ ಕಂಡುಬರುತ್ತದೆ. ತಾತ್ವಿಕತೆಗಿಂತ ಪ್ರಸ್ತುತ ಸಾಮಾಜಿಕ, ರಾಜಕೀಯ, ಆರ್ಥಿಕ, ಹೀಗೆ ಹಲವು ನೆಲೆಗಳಲ್ಲಿ ಅವುಗಳನ್ನು ಅರ್ಥೈಸಲಾಗುತ್ತದೆ. ಹೀಗಾಗಿ, ಟೀಕು, ವ್ಯಾಖ್ಯಾನಗಳ ಆಧುನಿಕ ಸ್ವರೂಪ ಪ್ರಾಚೀನ ವ್ಯಾಖ್ಯಾನ ಸ್ವರೂಪಕ್ಕಿಂತಲೂ ತುಂಬಾ ವಿಭಿನ್ನವಾಗಿಯೇ ಬೆಳೆಯುತ್ತಿರುವ ಲಕ್ಷಣಗಳು ಗೋಚರವಾಗುತ್ತವೆ. ಈ ಹಿನ್ನಲೆಯಲ್ಲಿ ಈ ಘಟ್ಟದಲ್ಲಿ ಪ್ರಕಟವಾದ ವಚನ ವ್ಯಾಖ್ಯಾನ ಸ್ವರೂಪವನ್ನು ಕೆಲವು ಉದಾಹರಣೆಗಳ ಮೂಲಕ ಇಲ್ಲಿ ತಿಳಿಯಲಾಗುವುದು.

ಡಾ. ಎಚ್ ತಿಪ್ಪೇರುದ್ರಸ್ವಾಮಿಯವರು "ಹಿಂದಿನ ಎಲ್ಲಾ ವ್ಯಾಖ್ಯಾನಗಳನ್ನು ವಿವರಣೆಗಳನ್ನು ಗಮನಿಸಿದ್ದರೂ ಇಂದಿನ ವೈಚಾರಿಕ ಹಿನ್ನೆಲೆಯಲ್ಲಿ ವಚನಗಳ ಅರ್ಥವನ್ನೂ ಆಂತರ್ಯವನ್ನೂ ಕಂಡುಕೊಳ್ಳುವ ಪ್ರಯತ್ನ ಇಲ್ಲಿನದು. ವ್ಯಾಖ್ಯಾನವನ್ನಾಗಲಿ ವಿವರಣೆಯನ್ನಾಗಲೀ ಅತಿಯಾಗಿ ಬೆಳೆಸುವದಕ್ಕೆ ಹೋಗಿಲ್ಲ. ಅದು ದೀರ್ಘವಿಮರ್ಶೆಯಾಗಲೀ ಸ್ವಂತಿಕೆಯ ಪ್ರತಿಪಾದನೆಯಾಗಲೀ ಆಗದಂತೆ ಎಚ್ಚರ ವಹಿಸಲಾಗಿದೆ. ವಚನಗಳನ್ನೇ ಹಿಂದೆ ತಳ್ಳಿ ವಿಶ್ಲೇಷಣೆಯೇ ಪ್ರಧಾನವಾಗುವಂತಹ ಅಥವಾ ಅನಗತ್ಯವಾದ ಅಂಶಗಳನ್ನು ವಚನಗಳಿಗೆ ಆರೋಪಿಸುವಂತಹ ಆಕರ್ಷಣೆಗೆ ಒಳಗಾಗಿಲ್ಲ. ವಚನಗಳು ಸ್ಪಷ್ಟವಾಗಿ ಅರ್ಥವಾಗುವುದಕ್ಕೆ ಎಷ್ಟು ಬೇಕೋ ಅಷ್ಟೇ ವಿವರಣೆಯನ್ನು ಮಾತ್ರ ಸಂಗ್ರಹವಾಗಿ ಕೊಡಲಾಗಿದೆ."[೩೪] ಎಂದು ಹೇಳಿರುವ ಅಭಿಪ್ರಾಯಗಳು ಆಧುನಿಕ ವಚನ ವ್ಯಾಖ್ಯಾನದ ಒಟ್ಟು ಸ್ವರೂಪವನ್ನು ಪರಿಚಯಿಸುವಂತಿದೆ. ಅಂದರೆ, ಆಧುನಿಕರ ವಚನ ವಿವರಣೆಯೇ ಪ್ರಾಚೀನರ ವಚನಗಳ ವ್ಯಾಖ್ಯಾನವಾಗಿತ್ತು ಎಂಬರ್ಥವನ್ನು ಡಾ. ತಿಪ್ಪೇರುದ್ರಸ್ವಾಮಿಯವರು ಕೊಡುತ್ತಾರೆ. ಒಂದರ್ಥದಲ್ಲಿ ವಚನಾಧಾರಿತ ಸಂಕ್ಷಿಪ್ತ ವಿಮರ್ಶೆ ಬರೆದು ವಚನದ ಸ್ಪಷ್ಟವಾದ ಅರ್ಥ ಸ್ಫುರಿಸುವಂತೆ ಆಧುನಿಕ ವ್ಯಾಖ್ಯಾನಕಾರನಾದವನು ಸಂಗ್ರಹ ರೂಪದಲ್ಲಿ ವಿವರಿಸಬೇಕಾಗುತ್ತದೆ.

ಆಧುನಿಕ ವ್ಯಾಖ್ಯಾನಕಾರರಾದ ಶ್ರೀ ಸಿದ್ಧರಾಮೇಶ್ವರ ಶರಣರು ಬೆಲ್ದಾಳ ಅವರು "ಸಮಗ್ರ ವಚನ ಸಾಹಿತ್ಯವೆಲ್ಲ ಟೀಕೆ, ಟಿಪ್ಪಣಿ, ಭಾವ, ಭಾಷ್ಯಗಳ ಮೂಲಕ ಸರಳೀಕರಣವಾಗಿ ಜನಮನವ ಮುಟ್ಟುವ ಅಗತ್ಯವಿದೆ. ಆಗ ಜನಮನದಲ್ಲಿ ವಚನ ಜ್ಞಾನದ ಬೆಳಕು ಬೆಳಗಿ ಅಜ್ಞಾನ ಅಂಧಕಾರ ಬಯಲಾಗುತ್ತದೆ."[೩೫] ಎಂದು ಅಭಿಪ್ರಾಯಪಟ್ಟಿರುವುದರಿಂದ ಆಧುನಿಕ ಮತ್ತು ಪ್ರಾಚೀನ ವಚನ ವ್ಯಾಖ್ಯಾನಗಳ ಸ್ವರೂಪದಲ್ಲಿ ಭಿನ್ನತೆ ಇದ್ದರೂ ಟೀಕಾಕಾರರ ಉದ್ದೇಶ ಒಂದೇ ಆಗಿತ್ತು ಎನಿಸುತ್ತದೆ. ಏಕೆಂದರೆ, ಶರಣರ,

ವಚನಗಳನ್ನು ಸಮಕಾಲೀನ ಮತ್ತು ನಂತರದ ಕಾಲಘಟ್ಟಗಳಲ್ಲಿ ತಪ್ಪಾಗಿ ಅರ್ಥೈಸಬಾರದು. ವಚನದೊಳಗಿನ ಅನುಭಾವದ ಬೆಳಕನ್ನು ಜನಸಾಮಾನ್ಯರು ಸರಳವಾಗಿ ತಿಳಿಯಲೆಂಬ ಉದ್ದೇಶ ಮುಖ್ಯವಾಗಿತ್ತು. ಇದೇ ಉದ್ದೇಶ ಆಧುನಿಕ ವ್ಯಾಖ್ಯಾನಕಾರರದು ಆಗಿದೆಯಾದರೂ ಅಲ್ಪ ಭಿನ್ನತೆಯನ್ನು ಕಾಣಲು ಸಾಧ್ಯವಿದೆ. ಅಂದರೆ ಪ್ರಾಚೀನ ವ್ಯಾಖ್ಯಾನಕಾರರು ವಚನಗಳನ್ನು ಒಂದು ಧರ್ಮದ ತಾತ್ವಿಕ ಚೌಕಟ್ಟಿನಲ್ಲಿ ಮಾತ್ರ ಅರ್ಥ ನೀಡುವ ಉದ್ದೇಶ ಹೊಂದಿದ್ದರು. ಅದೇ ಆಧುನಿಕರು ವಚನಗಳನ್ನು ಒಂದು ಧರ್ಮದ ಚೌಕಟ್ಟಿನಲ್ಲಿ ಪರಿಭಾವಿಸುತ್ತಲೇ ವಚನಗಳ ಬಹುಮುಖತೆಯ ದರ್ಶನವನ್ನು ವೈಚಾರಿಕ–ವಿಮರ್ಶೆಯೊಂದಿಗೆ ಸರಳವಾಗಿ ಅರ್ಥವಿಸುವ ಉದ್ದೇಶ ಕೆಲವು ಆಧುನಿಕ ವ್ಯಾಖ್ಯಾನಕಾರರದಾಗಿದೆ. ಒಟ್ಟಾರೆ, ಪ್ರಾಚೀನ ಮತ್ತು ಆಧುನಿಕ ವಚನ ವ್ಯಾಖ್ಯಾನಕಾರರು ಬರೆದ ವ್ಯಾಖ್ಯಾನ ಗ್ರಂಥಗಳಲ್ಲಿಯ ಒಂದು ವಚನಕ್ಕೆ ಹಲವರ ಟೀಕೆಯನ್ನು ಮುಖಾಮುಖಿಗೊಳಿಸಿ ಅಧ್ಯಯನ ಮಾಡುವ ಸಾಧ್ಯತೆಗೆ ಅನುವು ದೊರೆಯುತ್ತದೆ. ವಚನಾಧ್ಯಯನದಲ್ಲಿ ನಿರಂತರ ತೊಡಗಿಸಿಕೊಂಡ ವಿದ್ವಾಂಸರಿಂದ ಈ ಕೆಲಸ ನಡೆಯಬೇಕಾದ ಅಗತ್ಯವಿದೆ.

ಕನ್ನಡ ಟೀಕಾಸಾಹಿತ್ಯದ ಆಧುನಿಕ ಪರಂಪರೆಯ ಎರಡನೇಯ ಘಟ್ಟದಲ್ಲಿ ವಚನಗಳಿಗೆ ವ್ಯಾಖ್ಯಾನ ಮಾಡಿದ ಪ್ರಮುಖ ವಿದ್ವಾಂಸರೆಂದರೆ ಕುಂದೂರುಮಠದ **ಇಮ್ಮಡಿ ಶಿವಬಸವ ಸ್ವಾಮಿಗಳು.** ಮೈಸೂರಿನ ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯು **೧೯೮೬**ರಲ್ಲಿ ಪ್ರಕಟಿಸಿರುವ 'ಅಲ್ಲಮಪ್ರಭುದೇವರ ಟೀಕಿನ ವಚನಗಳು' ಗ್ರಂಥವು ಇಲ್ಲಿಯ ಜಿ.ಎಸ್.ಎಸ್. ಗ್ರಂಥಮಾಲೆಯ 'ವಚನ–ವ್ಯಾಖ್ಯಾನ' ಯೋಜನೆಯ ಆರಂಭಕ್ಕೆ ಪೂರ್ವದಲ್ಲಿ ಪ್ರಕಟವಾಗುವ ಮೂಲಕ ೨೧ನೇ ಶತಮಾನದ ವಚನ ವ್ಯಾಖ್ಯಾನ ಪರಂಪರೆಗೆ ಪೂರ್ವಪೀಠಿಕೆ ಹಾಕಲು ಪ್ರೇರಕವಾಗಿದೆ ಎನ್ನಬಹುದು.

ಮುನ್ನುಡಿಯಲ್ಲಿ ಇಮ್ಮಡಿ ಶಿವಬಸವ ಸ್ವಾಮಿಗಳು ಹೇಳುವಂತೆ "ಇದು ಕೇವಲ **೬೯೪ ವಚನಗಳಿಗೆ** ಮಾತ್ರ ಸಂಬಂಧಿಸಿದ್ದು. ಮಹಾಲಿಂಗದೇವರು ಟೀಕಿಸಿದ ವಚನಗಳನ್ನೇ ಕಲ್ಲುಮಠದ ಪ್ರಭುದೇವರು ಟೀಕಿಸಿರುವೆಡೆ ತುಲನಾತ್ಮಕವಾಗಿ ಅಧ್ಯಯನ ಮಾಡಲು ಅನುಕೂಲವಾಗಲಿ ಎಂಬ ದೃಷ್ಟಿಯಿಂದ ಆಯಾ ವಚನದ ಅಡಿಯಲ್ಲಿ ಕೊಟ್ಟಿದೆ. ಇನ್ನುಳಿದ ಕಲ್ಲುಮಠದ ಪ್ರಭುದೇವರ ಟೀಕಿನ ವಚನಗಳನ್ನು ಸಿಂಗಳದ ಸಿದ್ಧಬಸವರಾಜ ದೇವರು ಹಾಗೂ ಚೆನ್ನವೀರಾಚಾರ್ಯರು (ಕ್ರಿ.ಶ.ಸು ೧೬೦೦) ವ್ಯಾಖ್ಯಾನಿಸಿರುವ ವಚನಗಳನ್ನು ಅನುಕ್ರಮವಾಗಿ (೪೦,೧೨,೫೧) ೬೯೫ ರಿಂದ ಮುಂದುವರಿಸಿದೆ. 'ಈ ವಚನ ಕಾಣಬಂದರ್ಥ' ಎಂದಷ್ಟೇ ಕಲ್ಲುಮಠದ ಪ್ರಭುದೇವರು ವ್ಯಾಖ್ಯಾನಿಸಿರುವ ವಚನವನ್ನು ಇಲ್ಲಿ ಕೈಬಿಟ್ಟಿದೆ. ಈ ಕೃತಿಯು ವಿದ್ವಜ್ಜನರಿಗೋಸ್ಕರವೇ ಸಂಸಿದ್ಧಪಡಿಸಿರುವ ಸಂಸ್ಕರಣವಲ್ಲವಾದ್ದರಿಂದ ಶಕಟ ರೇಫವನ್ನು ಬಿಡಲಾಗಿದೆ. ಶ್ರೀ ಮುರುಘಾಮಠದವರು ಪ್ರಕಾಶಪಡಿಸಿರುವ ಲಿಂಗಲೀಲಾವಿಲಾಸ ಚಾರಿತ್ರ್ಯ, ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿರುವ ಸಿಂಗಳದ ಸಿದ್ಧಬಸವರಾಜದೇವನು ಟೀಕಿಸಿರುವ ಸಕಲಪುರಾತನರ ಬೆಡಗಿನ ವಚನಗಳು ಮತ್ತು ವಿಶೇಷಾನುಭವ ಷಟ್ಸ್ಥಲದಲ್ಲಿನ ಪ್ರಭುದೇವರ ಟೀಕಿನ ವಚನಗಳನ್ನು ಇಲ್ಲಿ ಬಳಸಿಕೊಂಡಿದೆ."[೩೬] ಎಂದು ಸ್ಪಷ್ಟಪಡಿಸಿರುವುದರಿಂದ ವಚನ ವ್ಯಾಖ್ಯಾನದ

ಜೊತೆಗೆ ವ್ಯಾಖ್ಯಾನಗಳನ್ನು ತೌಲನಿಕವಾಗಿ ಅಧ್ಯಯನ ಮಾಡಲು ಅನುಕೂಲವಾಗಿದೆ ಎನ್ನಬಹುದು. ಇಮ್ಮಡಿ ಶಿವಬಸವಸ್ವಾಮಿಗಳು ಅಲ್ಲಮ ಪ್ರಭುವಿನ ಪ್ರಮುಖ ವಚನವೊಂದಕ್ಕೆ ನೀಡಿದ ವ್ಯಾಖ್ಯಾನ ಇಲ್ಲಿದೆ.

**ವಚನ:** ೧. ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದೊಡೆ ಆಗಲಿ ಮಹಾಪ್ರಸಾದವೆಂದೆನಯ್ಯ; ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದೊಡೆ ಆಗಲಿ ಮಹಾಪ್ರಸಾದವೆಂದೆನಯ್ಯ; ದ್ವಾಪರದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ದಿಯು ಕಲಿಸಿದೊಡೆ ಆಗಲಿ ಮಹಾಪ್ರಸಾದವೆಂದೆನಯ್ಯ; ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ದಿಯ ಕಲಿಸಿದೊಡೆ ಆಗಲಿ ಮಹಾಪ್ರಸಾದವೆಂದೆನಯ್ಯ; ಗುಹೇಶ್ವರ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾನು ಬೆರಗಾದೆನು" (ಗುರುಕರುಣಸ್ಥಲ–೫೨)

**ಟೀಕು:** ಸಕಲ ಕರ್ಮಂಗಳಳಿದುಳಿದ ಶೇಷನೆಂಬ ಶಿಷ್ಯನು ಗುರುಕರುಣವ ಹಡದಪರಿ ಎಂತೆಂದೊಡೆ ಪ್ರಥಮದಲ್ಲಿ ತನ್ನ ತಾನೆಚ್ಚತ್ತು ಸಂಸಾರದ ಘಾಟಿಯಲ್ಲಿ ಸಿಕ್ಕಿ ನೊಂದೆನಲ್ಲ ಎಂದು ಉಪಾತಾಪ ಹುಟ್ಟಿ ತನ್ನ ತಾ ಬೋಧಿಸಿಕೊಳ್ಳುತ್ತಿರಲು ಅದು ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದೊಡಾಗಲಿ ಮಹಾಪ್ರಸಾದವೆಂದೆನಯ್ಯ ಎಂಬ ಶಬ್ಧಕ್ಕರ್ಥ. ಆ ಗುರುಕರುಣವ ಹಡೆದ ಶಿಷ್ಯನು ದ್ವಿತಿಯದಲ್ಲಿ ಕರಣಂಗಳ ನಿವೃತ್ತಿಯ ಮಾಡಿ ಲಿಂಗಭಾವಭರಿತನಾಗಿರ್ದನೆಂಬುದೀಗ ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯಕಲಿಸಿದೊಡಾಗಲಿ ಮಹಾಪ್ರಸಾದವೆಂದನಯ್ಯ ಎಂಬ ಶಬ್ಧಕ್ಕರ್ಥ. ತೃತಿಯದಲ್ಲಿ ಸರ್ವಾಂಗಲಿಂಗವಾಗಿ ಕೋಹಂಭಾವವಳಿದು ಸೋಹಂಭಾವವಳವಟ್ಟಿತ್ತೆಂಬುದೀಗ ದ್ವಾಪರ ಯುಗದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದೊಡಾಗಲಿ ಮಹಾಪ್ರಸಾದವೆಂದೆನಯ್ಯ ಎಂಬ ಶಬ್ದಕ್ಕರ್ಥ. ಚತುರ್ಥದಲ್ಲಿ ಗುರುಶಿಷ್ಯಸಂಬಂಧವೆಂಬ ಭಿನ್ನಭಾವವಳಿದು ಸೋಹಂಭಾವವಡಗಿ ನಿರಹಂಭಾವ ಸ್ವರೂಪನಾಗಿ ಸೇವ್ಯಸ್ಥಲನಿಂಬುಗೊಂಡಿದ್ದನೆಂಬುದೀಗ ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದೊಡಾಗಲಿ ಮಹಾಪ್ರಸಾದವೆಂದೆನಯ್ಯ ಎಂಬ ಶಬ್ಧಕ್ಕರ್ಥ. ಇಂತು ನಾಹಂಭಾವ ಕೋಹಂಭಾವ ಸೋಹಂಭಾವ ಶಿವೋಹಂಭಾವವೆಂಬ ಚತುರ್ವಿದಭಾವವು ನಿರ್ಭಾವವನೆಯ್ದಿ ನಿಜದಲ್ಲಿ ನಿಂದು ಪರಮಕಾಷ್ಠೆಯಾಗಿದ್ದನೆಂಬುದೀಗ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾನು ಬೆರಗಾದೆನೆಂಬ ಶಬ್ಧಕ್ಕರ್ಥ"[೨೭] ಎಂದು ವಚನಕ್ಕೆ ಧರ್ಮದ ತಾತ್ವಿಕ ನೆಲೆಯಲ್ಲಿಯೇ ಟೀಕು ಬರೆಯುವ ಮೂಲಕ ಪ್ರಾಚೀನ ಟೀಕಾ ಪರಂಪರೆಯ ಮಾದರಿಯನ್ನು, ಅದರ ಸ್ವರೂಪವನ್ನು ಮುಂದುವರಿಸಿದ ಆಧುನಿಕ ವಚನ ಟೀಕಾಕಾರರಲ್ಲಿ ಪ್ರಮುಖರಾಗಿದ್ದಾರೆನ್ನಬಹುದು.

**ಸರಳ ಸಂಕ್ಷೇಪ ವ್ಯಾಖ್ಯಾನಕ್ಕೆ ಉದಾಹರಣೆ**

**ವಚನ** : ಕಲ್ಲಮನೆಯ ಮಾಡಿ, ಕಲ್ಲದೇವರ ಮಾಡಿ, ಕಲ್ಲು ಕಲ್ಲಮೇಲೆ ಕೆಡೆದರೆ ದೇವರೆತ್ತ ಹೋದರೊ! ಲಿಂಗಪ್ರತಿಷ್ಠೆಯ ಮಾಡಿದವಂಗೆ ನಾಯಕನರಕ ಗುಹೇಶ್ವರ.

**ಟೀಕು :** “ದೇಹವೆ ದೇವಾಲಯವಾಗಿ ಪ್ರಾಣವೇ ಲಿಂಗವಾಗಿ ಆ ಲಿಂಗವನು ಮನದಲ್ಲಿ ಪ್ರತಿಷ್ಠೆಯ ಮಾಡಿ ಶರಣೆಂಬುದು ಕ್ರಮವಲ್ಲದೆ ಭಿನ್ನ ಬುದ್ಧಿಯಿಂದ ಅನ್ಯಲಿಂಗ ಸ್ಥಾಪನವಮಾಡಿ ಎರಗಲಾಗದೆಂಬುದೀ ವಚನದ ತಾತ್ಪರ್ಯಾರ್ಥ.”[೩೮] ಹೀಗೆ ಇಮ್ಮಡಿ ಶಿವಬಸವಸ್ವಾಮಿಗಳು ಪ್ರಾಚೀನ ವಚನ ವ್ಯಾಖ್ಯಾನ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ಸ್ವಾನುಭವದ ಸರಳ ವ್ಯಾಖ್ಯಾನ ಮಾಡಿದ್ದಾರೆ. ವಚನ ಅಧ್ಯಯನ ಮಾಡುವವರಿಗೆ ಅರ್ಥವಾಗದಿರುವ ವಚನಗಳಿಗೆ ಸ್ವವಿವರಣೆಯ ಜೊತೆಗೆ ‘ಲಿಂಗ ಲೀಲಾವಿಲಾಸ ಚಾರಿತ್ರ’ ಸೇರಿದಂತೆ ಇತರೆ ಟೀಕಾಗ್ರಂಥಗಳ ಟೀಕನ್ನು ಯಥಾವತ್ತಾಗಿ ಕೆಳಗೆ ಕೊಡುವ ಮೂಲಕ ವಚನಗಳ ವಿಶ್ಲೇಷಣೆ, ಚಿಂತನೆ, ತೌಲನಿಕ ಅಧ್ಯಯನಕ್ಕೆ ಪೂರಕ–ಪ್ರೇರಕಶಕ್ತಿಯಾಗಿದ್ದಾರೆ ಎನ್ನಬಹುದು.

ಕನ್ನಡ ನಾಡುಕಂಡ ಶ್ರೇಷ್ಠ ಅನುಭಾವಿಗಳು, ತತ್ವಜ್ಞಾನಿಗಳು ಆಗಿರುವ ಬಿಜಾಪೂರದ ಸಿದ್ದೇಶ್ವರ ಶ್ರೀಗಳು ಅಲ್ಲಮ ಪ್ರಭುದೇವರ ವಚನ ನಿರ್ವಚನ ಎಂಬ ವಚನ ವ್ಯಾಖ್ಯಾನ ಗ್ರಂಥವನ್ನು ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ ಮೈಸೂರಿನಿಂದ **೨೦೦೧**ರಲ್ಲಿ ಪ್ರಕಟಿಸಿದ್ದಾರೆ. ಅಲ್ಲಮಪ್ರಭುಗಳ ಷಟ್‌ಸ್ಥಲ ವಚನಗಳಲ್ಲಿ ಮೊದಲಿನ ನಾಲ್ಕು ಸ್ಥಲಗಳ ೩೧೦ ವಚನಗಳ ಭಾಷ್ಯವನ್ನೊಳಗೊಂಡ ಮೊದಲ ಸಂಪುಟ **೧೯೯೮**ರಲ್ಲಿ ಪ್ರಕಟವಾಗಿದೆ. ತದನಂತರ ಶರಣಸ್ಥಲ, ಐಕ್ಯಸ್ಥಲಗಳ ೩೮೪ ವಚನಗಳನ್ನು ಭಾವ–ಭಾಷ್ಯದ ಮಾದರಿಯಲ್ಲಿ ವ್ಯಾಖ್ಯಾನದೊಂದಿಗೆ ಎರಡನೇ ಸಂಪುಟವನ್ನು ಪ್ರಕಟಿಸಿದ್ದಾರೆ. ಇವೆರಡು ಸಂಪುಟಗಳನ್ನು ಸೇರಿಸಿ ಅಂದರೆ ಒಟ್ಟು **೬೯೪ ವಚನಗಳಿಗೆ ವ್ಯಾಖ್ಯಾನಿಸಲಾದ ಬೃಹತ್ ಗ್ರಂಥವನ್ನು ೨೦೦೧ರಲ್ಲಿ ಪ್ರಕಟಿಸುವ** ಮೂಲಕ ಶರಣಸಾಹಿತ್ಯ ಅಧ್ಯಯನ, ಚಿಂತನ ಮತ್ತು ಸಂಶೋಧಕರಿಗೆ ತುಂಬಾ ಅನುಕೂಲ ಕಲ್ಪಿಸಿಕೊಟ್ಟಿದ್ದಾರೆ. ಅಲ್ಲದೇ, ಅಲ್ಲಮನ ಬೆಡಗಿನ ವಚನಗಳ ಗೂಢಾರ್ಥವನ್ನು ಬಿಡಿಸಿ ತುಂಬಾ ಸರಳವಾಗಿ ಅರ್ಥೈಸಲು ಪ್ರಾಮಾಣಿಕ ಪ್ರಯತ್ನಮಾಡಿದ್ದಾರಲ್ಲದೇ ಆಳವಾದ ತಮ್ಮ ಅನುಭಾವವನ್ನು ಇಲ್ಲಿ ಧಾರೆಯೆರೆದಿದ್ದಾರೆ.

ಸಿದ್ದೇಶ್ವರ ಶ್ರೀಗಳು ಅಲ್ಲಮನ ವಚನಗಳಿಗೆ ವ್ಯಾಖ್ಯಾನ ಮಾಡವಾಗ ‘ಭಾವ’ ‘ಭಾಷ್ಯ’ ಮಾದರಿಯನ್ನು ಅನುಸರಿಸಿದ್ದಾರೆ. ‘ಭಾಷ್ಯ’ದಲ್ಲಿ ಮೊದಲು ವಚನ ವಾಕ್ಯದಲ್ಲಿಯ ಪದಶಃ ಅರ್ಥನೀಡಿ, ನಂತರ ಭಾವಾರ್ಥವನ್ನು ಕೊಡುವ ಮೂಲಕ ಅಲ್ಲಮನ ಬೆಡಗಿನ ವಚನಗಳು ಸರಳವಾಗಿ ಅರ್ಥವಾಗುವಂತೆ ಪ್ರಯತ್ನಿಸಿದ್ದಾರೆ.

“ಹಿಂದಣ ಕವಿಗಳೆನ್ನ ತೊತ್ತಿನ ಮಕ್ಕಳು.....ನೀ ಮಾವ ನಾನಳಿಯ ಗುಹೇಶ್ವರಾ!” (ವಚನ–೫೫೦, ಪುಟ – ೮೪೭–೮೪೮) ಎಂಬುದಕ್ಕೆ ಪದಶಃ ಅರ್ಥ ನೀಡಿದ್ದನ್ನು ಕಾಣಬಹುದು. ಉದಾಹರಣೆಗೆ ಹಿಂದಣ = ಕವಿಗಳು ಹಿಂದಣ ತತ್ವವನು ಅರಿತವರು. ತೊತ್ತಿನ ಮಕ್ಕಳು= ದಾಸಿಯ ಮಕ್ಕಳು. ಮುಂದಣ ಕವಿಗಳು= ಮುಂದಣ ತತ್ವವನು ಅರಿತವರು. ಕರುಣದ ಕಂದಗಳು= ಕರುಣಾ ಪಾತ್ರರಾದ ಮಕ್ಕಳು. ಆಕಾಶದ ಕವಿಗಳು= ಬಯಲ ತತ್ವದ ಕವಿಗಳು. ತೊಟ್ಟಿಲ ಕೂಸು= ಎಳೆಗೂಸು. ಹರಿಬ್ರಹ್ಮರು= ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ ಎಂಬೈದು ಪರಶಿವನ ಅಭಿವ್ಯಕ್ತರೂಪಗಳು.

ಕ್ರಿಯಾ – ಜ್ಞಾನ – ಇಚ್ಛಾ – ಆದಿ – ಪರಾ ಎಂಬ ಪಂಚಶಕ್ತಿಗಳಲ್ಲಿ ಮೂಡಿನಿಂದ ಪರಶಿವನ ಸತ್ ಚಿತ್ ಆನಂದ ನಿತ್ಯ ಪರಿಪೂರ್ಣ ಎಂಬ ಕಳೆಗಳು. ಕಕ್ಷಕುಳ = ಕಂಕುಳ ಕೂಸು. ನೀ = ಶಿವನು, ಪರಶಿವನು. ನಾನು = ಶರಣ, ಅಳಿಯ, ಮಾವ = ಪರಶಿವನ ವಿಶುದ್ಧ ಚಿದಂಶವೇ ಚಿಚ್ಛಕ್ತಿ, ಶರಣನು ಆ ಶಕ್ತಿಯನು ವರಿಸಿದನಾಗಿ ಶಿವನಿಗೆ ಶರಣ ಅಳಿಯ, ಶರಣನಿಗೆ ಪರಶಿವ ಮಾವ. ಹೀಗೆ ಪದಶಃ ಅರ್ಥ ಬರೆದ ನಂತರ ವ್ಯಾಖ್ಯಾನವನ್ನು ವಿವರವಾಗಿ ಬರೆಯಲಾಗಿದೆ. ಈ ಹಿನ್ನೆಲೆಯಲ್ಲಿ ಶಿವಶರಣರ ಪ್ರಾಚೀನ ವಚನಗಳಿಗೆ ಪ್ರಾಚೀನ ವ್ಯಾಖ್ಯಾನ ಮಾದರಿಯ ಜೊತೆಗೆ ಆಧುನಿಕತೆಯ ಸ್ಪರ್ಶ ನೀಡಿ ಇಂದಿನವರು ಸುಲಭವಾಗಿ ಅರ್ಥಮಾಡಿಕೊಳ್ಳುವಂತೆ ಮಾಡಿರುವ ಸಿದ್ಧೇಶ್ವರ ಶ್ರೀಗಳ ಪ್ರಯತ್ನ ಅನುಕರಣೀಯವಾಗಿದೆ.

**ಬಸವೇಶ್ವರ ವಚನದೀಪಿಕೆ:** ಬಸವಣ್ಣನವರ ಷಟ್‌ಸ್ಥಲದ ವಚನಗಳೆಂದು ಪ್ರಸಿದ್ಧವಾದ ೬೫೯ ವಚನಗಳಲ್ಲಿ ೬೧೭ಕ್ಕೆ ಮಾತ್ರ ಡಾ.ಎಚ್.ತಿಪ್ಪೇರುದ್ರಸ್ವಾಮಿಯವರು ಸರಳ ಗದ್ಯದಲ್ಲಿ ವ್ಯಾಖ್ಯಾನ ಬರೆದಿದ್ದಾರೆ. ಈ ಗ್ರಂಥವನ್ನು ಮೈಸೂರು ಶ್ರೀ ಶಿವರಾತ್ರೀಶ್ವರ ಮಠವು ೧೯೬೫ರಲ್ಲಿಯೇ ಪ್ರಕಟಿಸಿದೆ. ಪ್ರಾಚೀನ ಟೀಕೆಗಳಂತೆ ಇಲ್ಲಿ ಪ್ರತಿಪದಾರ್ಥ ಟೀಕೆಯಾಗಲಿ, ಶಬ್ದಾರ್ಥ ಇಲ್ಲವೇ ವಾಕ್ಯರೂಪದ ಟೀಕೆಯಾಗಲಿ ಬಳಕೆಯಾಗಿಲ್ಲ. ಇದರಿಂದಾಗಿ ಪ್ರಾಚೀನ ಟೀಕೆಗಳಿಂದ ಈ ವ್ಯಾಖ್ಯಾನ ಕೃತಿಯು ಪ್ರತ್ಯೇಕವಾಗಿ ತೋರುವುದನ್ನು ಕಾಣಬಹುದು. ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರು ಬಸವಣ್ಣನವರ ವಚನಗಳ ಅರ್ಥಸ್ಪಷ್ಟತೆಗಾಗಿ ವಿವರ ವ್ಯಾಖ್ಯಾನ ಬರೆದರೆ, ಇನ್ನೂ ಕೆಲವೊಮ್ಮೆ ಹಿಂದಿನ ವಚನದ ಭಾವ ಇಲ್ಲಿಯೂ ಇದೆ ಎಂದು ಹೇಳಿ ಸಂಕ್ಷಿಪ್ತದಲ್ಲಿ ವ್ಯಾಖ್ಯಾನವನ್ನು ಪೂರ್ಣಗೊಳಿಸುತ್ತಾರೆ. ಇವರು ಎರಡು ರೀತಿಯಲ್ಲಿ ವ್ಯಾಖ್ಯಾನವನ್ನು ಬರೆಯದೇ ಎಲ್ಲ ವಚನಗಳಿಗೂ ಒಂದೇ ಭಾವಾರ್ಥದ ಮೂಲಕ ಓದುಗರಿಗೆ ಅರ್ಥಸ್ಫುರಿಸುವಂತಹ ಸರಳ ಮಾದರಿ ಅನುಸರಿಸಿದ್ದಾರೆ. ಉದಾಹರಣೆಗೆ:

**ವಚನ :** "ಒಲ್ಲೆನೆಂಬುದು ವೈರಾಗ್ಯ, ಒಲಿವೆನೆಂಬುದು ಕಾಯಗುಣ.
ಆವ ಪದಾರ್ಥವಾದಡೇನು ತಾನಿದ್ದೆಡೆಗೆ ಬಂದುದ
ಲಿಂಗಾರ್ಪಿತವ ಮಾಡಿ ಭೋಗಿಸುವುದೇ ಆಚಾರ.
ಕೂಡಲಸಂಗಮದೇವರನೊಲಿಸಬಂದ
ಪ್ರಸಾದ ಕಾಯಗುಣ ಕೆಡಿಸಲಾಗದು." (ವ–೭೭೪)

"ಬೇಕು– ಬೇಡಗಳನ್ನು ಬಿಟ್ಟು ಜೀವನವನ್ನು ಅನುಭವಿಸುವುದೇ ಪ್ರಸಾದ ಜೀವನ. ಈ ಸಂಸಾರವನ್ನು ಒಲ್ಲೆನೆಂದು ತಿರಸ್ಕರಿಸಿ ಹೋಗುವುದು ವೈರಾಗ್ಯ. ಇದಕ್ಕೆ ಒಲಿದು ಅಂಟಿಕೊಳ್ಳುವುದು ಕಾಯಗುಣ. ಅದು ವ್ಯಾಮೋಹ. ಅತಿಯಾದಾಗ ಈ ಎರಡೂ ಸಲ್ಲವು. ಬೇಕು–ಬೇಡಗಳನ್ನು ಅಳಿದು ಕಾಯಕದಿಂದ ಬಂದ ಪದಾರ್ಥವನ್ನು ಭಗವಂತನಿಗೆ ಅರ್ಪಿಸಿ ಆತನ ಒಲುಮೆಯನ್ನು ಪಡೆಯುವುದೇ ಸಹಜ ಜೀವನ. ಅದೇ ನಿಜವಾದ ಆಚಾರ. ತನ್ನ ಬದುಕಿನ ಸಹಜಕ್ರಿಯೆಯಿಂದ ಬಂದದ್ದನ್ನು ಅರ್ಪಣಾ ಭಾವದಿಂದ ಅನುಭವಿಸಬೇಕು. ಈ ಅರ್ಪಣೆಯೇ ಬೇಕು–ಬೇಡಗಳನ್ನು ನಿರ್ಧರಿಸಬೇಕು

ಅವಕ್ಕೆ ಅಧೀನವಾಗಿರಬಾರದು. ಹಾಗೆ ಬೇಕು-ಬೇಡಗಳನ್ನು ಬಿಟ್ಟು ಎಲ್ಲವೂ ಪ್ರಸಾದವೆಂಬ ಭಾವನೆಯಿಂದ ಅನುಭವಿಸುವುದು. ಬೇಕು ಎಂಬುದು ಬಂಧಿಸುತ್ತದೆ, ಮೋಹದಿಂದ ಮುಟ್ಟಬಿಡುತ್ತದೆ. ಬೇಡ ಎಂಬುದು ಅಹಂಕಾರವನ್ನು ಅಭಿವೃದ್ಧಿ ಮಾಡುತ್ತದೆ. ಆದುದರಿಂದ ಬೇಕು-ಬೇಡ ಇವುಗಳನ್ನು ನಿರ್ಬಲಗೊಳಿಸಿ ಜೀವನವನ್ನು ಪ್ರಸಾದ ಎಂದು ಅನುಭವಿಸಿಬಿಟ್ಟರೆ ಅದು ಪ್ರಸಾದ ಜೀವನ ಆಗುತ್ತದೆ"[೪೯] ಎಂದು ತುಂಬಾ ಅರ್ಥವತ್ತಾಗಿ ಚಿಕ್ಕಚಿಕ್ಕ ವಾಕ್ಯಗಳ ಮೂಲಕ ವಿವರಿಸುತ್ತಾರೆ.

**ವಚನ :** "ಒಪ್ಪವ ನುಡಿವಿರಯ್ಯಾ ತುಪ್ಪವ ತೊಡೆದಂತೆ
ಶರಣ ತನ್ನ ಮೆಚಿವನೆ ಭಿನ್ನಾಣಿಯಂತೆ?
ಕೂಡಲಸಂಗನ ಪ್ರಸಾದದಿಂದ ಬದುಕುವನಲ್ಲದೆ
ತನ್ನ ಮರೆವನೆ?" (ವಚನ - ೭೭೫)

"ಶರಣ, ತುಪ್ಪದ ಸವಿಯಂತೆ ಒಳ್ಳೆಯ ಮಾತುಗಳನ್ನಾಡುತ್ತಾ ಚತುರ ಬೆಡಗಿನ ಮಾತುಗಳಿಂದ ತನ್ನನ್ನು ವರ್ಣಿಸಿಕೊಳ್ಳುವುದಿಲ್ಲ. ಅವನು ತನ್ನ ಸರ್ವಸ್ವವನ್ನೂ ಶಿವನಿಗೆ ಅರ್ಪಿಸಿ ಅಹಂಕಾರವನ್ನು ಕಳೆದುಕೊಂಡು ಇದ್ದೂ ಇಲ್ಲದಂತೆ ಈ ಜಗತ್ತಿನಲ್ಲಿ ಬದುಕುತ್ತಾನೆ"[೫೦] ಎಂದು ಚಿಕ್ಕದಾದ ಚೊಕ್ಕ ವಾಕ್ಯಗಳಲ್ಲಿ ವಚನಾರ್ಥ ನೀಡಿ ಗಮನಸೆಳೆಯುತ್ತಾರೆ. ಅನುಬಂಧದಲ್ಲಿ ವಚನಗಳಲ್ಲಿನ ಕೆಲವು ಸಾಂದರ್ಭಿಕ ಕಥೆಗಳನ್ನು, ವಿಶೇಷ ಪದಕೋಶ ಮತ್ತು ಕಠಿಣ ಶಬ್ದಕೋಶ, ವಿಶಿಷ್ಟ ಪದಸೂಚಿ ಮತ್ತು ವಚನಗಳ ಅಕಾರಾದಿಸೂಚಿಯನ್ನು ನೀಡುವ ಮೂಲಕ ವಚನಾರ್ಥ ಓದುಗರಿಗೆ ಕೈದೀವಿಗೆಯಾಗಿ ಬೆಳಕನ್ನು ಚೆಲ್ಲುತ್ತಾರೆ.

ನಾಡಿನ ಶ್ರೇಷ್ಠ ಅನುಭಾವಿಗಳು, ಚಿಂತಕರಲ್ಲಿ ಒಬ್ಬರಾದ ಡಾ.ವಿಜಯ ಕುಮಾರ ಮಹಾನುಭಾವಿಗಳು ಪ್ರಭುದೇವರ ವಚನ ವ್ಯಾಖ್ಯಾನ "ಗ್ರಂಥವನ್ನು ಪ್ರಥಮ ಆವೃತ್ತಿಯಾಗಿ **೨೦೦೪ರಲ್ಲಿ ಪ್ರಕಟಿಸಿದರು.** ಬೆಂಗಳೂರಿನ ಪ್ರಭು ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ ಪ್ರಕಾಶನಗೊಳಿಸಿದೆ. ೩೨೦ ಪುಟಗಳ ಈ ವ್ಯಾಖ್ಯಾನ ಗ್ರಂಥದಲ್ಲಿ ಅಲ್ಲಮಪ್ರಭುದೇವರ ೨೫೮ ಬೆಡಗಿನ ವಚನಗಳಿಗೆ ವ್ಯಾಖ್ಯಾನ ಮಾಡಿದ್ದಾರೆ. "ಪ್ರಭುದೇವರ ವಚನಗಳಿಗೆ ಚೈತ್ರ ಪತ್ರಿಕೆಯಲ್ಲಿ ಆಗಾಗ ವ್ಯಾಖ್ಯಾನ ಬರೆಯುತ್ತ ಬಂದಿದ್ದೇವೆ. ೨೧೬ ವಚನಗಳಿಗೆ ವ್ಯಾಖ್ಯಾನವನ್ನು ಈಗ ಹದಿನೈದು ವರ್ಷಗಳ ಹಿಂದೆಯೇ ಬರೆದಿದ್ದೆ. ಅದು ಮುಂದುವರಿದು ೧೧೦ ವಚನ ವ್ಯಾಖ್ಯಾನದ ಗ್ರಂಥವೂ ಪ್ರಕಟವಾಯಿತು. ಪ್ರಭುದೇವರ ಎಲ್ಲ ವಚನಗಳಿಗೆ ವ್ಯಾಖ್ಯಾನ ಬರೆಯಬೇಕೆಂದು ಬರೆಯುತ್ತ ಮುಂದುವರಿದಿದ್ದೆ ಈಗ ಪ್ರಭುದೇವರ ವಚನದ ವ್ಯಾಖ್ಯಾನ ಗ್ರಂಥ ಭಾಗ-೧ ಪ್ರಕಟವಾಗುತ್ತಿದೆ."[೫೧] ಎಂದು ಮುನ್ನುಡಿಯಲ್ಲಿ ಹೇಳಿರುವುದರಿಂದ ಈ ವ್ಯಾಖ್ಯಾನ ಗ್ರಂಥದ-೨ನೇ ಭಾಗ ಪ್ರಕಟಿಸುವ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಡಾ. ವಿಜಯಕುಮಾರ ಮಹಾನುಭಾವಿಗಳು ಪದಾರ್ಥ ರೀತಿಯ ಶಬ್ದಾರ್ಥದ ಜೊತೆಗೆ ವಚನವಾಕ್ಯ ಆದರಿಸಿ ಇಲ್ಲವೇ ಒಟ್ಟು ವಚನದ ವ್ಯಾಖ್ಯಾನವನ್ನು ಅನುಸರಿಸಿದ್ದಾರೆ. ಒಂದೇ ರೀತಿಯ

ವಚನಗಳು ಬಂದಾಗ 'ಈ ವಚನ ಅಭಿಪ್ರಾಯ ಆಗಲೆ ಹಿಂದಿನ ವಚನದಲ್ಲಿ ಬಂದಿದೆ' ಎಂದು ಹೇಳುತ್ತಾ ವಚನದ ಆಶಯವನ್ನು ಬರೆಯುತ್ತಾರೆ.

**ವಚನ :** "ಆದ್ಯರಲ್ಲ, ವೇದ್ಯರಲ್ಲ, ಸಾಧ್ಯರಲ್ಲದ ಹಿರಿಯರ ನೋಡಾ
ತನು ವಿಕಾರ ಮನವಿಕಾರ, ಇಂದ್ರಿಯ ವಿಕಾರದ ಹಿರಿಯರ ನೋಡಾ
ಶಿವಚಿಂತೆ, ಶಿವಜ್ಞಾನಿಗಳ ಕಂಡಡೆ ಆಳವಾಡಿ ನುಡಿವರು.
ಗುಹೇಶ್ವರನರಿಯದ ಕರ್ಮಿಗಳಯ್ಯ" (ವಚನ – ೧೨೬)

"ಆದ್ಯರು – ಮಹಾತ್ಮರು, ಪುರಾತನರು. ವೇದ್ಯರು – ತಿಳಿದವರು, ಜ್ಞಾನಿಗಳು. ಸಾಧ್ಯರು – ಸಾಧಿಸಿ ದೊಡ್ಡವರಾದವರು. ಆಳವಾಡಿ – ಅಟ್ಟಾಟಿಕೆ, ಲಘುವಾಗಿ, ಕರ್ಮಿಗಳು – ಶುಷ್ಕ ಆಚಾರ ನಿರತರು.

ತಾವು ಮಹಾತ್ಮರಲ್ಲ. ತಿಳಿದವರೂ ಅಲ್ಲ. ಸಾಧನೆ ಮಾಡಿ ದೊಡ್ಡವರಾದವರೂ ಅಲ್ಲ. ಇವರು ತನು ಮನ ಇಂದ್ರಿಯಗಳ ವಿಕಾರದಲ್ಲಿ ಮಾತ್ರ ದೊಡ್ಡವರು. ಇವರು ಇಂದ್ರಿಯ ಭೋಗದಲ್ಲಿ ಹಿರಿಯರು. ವಿಷಯಮತ್ತರಾದ ಈ ಹಿರಿಯರು ಶಿವಚಿಂತೆಯಲ್ಲಿ ಶಿವಜ್ಞಾನದಲ್ಲಿರುವವರನ್ನು ಕಂಡರೆ ಮಾತ್ರ ಲಘುವಾಗಿ ಮಾತನಾಡುತ್ತಾರೆ. ಇವರು ಗುಹೇಶ್ವರನನ್ನು ತಿಳಿದವರಲ್ಲ. ಆದರೆ ಜ್ಞಾನಿಗಳ ಬಗೆಗೆ ಕೇವಲ ಮಾತನಾಡುವುದು ಬಿಡುವುದಿಲ್ಲ. ಇಂತಹ ಶುಷ್ಕಾಚರಣೆಯ ಧಾರ್ಮಿಕರನ್ನು ತೆಗೆದುಕೊಂಡು ಮಾಡುವುದೇನು?"[೮೨] ಎಂದು ವಚನವನ್ನು ಸರಳವಾಗಿ ಅರ್ಥೈಸಲು ಪ್ರಯತ್ನ ಮಾಡಿದ್ದಾರೆ. ಅಲ್ಲಮ ಪ್ರಭುದೇವರ ಪ್ರಸಿದ್ದ ವಚನವೊಂದರ ವ್ಯಾಖ್ಯಾನವೊಂದನ್ನು ಗಮನಿಸೋಣ.

**ವಚನ :** "ಕೊಟ್ಟ ಕುದುರೆಯನೇರಲರಿಯದೇ
ಮತ್ತೊಂದು ಕುದುರೆಯ ಬಯಸುವವರು
ವೀರರೂ ಅಲ್ಲ, ಧೀರರೂ ಅಲ್ಲ.
ಇದು ಕಾರಣ ನೆರೆ ಮೂರು ಲೋಕವೆಲ್ಲ
ಹಲ್ಲಣವ ಹೊತ್ತುಕೊಂಡು ಬಳಲುತ್ತೈದಾರೆ
ಗುಹೇಶ್ವರನೆಂಬ ಲಿಂಗವನವರೆತ್ತಬಲ್ಲರೋ?"(ವಚನ – ೧೨೪)

"ಕೊಟ್ಟ ಕುದುರೆ – ಪರಮಾತ್ಮ ಕೊಟ್ಟಿರುವ ಈ ದೇಹ. ಮತ್ತೊಂದು ಕುದುರೆ – ಇನ್ನೊಂದು ದೇಹ. ಹಲ್ಲಣ – ತಡಿ, ಕುದುರೆಯ ಜೀನು.

ಈ ದೇಹ ಪರಮಾತ್ಮ ಕೊಟ್ಟಿರುವ ಕುದುರೆ. ಇದನ್ನು ನಾವು ಸವಾರಿ ಮಾಡಬೇಕು. ಈ ಕುದುರೆ ಸರಿ ಇಲ್ಲ ಇನ್ನೊಂದು ಕುದುರೆ ಕೊಟ್ಟರೆ ಅದನ್ನು ಸವಾರಿ ಮಾಡುತ್ತೇನೆ ಎನ್ನುವುದು ವೀರನ ಲಕ್ಷಣವಲ್ಲ. ಯಾರು ವೀರರು? ಯಾರು ಧೀರರು? ಪರಮಾತ್ಮನು ಕೊಟ್ಟಿರುವ ಈ ಕುದುರೆಯನ್ನು ಸರಿಯಾಗಿ ಸವಾರಿ ಮಾಡಿ ತೋರಿಸಬೇಕು. ಆದರೆ ಸಂಗತಿ ಏನಾಗಿದೆ? ಮೂರು ಲೋಕವೆಲ್ಲ

ಹೇಳುತ್ತಿದೆ. ಕೈಯಲ್ಲಿ ಒಂದು ತಡಿ ಹಿಡಿದುಕೊಂಡು ನಾನು ಹಿಡಿದಿಡಿರುವ ತಡಿಗೆ ಹೊಂದುವ ಕುದುರೆ ಕೊಡಿ ಸವಾರಿ ಮಾಡುತ್ತೇನೆ ಎಂದು ಹೇಳುತ್ತಿದೆ. ಇವರು ಪರಮಾತ್ಮನನ್ನು ನಿಜವಾಗಿ ತಿಳಿದವರಲ್ಲ. ಅನುಭಾವಿಗಳಾದವರು ಈ ಜನ್ಮದಲ್ಲಿಯೇ ಇದೆ ಶರೀರವಿಡಿದೆ ಪರಮಾತ್ಮನನ್ನು ಸಾಧಿಸಿಕೊಳ್ಳುತ್ತಾರೆ. ಈ ಶರೀರದ ಬಗೆಗೆ ತಕರಾರು ತೆಗೆಯುವುದಿಲ್ಲ. ಇದೆ ಜನ್ಮದಲ್ಲಿಯೇ ಪರಮಾತ್ಮನನ್ನು ಸಾಧಿಸಿಕೊಳ್ಳುತ್ತಾರೆ"[೪೩] ಎಂದು ವಚನಕ್ಕೆ ಸರಳವಾಗಿ ವ್ಯಾಖ್ಯಾನ ಮಾಡಿದ್ದಾರೆ. ಅಲ್ಲದೇ, ಗಗನದ ಮೇಲೊಂದು ಅಭಿನವ ಗಿಳಿ ಹುಟ್ಟಿ ಸಯ ಸಂಭ್ರಮದಲ್ಲಿ ಮನೆಯ ಮಾಡಿತ್ತು..... (ವ – ೧೫) ಎಂಬ ಬೆಡಗಿನ ವಚನದ ವ್ಯಾಖ್ಯಾನವನ್ನು ಬರೆಯುವ ಮೊದಲು ಈ ವಚನದ ಬೆಡಗಿನ ಧ್ವನಿಯ ಪ್ರಭಾವ ಕುರಿತು ಹೇಳುತ್ತಾ "ವಾಲ್ಟ್ ವಿಟ್‌ಮನ್‌ನ ಲೀವ್ಸ್ ಆಫ್ ಗ್ರಾಸ್ ಎನ್ನುವ ಕವಿತಾ ಸಂಕಲನವು, ಟಿ.ಎಸ್. ಎಲಿಯಟ್‌ನ ಪದ್ಯಗಳು, ನಮ್ಮ ಕನ್ನಡದಲ್ಲಿ ಬೇಂದ್ರೆ ಮತ್ತು ಅಡಿಗರ ಪದ್ಯಗಳು ನೆನಪಾಗುತ್ತವೆ. ಅಡಿಗರು, ಬೇಂದ್ರೆಯವರು ಅಲ್ಲಮನ ವಚನಗಳಿಂದ ಅಪಾರವಾಗಿ ಪ್ರಭಾವಿತರಾಗಿದ್ದಾರೆ. ಕನ್ನಡದ ಆಧುನಿಕ ನವ್ಯ ಕಾವ್ಯಗಳು ಪ್ರಭುದೇವರ ಬೆಡಗಿನ ವಚನಗಳಿಂದ ಅನೇಕ ಅಂಶಗಳನ್ನು ತೆಗೆದುಕೊಂಡಿದೆ"[೪೪] ಎಂದು ಆಧುನಿಕ ಕವಿ–ಕಾವ್ಯ ವಿಮರ್ಶೆಯ ಮಾದರಿಯಲ್ಲಿ ವಿಶ್ಲೇಷಿಸುತ್ತಾರೆ. ಅಂದರೆ, ವಚನ ವ್ಯಾಖ್ಯಾನಕ್ಕೆ ಸೀಮಿತರಾಗದೇ ಅದರ ಅಂತರಂಗ ಬಹಿರಂಗದ ಬಹುಮುಖ ಆಯಾಮಗಳನ್ನು ಆಧುನಿಕ ಸನ್ನಿವೇಶಕ್ಕೆ ತಕ್ಕಂತೆ ಹೇಳುವದರಿಂದ ಇದನ್ನು 'ವಚನ ವಿಮರ್ಶೆ' ಎಂದು ಕರೆಯಬಹುದಾಗಿದೆ. ಈ ರೀತಿಯ ವಿಮರ್ಶೆ ಮಾದರಿಯಿಂದ ವಚನದ ಉದ್ದೇಶ ಮತ್ತು ಪರಿಣಾಮದ ಕುರಿತು ಒಬ್ಬೊಬ್ಬರು ಒಂದು ರೀತಿ ವಿಶ್ಲೇಷಣೆ ಮಾಡುವಂತಾಗಿ ಅಂತಿಮ ನಿರ್ಣಯ ಅಸಾಧ್ಯವಾಗುತ್ತದೆ. "ಈ ವಚನಕ್ಕೆ ಇದೇ ವ್ಯಾಖ್ಯಾನ ಎಂದು ವ್ಯಾಖ್ಯಾನಿಸಿದರೂ ಮತ್ತೊಬ್ಬ ದಾರ್ಶನಿಕ ಬಂದು ಇನ್ನೂ ಬೇರೆಯಾದ ವ್ಯಾಖ್ಯಾನ ಕೊಡಬಲ್ಲ. ಇದು ಪ್ರಭುದೇವರ ವಚನಗಳು, ಬೆಡಗಿನ ವಚನಗಳ ಗುಣ. ಪ್ರಭುದೇವರ ವಚನಗಳ ಮೇಲೆ ಅನೇಕ ವ್ಯಾಖ್ಯಾನಗಳು, ಟೀಕುಗಳು, ಭಾಷ್ಯಗಳು ಬಂದಿವೆ. ಆದರೂ ಇವೆಲ್ಲವೂ ಅಸಮಗ್ರವೇ"[೪೫] ಎನ್ನುವ ಡಾ. ವಿಜಯಕುಮಾರ ಮಹಾನುಭಾವಿಗಳ ಅಭಿಪ್ರಾಯ ವಿದ್ವಾಂಸರನ್ನು ಚಿಂತನೆಗೆ ಹಚ್ಚುತ್ತದೆ.

ಡಾ. ವಿಜಯಕುಮಾರ ಮಹಾನುಭಾವಿಗಳು ಜೋಗಫಾಲ್ಸ್‌ನ ಗುರು ಪ್ರಭುದೇವ ಧರ್ಮಪೀಠದ ಪ್ರಭುದೇವ ಗ್ರಂಥ ಮಾಲೆಯಲ್ಲಿ **'ದಾಸಿಮಯ್ಯನವರ ವಚನಗಳ ವ್ಯಾಖ್ಯಾನ'** ಗ್ರಂಥವನ್ನು **೨೦೦೮**ರಲ್ಲಿ ಪ್ರಕಟಿಸಿದ್ದಾರೆ. ೯೦ ಪುಟಗಳ ಈ ಗ್ರಂಥದಲ್ಲಿ ದಾಸಿಮಯ್ಯನವರ ೧೩೩ ವಚನಗಳಿಗೆ ಮಾತ್ರ ವ್ಯಾಖ್ಯಾನ ಮಾಡಿದ್ದಾರೆ. **ಈ ಬಗ್ಗೆ ಗ್ರಂಥದ ಮುನ್ನುಡಿಯ ಕೊನೆಯಲ್ಲಿ** "ಒಬ್ಬ ಗುರುಗಳಾಗಿ ಮಹಾತ್ಮರ ವಚನಗಳಿಗೆ ಗೌರವ ಹೆಚ್ಚಿಸುವಂತೆ ನಮ್ಮ ವ್ಯಾಖ್ಯಾನ ಇರಬೇಕು ಎಂಬುದರ ಕಡೆಗೆ ನಮ್ಮ ಲಕ್ಷ್ಯ ಇದೆ. ನಮ್ಮ ಧರ್ಮದ ಹಿರಿಯರು ಇವರು. ಬಸವಣ್ಣನವರು, ಅಕ್ಕಮಹಾದೇವಿ, ಪ್ರಭುದೇವರು ಮುಂತಾದ ಮಹಾತ್ಮರ ಬದುಕು, ಜೀವನ, ವಚನಗಳ ಮೇಲೆ ದಾಸಿಮಯ್ಯನವರ ಪ್ರಭಾವ ಇದೆ. ನಮ್ಮ ಧರ್ಮದ ಗೌರವಾರ್ಹ ಗುರುಗಳಾದ ದಾಸಿಮಯ್ಯನವರ ವಚನ ಮತ್ತು ಅನುಭಾವವನ್ನು

ಹೆಚ್ಚಿಗೆ ಮುಟ್ಟಿಸಬೇಕೆಂಬ ಹಂಬಲ ನಮ್ಮದು. ಈ ಸಂಕಲನದಲ್ಲಿ ದಾಸಿಮಯ್ಯನವರು ತಮ್ಮ ಕಾಯಕ ಸಂಬಂಧಿಯಾಗಿ ಬರೆದಿರುವ ಒಂದು ವಚನಕ್ಕೆ ವ್ಯಾಖ್ಯಾನ ಮಾಡಲಾಗಿಲ್ಲ. ನಮಗೆ ಪೂರ್ಣ ತಿಳಿಯದ ಕಾರಣ ಹಾಗೆ ಬಿಟ್ಟಿದ್ದೇವೆ. ಈ ವಚನಕ್ಕೆ ಎಲ್ ಬಸವರಾಜು ಕೊಟ್ಟಿರುವ ಬೆಡಗಿನ ವಚನ ವ್ಯಾಖ್ಯಾನ ನಮಗೆ ಸೂಕ್ತ ಕಾಣದಿರುವುದರಿಂದ ಅದನ್ನು ಇಲ್ಲಿ ಸ್ವೀಕರಿಸಿಲ್ಲ ಎಂದು ಡಾ. ವಿಜಯಕುಮಾರ ಮಹಾನುಭಾವಿಗಳು ನಿಖರವಾಗಿ ಹೇಳುವುದರಿಂದ ವಚನ ವ್ಯಾಖ್ಯಾನಕಾರರ ವಿದ್ವತ್‌ಪ್ರತಿಭೆಯ ಮೂಲಕ ನೈಜವಾದ ಅರ್ಥವನ್ನು ಅರಿಯಲು ಸಾಧ್ಯವಾಗಿಲ್ಲವೆಂಬ ಸತ್ಯವು ತಿಳಿಯುತ್ತದೆ.

ಶ್ರೀಗಳು ಪ್ರವಚನಕಾರರಾಗಿ ನಾಡಿನ ಹಲವೆಡೆ ಧರ್ಮತತ್ವಗಳ ಪ್ರಸಾರ ಸೇವೆ ಮಾಡುವಾಗ ಶಿವಶರಣರ ವಚನಗಳನ್ನೇ ಆದರಿಸಿ ವಿಶ್ಲೇಷಣೆ ಮಾಡಿದ್ದಾರೆ. ಹೀಗಾಗಿ, ಶರಣರ ವಚನಗಳನ್ನು ತಾತ್ವಿಕವಾಗಿ ಅರ್ಥೈಸುವುದರ ಜೊತೆಗೆ ಇತರೆ ಶಿವಶರಣರ, ದಾರ್ಶನಿಕರ ವಚನ ಇಲ್ಲವೇ ತತ್ವಗಳಿಗೆ ಹೋಲಿಕೆ ಮಾಡಿರುವುದು ಇಲ್ಲಿನ ವ್ಯಾಖ್ಯಾನಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

ಶ್ರೀ ಸಿದ್ಧರಾಮೇಶ್ವರ ಶರಣರು ಬೆಲ್ದಾಳ ಅವರು **"ಚೆನ್ನಬಸವಣ್ಣನವರ ವಚನ ವ್ಯಾಖ್ಯಾನ"** ಕೃತಿ ರಚನೆ ಮಾಡಿದ್ದು ಮೈಸೂರು ಜೆಎಸ್‌ಎಸ್ ಗ್ರಂಥ ಮಾಲೆಯು ೨೦೦೫ರಲ್ಲಿ ಪ್ರಕಟಿಸಿದೆ. **ಕೃತಿಯ ಸಂಪಾದಕರು ಜಿ.ಎಸ್. ಕಾಪಸೆ** ಅವರು. ಇಲ್ಲಿ ಚೆನ್ನಬಸವಣ್ಣನವರ **೩.೨೦** ವಚನಗಳಿಗೆ ವ್ಯಾಖ್ಯಾನ ಮಾಡಿದ್ದು ಎಲ್ಲ ವಚನಗಳಿಗೂ ಭಾವ, ಭಾಷ್ಯ ಸ್ವರೂಪದಲ್ಲಿ ಅರ್ಥೈಸಲಾಗಿದೆ. ಇನ್ನೊಂದು ವಿಶೇಷತೆ ಎಂದರೆ, ಪ್ರಾಚೀನ ವ್ಯಾಖ್ಯಾನಕೃತಿಗಳಲ್ಲಿ ಚೆನ್ನಬಸವಣ್ಣನವರ ಎಲ್ಲ ವಚನಗಳನ್ನು ಟೀಕು, ವ್ಯಾಖ್ಯಾನ ಮಾಡಿರದೇ ಬಿಡಿಬಿಡಿ ವಚನಗಳಿಗೆ ಮಾತ್ರ ವ್ಯಾಖ್ಯಾನ ಬರೆಯಲಾಗಿದೆ. ಆದರೆ, ಈ ಗ್ರಂಥ ಚನ್ನಬಸವಣ್ಣನವರ ಸಮಗ್ರ ವಚನಗಳನ್ನು ವ್ಯಾಖ್ಯಾನಕ್ಕೆ ಒಳಪಡಿಸಿದ ಮೊದಲ ಕೃತಿ ಎನ್ನಬಹುದು. ಇದರ ಶ್ರೇಯಸ್ಸು ಶ್ರೀ ಬೆಲ್ದಾಳ ಶರಣರಿಗೆ ಸಲ್ಲುತ್ತದೆ. ಇವರು ವಚನದ ಒಟ್ಟು ಅರ್ಥವನ್ನು 'ಭಾವ'ದಲ್ಲಿ ಸರಳವಾಗಿ ವಿವರಿಸುತ್ತಾರೆ. ನಂತರ ಅದೇ ವಚನದ ಒಂದೊಂದು ಸಾಲು ಇಲ್ಲವೇ ವಾಕ್ಯಗಳಾಗಿ ವಿಭಜಿಸಿ ಅವಕ್ಕೆ 'ಭಾಷ್ಯ'ವೆಂದು ಹೆಸರಿಸಿ ಬಿಡಿಬಿಡಿಯಾಗಿ ಅರ್ಥಕೊಡುತ್ತಾರೆ. ಉದಾಹರಣೆಗೆ:

**ವಚನ :** "ಶೀಲ ಶೀಲವೆಂದು ಗರ್ವಿಸಿ ನುಡಿಯುತ್ತಿಪ್ಪಿರಿ ಶೀಲವಾವುದೆಂದಜೆಯಿರಿ.
ಇದ್ದುದಕ್ಕೆ ವಂಚನೆಯ ಮಾಡದಿಪುದೆ ಶೀಲ;
ಇಲ್ಲದುದಕ್ಕೆ ಕಡನ ಬೇಡದಿಪುದೆ ಶೀಲ;
ಪರಧನ ಪರಸತಿಗಳು ಪದಿಪ್ಪುದೆ ಶೀಲ;
ಪರದೈವಪರಸಮಯಕ್ಕೆ ಎಳಸದಿಪ್ಪುದೆ ಶೀಲ;
ಗುರುನಿಂದೆ ಶಿವನಿಂದೆ ಜಂಗಮನಿಂದೆಯ ಕೇಳದಿಪ್ಪುದೆ ಶೀಲ;
ಕೂಡಲಚನ್ನಸಂಗಯ್ಯನ ಶರಣರ ಬರಿವಿಂಗೆ ಮುಯ್ಯಾಂತು
ಪರಿಣಾಮಿಸಬಲ್ಲುದೇ ಅಚ್ಚಶೀಲ." (ಆಚಾರಲಿಂಗಸ್ಥಲ-೧೦೮)

**ಭಾವ** : ಬಾಹ್ಯಾಡಂಬರದಲ್ಲಿ ಮಡಿ, ಹುಡಿ, ಮುಟ್ಟು, ತಟ್ಟು, ಮೀಸಲು, ಮೈಲಿಗೆ ಮುಂತಾದ ಮೂಢನಂಬಿಕೆಗಳೇ ಶೀಲವೆಂದು ಅನೇಕ ಸಂಪ್ರದಾಯನಿಷ್ಠರು ನಂಬಿದ್ದಾರೆ. ಆದರೆ, ಶೀಲವೆಂಬ ರಹಸ್ಯ ಭಿನ್ನವಾಗಿದೆ. ಅದು ಈ ರೀತಿಯಾಗಿದೆ.

ತನ್ನಲಿದ್ದುದನ್ನು ಅನ್ಯರು ಬೇಡಿದಾಗ ಇಲ್ಲವೆಂದು ವಂಚನೆ ಮಾಡದಿದ್ದರೆ ಅದು ನಿಜವಾದ ಶೀಲ. ತನ್ನಲ್ಲಿಲ್ಲದ ವಸ್ತುವ ಅನ್ಯರಿಂದ ಕಡವಾಗಿಯೂ ಬೇಡದೆ ಮನ ಸಂತೃಪ್ತನಾಗಿ ಸಹಜವಾಗಿರುವುದೇ ನಿಜವಾದ ಶೀಲ. ಪರಧನ, ಪರಸತಿಯರಿಗೆ ಆಸೆಪಡದೆ ತನ್ನ ಧನ ತನ್ನ ಸತಿಯಲ್ಲಿ ಸಂತೃಪ್ತನಾಗಿರುವುದೇ ನಿಜವಾದ ಶೀಲ. ತನ್ನಿಷ್ಟಲಿಂಗದಲ್ಲಿ ನಿಷ್ಠನಾಗಿ ಅನ್ಯ ಭಿನ್ನ ದೈವ ಭಕ್ತಿಗೆರಗದೆ ಅನ್ಯ ಅರ್ಥವಿಲ್ಲದ ಜಡ ಸಂಪ್ರದಾಯಗಳಿಗೆಳಸದಿರುವುದೇ ನಿಜವಾದ ಶೀಲ. ಗುರುನಿಂದೆ, ಶಿವನಿಂದೆ ಮತ್ತು ಶರಣರೂಪಿ ಜಂಗಮನಿಂದೆ ಆಸಕ್ತಿಯಿಂದ ಕೇಳದಿರುವುದೇ ನಿಜವಾದ ಶೀಲ. ಸತ್ಯ ಶರಣರ ಬರುವಿಕೆಗೆ ಮನದುಂಬಿ ಸ್ವಾಗತಕ್ಕಾಗಿ ನಿಂತು ಬರಮಾಡಿಕೊಳ್ಳುವುದೇ ನಿಜವಾದ ಪರಿಶುದ್ಧವಾದ ಶೀಲವೆನಿಸುವುದು.

ಭಾಷ್ಯ – ಕಾಣಬಂದಿದೆ."[೪೬] ಹೀಗೆ, ಬೆಲ್ದಾಳ ಶರಣರು ವಚನ ವ್ಯಾಖ್ಯಾನ ಮಾಡುವಾಗ ಭಾವ, ಭಾಷ್ಯ ಎಂದು ಎರಡು ರೀತಿಯಲ್ಲಿ ಮಾಡಿದ್ದಾರೆ. ಇನ್ನು ಕೆಲವೊಮ್ಮೆ ಕೇವಲ ವಚನದ 'ಭಾವ' ವಿವರಣೆಯ ನಂತರ 'ಭಾಷ್ಯ'ವನ್ನು ಬರೆಯದೇ 'ಕಾಣಬಂದಿದೆ' ಎಂದು ಹೇಳಿ ವ್ಯಾಖ್ಯಾನ ಪೂರ್ಣಗೊಳಿಸುತ್ತಾರೆ. ಇಲ್ಲಿ ಪ್ರಾಚೀನ ವ್ಯಾಖ್ಯಾನಕಾರರು ಬಳಸಿದ ಕಾಣಬಂದರ್ಥ ಮಾದರಿಯನ್ನು ಅನುಸರಿಸಿದಂತಿದೆ. ಮತ್ತೊಂದು ಮಾದರಿಯೆಂದರೆ ವಚನ ಪ್ರಕಟಿಸಿ ಅದು ಸರಳವಾಗಿ ಅರ್ಥವಾಗುವಂತಿದ್ದರೆ ಬಾವ ಭಾಷ್ಯ ಯಾವುದೇ ವಿವರಣೆ ನೀಡದೇ 'ಕಾಣಬಂದರ್ಥ' ಎಂದು ಹೇಳಿ ಮುಂದೆ ಹೋಗಿದ್ದಾರೆ.

ಉದಾಹರಣೆಗೆ : ಅಂಗವೇ ಲಿಂಗ, ಲಿಂಗವೇ ಅಂಗವೆಂದಜಿದ ಬಳಿಕ

ಅಲ್ಲಿಯೇ ಕಾಣಿರೋ, ಕೂಡಲಚೆನ್ನ ಸಂಗಯ್ಯ ನಿರಂತರ ಅಲ್ಲಿಯೇ ಕಾಣಿರೋ"[೪೭] (ಮಹಾಲಿಂಗಸ್ಥಲ ವ–೨೩೦).

ಇನ್ನು ಜಂಗಮಸ್ಥಲದ ೩೦೮ನೇ ವಚನ "ಅನ್ಯಲಿಂಗ ಅನ್ಯಲಿಂಗವೆಂದೆಂಬಿರಿ; ಅನ್ಯಲಿಂಗವಾವುದು, ತನ್ನ ಲಿಂಗವಾವುದು?"[೪೮] ಎಂಬುದಕ್ಕೆ 'ಭಾವ' 'ಭಾಷ್ಯ' ಎನನ್ನೂ ವಿವರಿಸದ ವ್ಯಾಖ್ಯಾನಕಾರರು "ವ್ಯಾಖ್ಯಾನಿಸಿಲ್ಲ" ಎಂದು ಹೇಳಿದ್ದಾರೆ. ಹೀಗೆ, ವಚನ ವ್ಯಾಖ್ಯಾನ ಮಾಡದೇ ಇರುವುದರ ಕಾರಣವು ತಿಳಿಯುವುದಿಲ್ಲ. ವಚನ ಸರಳವಾಗಿದ್ದರೆ 'ಕಾಣಬಂದರ್ಥ'ವೆಂದು ಹೇಳಿರುವುದರಿಂದ ಕಠಿಣವಾದ ಬೆಡಗಿನ ವಚನವೆಂದೋ ಅಥವಾ ಮೂಲ ವಚನದ ಪಾಠವು ದೋಷದಿಂದ ಕೂಡಿದೆಯೆಂದೋ "ವ್ಯಾಖ್ಯಾನಿಸಿಲ್ಲ"ವೆಂದು ಹೇಳಲು ಕಾರಣವಾಗಿರಬಹುದು.

ಅನುಭಾವಿ **ಡಾ. ಸಂಗಮೇಶ ಬಿರಾದಾರ** ಅವರು **"ಶರಣರ ಆಯ್ದ ವಚನಗಳ ವ್ಯಾಖ್ಯಾನ"** ಗ್ರಂಥದಲ್ಲಿ ೬ ಜನ ವಚನಕಾರರ ೨೩೪ ವಚನಗಳಿಗೆ ವ್ಯಾಖ್ಯಾನ ಮಾಡಿದ್ದಾರೆ. ಮೈಸೂರು ಜೆ.ಎಸ್.ಎಸ್‌ನ ವಚನ ವ್ಯಾಖ್ಯಾನ ಮಾಲೆ ಸಂಪುಟ (೮) ಇದಾಗಿದ್ದು **೨೦೦೯ರಲ್ಲಿ ಪ್ರಕಟವಾಗಿದೆ.**

ಇದರಲ್ಲಿ ಚಂದಿಮರಸನ (೯೫), ಜಗಳಗಂಟ ಕಾಮಣ್ಣ (೧), ಜೇಡರ ದಾಸಿಮಯ್ಯ (೯೨) ಜೋದರ ಮಾಯಣ್ಣ (೪), ಡಕ್ಕೆಯ ಬೊಮ್ಮಣ್ಣ (೩೭), ಡೋಹರ ಕಕ್ಕಯ್ಯ (೫) ನವರ ಒಟ್ಟು ೨೩೪ ವಚನಗಳಿಗೆ ಸರಳವಾಗಿ, ಭಾವಾರ್ಥ ಸ್ವರೂಪದಲ್ಲಿ ಡಾ. ಸಂಗಮೇಶ ಬಿರಾದಾರ ವ್ಯಾಖ್ಯಾನ ಮಾಡಿದ್ದಾರೆ. ಪ್ರಸ್ತಾವನೆಯಲ್ಲಿ ಹೇಳುವಂತೆ "ಪ್ರತಿ ವಚನಕ್ಕೆ ಸರಳಾನುವಾದ, ಭಾವಾರ್ಥ ಮತ್ತು ವ್ಯಾಖ್ಯಾನ ಇರಬೇಕೆಂಬುದು ಈ ಮಾಲೆಯ ಆಶಯ. ಆದರೆ ಎಲ್ಲ ವಚನಗಳಿಗೂ ಈ ವಿಧಾನವನ್ನು ಅಳವಡಿಸಿಕೊಳ್ಳಲು ಸಾಧ್ಯವಾಗದು. ಅಲ್ಲಲ್ಲಿ ಈ ವಿಧಾನವನ್ನು ಸ್ವಲ್ಪ ಮಟ್ಟಿಗೆ ಏರು ಪೇರು ಮಾಡಿಕೊಳ್ಳಬೇಕಾಗುತ್ತದೆ. ಕೆಲವೊಮ್ಮೆ ಅದು ಅನಿವಾರ್ಯವೂ ಆಗುತ್ತದೆ."[೪೯] ಎಂದು ಸ್ಪಷ್ಟಪಡಿಸಿರುವುದು ಆಧುನಿಕ ವಚನ ವ್ಯಾಖ್ಯಾನದ ಬದಲಾದ ಸ್ವರೂಪಕ್ಕೆ ನಿದರ್ಶನದಂತಿದೆ.

ಜೇಡರ ದಾಸಿಮಯ್ಯನವರ ವಚನವೊಂದಕ್ಕೆ ಸರಳಾನುವಾದ, ಭಾವ ಮಾತ್ರ ಬರೆದಿದ್ದಕ್ಕೆ ಒಂದು ಉದಾಹರಣೆಗೆ

**ವಚನ :** ಕೀಳು ಡೋಹರ ಕಕ್ಕ; ಕೀಳು ಮಾದರ ಚೆನ್ನ
ಕೀಳು ಓಹಿಲದೇವ; ಕೀಳು ಉದ್ಭಟಯ್ಯ
ಕೀಳಿಂಗಲ್ಲದೆ ಹಯನು ಕರೆಯದು ಕಾಣಾ ರಾಮನಾಥ!

**ಸರಳಾನುವಾದ :** ಹುಟ್ಟಿನಿಂದ ಡೋಹರ ಕಕ್ಕಯ್ಯ, ಮಾದರ ಚನ್ನಯ್ಯ, ಓಹಿಲದೇವ ಮತ್ತು ಉದ್ಭಟಯ್ಯರು ಕೀಳುಕುಲದವರು. ಈ ಕೀಳ್ಮೆಯಲ್ಲಿಯೆ ಹಿರಿಮೆಯಿದೆ. ಆಕಳ ಕಾಲಲ್ಲಿ ಕುಳಿತಾಗಲೇ ಅಲ್ಲವೆ ಆಕಳು ಹಾಲು ಕರೆಯುವುದು? ಅದನ್ನು ಕೀಳೆಂದೆನಲಾಗದು. ಹಾಗೆಯೆ, ಶರಣರನ್ನೂ ಕೀಳೆನ್ನಲಾಗದು.

**ಭಾವ :** ಮೇಲು – ಕೀಳು, ಶ್ರೇಷ್ಠ ಕನಿಷ್ಠ, ಸ್ಪೃಶ್ಯ ಅಸ್ಪೃಶ್ಯ ಈ ದ್ವಂದ್ವ ಬಂದುದು ಹುಟ್ಟಿನಿಂದಲ್ಲ. ಹುಟ್ಟಿದಾಗ ಎಲ್ಲರೂ ಒಂದೆ. ಸತ್ತ ಮೇಲೂ ಅಷ್ಟೆ. ಮಧ್ಯಂತರದಲ್ಲಿಯೆ ಕಾಣುವುದು ಈ ಭೇದ. ಇದು ಮನುಷ್ಯ ನಿರ್ಮಿತಿ. ಮೇಲಿದ್ದವರು ಹೆಚ್ಚಿನವರಲ್ಲ, ಕೆಳಗಿದ್ದವರು ಕಡಿಮೆಯವರಲ್ಲ.

ಹುಟ್ಟಿನಿಂದ ಕಕ್ಕಯ್ಯ ಡೋಹರವ, ಚನ್ನಯ್ಯ ಮಾದರವ, ಮನುಷ್ಯರು ಮಾಡಿಕೊಂಡಂತೆ ಇವು ಕೀಳು ಜಾತಿಗಳು. ಹಾಗೆಯೆ ಓಹಿಲಯ್ಯ, ಉದ್ಭಟಯ್ಯರೂ ಕೀಳು ಜಾತಿಯವರೆ. ಆದರೂ ಅವರು ಶಿವಭಕ್ತರಾದುದರಿಂದ ಬಸವಾದಿ ಶಿವಶರಣರಿಗೆ ಪೂಜನೀಯರಾದರು. ದೇವನ ಒಲುಮೆಗೆ ಪಾತ್ರರಾದರು. ಹುಟ್ಟೇ ಅವರ ಹಿರಿಮೆ ಗರಿಮೆಗಳನ್ನು ನಿರ್ಣಯಿಸುತ್ತಿದ್ದರೆ ಅವರು ಈ ಸ್ಥಿತಿಯನ್ನು ಮುಟ್ಟುವುದು ಸಾಧ್ಯವಿತ್ತೆ? ಇಲ್ಲ. ಇದಕ್ಕೆ ನಿದರ್ಶನ ಆಕಳ ಹಾಲ ಕರೆವುದು.

ಎಮ್ಮೆ, ಆಕಳುಗಳು ಮನುಷ್ಯನಿಗಿಂತ ಕೀಳ್ಮಟ್ಟದವು. ಆದರೂ ಅವುಗಳಿಂದ ಹಾಲನ್ನು ಬಯಸುತ್ತಾನೆ, ಪಡೆಯುತ್ತಾನೆ. ಹೀಗೆ ಹಾಲನ್ನು ಕರೆಯುವಾಗ ಮನುಷ್ಯ ಕೀಳಾಗಲೇಬೇಕಾಗುತ್ತದೆ. ಅವುಗಳ ಕಾಲಲ್ಲಿಯೇ ಕುಳಿತು ಹಿಂಡಬೇಕಾಗುತ್ತದೆ. ಕೆಳಗೆ ಕುಳಿತು ಹಿಂಡಿದರೆ ಕೀಳಾಗುವೆವೆಂದು ಯಾರಾದರೂ ಬೆನ್ನಮೇಲೆ ಕುಳಿತು ಹಿಂಡುವುದುಂಟೆ? ಇಲ್ಲ. ಕೆಳಗೆ ಕುಳಿತುಕೊಳ್ಳುವಲ್ಲಿಯೆ ಔಚಿತ್ಯವಿದೆ, ಫಲಪ್ರಾಪ್ತಿಯಿದೆ."[೫೦] ಹೀಗೆ ಒಂದು ವಚನ ಸರಳಾನುವಾದ, ಭಾವ ಮಾದರಿಯಲ್ಲಿ ಸರಳವಾಗಿ ಅರ್ಥೈಸಲು ಪ್ರಯತ್ನಿಸುತ್ತಾರೆ.

ಅರ್ಥ ಇನ್ನೂ ವಿಶಿಷ್ಟವಾಗಿದ್ದರೆ, ಅರ್ಥವಿವರಣೆಯ ಅಗತ್ಯವಿದ್ದರೆ ಅಲ್ಲಿ ವಚನ ವಾಕ್ಯೆಯನ್ನು ಇಟ್ಟುಕೊಂಡು ವ್ಯಾಖ್ಯಾನ ಮಾಡುವ ಮೂಲಕ ಓದುಗರ ಸಮಸ್ಯೆ ಪರಿಹರಿಸಲು ವ್ಯಾಖ್ಯಾನಕಾರರು ಪ್ರಯತ್ನಿಸಿದ್ದಾರೆ. ಇನ್ನು ಕೆಲವು ಕಡೆ ವಚನದ ಭಾವಾರ್ಥ ಬರೆಯದೇ ಮೊದಲು ಸರಳಾನುವಾದ, ನಂತರ ನೇರವಾಗಿ 'ವ್ಯಾಖ್ಯಾನ'ವನ್ನು ಬರೆದು ವಚನಗಳ ಅರ್ಥ ಓದುಗರಿಗೆ ಸುಲಭ ಗ್ರಾಹ್ಯವಾಗುವಂತೆ ತಮ್ಮ ಒಟ್ಟು ಅನುಭಾವವನ್ನು ಇಲ್ಲಿ ಸಂಕ್ಷೇಪದಲ್ಲಿ ಧಾರೆಯೆರೆದಿದ್ದಾರೆ.

ಪ್ರೊ. **ವಿರೇಂದ್ರ ಸಿಂಪಿಯವರು** "ಶರಣರ ಆಯ್ದ ವಚನಗಳ ವ್ಯಾಖ್ಯಾನ' ಸಂಪುಟ ೧೧ ವಚನ ವ್ಯಾಖ್ಯಾನ ಮಾಲೆ ಅಡಿಯಲ್ಲಿ **೨೦೦೯**ರಲ್ಲಿ ಪ್ರಕಟವಾಗಿದೆ. **೨೭೭ ಪುಟಗಳ ಈ ಗ್ರಂಥದಲ್ಲಿ ೨೪** ಶಿವಶರಣರ **ಒಟ್ಟು ೪೮೧ ವಚನಗಳಿಗೆ ವ್ಯಾಖ್ಯಾನ ಬರೆದಿದ್ದಾರೆ**. ಪ್ರಸ್ತಾವನೆಯಲ್ಲಿ "ಈ ವಚನಗಳ ತೀರ ಆಳವಾದ ವ್ಯಾಖ್ಯಾನ ನನ್ನಿಂದ ಸಾಧ್ಯವಾಗಿಲ್ಲ. ಆದರೆ ನನ್ನ ತಿಳಿವಳಿಕೆಗೆ ಸಾಧ್ಯವಿದ್ದಷ್ಟು ವಚನಗಳ ಅರ್ಥಮಾಡಲು ಮಾತ್ರ ನನಗೆ ಸಾಧ್ಯವಾಗಿದೆಯೆಂಬುದನ್ನು ಇಲ್ಲಿ ಸ್ಪಷ್ಟಪಡಿಸಲು ಇಚ್ಛಿಸುತ್ತೇನೆ"[೫೧] ಎಂದು ಹೇಳುವ ಮೂಲಕ ವ್ಯಾಖ್ಯಾನದ ಇತಿಮಿತಿಗಳ ಕುರಿತು ತುಂಬಾ ನಿಷ್ಠುರವಾಗಿ ಹೇಳಿಕೊಂಡಿದ್ದಾರೆ. ವಚನವು ಸರಳವಾಗಿರಲಿ, ಬೆಡಗಿನಿಂದ ಕೂಡಿರಲಿ ಒಂದೇ ತೆರನಾದ ತಾತ್ಪರ್ಯವನ್ನು ಪ್ರೊ. ಸಿಂಪಿಯವರು ಬರೆದಿದ್ದಾರೆ. ಇವರ ವಚನಗಳ ವ್ಯಾಖ್ಯಾನ ಸ್ವರೂಪ ಶಬ್ದಾರ್ಥ – ವಾಕ್ಯಾರ್ಥ ರೂಪದಲ್ಲಿರದೇ ಇಡೀ ವಚನದ ಸಾರಾರ್ಥವನ್ನು ಬರೆದಿದ್ದಾರೆ. ತನ್ಮೂಲಕ ಸಾಮಾನ್ಯ ಓದುಗನಿಗೂ ವಚನಗಳು ಅರ್ಥವಾಗುವಂತಿವೆ ಎನ್ನಬಹುದು.

ಶಿವಲಿಂಗಶಾಸ್ತ್ರಿ ಹಿರೇಮಠರು ಬೆಡಗಿನ ೧೦೧ ವಚನಗಳ ಪ್ರವಚನ (ಭಾಗ–೧)ನ್ನು ಗುಡೂರಿನ ಶ್ರೀ ರಾಜಗುರು ಪ್ರಭುರಾಜೇಂದ್ರ ಗ್ರಂಥಮಾಲೆ ಮೂಲಕ **೨೦೦೧ರಲ್ಲಿ ಪ್ರಕಟಿಸಿದ್ದಾರೆ**. ೧೦೭ ಪುಟಗಳ ಈ ಕೃತಿಯಲ್ಲಿ ಸೋಲಾಪೂರ ಜಿಲ್ಲೆಯ ನೀಲಗಾರ ಕರಜಗಿಯ ವಿರಕ್ತಮಠದ ೧೭ನೆಯ ಶತಮಾನದ ಪೂಜ್ಯ ಸಂಗನಬಸವ ದೇಸಿಕೇಂದ್ರರು ಬರೆದ ಬೆಡಗಿನ ೧೦೧ ವಚನಗಳಿಗೆ ಪ್ರವಚನ ಶೈಲಿಯಲ್ಲಿಯೇ ವಿವರಣೆ ನೀಡಿದ್ದಾರೆ. ಈ ಕೃತಿಗೆ ಅನಿಸಿಕೆ ಬರೆದಿರುವ **ಡಾ.ಕೆ. ರವೀಂದ್ರನಾಥರು** "ವಚನಗಳ ಗೂಢಾರ್ಥ ವಿವೇಚನೆಯನ್ನು ಅನಾವರಣಗೊಳಿಸುವಲ್ಲಿ ಬೇರೆ ಬೇರೆ ಅನುಭಾವಿ ಕವಿಗಳ ದೃಷ್ಟಾಂತ ರೂಪಕ ಉಪಮೆಗಳನ್ನು ಬೇಸರಿಕೆ ಬಾರದಂತೆ ಹೆಣೆದಿದ್ದಾರೆ. ಪ್ರವಚನವನ್ನು ಒಂದು ವ್ಯಸನ ವ್ಯಾಸಂಗವೆಂಬಂತೆ ಪಠಣ ಮಾಡುತ್ತ ಬಂದಿರುವ ಪಂ. ಶಿವಲಿಂಗ ಶಾಸ್ತ್ರಿಗಳು ಹದವರಿತ ಭಾಷೆ, ಸಂದರ್ಭಾನುಸಾರ ಸಂಸ್ಕೃತ ಶ್ಲೋಕಗಳ ಬಳಕೆ, ಲೋಕೋಕ್ತಿ–ಲೋಕಾನುಭವಗಳನ್ನು ರೂಢಿಸಿಕೊಂಡು ಬಂದಿರುವುದು ವೇದ್ಯವಾಗುತ್ತದೆ"[೫೨] ಎಂದು ವ್ಯಕ್ತಪಡಿಸಿರುವ ಅಬಿಪ್ರಾಯಗಳು ಈ ವಚನ ವ್ಯಾಖ್ಯಾನ ಕೃತಿಯ ಸ್ವರೂಪವನ್ನು ಪರಿಚಯಿಸುವಂತಿದೆ. ಅದೇ ರೀತಿ '**ಅಂತರಂಗದಲ್ಲೊಂದು ಕುರುಕ್ಷೇತ್ರ**' ಎಂಬ ಕೃತಿಯನ್ನು **೨೦೦೨ರಲ್ಲಿ ಪ್ರಕಟಿಸಿರುವ** ಶಿವಲಿಂಗಶಾಸ್ತ್ರಿ ಹಿರೇಮಠರು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಅರಿಷಡ್‌ವೈರಿಗಳ ಕುರಿತು ಮಾಡಿದ ಪ್ರವಚನದಲ್ಲಿ ಬಸವಾದಿ ಶಿವಶರಣರ ವಚನಗಳನ್ನು ಬಳಸಿಕೊಂಡು ವ್ಯಾಖ್ಯಾನ ಮಾಡಿದ್ದಾರೆ. ಇವರಂತೆಯೇ ಕೂಡಲಸಂಗಮದ

**ಲಿಂಗಾನಂದ ಶ್ರೀಗಳು** ಶ್ರೇಷ್ಠ ಪ್ರವಚನಕಾರರಾಗಿದ್ದರಲ್ಲದೇ ಶಿವಶರಣರ ವಚನಗಳಿಗೆ ವ್ಯಾಖ್ಯಾನ ಮಾಡಿರುವುದು ತಿಳಿದುಬರುತ್ತದೆ.

ಲಿಂಗಾನಂದರ ಶಿಷ್ಯೆ ಮಾತೆಮಹಾದೇವಿಯರು ಗುರುವಿನಂತೆ ಪ್ರವಚನಕಾರರು. **'ಬಸವ ವಚನಾಮೃತ'** ಎನ್ನುವ ಬಸವಣ್ಣನವರ ವಚನಗಳ ವ್ಯಾಖ್ಯಾನ ಕೃತಿಯನ್ನು **೨೦೦೯**ರಲ್ಲಿ ಸುಯಿದಾನ ಸುಗ್ರಂಥ ಮಾಲೆಯ ೧೫೨ನೇ ಕೃತಿ ಮೂಲಕ ಪ್ರಕಟಿಸಿದರು. ೭೮ ಪುಟಗಳ ಈ ಕೃತಿಯಲ್ಲಿ **ಅಣ್ಣನವರ ೧೦೮ ವಚನಗಳಿಗೆ ಭಾವಾರ್ಥ ಬರೆದಿದ್ದಾರೆ.** "ಭಕ್ತರ ಅಪೇಕ್ಷೆಯಂತೆ ಕಲ್ಯಾಣ ಕಿರಣದಲ್ಲಿ ಬಿಡಿಬಿಡಿಯಾಗಿ ಪ್ರಕಟವಾದ ೧೦೮ ವಚನಗಳ ವ್ಯಾಖ್ಯಾನವನ್ನು ಮೊದಲ ಹಂತವಾಗಿ ಪ್ರಕಟಿಸಲಾಗಿದೆ. ಮುಂಬರುವ ದಿನಗಳಲ್ಲಿ ಬಸವಣ್ಣನವರ ಎಲ್ಲಾ ವಚನಗಳಿಗೂ ವ್ಯಾಖ್ಯಾನ ಬರೆದು ಹಂತ ಹಂತವಾಗಿ ಪ್ರಕಟಿಸುವ ಬಯಕೆ ನಮಗಿದೆ"[೫೩] ಎಂದು ಹೇಳಿದ್ದಾರೆ. ಇಲ್ಲಿಯ ೧೦೮ ವಚನಗಳ ಆಶಯವನ್ನು ಆ ವಚನದ ಮೇಲೆ ಶಿರ್ಷಿಕೆಯಂತೆ ಕೊಡುತ್ತಾರೆ. ವಚನದ ನಂತರ ಕೆಳಗೆ ವಚನಾರ್ಥವನ್ನು ಕೆಲವೊಮ್ಮೆ ಒಂದೇ ಸಲ ವಿವರಿಸಿದರೆ, ಮತ್ತೆ ಕೆಲವೊಂದು ವಚನಗಳಿಗೆ ಎರಡು ರೀತಿಯಲ್ಲಿ ಅರ್ಥ ನೀಡಿರುವುದು ತಿಳಿಯುತ್ತದೆ.

ವಿದ್ವಾಂಸರಾದ **ಡಾ. ವೀರಣ್ಣ ರಾಜೂರ** ಅವರು ತೋಂಟದ ಸಿದ್ಧಲಿಂಗಯತಿಗಳ 'ಷಟ್‌ಸ್ಥಲಜ್ಞಾನಸಾರಾಮೃತ' ಎಂಬ ವಚನಗಳ ಕೃತಿಗೆ ನಾಲ್ಕು ಜನ ಟೀಕಾಕಾರರು ಬರೆದ ಟೀಕಾ ಕೃತಿಗಳನ್ನು ಒಂದೆಡೆ ಸಂಪಾದಿಸಿಕೊಟ್ಟಿದ್ದಾರೆ. ಕರ್ನಾಟಕ ಸರಕಾರ ಧಾರ್ಮಿಕ ದತ್ತಿ ಇಲಾಖೆ ಮತ್ತು ಎಡೆಯೂರು ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಕ್ಷೇತ್ರ ಸಂಯುಕ್ತವಾಗಿ ಆರಂಭಿಸಿದ ತೋಂಟದ ಸಿದ್ಧಲಿಂಗೇಶ್ವರ ಸಮಗ್ರ ಸಾಹಿತ್ಯ' ಮಾಲೆಯ ಸಂಪುಟ-೧ನ್ನು ಡಾ. ರಾಜೂರ ಅವರು ಸಂಪಾದಿಸಿ ಕೊಟ್ಟಿದ್ದಾರೆ. ಒಟ್ಟು ೧೦ ಸಂಪುಟಗಳಲ್ಲಿ ಪ್ರಕಟವಾಗಿದ್ದು ಎಲ್ಲಾ ಸಂಪುಟಗಳ ಪ್ರಧಾನ ಸಂಪಾದಕರು ಡಾ.ಎಂ.ಎಂ. ಕಲಬುರ್ಗಿ ಅವರು. ಅವರ ಮಾರ್ಗದರ್ಶನದಲ್ಲಿ ಈ ಕಾರ್ಯ ನಡೆದಿರುವುದರಿಂದ ಈ ಯೋಜನೆ ತುಂಬಾ ಯಶಸ್ವಿಯಾಗಿದೆ. "ಇಲ್ಲಿ ಯೋಜಿಸಿದ ಹತ್ತು ಸಂಪುಟಗಳಲ್ಲಿ ಮೊದಲಿನದು ತೋಂಟದ ಸಿದ್ಧಲಿಂಗರು ರಚಿಸಿದ ವಚನಗಳಿಂದ ಕೂಡಿದ 'ಷಟ್‌ಸ್ಥಲಜ್ಞಾನ ಸಾರಾಮೃತ' ಎಂಬ ಕೃತಿ. ಇದಕ್ಕೆ ನಾಲ್ಕು ಜನ ಟೀಕಾಕಾರರು ಬರೆದ ಟೀಕೆಗಳು ದೊರೆತಿವೆ. ಈ ನಾಲ್ಕು ಟೀಕೆಗಳನ್ನು ಅಳವಡಿಸಿ ಇದನ್ನು ಸಂಪಾದಿಸಲಾಗಿದೆ. ಸಾವಿರ ಪುಟಗಳನ್ನು ಮೀರಿದ ಗಾತ್ರವನ್ನು ಹೊಂದಿದ ಇದನ್ನು ಎರಡು ಭಾಗಗಳಾಗಿ ಮಾಡಲಾಗಿದೆ"[೫೪] ಎಂದು ಸಂಪಾದಕರಾದ ಡಾ. ವೀರಣ್ಣ ರಾಜೂರ ಅಭಿಪ್ರಾಯಪಡುತ್ತಾರೆ. ಈ ಹಿನ್ನೆಲೆಯಲ್ಲಿ ತೋಂಟದ ಸಿದ್ಧಲಿಂಗ ಯತಿಗಳ ಬೆಡಗಿನ ವಚನಗಳಿಗೆ ಬರೆಯಲಾದ ನಾಲ್ಕು ಟೀಕಿನ ಕೃತಿಗಳನ್ನು ಒಂದೆಡೆ ಪ್ರಕಟಿಸಿದ ಶ್ರೇಯಸ್ಸು ಇವರದಾಗಿದೆ. ಇದರಿಂದ ವಚನ ಟೀಕಾಸಾಹಿತ್ಯ ಅಧ್ಯಯನಕ್ಕೆ ಮತ್ತು ಸಂಶೋಧಕರಿಗೆ ಪ್ರಸ್ತುತ ಸಂಪುಟಗಳು ಕೈದೀವಿಗೆಯಂತೆ ನೆರವಾಗಲು ಸಹಾಯಕವಾದಂತಾಗಿದೆ.

ವಚನ ಟೀಕಾ ಸಾಹಿತ್ಯದ ಪ್ರಕಟಣಾ ಇತಿಹಾಸವನ್ನು ಅವಲೋಕಿಸಿದಾಗ ಇದೊಂದು ಸ್ವತಂತ್ರ ಸಾಹಿತ್ಯ ಪ್ರಕಾರವಾಗಿ, ಗದ್ಯಸಾಹಿತ್ಯದ ಮುಂದುವರಿಕೆಯಾಗಿ ಬೆಳೆದು ಬಂದಿದೆ. ಬಹುಭಾಷಾಬಲ್ಲಿದರು, ಸಂಶೋಧಕರು, ಅನುಭಾವಿಗಳು, ತತ್ವಸಿದ್ಧಾಂತಗಳ ಪ್ರತಿಪಾದಕರು, ಧರ್ಮಚಿಂತಕರು, ವೈಚಾರಿಕ ಬುದ್ಧಿಜೀವಿಗಳು ಟೀಕಾಕ್ಷೇತ್ರದ ಅಧ್ಯಯನ, ಪ್ರಕಟನೆ, ಟೀಕು ವ್ಯಾಖ್ಯಾನಗಳನ್ನು ಬರೆಯುವ ಮೂಲಕ ಅಪಾರವಾಗಿ ಶ್ರಮಿಸಿರುವುದನ್ನು ಕಾಣುತ್ತೇವೆ.

ಪ್ರಸ್ತುತ ಅಧ್ಯಯನದಲ್ಲಿ ಕೇವಲ ವಚನಗಳಿಗೆ ಸಂಬಂಧಿಸಿದ ಟೀಕಾ ಸಾಹಿತ್ಯ ಕೃತಿಗಳು, ಟೀಕಾಕಾರರು ಇಲ್ಲವೇ ವ್ಯಾಖ್ಯಾನಕಾರರನ್ನು ಅನುಲಕ್ಷಿಸಿ ಪ್ರಕಟನೆಯ ಇತಿಹಾಸವನ್ನು ಕಟ್ಟಿಕೊಡಲಾಗಿದೆ. ಅಲ್ಲದೇ, ಆದ್ಯವಚನಕಾರ ದೇವರ ದಾಸಿಮಯ್ಯ ಸೇರಿದಂತೆ ಬಸವಾದಿ ಶಿವರಣರ ಪರಂಪರೆಯಲ್ಲಿ ಮುಂದುವರಿದು ವಚನಗಳನ್ನು ರಚನೆ ಮಾಡಿದ ಪ್ರಾಚೀನ ಮತ್ತು ಮಧ್ಯಕಾಲೀನ ವಚನಕಾರರ ವಚನಗಳಿಗೆ ಬರೆದ ವ್ಯಾಖ್ಯಾನ ಗ್ರಂಥಗಳ ವಿವರವನ್ನು ಇಲ್ಲಿ ದಾಖಲಿಸಲಾಗಿದೆ. ಆಧುನಿಕ ವಚನಕಾರರ ವಚನಗಳಿಗೆ ಬರೆದ ಟೀಕಾ ಸಾಹಿತ್ಯ ಇಲ್ಲವೇ ತಾತ್ಪರ್ಯಗಳನ್ನು ಗಣನೆಗೆ ತೆಗೆದುಕೊಂಡಿಲ್ಲ. ಆದರೆ, ಪ್ರಾಚೀನ ಮತ್ತು ಮಧ್ಯಮಕಾಲೀನ ಅವಧಿಯಲ್ಲಿ ಬರೆದ ವಚನಕಾರರ ವಚನಗಳಿಗೆ ೨೦-೨೧ನೇ ಶತಮಾನದ ವಿದ್ವಾಂಸರು ಬರೆದ ವ್ಯಾಖ್ಯಾನ ಗ್ರಂಥಗಳನ್ನು ಹಾಗೂ ಸಂಪಾದನೆ ಮಾಡಿದ ಪ್ರಾಚೀನ ಟೀಕಾ ಗ್ರಂಥಗಳನ್ನು ಈ ಅಧ್ಯಾಯದಲ್ಲಿ ಸೇರ್ಪಡೆಗೊಳಿಸಿಕೊಂಡಿದೆ. ಜೊತೆಗೆ ವಚನ ಟೀಕಾ ಸಾಹಿತ್ಯ ಕೃತಿಗಳ ಸಂಪಾದನೆ, ವ್ಯಾಖ್ಯಾನ ಗ್ರಂಥಗಳ ಪ್ರಕಟಣೆಯ ಕಾಲವನ್ನು ಅನುಲಕ್ಷಿಸಿ ಪ್ರಕಟನಾ ಪರಂಪರೆಯನ್ನು ಗುರುತಿಸಲಾಗಿದೆ. ಇದರಿಂದಾಗಿ ಬಸವಣ್ಣನವರ ಇಲ್ಲವೇ ಇತರ ಶಿವಶರಣರ ವಚನಗಳನ್ನಾಧರಿಸಿ ಅನೇಕ ವಿದ್ವಾಂಸರು ಬರೆದಿರುವ ಇಲ್ಲವೇ ಸಂಪಾದಿಸಿ ಕೊಟ್ಟಿರುವ ಟೀಕಾ ಗ್ರಂಥಗಳನ್ನು ಒಂದೆಡೆ ಗುರುತಿಸಲು ಸಾಧ್ಯವಾಗಿಲ್ಲ. ವಿದ್ವಾಸರಾದ ಡಾ.ಎಂ.ಎಂ. ಕಲಬುರ್ಗಿಯವರು, ಡಾ. ವೀರಣ್ಣ ರಾಜೂರ ಅವರು ಕ್ರಮವಾಗಿ ಬಸವಣ್ಣನವರ ವಚನಗಳ ೫೫ ಟೀಕಾಕೃತಿಗಳು ಮತ್ತು ತೋಂಟದ ಸಿದ್ಧಲಿಂಗೇಶ್ವರ ವಚನಗಳ ೫೫ ಟೀಕಾಕೃತಿಗಳನ್ನು ಒಂದೆಡೆ ಕ್ರಮವಾಗಿ ದಾಖಲಿಸಿ ಪ್ರಕಟಿಸಿರುವ ಕಾರ್ಯ ಸ್ಮರಣೀಯವಾಗಿದೆ. ಇದರಿಂದ ಆಯಾ ವಚನಕಾರರಿಗೆ ಸಂಬಂಧಿಸಿ ಬರೆಯಲಾದ ಎಲ್ಲ ಟೀಕಾಕಾರರ ಟೀಕುಗಳನ್ನು ಅಧ್ಯಯನ ಮಾಡಲು, ಪರಾಮರ್ಶೆಗೆ ಒಳಪಡಿಸಲು ತುಂಬಾ ಸಹಾಯಕವಾಗುತ್ತದೆ.

ಈ ಹಿನ್ನೆಲೆಯಲ್ಲಿ ನಾಡಿನ ಎಲ್ಲ ವಚನಗಳಿಗೆ ಬರೆಯಲಾದ ಪ್ರಾಚೀನ ಮತ್ತು ಆಧುನಿಕ ಟೀಕು-ವ್ಯಾಖ್ಯಾನಗಳ ಗ್ರಂಥಗಳನ್ನು ಒಂದೆಡೆ ದಾಖಲಿಸಬೇಕಾದ ಕಾರ್ಯ ನಡೆಯಬೇಕಾಗಿದೆ. ಇದರಿಂದ ವಚನ ಸಾಹಿತ್ಯ ಓದುಗರಿಗೆ, ಸಂಶೋಧಕರಿಗೆ, ಗ್ರಂಥ ರಚನಾಕಾರರಿಗೆ ತುಂಬಾ ಸಹಾಯವಾಗಲಿದೆ. ಅಲ್ಲದೇ, ಶಿವಶರಣರಲ್ಲಿ ಯಾರ ವಚನಗಳಿಗೆ ಎಷ್ಟು ಜನ ವಿದ್ವಾಂಸರು ವ್ಯಾಖ್ಯಾನ ಮಾಡಿರುವರೆಂಬ ಅಧಿಕೃತವಾದ ಅಂಕೆ-ಸಂಖ್ಯೆಗಳು ನಿಖರವಾಗಿ ಲಭ್ಯವಾಗಲಿವೆ. ಈ ರೀತಿಯ ಯೋಜನಾ ಬದ್ಧವಾದ ಕಾರ್ಯವನ್ನು ಮಾಡಬೇಕಾದ ತುರ್ತು ಅಗತ್ಯವಿದೆ.

**ಅಡಿಟಿಪ್ಪಣಿ**


೧. ವಚನ ಸಾಹಿತ್ಯದ ಪ್ರಕಟಣೆ ಮತ್ತು ಅಧ್ಯಯನ ಪರಂಪರೆ, ಡಾ.ಬಿ.ಎಸ್. ಬಿರಾದಾರ, ಪಿಎಚ್.ಡಿ(ಅಪ್ರಕಟಿತ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪುಟ-೩೦

೨. ವಚನ ಸಾಹಿತ್ಯದ ಪ್ರಕಟಣೆಯ ಇತಿಹಾಸ, ಸಂ. ಡಾ.ಎಂ.ಎಂ.ಕಲಬುರ್ಗಿ, ಪು.೮-೧೧

೩. ವಚನಶಾಸ್ತ್ರಸಾರ, ಡಾ. ಹಳಕಟ್ಟಿ(ಪ್ರಥಮ ಆವೃತ್ತಿ) ಪ್ರಸ್ತಾವನೆ

೪. ಬಸವೇಶ್ವರನ ವಚನಗಳು, ಸಂ. ಫ.ಗು ಹಳಕಟ್ಟಿ, ದ್ವಿತೀಯ ಆವೃತ್ತಿ, ಪ್ರ - ೧೯೩೦, ಪ್ರಸ್ತಾವನೆ, ಪುಟ - ೧.

೫. ವಚನ ಸಾಹಿತ್ಯದ ಪ್ರಕಟಣೆ ಮತ್ತು ಅಧ್ಯಯನ ಪರಂಪರೆ, ಡಾ.ಬಿ.ಎಸ್ ಬಿರಾದಾರ, ಪಿಎಚ್.ಡಿ(ಅಪ್ರಕಟಿತ) ಗ್ರಂಥ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೫, ಪು.೬೨

೬. ಶಿವಶರಣರ ಸಂಕೀರ್ಣ ವಚನಗಳು, ಭಾಗ-೨, ಡಾ.ಫ.ಗು. ಹಳಕಟ್ಟಿ, ಮಧುವರಸನ ವಚನಗಳು, ಪ್ರಸ್ತಾವನೆ, ಪು - ೩, ೧೯೪೦.

೭. ವಚನ ಸಾಹಿತ್ಯದ ಪ್ರಕಟಣೆ ಮತ್ತು ಅಧ್ಯಯನ ಪರಂಪರೆ, ಡಾ.ಬಿ.ಎಸ್. ಬಿರಾದಾರ, ಪಿಎಚ್.ಡಿ(ಅಪ್ರಕಟಿತ) ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಪುಟ-೮೧.

೮. ಬಸವ ಬೋಧಾಮೃತ, ಹರ್ಡೇಕರ ಮಂಜಪ್ಪನವರು, ಪುಟ-೬೧, ೬೨.

೯. ಅದೇ, ಪು.೮೭

೧೦. ಅದೇ, ಪು.೮೭

೧೧. ವಚನ ಸಾಹಿತ್ಯ ಪ್ರಕಟನೆ ಮತ್ತು ಅಧ್ಯಯನ ಪರಂಪರೆ, ಡಾ.ಬಿ.ಎಸ್. ಬಿರಾದಾರ, ಪಿಎಚ್.ಡಿ(ಅಪ್ರಕಟಿತ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪುಟ-೧೦೨,೧೦೩.

೧೨. ಮಹಾಮಾರ್ಗ, ಸಂ. ಡಾ. ವೀರಣ್ಣ ರಾಜೂರ, ೧೯೯೮, ಪುಟ-೩೭೯.

೧೩. ವಚನಗಳ ಸಂಗ್ರಹ - ಸಂಕಲನ - ಸಂಪಾದನೆ, ಡಾ.ಎಂ.ಎಂ. ಕಲಬುರ್ಗಿ, ೧೯೯೦, ಪುಟ-೧೪೬

೧೪. ವಚನ ಸಾಹಿತ್ಯದ ಪ್ರಕಟನೆ ಮತ್ತು ಅಧ್ಯಯನ ಪರಂಪರೆ, ಡಾ. ಬಿ.ಎಸ್. ಬಿರಾದಾರ, ಪಿಎಚ್.ಡಿ(ಅಪ್ರಕಟಿತ), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪುಟ-೯೩.

೧೫. ಅದೇ, ಪುಟ.೧೧೪

೧೬. ಶೂನ್ಯಸಂಪಾದನೆ, ಸಂ. ಡಾ. ಫ.ಗು. ಹಳಕಟ್ಟಿ, ಪುಟ-೨೯,೬೬

೧೭. ವಚನ ಸಾಹಿತ್ಯದ ಪ್ರಕಟನೆ ಮತ್ತು ಅಧ್ಯಯನ ಪರಂಪರೆ, ಡಾ. ಬಿ.ಎಸ್. ಬಿರಾದಾರ, ಪಿಎಚ್.ಡಿ(ಅಪ್ರಕಟಿತ), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪುಟ-೧೩೩

೧೮. ಅದೇ, ಪುಟ.೧೩೩

೧೯. ಅದೇ, ಪುಟ.೧೩೩, ೧೩೪

೨೦. ಅದೇ, ಪುಟ.೧೩೪

೨೧. ಅದೇ, ಪುಟ.೧೩೫

೨೨. ಅದೇ, ಪುಟ.೧೪೧

೨೩. ಕದಳಿಯ ವಚನಗಳು, ಪ್ರಕಾಶನ ನವಕಲ್ಯಾಣಮಠ, ಧಾರವಾಡ, ಮುನ್ನುಡಿ ಪುಟ.೧,೧೨

೨೪. ಅಲ್ಲಮನ ವಚನ ಚಂದ್ರಿಕೆ, ಸಂ. ಎಲ್. ಬಸವರಾಜು, ವಿಜ್ಞಾಪನೆ ಪುಟ.iv.

೨೫. ವಚನ ಸಾಹಿತ್ಯ ಪ್ರಕಟಣೆ ಮತ್ತು ಅಧ್ಯಯನ ಪರಂಪರೆ, ಡಾ.ಬಿ.ಎಸ್. ಬಿರಾದಾರ, ಕ.ವಿ.ವಿ. ಧಾರವಾಡ ಪಿಎಚ್.ಡಿ (ಅಪ್ರಕಟಿತ) ಪುಟ–೧೭೪

೨೬. ಬಸವೇಶ್ವರ ದೇವರ ವಚನ ವ್ಯಾಖ್ಯಾನ ಎಸ್.ಎಂ. ಹುಣಶ್ಯಾಳ ಪ್ರಸ್ತಾವನೆ, ಪುಟ.೯–೧೪

೨೭. ವಚನ ಸಾಹಿತ್ಯ ಪ್ರಕಟಣೆ ಮತ್ತು ಅಧ್ಯಯನ ಪರಂಪರೆ, ಡಾ.ಬಿ.ಎಸ್. ಬಿರಾದಾರ, ಕ.ವಿ.ವಿ. ಧಾರವಾಡ ಪಿಎಚ್.ಡಿ (ಅಪ್ರಕಟಿತ) ಪುಟ–೨೩೮

೨೮. ಷಟ್ಸ್ಥಲಕಾರ ಸಂಗ್ರಹ–ಸಂ. ಜಿ.ಎ. ಶಿವಲಿಂಗಯ್ಯ ನಿವೇದನೆ, ಪುಟ–x

೨೯. ಕಾಡಸಿದ್ಧೇಶ್ವರ ವಚನ ಸಂಗ್ರಹ, ಸಂ.ಬ.ಗಿ ಯಲ್ಲಟ್ಟಿ, ಪ್ರಸ್ತಾವನೆ, ಪುಟ–೯

೩೦. ಸಂಪಾದನೆಯ ಸಾರಾಮೃತ, (ಸಂ) ಡಾ.ಬಿ.ಆರ್. ಹಿರೇಮಠ, ಪ್ರಸ್ತಾವನೆ, ಪುಟ–x

೩೧. ಅದೇ, ಪ್ರಸ್ತಾವನೆ, ಪುಟ.xii-xv

೩೨. ವಚನ ಸಂಕಲನ, ಸಂಪುಟ–೪, ಎಂ.ಎಂ. ಕಲಬುರ್ಗಿ, ಬಿ.ಆರ್. ಹಿರೇಮಠ ಮತ್ತು ಎಸ್. ಶಿವಣ್ಣ, ಪ್ರಸ್ತಾವನೆ, ಪುಟ–x

೩೩. ಬಸವೇಶ್ವರ ವಚನ ದೀಪಿಕೆ, ಡಾ.ಎಚ್. ತಿಪ್ಪೇರುದ್ರಸ್ವಾಮಿ,ಪುಟ–xiii

೩೪. ಅದೇ, ಪುಟ-xv

೩೫. ಚೆನ್ನಬಸವಣ್ಣನವರ ವಚನ ವ್ಯಾಖ್ಯಾನ, (ಸಂ.)ಡಾ.ಜಿ.ಎಸ್. ಕಾಪಸೆ, ಪುಟ-vii

೩೬. ಅಲ್ಲಮ ಪ್ರಭುದೇವರ ಟೀಕಿನ ವಚನಗಳು, ಲೇ, ಇಮ್ಮಡಿ ಶಿವಬಸವಸ್ವಾಮಿಗಳು, ಪುಟ.xivi

೩೭. ಅದೇ, ಪುಟ–೩೪–೩೫

೩೮. ಅದೇ, ಪುಟ–೧೦೨

೩೯. ಬಸವೇಶ್ವರ ವಚನ ದೀಪಿಕೆ, ಡಾ.ಎಚ್. ತಿಪ್ಪೇರುದ್ರಸ್ವಾಮಿ, ಪುಟ–೪೪೩

೪೦. ಅದೇ, ಪುಟ–೪೪೩

೪೧. ಪ್ರಭುದೇವರ ವಚನ ವ್ಯಾಖ್ಯಾನ, ಡಾ.ವಿಜಯ ಕುಮಾರ್ ಮಹಾನುಭಾವಿಗಳು ಪುಟ.೨

೪೨. ಅದೇ, ಪುಟ–೧೫೬–೧೫೭

೪೩. ಅದೇ, ಪುಟ–೧೫೪–೧೫೫

೪೪. ಅದೇ, ಪುಟ–೨೦

೪೫. ಅದೇ, ಪುಟ–೨

೪೬. ಚೆನ್ನಬಸವಣ್ಣನವರ ವಚನ ವ್ಯಾಖ್ಯಾನ, (ಸಂ.) ಡಾ.ಜಿ.ಎಸ್. ಕಾಪಸೆ, ಪುಟ–೧೬೭

೪೭. ಅದೇ, ಪುಟ–೩೭೩

೪೮. ಅದೇ, ಪುಟ–೪೭೯

೪೯. ಶರಣರ ಆಯ್ದ ವಚನಗಳ ವ್ಯಾಖ್ಯಾನ, ಡಾ.ಸಂಗಮೇಶ ಬಿರಾದಾರ, ಪುಟ–xiii

೫೦. ಅದೇ, ಪುಟ–೧೫೯–೧೬೦

೫೧. ಶರಣರ ಆಯ್ದ ವಚನಗಳ ವ್ಯಾಖ್ಯಾನ, ಡಾ.ವೀರೇಂದ್ರ ಸಿಂಪಿ, ಪುಟ–xix

೫೨. ಬೆಡಗಿನ ನೂರೊಂದು ವಚನಗಳ ಪ್ರವಚನ, ಶಿವಲಿಂಗಶಾಸ್ತ್ರಿ ಹಿರೇಮಠ, ಪುಟ–viii

೫೩. ಬಸವ ವಚನಾಮೃತ–ಮಾತೆ ಮಹಾದೇವಿ, ಪುಟ–vi

೫೪. ತೋಂಟದ ಸಿದ್ಧಲಿಂಗ ಕೃತ, 'ಷಟ್‌ಸ್ಥಲ ಜ್ಞಾನಸಾರಾಮೃತ ಟೀಕೆಗಳು' (ಸಂ.) ಡಾ.ವೀರಣ್ಣ ರಾಜೂರ, ಪುಟ–xxi

***

ಅಧ್ಯಾಯ ಐದು

# ಕನ್ನಡ ಟೀಕಿನ ವಚನ ಕೃತಿಗಳ ಸಮೀಕ್ಷೆ

**I. ಏಕವ್ಯಕ್ತಿ ವಚನಗಳಿಗೆ ಬರೆದ ಟೀಕಾ ಕೃತಿಗಳು**

೧. ಬಸವಣ್ಣನವರ ಟೀಕಿನ ವಚನಗಳು

೨. ಅಲ್ಲಮಪ್ರಭುದೇವರ ಟೀಕಿನ ವಚನಗಳು

೩. ತೋಂಟದ ಸಿದ್ಧಲಿಂಗೇಶ್ವರರ ಟೀಕಿನ ವಚನಗಳು

೪. ಕಾಡಸಿದ್ದೇಶ್ವರ ಟೀಕಿನ ವಚನಗಳು

**II. ಅನೇಕ ವ್ಯಕ್ತಿ ವಚನಗಳಿಗೆ ಬರೆದ ಟೀಕಾ ಕೃತಿಗಳು**

೧. ಲಿಂಗಲೀಲಾವಿಲಾಸ ಚಾರಿತ್ರ

೨. ಸಕಲ ಪುರಾತನರ ಬೆಡಗಿನ ವಚನಗಳು

೩. ಏಕೋತ್ತರ ಶತಸ್ಥಲ ಟೀಕಾಕೃತಿಗಳು

i. ಏಕೋತ್ತರ ಶತಸ್ಥಲ ಸಾರಾಮೃತ ಟೀಕೆ
ii. ಸ್ವರ ಏಕೋತ್ತರ ಶತಸ್ಥಲ ಟೀಕೆ
iii. ಏಕೋತ್ತರ ಸಾರ ಸಟೀಕೆ
iv. ವಿಶೇಷಾನುಭವ ಶತಸ್ಥಲ ಟೀಕೆ
v. ಸಟೀಕ ಏಕೋತ್ತರ ಶತಸ್ಥಲ
vi. ಸಿದ್ಧಲಿಂಗೇಶ್ವರಾಂಕಿತ ಏಕೋತ್ತರ ಶತಸ್ಥಲಂ
vii. ಏಕೋತ್ತರ ಸಾರ ಟೀಕೆ
viii. ಏಕೋತ್ತರ ಶತಸ್ಥಲ ಟೀಕೆ

೫

## ಕನ್ನಡ ಟೀಕಿನ ವಚನ ಕೃತಿಗಳ ಸಮೀಕ್ಷೆ

'ಕಲೆ ಮೊದಲು ಶಾಸ್ತ್ರನಂತರ' ಎಂಬ ಸಿದ್ಧಾಂತದಂತೆ ಸೃಜನ ಸಾಹಿತ್ಯದ ಜೊತೆಜೊತೆಗೆ ಅವುಗಳಲ್ಲಿ ನಿಗೂಢವಾದ ತತ್ವ-ಸಿದ್ಧಾಂತಗಳನ್ನು ಬಿಡಿಸಿ ಹೇಳುವ ಇಲ್ಲವೇ ವಿಮರ್ಶಿಸುವ ಶಾಸ್ತ್ರಸಾಹಿತ್ಯ ಪ್ರಕಾರವು ಬೆಳೆದು ಬಂದಿದೆ. ಇದರಲ್ಲಿ ತುಂಬಾ ಪ್ರಮುಖವಾದುದು ಟೀಕಾಸಾಹಿತ್ಯ. ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಟೀಕಾಸಾಹಿತ್ಯಕ್ಕೆ ಶ್ರೀಮಂತ ಇತಿಹಾಸವಿದೆ. ಅದರಂತೆ ಕರ್ನಾಟಕದಲ್ಲಿ ಕೂಡಾ ಟೀಕಾಸಾಹಿತ್ಯದ ಇತಿಹಾಸ ಆರು-ಏಳನೇ ಶತಮಾನದಷ್ಟು ಪ್ರಾಚೀನವಾಗಿದೆಯಲ್ಲದೇ ಸೃಜನ ಸಾಹಿತ್ಯದ ಅರ್ಧದಷ್ಟು ಗ್ರಂಥಗಳು ಟೀಕೆ ಸಹಿತವಾಗಿ ರಚನೆಯಾಗುವ ಮೂಲಕ ನಾಡಿನ ವಿದ್ವಾಂಸರ ಗಮನವನ್ನು ಸೆಳೆದಿವೆ. ವಚನಸಾಹಿತ್ಯಕ್ಕೆ ಸಂಬಂಧಿಸಿದಂತೆ ೧೨ನೇ ಶತಮಾನದಲ್ಲಿಯೇ ಟೀಕಾಸಾಹಿತ್ಯ ಬೆಳೆದು ಬಂದಿರುವುದಕ್ಕೆ ಸಕಾರಣಗಳು ಲಭಿಸುತ್ತವೆ. "ಹತ್ತು ಸಾವಿರ ಗೀತವ ಹಾಡಿ ಅರ್ಥವಿಟ್ಟಲ್ಲಿ ಫಲವೇನು? ಮುಟ್ಟುವ ತೆರನನರಿಯದನ್ನಕ್ಕ" ಎಂಬ ಬಸವಣ್ಣನವರ ಮಾತು, "ಮಹಾದೇವಿ ಎಂಬ ಶರಣೆಗೆ ಚನ್ನಮಲ್ಲ ಪ್ರಭು ಇನ್ನೂರ ಹದಿನಾರು ಸಕೀಲದ ಟಿಪ್ಪಣದರ್ಥವ ಬೋಧಿಸುವ ಸಮಯದಲ್ಲಿ" ಎಂದು ಹಸ್ತಪ್ರತಿಯೊಂದರಲ್ಲಿ ಬರುವ ಉಲ್ಲೇಖ ವಚನಟೀಕಾ ಸಾಹಿತ್ಯದ ಪ್ರಾಚೀನತೆಗೆ ಪುಷ್ಟಿ ನೀಡಿದರೂ ಗ್ರಾಂಥಿಕ ರೂಪದ ವಚನ ಟೀಕಾಕೃತಿಗಳು ಲಭಿಸುವುದಿಲ್ಲ. ಆದರೆ, ೧೫ನೇ ಶತಮಾನದ ಪ್ರೌಢದೇವರಾಯನ ಕಾಲಾವಧಿಯಲ್ಲಿ ನಾಡಿನುದ್ದಗಲಕ್ಕೂ ಚದುರಿ ಹೋಗಿದ್ದ ವಚನಗಳ ಕಟ್ಟುಗಳನ್ನು ಶೋಧಿಸುವ ಸಂಗ್ರಹ-ಸಂಕಲನ-ಸಂಪಾದನೆ ಮಾಡುವುದರ ಜೊತೆಗೆ ಅವುಗಳಿಗೆ ಟೀಕೆ-ವ್ಯಾಖ್ಯಾನ ಬರೆಯುವ ವಿದ್ವಾಂಸರ ಸಾಂಘಿಕ ಪ್ರಯತ್ನದಿಂದಾಗಿ ವಚನಟೀಕಾ ಸಾಹಿತ್ಯಕ್ಕೆ ಅಧಿಕೃತವಾದ ಆಧಾರಗಳು ಲಭಿಸುವಂತಾಯಿತು. ಈ ದಿಶೆಯಲ್ಲಿ ಮಹಾಲಿಂಗದೇವ (೧೪೨೫), ಶಿಷ್ಯರಾದ ಕುಮಾರ ಬಂಕನಾಥ (೧೪೩೦), ಜಕ್ಕಣಾರ್ಯ (೧೪೩೦), ಸಮಕಾಲೀನರಾದ ಕಲ್ಲುಮಠದ ಪ್ರಭುದೇವ (೧೪೩೦), ಗುಬ್ಬಿಯ ಮಲ್ಲಣ್ಣ ಸೇರಿದಂತೆ ವಿಜಯನಗರದ ಪ್ರೌಢದೇವರಾಯನ

ಆಶ್ರಿತರೆನ್ನಲಾಗುವ ನೂರೊಂದು ವಿರಕ್ತರೆಂಬ ಅನುಭಾವಿಗಳಿಂದ ಸಮರೋಪಾದಿಯಲ್ಲಿ ವಚನಗಳಿಗೆ ಟೀಕು, ಟಿಪ್ಪಣಿ, ವ್ಯಾಖ್ಯಾನ ಬರೆದ ಪರಿಣಾಮ ಹಲವಾರು ವಚನಸಾಹಿತ್ಯ ಟೀಕಾ ಗ್ರಂಥಗಳು ರಚನೆಯಾಗಲು ಸಾಧ್ಯವಾಯಿತು. ಇವುಗಳ ಸ್ವತಂತ್ರ ಅಧ್ಯಯನದ ಅಗತ್ಯವನ್ನು ಗಮನಿಸಬಹುದಾಗಿದೆ.

## I. ಏಕವ್ಯಕ್ತಿ ವಚನಗಳಿಗೆ ಬರೆದ ಟೀಕಾಕೃತಿಗಳು

### ೧. ಬಸವಣ್ಣನವರ ಟೀಕಿನ ವಚನಗಳು

೧೨ನೇ ಶತಮಾನದ ಶಿವಶರಣರ ಜೀವನ, ಸಾಧನೆ, ಸಿದ್ಧಿಗಳನ್ನು ಸಮಾಜಮುಖಿಗೊಳಿಸಲು ಹರಿಹರ, ರಾಘವಾಂಕ, ಪಾಲ್ಕುರಿಕೆ ಸೋಮನಾಥ, ಕೆರೆಯ ಪದ್ಮರಸ, ಭೀಮಕವಿ, ಸಿಂಗಿರಾಜ ಮುಂತಾದವರಿಂದ ನಾನಾ ಕಾವ್ಯಕೃತಿಗಳು ರಚನೆಯಾದವು. ಅದರಂತೆ, ಶರಣರ ವಚನಗಳ ಅರ್ಥ- ಭಾವಗಳನ್ನು, ಅವುಗಳ ತಾತ್ವಿಕ ಅರ್ಥ- ಮೌಲ್ಯಗಳನ್ನು ಬಿಡಿಸಿ ತೋರಲು ಟೀಕಾಗ್ರಂಥಗಳು ಹುಟ್ಟಿದವು. ವಚನಗಳಲ್ಲಿ ೧. ಸರಳ ವಚನಗಳು. ೨. ಬೆಡಗಿನ ವಚನಗಳು ಎಂದು ಎರಡು ರೀತಿ ಗುರುತಿಸಲಾಗುತ್ತದೆ. ಸರಳ ವಚನಗಳಿಗೆ ಟೀಕು, ವ್ಯಾಖ್ಯಾನಗಳ ಅಗತ್ಯವಿಲ್ಲ. ಆದರೆ ಬೆಡಗಿನ ವಚನಗಳಿಗೆ ಟೀಕಿನ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಪ್ರಭುದೇವರು, ತೋಂಟದ ಸಿದ್ಧಲಿಂಗಯತಿ, ಕಾಡಸಿದ್ದೇಶ್ವರರ ಬೆಡಗಿನ ವಚನಗಳಿಗೆ ಟೀಕು, ವ್ಯಾಖ್ಯಾನದ ಅಗತ್ಯವಿದ್ದುದರಿಂದ ವ್ಯಾಖ್ಯಾನ ಗ್ರಂಥಗಳು ಹುಟ್ಟಿರುವುದು ಅಪೇಕ್ಷಣೀಯ. ಆದರೆ "ಬಸವಣ್ಣನವರ ವಚನಗಳು ಹೆಚ್ಚಾಗಿ ಸರ್ವರಿಗೂ ಸುಲಭವೇದ್ಯವಾಗುವ ಸರಳ ರಚನೆಗಳು. ಅವುಗಳಲ್ಲಿ ಸಂಕೇತಮೂಲವಾದ ಬೆಡಗು ತೀರ ಕಡಿಮೆ; ಇಲ್ಲವೇ ಇಲ್ಲ ಎಂದು ಹೇಳಿದರೂ ನಡೆಯುತ್ತದೆ. ಹೀಗಿದ್ದೂ ಅವುಗಳಿಗೆ ಇತರರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಟೀಕಾಗ್ರಂಥಗಳು ಹುಟ್ಟಿಕೊಂಡಿರುವುದು ಅಚ್ಚರಿಯ ಸಂಗತಿ"[೧] ಎನ್ನುವ ಡಾ. ವೀರಣ್ಣ ರಾಜೂರ ಅವರ ಅಭಿಪ್ರಾಯದಲ್ಲಿ ಸತ್ಯಾಂಶವಿರುವುದರಿಂದ ಚಿಂತನಾರ್ಹವಾದ ವಿಷಯವೇ ಆಗಿದೆ. ಮೇಲುನೋಟಕ್ಕೆ ಅವು ತುಂಬಾ ಸರಳವೆನಿಸಿದರೂ ಅವುಗಳ ಆಂತರ್ಯದಲ್ಲಿ ಗೂಢಾತಿಗೂಢ ತತ್ವ ಸಂಪತ್ತು ನೆಲದ ಮರೆಯ ನಿಧಾನದಂತೆ ಹುದುಗಿಕೊಂಡಿರುವುದನ್ನು ಮರೆಯಲಾಗದು. ಅನುಭಾವಿಕ ನೆಲೆಯಲ್ಲಿ ಅವುಗಳನ್ನು ಕುರಿತು ಗಂಭೀರ ಚಿಂತನೆ ನಡೆಸಿದಾಗ ಮಾತ್ರ ಅದನ್ನು ಗುರುತಿಸುವುದು ಸಾಧ್ಯವಾಗುತ್ತದೆ. ಬಸವಣ್ಣನವರ ವಚನಗಳು ಬೆಡಗಿನವಾಗದಿದ್ದರೂ ಹಲವಾರು ವಚನಗಳಲ್ಲಿ ಬೆಡಗಿದೆ. ಜೊತೆಗೆ ಸತಿಪತಿಭಾವದ ವಚನಗಳೂ ಟೀಕೆಯನ್ನು ಬಯಸುತ್ತವೆ"[೨] ಎಂದು ಡಾ. ಬಿ.ವಿ. ಮಲ್ಲಾಪೂರ ಅವರು ಹೇಳುವುದನ್ನು ಗಮನಿಸಿದಾಗ ಸರಳ ವಚನಗಳು ಟೀಕನ್ನು ಅಪೇಕ್ಷಿಸಿದ ಪರಿಣಾಮವಾಗಿಯೇ ಬಸವಣ್ಣನವರ ವಚನಗಳಿಗೆ ಐದು ಟೀಕಿನ ಕೃತಿಗಳು ಮತ್ತು ಇತರೆ ಶರಣರ ಟೀಕಿನ ಸಂಕಲನಗಳಲ್ಲಿಯೂ ಇವರ ವಚನಗಳಿಗೆ ಟೀಕೆಗಳು ಲಭ್ಯವಾಗಿವೆ.

ಈ ಕಾಲಘಟ್ಟದಲ್ಲಿ ವಚನಗಳಿಗೆ ಟೀಕೆ ಬರೆಯುವ ಸಂಪ್ರದಾಯ ವ್ಯಾಪಕವಾಗುತ್ತಿರುವಂತೆಯೇ ತದನಂತರದಲ್ಲಿ ವೀರಶೈವ ಕಾವ್ಯಶಾಸ್ತ್ರಗಳಿಗೂ ಕೂಡಾ ಟೀಕುಗಳು ಹುಟ್ಟಲಾರಂಭಿಸಿದವು. ಇದನ್ನು ಗಮನಿಸುವ ಡಾ. ಎಂ.ಎಂ. ಕಲಬುರ್ಗಿಯವರು "ವೀರಶೈವ ಟೀಕಾ ಸಾಹಿತ್ಯವನ್ನು ವಚನ ಟೀಕೆ, ಕಾವ್ಯಶಾಸ್ತ್ರಟೀಕೆಯೆಂದು ವರ್ಗೀಕರಿಸಬಹುದು. ಕೆಲವರಂತೂ ಜೀವನದುದ್ದಕ್ಕೂ ಕೇವಲ ಟೀಕಾಸಾಹಿತ್ಯ ನಿರ್ಮಾಣಕಾರ್ಯದಲ್ಲಿ ತೊಡಗಿದ್ದ ಕಾರಣ "ಟೀಕಿನ ಗುರುಪಾದದೇವ" ಎಂಬ ಅನ್ವರ್ಥಕ ನಾಮಗಳಿಂದ ಪ್ರಸಿದ್ಧಿ ಪಡೆದಿದ್ದಾರೆ. ಈ ಪರಂಪರೆಯಲ್ಲಿ ಪ್ರಭುದೇವರ ಟೀಕಿನ ವಚನ, ಬೆಡಗಿನ ವಚನಟೀಕೆ, ಅಕ್ಕಮಹಾದೇವಿಯ ಸೃಷ್ಟಿಯ ವಚನಟೀಕು, ಚೆನ್ನಬಸವೇಶ್ವರನ ಪದಮಂತ್ರ ಗೋಪ್ಯಟೀಕೆ, ಪ್ರಭುದೇವರ ಸೃಷ್ಟಿಯವಚನ ಟೀಕೆ, ಚೆನ್ನಬಸವೇಶ್ವರರ ಕರಣಹಸಿಗೆ ಟೀಕೆ, ಪ್ರಭುದೇವರ ಮಂತ್ರಗೋಪ್ಯಟೀಕೆ, ಚೆನ್ನಬಸವೇಶ್ವರರ ಮಿಶ್ರಾರ್ಪಣ ಟೀಕು, ಬಸವಣ್ಣನವರ ವಚನ ಟೀಕೆ, ಲಿಂಗಲೀಲಾವಿಲಾಸ ಗ್ರಂಥದ ವ್ಯಾಖ್ಯಾನ, ಏಕೋತ್ತರ ಶತಸ್ಥಲ ಟೀಕೆ, ಷಟ್‌ಸ್ಥಲಜ್ಞಾನ ಸಾರಾಮೃತ ಟೀಕೆ, ಮನೋವಿಜಯ ವ್ಯಾಖ್ಯಾನ, ಶತಕತ್ರಯ ವ್ಯಾಖ್ಯಾನ, ಪಂಚಗದ್ಯಟೀಕೆ, ಭಾವಚಿಂತಾರತ್ನ ಟೀಕೆ, ಬಸವೇಶ್ವರರ ಪಂಚಸ್ತೋತ್ರ ಟೀಕೆ, ಮಣ್ಣೇಶ್ವರನಾಂದ್ಯದ ಟೀಕೆ, ಮರುಳದೇವರ ಕಂದಸಾರದ ಟೀಕೆ, ರಾಜಶೇಖರ ವಿಲಾಸದ ವ್ಯಾಖ್ಯಾನ, ಶಬ್ದಮಣಿದರ್ಪಣ ಟೀಕೆ, ಶೀಲವಂತಯ್ಯನ ತ್ರಿವಿಧಿ ಟೀಕೆ, ಕರಸ್ಥಲದ ನಾಗಲಿಂಗದೇವನ ತ್ರಿವಿದಿ ಟೀಕೆ, ಕೈವಲ್ಯಪದ್ಧತಿ ಟೀಕೆ, ಗುರುಸ್ತೋತ್ರ ತ್ರಿವಿಧಿ ಟೀಕೆ, ವರ್ತೆಯ ಸೋಮಣ್ಣನ ಪಂಚೀಕರಣ ಟೀಕೆ, ಪ್ರಭುಲಿಂಗಕಂದದ ಟೀಕೆ, ಪರಮಾರ್ಥಗೀತೆ ಟೀಕೆ–ಹೀಗೆ ದಟ್ಟವಾಗಿ ಹುಟ್ಟಿಬಂದ ವೀರಶೈವ ಟೀಕಾಸಾಹಿತ್ಯ ಸಮೂಹದಲ್ಲಿ ಬಸವಣ್ಣನವರ "ಷಟ್‌ಸ್ಥಲವಚನ" ಸಂಪುಟಕ್ಕೆ ಐದು ಜನರು ಟೀಕೆ ಬರೆದುದಾಗಿ ಈ ವರೆಗೆ ತಿಳಿದುಬಂದಿದೆ. ಕನ್ನಡ ಸಾಹಿತ್ಯದಲ್ಲಿಯೇ ಬಸವಣ್ಣನವರನ್ನು ಕುರಿತು ಹುಟ್ಟಿದಷ್ಟು ಕೃತಿಗಳು ಬೇರೊಬ್ಬರ ವಿಷಯವಾಗಿ ಹುಟ್ಟಿಲ್ಲ. ಅದೇ ರೀತಿ ಅವರ ವಚನ ಸಂಪುಟಕ್ಕೆ ಬರೆದಷ್ಟು ಟೀಕೆಗಳು ಬೇರೊಬ್ಬರ ವಚನ ಸಂಪುಟಕ್ಕೆ ಬರೆಯಲಾಗಿಲ್ಲವೆಂಬುದು ಬಸವಣ್ಣನವರ ವ್ಯಕ್ತಿತ್ವ ಮತ್ತು ಸಾಹಿತ್ಯಗಳ ಘನತೆಯನ್ನು ಸಾರುತ್ತದೆ."[೩] ಎಂಬ ಅಭಿಪ್ರಾಯದಿಂದ ವೀರಶೈವ ಟೀಕಾಸಾಹಿತ್ಯದ ಬಹುಮುಖ ಬೆಳವಣಿಗೆ, ಸುದೀರ್ಘ ಪರಂಪರೆ ಮತ್ತು ವಚನಗಳ ಟೀಕಾ ಸಾಹಿತ್ಯದಲ್ಲಿ ಬಸವಣ್ಣನವರ ವಚನಗಳಿಗೆ ನೀಡಿದ ಪ್ರಾಮುಖ್ಯತೆಯನ್ನು ಅರಿಯಲು ಸಾಧ್ಯವಾಗುತ್ತದೆ. ಡಾ. ವೀರಣ್ಣ ರಾಜೂರ ಅವರು ಹೇಳುವಂತೆ "ಬಸವಣ್ಣನವರ ಸು.೧೪೫೦ಕ್ಕೂ ಹೆಚ್ಚು ವಚನಗಳು ಉಪಲಬ್ಧವಾಗಿವೆ. ಅವುಗಳಲ್ಲಿ ೯೫೫ ವಚನಗಳು 'ಷಟ್‌ಸ್ಥಲ ವಚನಗಳು' ಎಂಬ ಕಟ್ಟಿನಲ್ಲಿ ದೊರೆಯುತ್ತವೆ. ಉಳಿದವು ವಿವಿಧ ಸ್ಥಲಕಟ್ಟಿನ ಕೃತಿಗಳಲ್ಲಿ ಅಳವಟ್ಟಿವೆ."[೪] ಬಸವಣ್ಣನವರ 'ಷಟ್‌ಸ್ಥಲದ ವಚನ'ಗಳು ಕಟ್ಟನ್ನು ಆದರಿಸಿಯೇ ಐವರು ಟೀಕೆ ಬರೆದಿದ್ದಾರೆ. ಹೀಗಾಗಿ ಈ "ಷಟ್‌ಸ್ಥಲ ಕಟ್ಟು ಸಿದ್ಧವಾದ ತರುವಾಯದ ಕಾಲದಲ್ಲಿ ಈ ಟೀಕೆಗಳು ಹುಟ್ಟಿರುವುದು ಸಹಜ"[೫] ಎನ್ನುವ ಡಾ. ಎಂ.ಎಂ. ಕಲಬುರ್ಗಿಯವರ ಅಭಿಪ್ರಾಯದಿಂದ ಇವರ ವಚನಗಳ ಟೀಕೆಗಳಿಗಿಂತ ಮೊದಲು 'ಷಟ್‌ಸ್ಥಲ ವಚನ'ಗಳು ತುಂಬಾ ಜನಪ್ರಿಯವಾಗಿರಬೇಕೆನಿಸುತ್ತದೆ. ಈ ಹಿನ್ನೆಲೆಯಲ್ಲಿ ಬಸವಣ್ಣನವರ ವಚನಗಳ ಐದು ಟೀಕಾಕೃತಿಗಳನ್ನು

ಕಾಲಾನುಕ್ರಮದಲ್ಲಿ ವಿಂಗಡಿಸಿ ಟೀಕಾಕೃತಿ, ಟೀಕಾಕಾರರು, ಅವರ ಕಾಲ, ಕೃತಿಸ್ವರೂಪ, ಟೀಕುಗಳ ಸ್ವರೂಪ, ಹಸ್ತಪ್ರತಿಯ ಸ್ವರೂಪ ಇತ್ಯಾದಿ ವಿಷಯಗಳನ್ನು ಅವಲೋಕಿಸಲಾಗುವುದು.

೧. ಶ್ರೀಗುರು ಬಸವರಾಜದೇವರು ಸೇರಿಸಿದ 'ಬಸವ ವಚನ ಸಾರಾಮೃತ' – ೧೭ನೇ ಶತಮಾನ. ೩೭೫ ವಚನಗಳು

೨. ಪರ್ವತ ಶಿವಯೋಗೀಶ್ವರ ವಿರಚಿತ 'ಬಸವೇಶ್ವರ ದೇವರ ವಚನಸಾರಾರ್ಥ' – ೧೭೫೦, ೨೦೭ ವಚನಗಳು

೩. ಸೋಮಶೇಖರ ಶಿವಯೋಗಿಕೃತ 'ಬಸವರಾಜದೇವರ ವಚನದ ಬೆಡಗಿನ ಟೀಕು' – ೧೮೦೦, ೩೪೮ ವಚನಗಳು

೪. ಶ್ರೀಗುರುಬಸವರಾಜದೇವರು ನಿರೂಪಿಸಿದ 'ಷಟ್‌ಸ್ಥಲದ ವಚನ ವ್ಯಾಖ್ಯಾನ' – ೧೮ನೇ ಶತಮಾನ ೯೬೧ ವಚನಗಳು

೫. ಅಜ್ಞಾತ ಕರ್ತೃವಿನ–'ಶ್ರೀಬಸವೇಶ್ವರ ವಚನದೊಳಗೆ ಕಠಿಣವಾದ ಸಂಕ್ಷೇಪ ವಚನಕ್ಕೆ ಟಿಪ್ಪಣಿ' – ೧೮ನೇ ಶತಮಾನ ೩೧೪ ವಚನಗಳು

ವಿದ್ವಾಂಸರಾದ ಡಾ. ವೀರಣ್ಣ ರಾಜೂರ ಅವರ ಕಾಲಾನುಕ್ರಮವನ್ನು ಇಲ್ಲಿ ಅನುಸರಿಸಲಾಗಿದೆ. ಇಲ್ಲಿ ನಾಲ್ಕು ಜನ ಟೀಕಾಕಾರರು ಬಸವಣ್ಣನವರ ಆಯ್ದ ಕೆಲವು ವಚನಗಳಿಗೆ ಟೀಕೆ ರಚಿಸಿದ್ದಾರೆ. ಆದರೆ, ನಾಲ್ಕನೇ ಕೃತಿಯ ಕರ್ತೃ ಶ್ರೀಗುರುಬಸವರಾಜದೇವರು ಮಾತ್ರ ೯೬೧ ವಚನಗಳಿಗೆ ಟೀಕೆ ಬರೆದಿದ್ದಾರೆ. ಅದರಂತೆ ಆಯಾ ಟೀಕಾಕೃತಿಗಳ ಟೀಕು ಸ್ವರೂಪ ವಿಭಿನ್ನವಾಗಿದ್ದನ್ನು ಕಾಣುತ್ತೇವೆ.

**ಅ. ಬಸವ ವಚನಸಾರಾಮೃತ:**

'ಶ್ರೀಗುರು ಬಸವರಾಜ ದೇವರು ಸೇರಿಸಿದ ಬಸವ ವಚನ ಸಾರಾಮೃತ' ಎಂಬ ಹೇಳಿಕೆ ಹಸ್ತಪ್ರತಿಯ ಆರಂಭದಲ್ಲಿ ಬರುವುದರಿಂದ ಗುರುಬಸವರಾಜದೇವರು 'ಬಸವವಚನಸಾರಾಮೃತ' ಕೃತಿಯ ಕರ್ತೃವಾಗಿರದೇ ಅವರು ಸಂಕಲಿಸಿದ ಸಂಗ್ರಹವಾಗಿದೆ. ಅಂದರೆ ಅನ್ಯಮೂಲಗಳಿಂದ ವಚನ–ಟೀಕೆಗಳನ್ನು ಆಯ್ದುಕೊಂಡು ಸಂಕಲಿಸಿದ ಕೃತಿ ಎಂಬುದಕ್ಕೆ 'ಸೇರಿಸಿದ' ಎಂಬ ಹೇಳಿಕೆಯೇ ಸಾಕ್ಷಿಯಂತಿದೆ. ಅಲ್ಲದೇ ಈತನ ಜೀವನ ಮತ್ತು ಕಾಲದ ಬಗೆಗೆ ಸ್ಪಷ್ಟತೆಯಿಲ್ಲ. ಹಸ್ತಪ್ರತಿಯಲ್ಲಿಯ ಕೆಲವು ಆಧಾರಗಳನ್ನಿಟ್ಟುಕೊಂಡು ಡಾ. ಎಂ.ಎಂ. ಕಲಬುರ್ಗಿಯವರು ಈತನು "ಸೋಮಶೇಖರ ಶಿವಯೋಗಿಗೆ ಸ್ವಲ್ಪ ಪ್ರಾಚೀನನಾಗಿರುವ ಅಂದರೆ ೧೭ನೆಯ ಶತಮಾನದವನಾಗಿರುವ ಸಂಭವವಿದೆ."[೬] ಎಂದು ಹೇಳಿರುವ ಅಭಿಪ್ರಾಯ ಒಪ್ಪಿಕೊಂಡಿರುವ ಡಾ. ವೀರಣ್ಣರಾಜೂರ ಅವರು "...ಬಸವಣ್ಣನವರ ವಚನಗಳಿಗೆ ಟೀಕೆ ಬರೆದ ಐದು ಜನರಲ್ಲಿ ಈತನೇ ಮೊದಲಿಗನಾಗಿ ನಿಲ್ಲುತ್ತಾನೆ."[೭] ಎಂಬ ಹೇಳಿಕೆಯನ್ನೇ ಸದ್ಯಕ್ಕೆ ಸ್ವೀಕರಿಸಬಹುದು. ಮುಖ್ಯವಾಗಿ ಎದುರಾಗುವ ಪ್ರಶ್ನೆಯೆಂದರೆ ಈತನ ಸಂಗ್ರಹಕ್ಕೆ

ಆಕರವಾದ ಟೀಕಾ ಗ್ರಂಥ ಯಾವುದು? ಈ ಬಗ್ಗೆ ಡಾ. ಎಂ.ಎಂ. ಕಲಬುರ್ಗಿಯವರು ಇಲ್ಲಿ "ಬಸವಣ್ಣನವರ ಷಟ್‌ಸ್ಥಲದ ವಚನಗಳು ಸಂಪುಟಕ್ಕೆ ಸಂಬಂಧಿಸಿದ ೩೭೪ ವಚನಗಳಿಗೆ ಮಾತ್ರ ಟೀಕೆಯಿದೆ. ಇಲ್ಲಿಯ ಸುಮಾರು ೭೩ ವಚನ ಟೀಕೆಗಳು ಲಿಂಗಲೀಲಾ ವಿಲಾಸಚಾರಿತ್ರದಲ್ಲಿ, ಕೆಲವು ವಚನ ಟೀಕೆಗಳು ಸೋಮಶೇಖರ ಶಿವಯೋಗಿಯ (III)ಟೀಕೆಯಲ್ಲಿ, ಬೇರೆ ಕೆಲವು ವಚನ ಟೀಕೆಗಳು ಕಟ್ಟಿಗೆಹಳ್ಳಿಸ್ವಾಮಿಗಳು ಸೇರಿಸಿದ 'ಏಕೋತ್ತರ ಶತಸ್ಥಲಸಾರ'ದಲ್ಲಿ ಗೋಚರಿಸುತ್ತವೆ. ಇದಲ್ಲದೆ ಈ ನಾಲ್ಕು ಕೃತಿಗಳಲ್ಲಿ ಬಸವಣ್ಣನವರ ಇನ್ನೂ ಕೆಲವು ವಚನಗಳಿಗೆ ಟೀಕೆ ಇರುವುದರಿಂದ ಇವರಲ್ಲಿ ಪ್ರಾಚೀನನಾದ ಕಲ್ಲುಮಠದ ಪ್ರಭುದೇವನೆ ಬಸವಣ್ಣನವರ ಎಲ್ಲ ಷಟ್‌ಸ್ಥಲದ ವಚನಗಳಿಗೆ ಟೀಕೆಯನ್ನು ಬರೆದಿದ್ದನೆ? ಅಥವಾ ಇವರೆಲ್ಲರಿಗೂ ಮೂಲವಾದ ಬೇರೊಂದು ಟೀಕಾ ಗ್ರಂಥವಿದ್ದಿತೇ? ಎಂಬ ಸಂದೇಹ ಹುಟ್ಟುವುದಲ್ಲದೆ ಅದು ಕನಿಷ್ಠಪಕ್ಷ ಲಿಂಗಲೀಲಾ ವಿಲಾಸಚಾರಿತ್ರದಷ್ಟು ಹಿಂದಿನದೆಂದೂ ವೇದ್ಯವಾಗುತ್ತದೆ. ಆ ಕೃತಿಯಿಂದ ೩೭೪ ವಚನಟೀಕೆಗಳನ್ನು ಆಯ್ದುಕೊಂಡು ಇಲ್ಲಿ "ಸೇರಿಸಿದ" ಗುರುಬಸವರಾಜದೇವನ ಕಾಲ ೧೫ನೆಯ ಶತಮಾನದ ತರುವಾಯ ಎಲ್ಲಿ ನಿಲ್ಲುತ್ತದೆ? ಹೇಳುವುದು ಕಷ್ಟ"[೮] ಎಂದಿದ್ದಾರೆ. ಒಟ್ಟಾರೆ ೧೫ನೇ ಶತಮಾನಕ್ಕೆ ಪೂರ್ವದಲ್ಲಿ ಬಸವಣ್ಣನವರ ಷಟ್‌ಸ್ಥಲ ವಚನಗಳಿಗೆ ಬರೆಯಲಾದ ಟೀಕಾಗ್ರಂಥವಿತ್ತು. "ಅದರಿಂದ ಕಲ್ಲುಮಠದ ಪ್ರಭುದೇವ, ಗುರುಬಸವರಾಜದೇವ, ಸೋಮಶೇಖರ ಶಿವಯೋಗಿ, ಕಟ್ಟಿಗೆಹಳ್ಳಿಸ್ವಾಮಿ ತಮಗೆ ಬೇಕಾದ ವಚನ–ಟೀಕೆಗಳನ್ನು ಎತ್ತಿಕೊಂಡು ತಮ್ಮ ಕೃತಿಗಳಲ್ಲಿ ಸಂಗ್ರಹಿಸಿಕೊಂಡರು ಎಂದು ಹೇಳಬೇಕಾಗುತ್ತದೆ. ಆದರೆ ಆ ಮೂಲ ಕೃತಿ ಯಾವುದು? ಯಾರು ರಚಿಸಿದ್ದು? ಯಾವ ಕಾಲದ್ದು? ಎಂಬುದು ಅಸ್ಪಷ್ಟವಾಗಿಯೇ ಉಳಿಯುತ್ತದೆ."[೯] ಈ ಬಗ್ಗೆ ಹಸ್ತಪ್ರತಿಗಳ ಶೋಧ, ಅಪ್ರಕಟಿತ ಹಸ್ತಪ್ರತಿಗಳನ್ನು ಸಂಶೋಧಕರು ಪರಿಶೀಲನೆ ಮಾಡುವ ಮೂಲಕ ಖಚಿತ ನಿರ್ಧಾರಕ್ಕೆ ಬರಬೇಕಾಗುತ್ತದೆ.

**ಕೃತಿ ಸ್ವರೂಪ**

ಈಗಾಗಲೇ ತಿಳಿಸಿದಂತೆ 'ಬಸವವಚನ ಸಾರಾಮೃತ' ಕೃತಿಯಲ್ಲಿ ೩೭೫ ವಚನಗಳು[೧೦] ಸೇರಿಸಲ್ಪಟ್ಟಿವೆ. "ಅವು ಬಸವಣ್ಣನವರ ವಚನಗಳಿಂದ ಆಯ್ದುಕೊಂಡುವಾಗಿವೆ. ಪ್ರತಿಸ್ಥಲದಿಂದ ಆಯ್ದುಕೊಂಡ ವಚನಗಳ ಸಂಖ್ಯಾವಿವರ ಇಂತಿದೆ."[೧೧]

| | |
|---|---|
| ೧. ಪಿಂಡಸ್ಥಲ – ೦೧ | ೨. ಪಿಂಡಜ್ಞಾನಸ್ಥಲ – ೦೧ |
| ೩. ಸಂಸಾರ ಹೇಯಸ್ಥಲ – ೧೨ | ೪. ಗುರುಕರುಣಸ್ಥಲ – ೦೧ |
| ೫. ಭಕ್ತಸ್ಥಲ – ೧೫೬ | ೬. ಮಾಹೇಶ್ವರಸ್ಥಲ – ೯೪ |
| ೭. ಪ್ರಸಾದಿಸ್ಥಲ – ೨೫ | ೮. ಪ್ರಾಣಲಿಂಗಿಸ್ಥಲ – ೨೯ |
| ೯. ಶರಣಸ್ಥಲ – ೩೫ | ೧೦. ಐಕ್ಯಸ್ಥಲ – ೨೧ |

ಒಟ್ಟು ೩೭೫ ವಚನಗಳಿವೆ. ಸ್ಥಲದ ಆರಂಭದಲ್ಲಿ ಆಯಾ ಸ್ಥಲದ ಹೆಸರಿದೆ. ಇದರಂತ್ಯದಲ್ಲಿ ಆ ಸ್ಥಲದ ಹೆಸರು ಅದರಲ್ಲಿ ಬಳಸಲಾದ ವಚನಗಳ ಸಂಖ್ಯೆಯನ್ನು ತಿಳಿಸಲಾಗಿದೆ.

**ಟೀಕೆಗಳ ಸ್ವರೂಪ :**

'ಬಸವವಚನ ಸಾರಾಮೃತ' ಕೃತಿಯ ಟೀಕೆಯಲ್ಲಿ ಏಕರೂಪತೆಯ ಟೀಕುಗಳಿರದೇ ವೈವಿಧ್ಯತೆಯಿದೆ. ಡಾ.ಬಿ.ವಿ.ಮಲ್ಲಾಪೂರ ಅವರು "ನೂರಾರು ವಚನಗಳಲ್ಲಿ ಪ್ರತಿಯೊಂದಕ್ಕೆ ಅದರ ಸಾರಭೂತವಾದ ಅರ್ಥವನ್ನು ಒಂದೋ ಎರಡೋ ಮೂರೋ ವಾಕ್ಯಗಳಲ್ಲಿ ಬರೆದಿರುವ ಟೀಕು ಗಮನಿಸುವಂತಹದಾಗಿದೆ. ಇಂಥ ಟೀಕು "ಎಂಬುದೀವಚನದರ್ಥ" ಎಂದು ಕೊನೆಗೊಳ್ಳುತ್ತದೆ. ಪ್ರಾಯಶಃ ಇಂಥ ಟೀಕನ್ನು ಗುರುಬಸವರಾಜದೇವರೇ ಬರೆದಿರಬಹುದು."[೨] ಎಂದು ಹೇಳಿದ್ದಾರೆ.

೧. **ಉದಾಹರಣೆಗೆ:** "ದೇವನೊಳ್ಳಿದನೆಂದು ಮುಯ್ಯಾನಲುಬೇಡ" (ವಚನ-೧೫೧)

**ಟೀಕು:** "ಸುಖದುಃಖ ಬಂದಲ್ಲಿ ಬೆದರದೆ ಗುರುಲಿಂಗಜಂಗಮದ ಸೇವೆಯ ಮಾಡಿದರೆ ಶಿವ ತಾನೆಯಹನೆಂಬುದೀ ವಚನದರ್ಥ" ಎಂದು ಸಂಕ್ಷಿಪ್ತದಲ್ಲಿ ಟೀಕೆ ಇದೆ. ಆದರೂ ವಚನದ ಒಟ್ಟು ಸಾರವನ್ನು ಒಂದೇ ವಾಕ್ಯದಲ್ಲಿ ತಿಳಿಸಿರುವುದರ ಜಾಣ್ಮೆ ಮೆಚ್ಚುವಂತಹದು. ಇನ್ನೊಂದು **ಉದಾಹರಣೆಗೆ:** "ಶಿವಮಯ ವಿಷ್ಣುವಲ್ಲ. ವಿಷ್ಣುಮಯ ಶಿವನಲ್ಲ" ಎಂದು ಆರಂಭವಾಗುವ ವಚನಕ್ಕೆ (೫೬೮) ಬರೆದಿರುವ ಟೀಕು ಹೀಗಿದೆ. "ಮಾಯವು ಬ್ರಹ್ಮವಲ್ಲ, ಬ್ರಹ್ಮವು ಮಾಯವಲ್ಲ. ಮಾಯೆ ಹುಸಿ ಬ್ರಹ್ಮವೇ ನಿತ್ಯ. ಇದು ಸತ್ಯ. ಇದುಕಾರಣ ವಿಷ್ಣು ಮಾಯಾರೂಪು, ಶಿವನು ಮಾಯಾರಹಿತನು, ಮಾಯೆಯನು ಬ್ರಹ್ಮವನು ಒಂದೆಂಬ ಅಜ್ಞಾನಿಗಳ ನುಡಿಗೆ ನಗೆ ಬಂದಿತ್ತೆಂಬುದೀಗ ವಚನದರ್ಥ." ಹೀಗೆ ಸಾರವತ್ತಾಗಿ ಟೀಕು ಬರೆದ ನೂರಾರು ಟೀಕುಗಳು ಇಲ್ಲಿವೆ. ಡಾ. ಎಂ.ಎಂ. ಕಲಬುರ್ಗಿಯವರು ಹೇಳಿದಂತೆ ಪರಿಮಿತ ಗಾತ್ರದಲ್ಲಿ ವಚನಗಳ ಒಳತೋಟಿಯನ್ನು ಕಾಣಲು ಮಾಡಿದ ಶ್ರದ್ಧೆಯ ಪ್ರಯತ್ನ ಇಲ್ಲಿ ಕಾಣಬಹುದು".[೩]

**೨. ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ಅರ್ಥ**

**ವಚನ:** ವೇದಾತೀತ, ಷಡ್ವರ್ಣರಹಿತ, ಅಷ್ಟತ್ರಿಂಶತ್ಕಲಾತೀತ
ವ್ಯೋಮಾತೀತ ಕೂಡಲಸಂಗಮದೇವ

**ಟೀಕು:** ವೇದ ಶ್ರುತಿಗಳಿಂದ ವಚಿಸಿ ಹೇಳಬಾರದು. ವಾಙ್ಮನಕ್ಕೆ ಅಗೋಚರವಾಗಿಪ್ಪುದು ಆ ಪರಬ್ರಹ್ಮವೆಂಬುದೀಗ, ವೇದಾತೀತವೆಂಬ ಶಬ್ದಕ್ಕರ್ಥ.

ನಾದಾಕ್ಷರಸ್ವರೂಪವಾದ ಷಡುವರ್ಣಂಗಳಿಲ್ಲದ ಅನಕ್ಷರ ಸ್ವರೂಪೇ ಪರಬ್ರಹ್ಮವೆಂಬುದೀಗ ಷಡುವರ್ಣರಹಿತವೆಂಬ ಶಬ್ದಕ್ಕರ್ಥ.

ಮೂವತ್ತೆಂಟು ಕಲಾಸ್ವರೂಪನಪ್ಪ ಪಂಚಸಾದಾಖ್ಯಮೂರ್ತಿಯಾಗದೇ ಇದ್ದ ನಿಃಕಲಪರಬ್ರಹ್ಮವೆಂಬುದೀಗ, ಅಷ್ಟತ್ರಿಂಶತ್ಕಳಾತೀತನೆಂಬ ಶಬ್ದಕ್ಕರ್ಥ.

ಆಕಾಶಾದಿ ತತ್ತ್ವಂಗಳು ಇಲ್ಲದ ಅಖಂಡವೆ ಪರಬ್ರಹ್ಮವೆಂಬುದೀಗ, ವ್ಯೋಮಾತೀತನೆಂಬ ಶಬ್ದಕ್ಕರ್ಥ.

"ಇಂತು ಉಪಮಿಸಬಾರದ ಅನುಪಮವಸ್ತು ಭಕ್ತದೇಹಿಕದೇವನಾಗಿ ಕೂಡಿಹ ಕೂಟದಲ್ಲಿ ವಿಯೋಗವಿಲ್ಲದೆ ಸದಾ ಸಯೋಗಿಯಾಗಿಹನೆಂಬುದೀಗ, ಕೂಡಲಸಂಗಮದೇವಯೆಂಬ ಶಬ್ದಕ್ಕರ್ಥ.

**೩. ಸಾರರೂಪದ ತಾತ್ಪರ್ಯಾರ್ಥ:**

ಇಲ್ಲಿ ಕೆಲವು ವಚನಗಳಿಗೆ ಸಂಕ್ಷೀಪ್ತವಾಗಿ, ಸ್ವಲ್ಪ ವಿವರವಾಗಿ ಸಾರಾರ್ಥವನ್ನು ಹೇಳಲಾಗಿದೆ. ಕೊನೆಗೆ 'ಎಂಬುದೀ ವಚನದ ತಾತ್ಪಯಾರ್ಥ' ಎಂದು ಟೀಕನ್ನು ಪೂರ್ಣಗೊಳಿಸಲಾಗಿದೆ.

**ಉದಾ – ಸಂಕ್ಷಿಪ್ತ ಸಾರಾರ್ಥಕ್ಕೆ:**

ಎಡದ ಕೈಯಲಿ ಕತ್ತಿ, ಬಲದ ಕೈಯಲಿ ಮಾಂಸ,
ಬಾಯಲ್ಲಿ ಸುರೆಯ ಗಡುಗೆ ಕೊರಳಲ್ಲಿ ಲಿಂಗವಿರಲು
ಅವರ ಲಿಂಗವೆಂಬೆ, ಸಂಗನೆಂಬೆ,
ಕೂಡಲಸಂಗಮದೇವಾ, ಅವರ ಮುಖಲಿಂಗಿಗಳೆಂಬೆನು!

ಟೀಕು: ಅಂಗದ ಮೇಲೆ ಲಿಂಗವಿರ್ದ ಶರಣನ ಚಾರಿತ್ರವೆಂತಿರ್ದಡೆಯೂ ಆತನ ಲಿಂಗವೆಂದೇ ಕಾಣಬೇಕೆಂಬುದೀ ವಚನದ ತಾತ್ಪರ್ಯಾರ್ಥ.

**ಉದಾ – ಸಾರರೂಪದ ಸಂಕ್ಷೇಪ್ತ ಅರ್ಥ:**

ಇಲ್ಲಿ ಒಂದು ವಚನದ ಒಟ್ಟು ಸಾರವನ್ನು ಕೇವಲ ಒಂದೇ ವಾಕ್ಯದಲ್ಲಿ ಕ್ರೋಢೀಕರಿಸಿ ಹೇಳುವ ಟೀಕಾಕಾರ 'ಎಂಬುದೀವಚನಾರ್ಥ' ಅಥವಾ 'ಎಂಬುದೀ ವಚನದರ್ಥ' ಎಂದು ಪೂರ್ಣಗೊಳಿಸಲಾಗಿದೆ. ಈ ರೀತಿಯ ಟೀಕೆಗೆ ಇಲ್ಲಿ ಹೆಚ್ಚಿನ ಪ್ರಾಧಾನ್ಯತೆ ಕೊಡಲಾಗಿದೆ.

**ವಚನ:** ಏನನೋದಿ ಏನಕೇಳಿ ಏನಮಾಡಿ ಫಲವೇನು
ನಿಮ್ಮವರೊಲಿಯದನ್ನಕ್ಕರ ಶಿವಶಿವಾ, ಮಹಾದೇವಾ,
ಬಾಳಿಲ್ಲದವಳ ವಾಲೆಯಂತಾಯಿತ್ತೆನಗೆ, ಕೂಡಸಂಗಮದೇವಾ

**ಟೀಕು:** ಲಿಂಗದಲ್ಲಿ ಅಂಗವ ಕೂಡದೆ, ಓದಿ ಕೇಳಿದರೇನು ಫಲವಿಲ್ಲಾ ಎಂಬುದೀ ವಚನದರ್ಥ.

**೪. ಅನೇಕ ಪದಗಳಿಗೆ ಏಕಾರ್ಥ ನಿರ್ವಚನ:**

ಅಂದರೆ, ಒಂದು ವಚನದಲ್ಲಿರುವ ಹಲವು ಪದಗಳಿಗೆ ಒಂದೇ ಅರ್ಥ ನೀಡಲಾಗಿದೆ. ಟೀಕಿನ ಕೊನೆಯಲ್ಲಿ ಎಂಬುದೀ ವಚನದ ಉಪಪದಂಗಳಿಗೇಕಾರ್ಥ ನಿರ್ವಚನ ಎಂದು ಹೇಳಲಾಗಿದೆ. ಇಂತಹ ಒಂದೇ ಒಂದು ವಚನ ಈ ಕೃತಿಯಲ್ಲಿದೆ.

**ವಚನ :** ನಾನಾಸ್ಥಾನಂಗಳಲ್ಲಿ ಬಂದು ಕುಳ್ಳಿರ್ದುದು ತೆರಳುವುದೆ, ಅಯ್ಯಾ?
ಅದು ಉಭಯ ಕುಳಕ್ಕಲ್ಲದೆ ತೆರಳದು.
ಬೀದಿಯಲ್ಲಿ ಬಿದ್ದ ಶಿಶುವನು ಹೆತ್ತತಾಯಿ ಹತ್ತಿರೆ ಬಂದು ಎತ್ತುವಂತೆ
ಎನ್ನನಾಜು ಜನ್ಮಕ್ಕೆ ತಂದು ಅಘೋರ ನರಕದಲ್ಲಿಕ್ಕುವುದ ನಾ ಬಲ್ಲೆನು
ಕೂಡಲಸಂಗಮದೇವಾ, ನಿಮ್ಮ ಹಂಗೇನು? ಹಜೆಯೇನು?

ಆನು ಉಭಯ ಲಿಂಗಜಂಗಮದ ಮಱೆಹೊಕ್ಕು

ಎನ್ನ ಭವನಾಸ್ತಿಯಾಗಿ ಬದುಕಿದೆನು.

**ಟೀಕು:** ಹಲವು ಜನ್ಮಂಗಳಲ್ಲಿ ಮಾಡಿದ ಪುಣ್ಯಪಾಪಂಗಳು ಬಱೆದೆ ಅಳಿಯವು. ಸುಜ್ಞಾನ ಕ್ರಿಯೆಯಿಂದ ಅಳಿವುದು. ಜೀವಾತ್ಮರು ಮನುಷ್ಯ ಜನ್ಮ ಮೊದಲಾದ ಏಳು ಜನ್ಮಗಳಲ್ಲಿ ಪುಣ್ಯಪಾಪವನುಣುತ್ತಿಪ್ಪರು. ಶಿವಾಜ್ಞೆಯೆಂದಱೆದು ನಿವೃತ್ತಿಯ ಮಾಡಿದ ಶರಣನು, ಲಿಂಗದಿಂದಾದ ಹಂಗಿನ ಫಲಪದವ ಹಱೆದ ಶರಣನು ಲಿಂಗಜಂಗಮವೆರಡರ ಮಱೆಯಹೊಕ್ಕು ಭವವ ಹಱೆದು ನಿತ್ಯನಾದನೆಂಬುದೀ ವಚನದ ಉಪಪದಂಗಳಿಗೇಕಾರ್ಥ ನಿರ್ವಚನ.

**೫. ಸಂಸ್ಕೃತ ಶ್ಲೋಕಗಳಿಗೆ ಮಾತ್ರ ಬರೆದ ಅರ್ಥ:**

ಬಸವಣ್ಣನವರು ವಚನಗಳ ಮಧ್ಯದಲ್ಲಿ ಸಂಸ್ಕೃತ ಶ್ಲೋಕಗಳನ್ನು ಕೊಟ್ಟಿದ್ದಾರೆ. ಈ ಶ್ಲೋಕಗಳಿಗೆ ಮಾತ್ರ ಪ್ರತಿಪದಾರ್ಥ ಟೀಕೆ ಬರೆದು ಕೊನೆಯಲ್ಲಿ 'ಎಂಬುದೀ ಗ್ರಂಥದರ್ಥ' 'ಈ ವಚನದರ್ಥ ಈ ಶ್ರುತಿಯಲ್ಲಿ ಕಾಣಲಾಯಿತ್ತೆಂಬುದರ್ಥ' ಎಂದು ಹೇಳಲಾಗಿದೆ. ಇಂತಹ ಕ್ವಚಿತ್ತಾದ ಉದಾಹರಣೆಗಳು ಈ ಕೃತಿಯಲ್ಲಿವೆ.

**ವಚನ:** ಎಡದ ಕೈಯಲು ಹಾಲ ಬಟ್ಟಲು

ಬಲದ ಕೈಯಲು ಓಜುಗಟ್ಟಿಗೆ;

ಆವಾಗ ಬಂದನೋ ಎಮ್ಮಯ್ಯ ಬಡಿದು ಹಾಲ ಕುಡಿಸುವ ತಂದೆ?

ಸಾಕ್ಷಿಃ "ದಂಡಕ್ಷೀರ ದ್ವಂದ್ವಹಸ್ತೋ ಜಂಗಮೋ ಭಕ್ತಿಮಂದಿರಂ

ಅತಿ ಭಕ್ತ್ಯಾಲಿಂಗ ಸಂತುಷ್ಠಿ ಅಪಹಾಸ್ಯಾದ್ಯಮಯ ದಂಡನಂ"

ಎಂದುದಾಗಿ ಕೂಡಲಸಂಗಮದೇವಯ್ಯ ತಾನೆ

ಭಕ್ತಿ ಪಥವ ತೋಱುವ ತಂದೆ

**ಟೀಕು:** ದೇಹೇಂದ್ರಿಯಂಗಳ ಗುಣವ ಬಿಡಿಸಿ ಶಿಕ್ಷಾಗುರುವಾಗಿ, ಜ್ಞಾನಾಮೃತವನೆಱೆದು ಮೋಕ್ಷಗುರುವಾಗಿ ಇಂತಪ್ಪ ಜಂಗಮದಲ್ಲಿ ವಿಶ್ವಾಸವಿಲ್ಲದಿದ್ದರೆ ಯಮದಂಡನೆಯೆಂಬುದೀ ವಚನದರ್ಥ.

'ದಂಡಕ್ಷೀರ ದಯಾಹಸ್ತೋ ಜಂಗಮೋ ಭಕ್ತಿಮಂದಿರಂ ಅತಿಭಕ್ತ್ಯಾಲಿಂಗಸಂತುಷ್ಠಿರಪಹಾಸ್ಯಾದ್ಯಮದಂಡನಂ' ಎಂದುದಾಗಿ ಜಂಗಮನು ಭಕ್ತನ ಮನೆಗೆ ಬಹರೆ, ಒಂದು ಕೈಯಲ್ಲಿ ಪ್ರಸಾದವು ಒಂದು ಕೈಯಲ್ಲಿ ಶಾಸ್ತಿಯು. ಈ ಎರಡ ಹಿಡಿದುಕೊಂಡು ಬಹನು. ಅತಿಭಕ್ತಿಯಂ ಮಾಡಿದಡೆ ಪ್ರಸಾದಮಂ ಕೊಡುವನು. ಅಪಹಾಸ್ಯವನಾಡಿದಡೆ ಯಮದಂಡನೆ ಇಕ್ಕುವನು ಎಂಬುದೀ ಗ್ರಂಥದರ್ಥ.

**ಹಸ್ತಪ್ರತಿಸ್ವರೂಪ:** ಬಾಗಲಕೋಟ ಜಿಲ್ಲೆಯ ಮಹಾಲಿಂಗಪುರದ ಮಹಲಿಂಗೇಶ್ವರ ಮಠದಿಂದ ಕನ್ನಡ ಅಧ್ಯಯನಪೀಠದ ಹಸ್ತಪ್ರತಿ ಭಾಂಡಾರಕ್ಕೆ ಬಂದ ಈ ಹಸ್ತಪ್ರತಿಯ "ಉದ್ದ ೧೩, ಅಗಲ ೨". ಒಂದು ಗರಿಯಲ್ಲಿರುವ ಸಾಲುಗಳು ೧೫-೧೬. ಪ್ರತಿ ಚೆನ್ನಾಗಿದೆ. ಈ ಕಟ್ಟಿನಲ್ಲಿ ಒಟ್ಟು ನಾಲ್ಕು

ಕೃತಿಗಳಿವೆ. ಗರಿ ೧-೯೮ ಜಕ್ಕಣಾರ್ಯನ ಏಕೋತ್ತರಶತಸ್ಥಲ; ೯೯-೧೯೬ ಪ್ರಭುದೇವರ ಟೀಕಿನ ವಚನ; ೧-೨೭ ಬಸವರಾಜದೇವರ ಷಡುಸ್ಥಲದ ವಚನದ ಕಥಾಸಾರ; ೨೭-೫೬ ಬಸವವಚನಸಾರಾಮೃತ. ಗರಿಗಳಲ್ಲಿಯ ಅಕ್ಷರಗಳು ಸಣ್ಣದಾಗಿದ್ದು- ಸಾಧಾರಣವಾಗಿವೆ. ಆದಿಃ ಶ್ರೀ ಗುರುಬಸವಲಿಂಗಾಯ ನಮಃ ಶ್ರೀ ಗುರುಬಸವರಾಜದೇವರು ಸೇರಿಸಿದ ಬಸವ ವಚನ ಸಾರಾಮೃತ-ಪ್ರಥಮದಲ್ಲಿ ಪಿಂಡಸ್ಥಲದ ವಚನ. ಅಂತ್ಯಃ ಭಕ್ತಸ್ಥಲಕ್ಕೆ ಸೇರಿದ ವಚನ ೧೭, ಮಹೇಶ್ವರಸ್ಥಲಕ್ಕೆ ೪೦, ಪ್ರಸಾದಿಸ್ಥಲಕ್ಕೆ ೨೫, ಪ್ರಾಣಲಿಂಗಿಸ್ಥಲಕ್ಕೆ ೨೯, ಶರಣಸ್ಥಲಕ್ಕೆ ೩೪, ಐಕ್ಯಸ್ಥಲಕ್ಕೆ ೨೧. ಅಂತು ವಚನ ೩೭೪ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ.

**ಪರಿಷ್ಕರಣ:** ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿರುವ ೧೦೭ನೆಯ ಕ್ರಮಾಂಕದ ಏಕೈಕ ತಾಳೆಗರಿ ಹಸ್ತಪ್ರತಿಯಿಂದ ಪರಿಷ್ಕರಿಸಿರುವ ಡಾ. ವೀರಣ್ಣ ರಾಜೂರ ಅವರು ಈ ಮೊದಲು ಡಾ. ಎಂ.ಎಂ. ಕಲಬುರ್ಗಿಯವರು ಸಂಪಾದಿಸಿದ 'ಬಸವಣ್ಣನವರ ಟೀಕಿನ ವಚನಗಳು' ಕೃತಿಯ ಐದು ಟೀಕೆಗಳಲ್ಲಿ ನಾಲ್ಕನೇ ಟೀಕೆಯೆಂದು ಹೆಸರಿಸಿ ಪ್ರಕಟಿಸಿರುವುದನ್ನು, ಅಲ್ಲಿಯ ಪಾಠಗಳನ್ನೇ ಅನುಸರಿಸಿ ಸಂಪಾದಿಸಿ ಪ್ರತ್ಯೇಕ ಕೃತಿಯಾಗಿ ಪ್ರಕಟಿಸಿದ್ದಾರೆ.

ಹೀಗೆ, ಶ್ರೀಗುರು ಬಸವರಾಜದೇವರು ಸಂಕಲಿಸಿದ 'ಬಸವ ವಚನ ಸಾರಾಮೃತ' ಎಂಬ ಬಸವಣ್ಣನವರ ವಚನಗಳ ಟೀಕಾಕೃತಿಯು ಕನ್ನಡ ಟೀಕಾಸಾಹಿತ್ಯ ಚರಿತ್ರೆಯಲ್ಲಿ ತುಂಬಾ ಮಹತ್ವದ ಮತ್ತು ಮಾದರಿಯ ಕೃತಿಯಾಗಿ ವಿದ್ವಾಂಸರ ಗಮನಸೆಳೆದಿದೆ ಎನ್ನಬಹುದು.

**ಆ. ಬಸವೇಶ್ವರದೇವರ ವಚನಸಾರಾರ್ಥ**

'ಬಸವೇಶ್ವರದೇವರ ವಚನಸಾರಾರ್ಥ' ಎಂಬ ಬಸವಣ್ಣನವರ ವಚನಗಳ ಟೀಕಾಕೃತಿಯ ಕರ್ತೃ ಪರ್ವತಶಿವಯೋಗಿ. ಈತನ ಜೀವಿತ ಕಾಲ ಕ್ರಿ.ಶ. ೧೭೫೦ ಎಂದು ಅಂದಾಜಿಸಲಾಗಿದೆ. ಡಾ. ಎಂ.ಎಂ. ಕಲಬುರ್ಗಿಯವರು "ತೋಂಟದಾರ್ಯನ ಕಾಲ ಕ್ರಿ.ಶ. ೧೪೭೦. ಇವನ ಪರಂಪರೆಯ ಮುರಿಗೆಯ ಶಾಂತವೀರೇಶನ (ಕ್ರಿ.ಶ. ೧೫೩೦) ಗ್ರಂಥಕ್ಕೆ ಟೀಕೆ ಬರೆದಿರುವುದರಿಂದ ಇವನ ಕಾಲ ಕ್ರಿ.ಶ. ೧೬೫೦ ಎಂದು ಕವಿಚರಿತೆಕಾರರು ಹೇಳುತ್ತಾರೆ. ಆದರೆ, ಮುರಿಗೆಯ ಶಾಂತವೀರನು ೫.೫.೧೭೦೩ರಲ್ಲಿ ಐಕ್ಯನಾದನೆಂದು ಶಿಷ್ಯ ಮುರಿಗೆಯ ಗುರುಸಿದ್ದನ "ಮುರಿಗಾಶಾಂತವೀರೇಶ್ವರ" ತಾರಾವಳಿಯಿಂದ ತಿಳಿದುಬರುತ್ತದೆ. ಅಲ್ಲದೇ ಇತ್ತೀಚಿನ ಸಂಶೋಧನೆಯಿಂದಾಗಿ ತೋಂಟದಾರ್ಯರ ಕಾಲ ೧೦೦ ವರ್ಷ ಮುಂದೆ ಬಂದಿದೆ. ಹೀಗಾಗಿ ಈ ಪರಂಪರೆಗೆ ಸಂಬಂಧಿಸಿದ ಪರ್ವತಶಿವಯೋಗಿಯ ಕಾಲವೂ ೧೦೦ ವರ್ಷದಷ್ಟು ಮುಂದೆ ಬಂದು ಕ್ರಿ.ಶ. ೧೭೫೦ ಆಗುತ್ತದೆ."[೧೪] ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಅಲ್ಲದೇ ಪ್ರಸ್ತುತ ಟೀಕಾಕೃತಿಯ ಕರ್ತೃ ಪರ್ವತಶಿವಯೋಗಿಯಾಗಿದ್ದನೆಂಬುದಕ್ಕೆ ಹಸ್ತಪ್ರತಿಯಲ್ಲಿಯ ಭಕ್ತಸ್ಥಲದ ಅಂತ್ಯದಲ್ಲಿ "ಶ್ರೀಮತ್ ಷಟ್ಸ್ಥಲಾದ್ವೈತವಿದ್ಯಾಪ್ರಮೋದಿತ ಶ್ರೀ ವೀರಮಾಹೇಶ್ವರ ಬಾಲೇಂದುಪುರದ

ಹರೀಶ್ವರ ಶಾಂತವೀರೇಶ್ವರ ಚಿದ್ಗರ್ಭಸಂಭವ ಪರ್ವತ ಶಿವಯೋಗೀಶ್ವರ ವಿರಚಿತಮಪ್ಪ ಬಸವೇಶ್ವರದೇವರ ವಚನಸಾರಾರ್ಥ'' – ಎಂಬ ವಾಕ್ಯದಲ್ಲಿ ಸ್ಪಷ್ಟಪಡಿಸಿದ್ದಾನೆ. ಅಲ್ಲದೇ, ಮುರಿಗೆಯ ಶಾಂತವೀರನ ಪ್ರಭುಲಿಂಗ ಕಂದದ ಟೀಕೆಯ ಕೊನೆಯಲ್ಲಿ – ''ಶ್ರೀ ಮತ್ಸರ್ವಜ್ಞತ್ವಾದಿ ಷಡ್ಭಕ್ತಿ ಷಡಂಗ ಸಂಯೋಗ ಷಟ್ಸ್ಥಲಬ್ರಹ್ಮಜ್ಞಾನ ಪಾರಂಗತ ವರ್ಣಾಶ್ರಮಾತೀತ ವೀರಮಾಹೇಶ್ವರಾಚಾರ್ಯ ಸಿದ್ಧಲಿಂಗಸ್ವಾಮಿಗಳ ಜ್ಞಾನೋಪದೇಶಪಾತ್ರನಾದ ಬಾಲೇಂದುಪುರದ ಹರೀಶ್ವರ ಶಾಂತವೀರೇಶ್ವರ ಕರಸರಸಿಜಾತ ಶ್ರೀ ವೀರಮಾಹೇಶ್ವರ ಪರ್ವತಶಿವಯೋಗಿ ವಿರಚಿತ'' ಎಂದು ಹೇಳಿರುವುದರಿಂದ ಎಳಂದೂರ ಹರೀಶ್ವರ ಶಾಂತವೀರೇಶ್ವರನ ಶಿಷ್ಯನಾದ ಈತನು ಸಿದ್ದಲಿಂಗನೆಂಬವನ ಶಿಷ್ಯನೆಂದೂ ತಿಳಿಯುತ್ತದೆ.

''ಈತನು ಬಸವೇಶ್ವರ ದೇವರ ವಚನ ಸಾರಾರ್ಥವಲ್ಲದೆ ಮುರಿಗೆಯ ಶಾಂತವೀರನ ಪ್ರಭುಲಿಂಗಕಂದದ ಟೀಕೆ, ಕರಸ್ಥಲದ ನಾಗಲಿಂಗ ತ್ರಿಪದಿಯ ಟೀಕೆ, ಚೆನ್ನಮಲ್ಲನ ಗುರುಸ್ತೋತ್ರ ತ್ರಿಪದಿಯ ಟೀಕೆ, ಚೆನ್ನಬಸವಣ್ಣನವರ ಕರಣಹಸಿಗೆ ಟೀಕೆ ಮತ್ತು ಮಿಶ್ರಾರ್ಪಣ ಟೀಕೆ, ಭೋಜದೇವಕೃತ ತತ್ವಪ್ರಕಾಶಿಕಾ ಟೀಕೆ, ಏಕೋತ್ತರಶತಸ್ಥಲ ಟೀಕೆ, ಷಡ್ವಕ್ತ್ರಸ್ತೋತ್ರದ ಟೀಕೆ. ''ಸಂಗಮೇಶ್ವರಾ'' ಅಂಕಿತದ ಗುರು ಸ್ತೋತ್ರ ತ್ರಿವಿಧಿಯ ಟೀಕೆಗಳನ್ನೂ ಬರೆದಿರುವನೆಂದು''[೧೫] ಡಾ.ಎಂ.ಎಂ. ಕಲಬಬುರ್ಗಿಯವರು ಹೇಳಿರುವುದರಿಂದ ಪರ್ವತಶಿವಯೋಗಿಯು ವಚನ ಟೀಕೆಗಳಲ್ಲದೇ ಸಾಹಿತ್ಯದ ನಾನಾ ಪ್ರಕಾರದ ಕೃತಿಗಳಿಗೆ ಕೂಡಾ ಟೀಕು ಬರೆದ ಟೀಕಾಕಾರನೆಂಬುದಕ್ಕೆ ಪುಷ್ಠಿ ಲಭಿಸುತ್ತದೆ.

**ಹಸ್ತಪ್ರತಿ ಸ್ವರೂಪ:**

ಗುರುಬಸವರಾಜದೇವರ ಟೀಕೆಯನ್ನು ಒಂದೇ ಹಸ್ತಪ್ರತಿಯಿಂದ ಪರಿಷ್ಕರಿಸಿ ಸಂಪಾದಿಸಿರುವಂತೆ ಪ್ರಸ್ತುತ 'ಬಸವೇಶ್ವರದೇವರ ವಚನಸಾರಾರ್ಥ' ಟೀಕೆಯ ಹಸ್ತಪ್ರತಿ ಕೂಡ ಒಂದೇ ಲಭಿಸಿದೆ. ಡಾ.ಎಂ.ಎಂ. ಕಲಬುರ್ಗಿಯವರು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿಭಂಡಾರಕ್ಕೆ ಸಂಬಂಧಿಸಿದ ೧೦೪೯ನೆಯ ಕ್ರಮಾಂಕ ಕೆ.೧೮೮/೧ನೆಯ ತಾಳೆಗರಿ ಪ್ರತಿಯನ್ನೆ ಪರಿಷ್ಕರಿಸಿ 'ಬಸವಣ್ಣನವರ ಟೀಕಿನ ವಚನಗಳು' ಸಂಪುಟಗಳಲ್ಲಿ 'V'ನೆಯ ಟೀಕೆಯೆಂದು ಗುರುತಿಸಿ ಪ್ರಕಟಿಸಿದ್ದಾರೆ.

ತಾಳೆಗರಿಯ ಉದ್ದ ''೧೭.೬xಅಗಲ ೨'' ಪತ್ರ ೧ ರಿಂದ ೧೮ರ ವರೆಗೆ ಈ ಕೃತಿ ವ್ಯಾಪಿಸಿದೆ. ಪ್ರತಿ ತಾಳಪತ್ರದಲ್ಲಿ ೧೨ ಸಾಲುಗಳಿವೆ. ಪ್ರತಿ ಸಾಧಾರಣವಾಗಿದ್ದು ೧ನೆಯ ಪತ್ರ ಲುಪ್ತವಾಗಿದೆ. ಬಸವಣ್ಣನವರ ಎಲ್ಲ ವಚನಗಳಿಗೂ ಟೀಕೆ ಬರೆಯದೇ ಅಲ್ಲಲ್ಲಿ ಕೆಲವು ವಚನಗಳಿಗೆ ಟೀಕೆ ಬರೆದಿದೆ. ತಾಳಪತ್ರದ ೯ನೇ ಎಲೆಯಲ್ಲಿ ಭಕ್ತಸ್ಥಲದ ೧೦೯ನೆಯ ವಚನದ ಟೀಕೆ ಮುಕ್ತಾಯದಲ್ಲಿ ''ಶ್ರೀಮತ್ಷಟ್ಸ್ಥಲಾದ್ವೈತ....... ಪರ್ವತಶಿವಯೋಗೀಶ್ವರ ವಿರಚಿತಮಪ್ಪ ಬಸವೇಶ್ವರ ವಚನಸಾರಾರ್ಥ'' ಎಂಬ ಹೇಳಿಕೆಯಿಂದ ಈ ಟೀಕೆಯನ್ನು ಪರ್ವತಶಿವಯೋಗಿಗಳೆ ರಚಿಸಿದರೆಂಬುದು ಖಚಿತವಾಗುತ್ತದೆ. ೧೭ನೆ ಪತ್ರದಿಂದ ಮುಂದೆ ''ಬಸವೇಶ್ವರನ ವಚನದ ನುಡಿಗಳನು'' ಎಂಬ ಶೀರ್ಷಿಕೆಯ ಪ್ರಾರಂಭದ

ಕೆಲವು ವಚನಗಳಿಗೆ ಬರೆದ ಬೇರೊಂದು ಬಗೆಯ ಅಪೂರ್ಣ ಅಸ್ಪಷ್ಟ ಟೀಕೆಯಿದೆ. ಈ ಭಾಗವನ್ನು ಸಂಪಾದಕರಾದ ಡಾ. ಎಂ.ಎಂ. ಕಲಬುರ್ಗಿಯವರು ಬಳಸಿಕೊಂಡಿಲ್ಲ.

**ಆದಿ:** .....ರ ದೇವರ ವಚನ ಸಾರಾರ್ಥ ॥ಗ್ರಂ॥ ನಮಸ್ತ್ರಿಮೂರ್ತಿ ರೂಪಾಯ । ನಾದಬಿಂದು ಕಳಾತ್ಮನೇ । ನಮಃ ಷಟ್ಸ್ಥಲರೂಪಾಯ ಶಾಂತವೀರಾಯ ತೇ ನಮಃ ॥೧॥ ಬಸವೇಶ್ವರದೇವತಾ ವಚನಸಾರಾರ್ಥ ॥ ಪ್ರಥಮದಲ್ಲಿ ಪಿ.........ಂಚ್ಚಿನಂಚಿದ್ದಿತ್ತು । ಸಸಿಯೊಳಗಣ ಸಸದ ರುಚಿಯಂತಿದ್ದಿತ್ತು । ಕೂಡಲಸಂಗಮದೇವ ಕನ್ನೆಯ ಸ್ನೇಹದಂತಿದ್ದಿತ್ತು ॥ಟೀಕೆ॥ ಉದಕದಲ್ಲಿ ವಡಬಾಗ್ನಿಯಿರ್ದು । ಆವುದಕನ......... ಬೈಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತೆಂಬ ಶಬ್ದಕ್ಕರ್ಥ...ಲ ತತ್ವಸ್ವರೂಪಮಪ್ಪ ಪಿಂಡದ ಮಧ್ಯದಲ್ಲಿ.

**ಅಂತ್ಯ:** ॥೨೩॥ ಆದಿಯಾಧಾರದ ಶಿವಶಕ್ತಿಸ್ವರೂಪವಾದ ವಿಶ್ವಜೀವನು । ನಾರಾಯಣನ ಪ್ರಕೃತಿಯನು ಗೆದ್ದಂತಾ । ಧನುಜಿತನು.......ಸಮೂಹದ ಬೆಳಗು ಚಿತ್ತಕಾಶವು ಕೂಡಲಸಂಗಯ್ಯ । ಪರಶಿವಲಿಂಗವು । ॥೨೪॥ ಶ್ರೀಶ್ರೀಶ್ರೀಶ್ರೀ॥ ಶ್ರೀಗುರುವೇಗತಿ॥ ಬಸವೇಶ್ವರನ ವಚನದ ನುಡಿಗಳು ॥ ಜಲಬುದ್ಬುದಾಕಾರಮಪ್ಪ ಪಿಂಡದ ಮಧ್ಯದಲ್ಲಿ x x x ...

ಹೀಗೆ, ಈ ಟೀಕಾಗ್ರಂಥದ ಲಿಪಿ ಅಚ್ಚುಕಟ್ಟಾಗಿಲ್ಲ. ಮತ್ತು ಟೀಕು ಕೆಲವು ಕಡೆ ಪೂರ್ಣಗೊಳ್ಳದೇ ಅಪೂರ್ಣ ಸ್ಥಿತಿಯಲ್ಲಿವೆ. ಇಲ್ಲಿ ಕೇವಲ ೨೦೭ ವಚನಗಳು ಮಾತ್ರ ಬಳಸಿಕೊಂಡಿರುವುದು ತಿಳಿಯುತ್ತದೆ. ಈತನ ಟೀಕೆ ವ್ಯಾಖ್ಯಾರ್ಥಕ್ಕಿಂತ ತಾತ್ವಿಕಾರ್ಥಕ್ಕೆ ಮಹತ್ವ ನೀಡಿದೆ ಎನ್ನಬಹುದು.

**ಟೀಕೆಗಳ ಸ್ವರೂಪ:**

ಪರ್ವತ ಶಿವಯೋಗಿಯು ಸರಳವಚನಗಳಂತೆ ಬೆಡಗಿನ ವಚನಗಳಿಗೂ ಟೀಕೆ ಬರೆದಿದ್ದಾನೆ. ಟೀಕು ರಚನೆಯಲ್ಲಿ ತುಂಬಾ ಸಾಧನೆ ಮಾಡಿರುವ ಪರ್ವತಶಿವಯೋಗಿಯು ತಾನೊಬ್ಬ ಪ್ರಸಿದ್ಧ ವಿದ್ವಾಂಸನಾಗಿದ್ದನೆಂಬುದನ್ನು ತೋರಿಸಿಕೊಟ್ಟಿದ್ದಾನೆ. ಆದರೂ ಕೂಡಾ ಪ್ರಸ್ತುತ ಟೀಕಿನ ಹಸ್ತಪ್ರತಿಯಲ್ಲಿ ಕೆಲವು ಕಡೆ ಟೀಕು ಪೂರ್ಣಗೊಳ್ಳದೇ ಅಪೂರ್ಣವಾಗಿದ್ದು ಕಾರಣ ತಿಳಿದುಬರುವುದಿಲ್ಲ. ಡಾ.ಬಿ.ವಿ. ಮಲ್ಲಾಪೂರ ಅವರು "ವಚನದಲ್ಲಿ ಬರುವ ಎಲ್ಲ ವಾಕ್ಯಗಳಿಗೆ ಬರೆದ ಟೀಕೆಯೆ ಇರಲಿ, ಒಂದೊ ಎರಡೊ ವಾಕ್ಯಗಳನ್ನೆತ್ತಿಕೊಂಡು ಬರೆದ ಟೀಕೆಯೆ ಇರಲಿ, ಪ್ರತಿಪದಾರ್ಥ ಟೀಕೆಯೇ ಇರಲಿ, ಸಾರರೂಪದ ಟೀಕೆಯೆ ಇರಲಿ – ಎಲ್ಲವೂ ತಾತ್ವಿಕಾರ್ಥವನ್ನು ಒಳಗೊಂಡಿವೆ. ಇವನ ಶೈಲಿ ಇತರರ ಬೆಡಗಿನವಚನಗಳ ಟೀಕೆಗಳ ಶೈಲಿಯಂತೆ ಸುತ್ತುಬಳಸಿನಿಂದ ಕೂಡಿರದೇ ನೇರವಾಗಿದೆ"[೧೬] ಎಂದು ಈತನ ವಚನ ಟೀಕುಗಳ ಸ್ವರೂಪವನ್ನು ಕುರಿತು ಹೇಳಿರುವುದನ್ನು ಗಮನಿಸಬಹುದು. ಈ ಹೇಳಿಕೆಗೆ ನಿದರ್ಶನವಾಗಿ ಪರ್ವತಶಿವಯೋಗಿ ಬರೆದ ತಾತ್ವಿಕಾರ್ಥದ ಟೀಕೆಯನ್ನು ನೋಡಬಹುದು.

**ವಚನ :** ಅಡವಿಯೊಳಗೊಬ್ಬ ಕಡು ನೀರಡಿಸಿ ಎಡೆಯಲ್ಲಿ ನೀರ
**ಕಂಡಂತಾಯಿತ್ತಯ್ಯ! ಕುರುಡ ಕಣ್ಣ ಪಡೆದಂತೆ, ಬಡವ**

ನಿಧಾನವ ಕಂಡಂತಾಯಿತ್ತಯ್ಯಾ! ನಮ್ಮ ಕೂಡಲಸಂಗನ
ಶರಣರ ಬರವೆನಗೆ ಪ್ರಾಣ ಕಂಡಯ್ಯಾ! (೩೭೭)

**ಟೀಕು:** ಅಡವಿಯಲ್ಲಿ–ಭವಾರಣ್ಯದಲ್ಲಿ, ಒಬ್ಬ–ಓರ್ವ ಜೀವನು, ಕಡುನೀರಡಸಿ–ಅತ್ಯಂತ ಶಿವಾಪೇಕ್ಷೆ ಮುಂದುಗೊಂಡು ಗುರುಕರುಣವ ಪಡೆದು, ಎಡೆಯಲ್ಲಿ–ತೆಱಪಿನಲಿ, ನೀರ ಕಂಡಂತಾಯಿತಯ್ಯಾ–ಚಿದ್ರ ಸಸ್ವರೂಪವಾದ ಇಷ್ಟಲಿಂಗಸಂಬಂಧವಾಯಿತ್ತಯ್ಯಾ ಕುರುಡ ಕಣ್ಣ ಪಡೆದಂತಾಯಿತ್ತು–ಅಂತರಂಗದ ಜ್ಞಾನವಳಿದು ಪ್ರಾಣಲಿಂಗ ಸಂಬಂಧವಾಯಿತ್ತು, ನಿಧಾನವ ಕಂಡಂತಾಯಿತ್ತಯ್ಯಾ–ಆತ್ಮನಲ್ಲಿ ನಿಕ್ಷೇಪ ದ್ರವ್ಯಸ್ವರೂಪವಾದ ಭಾವಲಿಂಗ ಸಂಬಂಧವಾಯಿತ್ತು. ಅದೇ ರೀತಿ ಇನ್ನೊಂದು ವಚನವನ್ನು ನೋಡಬಹುದು.

**ವಚನ:** ಮನಮನ ಬೆರಸಿದಲ್ಲಿ ತನು ಕರಗದಿದ್ದಡೆ, ಸೋಂಕಿನಲ್ಲಿ ಪುಳಕಂಗಳು ಪೊಱಪೊಣ್ಮದಿದ್ದಡೆ, ಕಂಗಳಶ್ರುಜಲಂಗಳು ಸುರಿಯದಿದ್ದಡೆ, ನುಡಿಯಲ್ಲಿ ಗದ್ಗದಂಗಳು ಪೊಱಪೊಣ್ಣದಿದ್ದಡೆ, ಕೂಡಲಸಂಗಮದೇವರ ಭಕ್ತಿಗಿದು ಚಿಹ್ನ. ಎನ್ನಲ್ಲಿ ಇವಿಲ್ಲವಾಗಿ, ಆನು ಡಂಭಕ ಕಾಣಿರೋ!(೩೮೦)

**ಟೀಕು:** ಮನಮನ ಬೆರಸಿದಲ್ಲಿ–ಶರಣನ ಮನಸ್ಸು ಲಿಂಗದ ಮನಸ್ಸು ಏಕವಾದಲ್ಲಿ, ತನು ಕರಗಿದ್ದಡೆ–ಅಂಗವು ಲೀನವಾಗಿದ್ದಿದ್ದರೆ, ಸೋಂಕಿನ ಸುಖದಲ್ಲಿ–ಲಿಂಗಾಂಗಸಂಬಂಧವಾದ ಪರಿಣಾಮದಲ್ಲಿ, ಪುಳಕಂಗಳು ರೋಮೋದ್ಗಮಂಗಳು, ಪೊಱಪೊಣ್ಣದಿದ್ದಡೆ–ಹೊರಹೊಮ್ಮದಿದ್ದರೆ, ಕಂಗಳಶ್ರುಜಲಂಗಳು–ಆನಂದ ಕಣ್ಣೀರ್ಗಳು, ಸೂಸದಿದ್ದಡೆ–ಸುರಿಯದಿದ್ದರೆ, ನುಡಿಯಲ್ಲಿ–ಮಂತ್ರೋಚ್ಛರಣೆಯಲ್ಲಿ, ಗದ್ಗದಂಗಳು ಪೊಣ್ಣದಿದ್ದಡೆ– ನುಡಿತಡಂಬವಾಗದಿದ್ದರೆ, ಇಂತಿವಾಱು ಗುಣಂಗಳುಂಟಾದರೆ ಪರಶಿವಲಿಂಗದ ಭಕ್ತಿಗಿದು ಲಕ್ಷಣವು ಎಂಬುದೀಗ ಕೂಡಲಸಂಗಮದೇವರ ಭಕ್ತಿಗಿದು ಚಿಹ್ನ.

ತಾತ್ವಿಕಾರ್ಥ ಟೀಕು ಒಟ್ಟು ವಚನದ ಆಶಯವನ್ನು ಪ್ರತಿಪಾದಿಸಿದರೆ; ವಚನ ವಾಕ್ಯಕ್ಕೆ ಬರೆದ ಟೀಕು ಹೀಗಿದೆ:

**ವಚನ ವಾಕ್ಯ:** ಸಾಸಿವೆಯ ಮೇಲೆ ಸಾಗರವರಿದಂತಾಯಿತ್ತಯ್ಯ.

**ಟೀಕೆ** : ಸಿದ್ಧಾರ್ಥ ಸ್ವರೂಪವಾದ ಆತ್ಮನಲ್ಲಿ ಭಕ್ತ್ಯಂಬುದಿ ಅವರಿಸಿತ್ತಯ್ಯ.

**ವಚನವಾಕ್ಯ** : 'ಆನಂದದಿಂದ ನಲಿದಾಡುವೆನು'.

**ಟೀಕೆ** : ಇಷ್ಟಲಿಂಗದ ಸತ್ಕ್ರೀಯೋಪಚಾರದ ಪರಿಣಾಮದಿಂದ ವಿನೋದಿಸುವೆನು.

**ವಚನವಾಕ್ಯ** : 'ಆನಂದದಿಂದ ಕುಣಿದಾಡುವೆನು

**ಟೀಕೆ** : ಪ್ರಾಣಲಿಂಗದ ಮಂತ್ರಧ್ಯಾನ ಜಪಸ್ತೋತ್ರದ ಸಂತೋಷದಿಂದ ವಿನೋದಿಸುವೆನು.

**ವಚನವಾಕ್ಯ** : ಉಬ್ಬಿ ಕೊಬ್ಬಿ ಹರುಷದೊಳಾಡುವೆ.

**ಟೀಕೆ:** (ಕೂಡಲಸಂಗನ ಶರಣರು ಬಂದಡೆ) ಕ್ರಿಯೆಯಲ್ಲಿ ಹೆಚ್ಚಿ, ಜ್ಞಾನದಲ್ಲಿ ನಿಮಿಷಿರ್ದು, ಭಾವಲಿಂಗದ ಮನೋಲಯ ಲಿಂಗಪೂಜೆಯಲ್ಲಿ ಆಂದೋಳನಂಗೈಯ್ವೆನು.

ಈ ರೀತಿ ಅರ್ಥಪೂರ್ಣವಾದ ನೇರ ಟೀಕೆಗಳನ್ನು ಪರ್ವತಶಿವಯೋಗಿ ಬರೆಯುವ ಮೂಲಕ ಓದುಗರ ಗಮನ ಸೆಳೆಯುತ್ತಾನೆ. ಕೆಲವೊಮ್ಮೆ ಇಡೀ ವಚನಕ್ಕೆ ಟೀಕೆ ಬರೆಯದೆ, ಬೆಡಗಿನಿಂದ ಕೂಡಿದ ವಾಕ್ಯ ಇಲ್ಲವೇ ಶಬ್ದಕ್ಕೆ ಮಾತ್ರ ಅರ್ಥ ನೀಡಿದ್ದಾನೆ. ಉದಾಹರಣೆಗೆ –"ಕುಂಬಳದ ಕಾಯಿಗೆ ಕಬ್ಬುನದ ಕಟ್ಟುಕೊಟ್ಟರೆ" ಎಂಬ ವಚನದ (೯೫) ಕೊನೆಯ ವಾಕ್ಯವಾದ – "ಮನಹೀನನ ಮೀಸಲ ಕಾಯ್ದಿರಿಸಿದಂತೆ" – ಎಂಬುದಕ್ಕೆ ಮಾತ್ರ ಸಂಕಲ್ಪ ವಿಕಲ್ಪದೊಡನೆ ಕೂಡಿ ವೇಷಾಡಂಬರವಳವಡುವುದಲ್ಲದೆ ಲಿಂಗನಿಷ್ಠಾವಿಶ್ವಾಸ ಕರಿಗೊಳ್ಳದೆಂಬುದರ್ಥ" ಎಂಬ ಟೀಕೆ ನೀಡಿದ್ದಾನೆ. ಈ ರೀತಿಯಲ್ಲಿ ಬೆಡಗಿನ ವಾಕ್ಯಕ್ಕೆ ಬರೆದ ಟೀಕೆಗಳನ್ನು ವಚನ ೫೮, ೧೬೧, ೨೧೬ ಮುಂತಾದವುಗಳಲ್ಲಿ ಕಾಣಬಹುದು. ಹೀಗೆ ವಚನಗಳ ವಾಚ್ಯಾರ್ಥವನ್ನು ಬರೆಯದೇ ಅವುಗಳಿಗೆ ತಾತ್ವಿಕಾರ್ಥವನ್ನು ಬರೆದರು ಕೂಡಾ ಅವು ಸಾಮಾನ್ಯರಿಗೂ ಅರ್ಥವಾಗುವಂತಿರುವುದು ಪರ್ವತಶಿವಯೋಗಿಯ ಟೀಕಿನ ವೈಶಿಷ್ಟ್ಯ ಎಂದು ಹೇಳಬಹುದು.

**೩. ಬಸವರಾಜದೇವರ ಷಟ್‌ಸ್ಥಲ ವಚನದ ಬೆಡಗಿನ ಟೀಕು**

ಈ ಟೀಕಾಕೃತಿಯ ಕರ್ತೃ ಸೋಮಶೇಖರ ಶಿವಯೋಗಿ. ಈತನ ಕಾಲ ಅಂದಾಜು ೧೮೦೦. ಬಸವಣ್ಣನವರ ಷಟ್ಸ್ಥಲ ವಚನಗಳಲ್ಲಿ ೩೪೮ ವಚನಗಳಿಗೆ ಟೀಕೆ ಬರೆದಿದ್ದಾನೆ. ಅಲ್ಲದೇ, ತೋಂಟದ ಸಿದ್ಧಲಿಂಗಯತಿಗಳ ಸಂಪ್ರದಾಯದವನು. ಮುರಿಗಾ ಇಮ್ಮಡಿ ಗುರುಸಿದ್ಧಸ್ವಾಮಿಗಳ (ಲಿಂಗೈಕ್ಯ:೧೭೨೯) ಶಿಷ್ಯ. ಈತನ ಇನ್ನೊಂದು ಟೀಕಾಕೃತಿ ತೋಂಟದ ಸಿದ್ಧಲಿಂಗನ 'ಷಟ್ಸ್ಥಲಜ್ಞಾನಸಾರಾಮೃತದ ಬೆಡಗಿನ ವಚನ ಟೀಕೆ'. ಇವೆರಡೂ ಕೃತಿಗಳು ಕೇವಲ ಬೆಡಗಿನ ವಚನಗಳಿಗೆ ಮಾತ್ರ ಟೀಕೆ ಬರೆದವುಗಳಾಗಿದ್ದು ಇದರಿಂದ ಸೋಮಶೇಖರ ಶಿವಯೋಗಿಯು ವಿಶೇಷವಾಗಿ 'ಬೆಡಗಿನ' ಅಂತರಾರ್ಥವನ್ನು ಸರಳವಾಗಿ ಬಿಡಿಸಬಲ್ಲ ಪಂಡಿತನಾಗಿದ್ದನೆಂಬುದು ತಿಳಿಯುತ್ತದೆ.

**ಹಸ್ತಪ್ರತಿಸ್ವರೂಪ:** ಎಸ್. ಉಮಾಪತಿ ಅವರಿಂದ ದೊರೆತ ತಾಳೆಪ್ರತಿ. ಇದರ ಉದ್ದ "೧೩.೫.xಅಗಲ ೨.೨" "ಬಸವರಾಜದೇವರ ಷಟ್ಸ್ಥಲದ ವಚನದ ಘಟ್ಟಿಘಟ್ಟಿ ನುಡಿಗಳು" ಎಂದು ಕರೆಯಲಾಗಿದೆ. ಪುಟ ೧೧೮ ರಿಂದ ೧೫೭ರ ವರೆಗೆ ಇದೆ. ಎಲ್ಲ ಪುಟಗಳು ಚೆನ್ನಾಗಿದ್ದು ಒಂದೊಂದು ಪುಟದಲ್ಲಿ ೧೦-೧೧ ಸಾಲುಗಳಿವೆ.

**ಆದಿ:** ಶ್ರೀ ನಂದಿಕೇಶ್ವರಾಯನಮಃ! ಬಸವರಾಜದೇವರ ಷಟ್ಸ್ಥಲದ ವಚನದ
ಘಟ್ಟಿಘಟ್ಟಿ ನುಡಿಗಳ ಬರವುದಕ್ಕೆ ಶುಭಮಸ್ತು ॥ ವ ॥

**ಅಂತ್ಯ:** ಇತಿ ಶ್ರೀಮದ್ಬಸವರಾಜದೇವರ ಷಟ್ಸ್ಥಲದ ವಚನದ ಗಟ್ಟಿಗಟ್ಟಿ ನುಡಿಗಳು ಸಮಾಪ್ತ ಮಂಗಳ ಮಹಾ ಶ್ರೀಶ್ರೀಶ್ರೀಶ್ರೀ ಸಚ್ಚಿದಾನಂದ ನಿತ್ಯಪರಿಪೂರ್ಣ ಅವಿರಳ ಪರಂಜ್ಯೋತಿ ಲೀಲಾವಿಗ್ರಹಮೂರ್ತಿಯಾದ ಶ್ರೀ ಸೋಮಶೇಖರಲಿಂಗ ಚರಣಾರವಿಂದ ಮಕರಂದ ರಸಪಾನಪೀನ ಮತ್ತಮದುಕರಾಯಮಾನ ಸೋಮಶೇಖರ ಶಿವಯೋಗಿ ಕೃತ ಬಸವರಾಜದೇವರ ಷಟ್ಸ್ಥಲದ ವಚನದ ಬೆಡಗಿನ ಟೀಕು ಪರಿಸಮಾಪ್ತ ಮಂಗಳ ಮಹಾ ಶ್ರೀಶ್ರೀಶ್ರೀಶ್ರೀಶ್ರೀ.

ಇದೇ ಟೀಕಾಕೃತಿಯ ಇನ್ನೊಂದು ಹಸ್ತಪ್ರತಿ ಎಸ್. ಉಮಾಪತಿ ಅವರಿಗೆ ದೊರೆತಿದೆ. ಈ ತಾಳೆಪ್ರತಿಯ ಉದ್ದ ೧೭.೪xಅಗಲ ೨.೧" **ಷಟ್ಸ್ಥಲಜ್ಞಾನಿ** ಸೋಮಶೇಖರ ಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ "ಷಟ್ಸ್ಥಲಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ". ಪುಟ ೧ ರಿಂದ ೨೨ "ಬಸವರಾಜದೇವರ ಷಟ್ಸ್ಥಲದ ವಚನದ ಘಟ್ಟಿಘಟ್ಟಿ" ನುಡಿಗಳು ಪುಟ ೨೨ (ಅ) ರಿಂದ ೪೬ (ಅ) ಹೀಗೆ ಎರಡು ಕೃತಿಗಳಿವೆ. ಇಲ್ಲಿ ವಚನಗಳ ಜೊತೆಗೆ ೩೪೮ ವಚನಗಳ ಟೀಕು ಇದೆ. ಇಲ್ಲಿಯ ಎಲ್ಲಾ ಪುಟಗಳು ಚೆನ್ನಾಗಿವೆ. ಒಂದೊಂದು ಪುಟದಲ್ಲಿ ೧೧– ೧೨ ಸಾಲುಗಳಿದ್ದು ಇಲ್ಲಿಯ ಅಕ್ಷರಗಳು ಚಿಕ್ಕಗಾತ್ರದಿಂದ ಕೂಡಿವೆ.

**ಆದಿ:** ಶ್ರೀಗುರುಬಸವಲಿಂಗಾಯ ನಮಃ । ಬಸವರಾಜದೇವರ ಷಟ್ಸ್ಥಲದ ವಚನದ ಘಟ್ಟಿಘಟ್ಟಿ ನುಡಿಗಳ ಬರವುದಕ್ಕೆ ಶುಭಮಸ್ತು ॥ ವ ॥ ಟೀಕು.

**ಅಂತ್ಯ:** ಇತೀ ಶ್ರೀಮದ್ಭಸವರಾಜದೇವರ ವಚನದ ಘಟ್ಟಿಘಟ್ಟಿ ನುಡಿಗಳು ಸಂಪೂರ್ಣಂ ಸಮಾಪ್ತ ಮಂಗಳ ಮಹಾ ಶ್ರೀಶ್ರೀಶ್ರೀಶ್ರೀಶ್ರೀ.

ಡಾ. ಎಂ.ಎಂ. ಕಲಬುರ್ಗಿಯವರು ಮೇಲಿನ ತಾಳೆಪ್ರತಿಗಳನ್ನು ಪರಿಷ್ಕರಿಸಿ 'ಬಸವಣ್ಣನವರ ಟೀಕಿನ ವಚನಗಳು' ಸಂಪುಟವನ್ನು ಸಂಪಾದಿಸಿದ್ದಾರೆ. ಇದರಲ್ಲಿ IIIನೆಯ ಟೀಕೆ ಎಂದು ಹೆಸರಿಸಿ ಪ್ರಕಟಿಸಿದ್ದಾರೆ. ಅದರಂತೆ ೫ ಟೀಕಾಕೃತಿಗಳನ್ನು ಇಲ್ಲಿ ಒಟ್ಟಾಗಿ ಸಂಪಾದಿಸಿ ಪ್ರಕಟಿಸಿದ್ದು ಅದರಲ್ಲಿ IIIನೆಯ ಟೀಕೆ ಎಂದು ಉಲ್ಲೇಖಿಸಿರುವುದನ್ನು 'ಸೋಮಶೇಖರ ಶಿವಯೋಗಿ'ಯ ವಚನ ಟೀಕೆಯೆಂದು ತಿಳಿಯಬೇಕು. ಅಲ್ಲದೇ ಹಸ್ತಪ್ರತಿಯಲ್ಲಿಯ ಉಲ್ಲೇಖಗಳಿಂದ ಈತನು ಶ್ರೀಮಂತ ಗುರುಪರಂಪರೆಯನ್ನು ಹೊಂದಿದ್ದನಲ್ಲದೇ, ತನ್ನನ್ನು 'ಷಟ್ಸ್ಥಲಜ್ಞಾನಿ' ಎಂದು ವಿಶ್ಲೇಷಿಸಿಕೊಂಡಿರುವುದು ತಿಳಿಯುತ್ತದೆ. ಹಾಗೂ 'ಬೆಡಗಿನ' ವಚನಗಳಿಗೆ 'ಘಟ್ಟಿಘಟ್ಟಿ' ವಚನಗಳೆಂದು ಹೆಸರಿಸಿದ್ದಾನೆ.

**ಟೀಕಾಸ್ವರೂಪ:** ಬಸವಣ್ಣನವರ 'ಷಟ್ಸ್ಥಲ ವಚನ' ಸಂಪುಟದಿಂದ ಬೆಡಗಿನ ವಚನಗಳನ್ನಾಯ್ದು ಬರೆದಿರುವ ಟೀಕೆಗಳಲ್ಲಿ ಎರಡು ರೀತಿ ಅನುಸರಿಸಿದ್ದಾನೆ.

೧. ವಚನಗಳಲ್ಲಿಯ ಪ್ರತಿಯೊಂದು ಶಬ್ಧಕ್ಕೆ ಅರ್ಥ ಬರೆಯುವುದು.

೨. ಮೂಲವಚನದಲ್ಲಿಯ ಒಂದು ವಾಕ್ಯ ಎತ್ತಿಕೊಂಡು ಅದರ ಬೆಡಗಿನ ರಹಸ್ಯವನ್ನು ಒಡೆಯುವುದು.

**ಮೊದಲ ಮಾದರಿಗೆ ಉದಾಹರಣೆ**

"ತೆರನನರಿವುದಪೂರ್ವ ಅರಿದು ಮರೆವುದುಪೂರ್ವ
ಕೂಡೆ ಶರಣೆಂಬುದಪೂರ್ವ
ಕೂಡಲಸಂಗಮದೇವನ ಭಕ್ತಿ
ಅಭಿಮಾನಿಯ ಜವ್ವನದಂತೆ" – (ವಚನ – ೮೬೮)

ಅಂದರೆ – ತೆರನಂ – ಭಕ್ತಿಯ ಮರ್ಮವನು, ಅರಿವುದು – ತಿಳಿವಂಥಾದು, ಅಪೂರ್ವ – ಎಲ್ಲಿಗಾದರೂ ಒಬ್ಬರೂ. ಅರಿದು– ಆ ಭಕ್ತಿಯ ಮರ್ಮವನ್ನು ತಿಳಿದು, ಮರೆವುದು – ಪ್ರಪಂಚವನು ವಿಸ್ಮೃತಿಗೆಯ್ವಂಥದು, ಅಪೂರ್ವ–ಅತಿನೂತನವು, ಕೂಡಲಸಂಗಮದೇವನ– ಪರಶಿವಲಿಂಗದ, ಭಕ್ತಿ ಶ್ರದ್ಧೆಯ, ಅಭಿಮಾನಿಯ ಜವ್ವನದಂತೆ–ಅಭಿಮಾನವನುಳ್ಳ ಸ್ತ್ರೀಯಳಲ್ಲಿ ಕಾಮಾಭಿಮಾನವು ರಹಸ್ಯವಾಗಿರುವ ಹಾಂಗೆ, ಪರಶಿವನ ಶ್ರದ್ಧೆಯು ಸದ್ಭಕ್ತ ಶಿವಶರಣರುಗಳಲ್ಲಿ ಪ್ರಕಟವಿಲ್ಲದೆ ರಹಸ್ಯವಾಗಿರ್ಪುದೆಂಬ ಶಬ್ಧಕ್ಕರ್ಥ. (ವಚನ–೮೮೧, ೮೪೫, ೮೫೯, ನೋಡಬಹುದು).

**ಎರಡನೇ ಮಾದರಿಗೆ ಉದಾಹರಣೆ**

**ವಚನ:** "ಚೆನ್ನ ಚೇರಮರ ಬಂಟ ನಾನಯ್ಯ
ಎನ್ನ ಚಾಂಗುಬೊಲ್ಲನ ಕಾವ ಗೋಪನೆಂಬರು
ಕೂಡಲಸಂಗನ ಶರಣರು ಒಡೆಯರಾಗಿ
ತಮ್ಮ ತೊತ್ತಿನ ಮಗನೆಂದು ಒಲಿದಂತೆ ನುಡಿವರು"(ವಚನ–೩೩೬)

**ಟೀಕೆ:**

೧. ಚೆನ್ನ ಚೇರಮರಬಂಟ ನಾನಯ್ಯ – ದೀಕ್ಷಾಗುರು ಶಿಕ್ಷಾಗುರು ಸ್ವಾಮಿಗಳ ಛಾತ್ರ ನಾನಯ್ಯ.

೨. ಎನ್ನ ಚಾಂಗುಬೊಲ್ಲನ ಕಾವ ಗೋವನೆಂಬರು – ಸಕಲ ಕರ್ಮಾವಶೇಷಿತನಾದ ಅಂತೇವಾಸಿ ನನ್ನನ್ನು ಸತ್ವಾಣವಘೋಟಕವನು ರಕ್ಷಿಸುವ ಗೋವಳನೆಂದು ಹೇಳುವರು.

೩. ಕೂಡಲಸಂಗನ ಶರಣರು ಒಡೆಯರಾಗಿ – ಶಿವಶರಣರು ಎನಗೆ ಕರ್ತೃವಾಗಿ.

೪. ತಮ್ಮ ತೊತ್ತಿನ ಮಗನೆಂದು ಒಲಿದಂತೆ ನುಡಿವರು – ತಮ್ಮ ಗೌಡಿಪುತ್ರನೆಂದು ಮತ್ತಂ ತಮ್ಮ ಕ್ರಿಯಾಶಕ್ತಿಯ ಚಿತ್ಪುತ್ರನೆಂದು ಕ್ರಿಯಾಜ್ಞಾನಗಳಲ್ಲಿ ಒಪ್ಪಿಗೆಯಾದ ಹಾಂಗೆ ಪ್ರಸಂಗವ ಮಾಡುವರು. (ವಚನ – ೭೨೬, ೭೮೫ ಇತ್ಯಾದಿ ನೋಡಿ) ಎಂಬ ಟೀಕೆಯು ಸುಲಭವಾಗಿ ಅರ್ಥವಾಗುವುದು ಕಷ್ಟವೇ ಸರಿ.

ಹೀಗೆ, ಪ್ರತಿಪದಾರ್ಥ ಬರೆವ ಇಲ್ಲವೇ ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆಯುವ ಟೀಕಾ ಪದ್ಧತಿಯನ್ನು ಅನುಸರಿಸಿದ್ದಾನೆ. ಇನ್ನು ಕೆಲವು ಸಲ ವಚನದಿಂದ ಕೆಲವೇ ಪದ ಇಲ್ಲವೇ ವಾಕ್ಯವನ್ನು ಎತ್ತಿಕೊಂಡು ಅರ್ಥ ಬರೆದಿದ್ದಾನೆ. ಡಾ. ಕಲಬುರ್ಗಿಯವರು ಹೇಳುವಂತೆ – "ಇಲ್ಲಿಯ ಕೆಲವೇ ಟೀಕೆಗಳು ಗುರುಬಸವರಾಜನ ಟೀಕೆಗಳಾಗಿವೆ. ಕೆಲವು ಅವುಗಳನ್ನು ಅಲ್ಪ ಹೋಲುವಂತಿದ್ದರೆ, ಮತ್ತೆ ಕೆಲವು ಸಂಪೂರ್ಣ ಬೇರೆಯಾಗಿವೆ".[೧೩] ಎಂದು ಹೇಳುವುದನ್ನು ಗಮನಿಸಿದರೆ ಟೀಕಾಕಾರರು ತಮ್ಮ ಪೂರ್ವದ ಟೀಕಾಕಾರರ ಕೃತಿಗಳನ್ನು ಆಧಾರವಾಗಿಟ್ಟುಕೊಂಡರೂ ತಮ್ಮ ಸ್ವಪ್ರತಿಭೆ ಮತ್ತು ವಿದ್ವತ್ತಿನ ಶಕ್ತಿಯನ್ನು ತೋರಿದ್ದಾರೆಂಬುದು ಇವರ ಮಾತಿನಿಂದ ತಿಳಿಯುತ್ತದೆ.

**ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ತಾತ್ವಿಕಾರ್ಥಕ್ಕೆ:**

**ವಚನ:** "ಮನದ ಕೊನೆಯ ಮೊನೆಯ ಮೇಲೆ
ಮನೆಯ ಮಾಡಿಕೊಂಡಿಪ್ಪನೊಬ್ಬ ದಾಸೋಹಿ
ಆದಿವಿಡಿದು ಬಂದಾತನೇ ಭಕ್ತ
ಅನಾದಿವಿಡಿದು ಬಂದಾತನೆ ಜಂಗಮ
ಆದಿಗುರು ಅನಾದಿ ಶಿಷ್ಯ
ಈ ಉಭಯ ಕುಳಸ್ಥಳವ ಬಲ್ಲಡೆ
ಆತ ಲಿಂಗಸಂಬಂಧಿ ಕೂಡಲಸಂಗಮದೇವಾ" (ವ. ೮೦೫)

**ಟೀಕು:** ಶರಣನ ಧ್ಯಾನಾಗ್ರದ ರಮಣೀಯಸ್ಥಲದಲ್ಲಿ ಸದಾಚಾರ ಸದ್ಭಕ್ತಿ ಪ್ರವರ್ತನೆಯುಳ್ಳ ಪರಶಿವಲಿಂಗವು ಆಶ್ರಯಮಾಡಿಕೊಂಡು ಪ್ರಾಣಲಿಂಗವಾಗಿ ನೆಲಸಿರ್ಪನೆಂಬುದೀಗ, ಮನದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪನೊಬ್ಬ ದಾಸೋಹಿ ಎಂಬ ಶಬ್ದಕ್ಕರ್ಥ.

ಆ ನಿಃಕಲ ಪರಶಿವನ ಸದ್ರೂಪವೇ ಶಿಷ್ಯನ ಬೋಧೋಪದೇಶ ಕಾರಣಾರ್ಥವಾಗಿ ಗುರುಸ್ವರೂಪವಾಯಿತ್ತೆಂಬುದೀಗ, ಆದಿವಿಡಿದು ಬಂದಾತನೆ ಭಕ್ತನೆಂಬ ಶಬ್ದಕ್ಕರ್ಥ.

ಆ ನಿಃಕಲಪರಶಿವನ ಚಿದ್ರೂಪವೆ ಗುರುಪದೇಶಕಾರಣಾರ್ಥವಾಗಿ ಶಿಷ್ಯನಾಯಿತ್ತೆಂಬುದೀಗ ಅನಾದಿವಿಡಿದು ಬಂದಾತನೆ ಜಂಗಮವೆಂಬ ಶಬ್ದಕ್ಕರ್ಥ. ಡಾ.ಬಿ.ವಿ.ಮಲ್ಲಾಪೂರ ಅವರು ಹೇಳುವಂತೆ: "ಪ್ರಸ್ತುತ ಟೀಕಾಕಾರ ಬೆಡಗಿನ ವಚನಗಳಿಗೆ ಮಾತ್ರ ವಿಸ್ತಾರವಾದ ಟೀಕೆಯನ್ನು ಎರಡು ಮೂರು ವಿಧದಲ್ಲಿ ಬರೆದಿದ್ದಾನೆ. ಸುಲಭವೆನಿಸಿದ ವಚನಗಳಿಗೆ ವಿಸ್ತಾರವಾಗಿ ಟೀಕೆಯನ್ನು ಬರೆಯಲು ಹೋಗದೆ ಬೆಡಗನ್ನು ಒಳಗೊಂಡ ಒಂದೊಂದು ವಾಕ್ಯಕ್ಕೆ ಮಾತ್ರ ಟೀಕೆ ಬರೆದಿದ್ದಾನೆ. ಕೆಲವೊಮ್ಮೆ ವಾಕ್ಯದಲ್ಲಿರುವ ಬೆಡಗಿನ ಶಬ್ದಗಳಿಗೂ ಅರ್ಥ ಬರೆದಿದ್ದಾನೆ"[೧೮] ಎಂದು ಈತನ ಟೀಕು ಸ್ವರೂಪದ ವೈವಿಧ್ಯತೆ ಕುರಿತು ಹೇಳಿದ್ದಾರೆ. ನಿದರ್ಶನಕ್ಕೆ ನೋಡಬಹುದು.

**ಒಂದೇ ವಾಕ್ಯಕ್ಕೆ ವಿಸ್ತಾರವಾದ ಟೀಕೆ:**

**ಉದಾಹರಣೆಗೆ**: "ಉಡುವಿನ ಭಾವದಲ್ಲಿ ಹಡೆದರೆಮ್ಮವರು" ಎಂಬ ೨೯೪ನೇ ವಚನದ ಒಂದು ವಾಕ್ಯಕ್ಕೆ ಬರೆದ ಟೀಕೆ ಹೀಗಿದೆ. "ಸೂಕ್ಷ್ಮಜ್ಞಾನದಲ್ಲಿ ಆತ್ಮನು ಕಿಂಚಿತ್ತು ಜಾಗ್ರ ಉಂಟಾದರೆಯೂ ಸಮ್ಯಜ್ಞಾನಾಚರಣೆಗಳ ವರ್ಧನತ್ವದಿಂದೆ ಮುಕ್ತಿಯನ್ನೈದಲರಿಯದೆ ಇಂದ್ರಿಯಂಗಳ ಪ್ರಪಂಚಿನಲ್ಲಿಯೆ ಅಜ್ಞಾನವುಂಟಾಗಿಪ್ಪುದು ಎಂಬುದೀಗ "ಹೊತ್ತಾರೆ ಎದ್ದ ಕುರುಡಂಗೆ ಅಗಸೆಯಲ್ಲಿ ಅಸ್ತಮಾನವಾದಂತೆ ಎಂಬ ಶಬ್ದಕ್ಕರ್ಥ". ಈ ರೀತಿ ಒಂದೇ ವಾಕ್ಯದ ಟೀಕೆ ಇರುವ ೩೦೨, ೩೦೫, ೩೨೯, ೩೭೨ ಮುಂತಾದ ವಚನಗಳನ್ನು ಗಮನಿಸಬಹುದಾಗಿದೆ.

**ವಚನ ವಾಕ್ಯದಲ್ಲಿಯ ಕೆಲವೆ ಶಬ್ದಗಳಿಗೆ ಮಾತ್ರ ಅರ್ಥ**

**ಉದಾಹರಣೆಗೆ:** ದೇಹಾರವ-ಇಷ್ಟಲಿಂಗಪೂಜೆಯ, ನಿಃಪತ್ತಿಯಿಲ್ಲ-ಲಿಂಗದಲ್ಲಿ ಏಕತ್ವವುಂಟಾಗದು, ಬಂಗುರನಾನು-ಭಂಗಗೇಡಿನಾನು (೩೯) - ಹೀಗೆ ೩೧೧, ೩೨೬, ೩೯೦, ೫೧೧, ೫೩೧, ೫೪೯, ೬೬೪ ಮುಂತಾದ ವಚನಗಳಲ್ಲಿ ಕೆಲವೇ ಶಬ್ದಗಳಿಗೆ ಮಾತ್ರ ಅರ್ಥ ಬರೆದಿದ್ದಾನೆ.

ಸೋಮಶೇಖರ ಶಿವಯೋಗಿಯು ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆಯುವ ಟೀಕಾಪದ್ಧತಿಯನ್ನು ಅನುಸರಿಸಿದ್ದರೂ ಕೂಡಾ ಕೆಲವು ಸಲ ಮೇಲಿನಂತೆ ಸಮ್ಮಿಶ್ರಣ ಮಾದರಿ ಟೀಕು ಬರೆದದ್ದನ್ನು ಇಲ್ಲಿ ಕಾಣಬಹುದಾಗಿದೆ.

**ಇದಕ್ಕೆ ಇನ್ನೊಂದು ಉದಾಹರಣೆ :** "ಇಂದ್ರಿಯ ವಿಷಯ ಪ್ರಪಂಚಿಗಿಚ್ಛಿಸಿ ಮುಂದಾಗುವ ಮುಕ್ತಿಯನು ಹೋಗಲಾಡಿಸಿಕೊಂಡಿತ್ತೆನ್ನ ಮನವು ಎಂಬುದೀಗ ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ಎಂಬ ಶಬ್ದಕ್ಕರ್ಥ.

ಸಂಸಾರ - ಪುತ್ರಮಿತ್ರಕಳತ್ರಾದಿ ಸಂಸೃತಿಯ ಸಂಗವಕೂಟನು,

ಬಿಡದು ನೋಡಾ - ವಿಮೋಚನೆಯ ಮಾಡದಿರುವುದು ಕಂಡಾ,

ಎನ್ನ ಮನವು-ನನ್ನ ಮನಸ್ಸು, ಈ ನಾಯಿತನವ-ಇಂದ್ರಿಯಂಗಳ ವ್ಯಾಪಾರವನ್ನು,

ಮಾಣಿಸು-ಬಿಡಿಸು, ಕೂಡಲಸಂಗಮದೇವ-ಎಲೆ ಪರಶಿವಲಿಂಗವೆ, ನಿಮ್ಮ ಧರ್ಮ-ನಿಮ್ಮ ದಯೆ".

ಹೀಗೆ, ಸೋಮಶೇಖರ ಶಿವಯೋಗಿ ಬರೆದ ಬಸವಣ್ಣನವರ ಷಟ್ಸ್ಥಲ ವಚನಗಳ ಬೆಡಗಿನ ಟೀಕಾ ಕೃತಿಯ ಟೀಕೆಗಳು ಈತನ ಆಧ್ಯಾತ್ಮದ ಅನುಭಾವ ಮತ್ತು ಲಿಂಗಾಯತಧರ್ಮ ತತ್ವಗಳ ಆಳವಾದ ಅಧ್ಯಯನಕ್ಕೆ ಹಿಡಿದ ಕನ್ನಡಿಯಂತಿವೆ.

**ಈ. 'ಷಟ್‌ಸ್ಥಲದ ವಚನ ವ್ಯಾಖ್ಯಾನ'**

'ಶ್ರೀಗುರುಬಸವರಾಜದೇವರು ನಿರೂಪಿಸಿದ 'ಷಟ್‌ಸ್ಥಲದ ವಚನ ವ್ಯಾಖ್ಯಾನ' ಟೀಕಾಕೃತಿಯ ಕಾಲ ೧೮ನೇ ಶತಮಾನ. ಇದರಲ್ಲಿ ಬಸವಣ್ಣನವರ ೯೬೧ ವಚನಗಳಿವೆ. 'ಶ್ರೀಗುರು ಬಸವರಾಜದೇವರು ನಿರೂಪಿಸಿದ' ಎಂದು ಟೀಕಾಕೃತಿಯ 'ಗ' ಪ್ರತಿಯ ಆದಿಯಲ್ಲಿ ಬರುವುದರಿಂದ ಮತ್ತು 'ಕ' ಪ್ರತಿಯ ಆದಿಯಲ್ಲಿ 'ಶ್ರೀ ಬಸವೇಶ್ವರ ದೇವರು ನಿರೂಪಿಸಿದ ಷಟ್‌ಸ್ಥಲವಚನ ಲಿಖಿಸುವುದಕ್ಕೆ ಶುಭಮಸ್ತು....." ಎಂದು ಉಲ್ಲೇಖಗೊಂಡಿರುವುದರಿಂದ ಪ್ರಸ್ತುತ 'ಷಟ್‌ಸ್ಥಲದ ವಚನ ವ್ಯಾಖ್ಯಾನ' ಟೀಕಾಕೃತಿಯ ಕರ್ತೃ 'ಶ್ರೀಗುರುಬಸವರಾಜದೇವರು' ಎಂದು ಹೇಳಿದರೆ ತಪ್ಪಾಗಲಾರದು. ಈ ಟೀಕಾಕೃತಿಯು "ಶ್ರೀಗುರು ಬಸವಲಿಂಗಾಯನಮಃ" ಎಂಬ ವಾಕ್ಯಕ್ಕೆ ಬರೆದ ವಿಸ್ತಾರವಾದ ಟೀಕೆಯೊಂದಿಗೆ ಪ್ರಾರಂಭವಾಗುತ್ತದೆ. ಹೀಗೆಯೇ ಪ್ರಾರಂಭವಾಗುವ ಟೀಕೆ -

೧. ಏಕೋತ್ತರ ಶತಸ್ಥಲ (ಮಹಲಿಂಗದೇವ?)

೨. ಕರಣ ಹಸಿಗೆ (ಚೆನ್ನಬಸವಣ್ಣ)

೩. ಕರಸ್ಥಲದ ನಾಗಲಿಂಗದೇವರ ತ್ರಿವಿಧಿ

೪. ಕೈವಲ್ಯ ಪದ್ಧತಿ (ನಿಜಗುಣ ಶಿವಯೋಗಿ)

ಶ್ರೀ ಗುರುಬಸವರಾಜದೇವರು ನಿರೂಪಿಸಿದ ಷಟ್ಸ್ಥಲದ ವಚನಗಳಿಗೆ ವ್ಯಾಖ್ಯಾನ ಬರೆದಿರುವುದಾಗಿ ಇಲ್ಲಿಯ ಅರ್ಥ. ಹೀಗಾಗಿ ಟೀಕಾಕಾರ ಬೇರೆಯವನಾಗಿದ್ದು ಬಹುಶಃ ಹುಮನಾಬಾದಿನ ನಿರಂಜನಸ್ವಾಮಿ ಎಂಬುದಾಗಿ ದಿ.ಎಸ್.ಶಿವಣ್ಣ ಅವರು ಅಭಿಪ್ರಾಯಪಡುತ್ತಾರೆ. ಸದ್ಯಕ್ಕೆ ನಿರಂಜನಸ್ವಾಮಿಗಳನ್ನು ಟೀಕಾಕಾರನೆಂದು ಭಾವಿಸಬಹುದು. ಈ ಟೀಕಾಕೃತಿಗಳ ಆದಿಯಲ್ಲಿಯೂ ಬರುವುದರಿಂದ, ಇಲ್ಲಿ ಹೇಳಲಾದ ಬಸವಣ್ಣನವರ ಷಟ್ಸ್ಥಲದ ವಚನ ವ್ಯಾಖ್ಯಾನಕಾರ ಮತ್ತು ಈ ನಾಲ್ಕು ಕೃತಿಗಳ ವ್ಯಾಖ್ಯಾನಕಾರ ಒಬ್ಬನೇ ಎಂದು ಉಹಿಸಬಹುದು''[೧೯] ಎಂದು ಡಾ.ಕಲಬುರ್ಗಿಯವರು ಅಭಿಪ್ರಾಯಪಡುತ್ತಾರೆ.

ಪ್ರಸ್ತುತ ವಚನಟೀಕೆಯಲ್ಲಿ ತುಂಗಭದ್ರೆ, ಹಂಪೆಯ ವಿರೂಪಾಕ್ಷ, ಕೊಟ್ಟೂರೇಶ್ವರ, ಕೊಟ್ಟೂರ ಇತ್ಯಾದಿ ಉಲ್ಲೇಖಗಳು ಆಗಾಗ ಬರುವುದರಿಂದ ಈತನು ಹಂಪೆಯ ಪ್ರದೇಶದವನಿರಬಹುದು. ಗುಳ್ಳಿರಾಮನ ಕೆರೆ, ಮರಗದ ಕೆರೆ, ಪಾಕಲಕೆರೆ, ಸೂಳೆಕೆರೆ ಇತ್ಯಾದಿ ಕೆರೆಗಳನ್ನು ಉಲ್ಲೇಖಿಸುವುದರಿಂದ ಇವುಗಳ ನೆರೆಹೊರೆಯ ಗ್ರಾಮದವನಿರಬಹುದು''[೨೦] ಎಂದು ಅಭಿಪ್ರಾಯಪಡುವುದರಿಂದ ಈತನು ಉತ್ತರ ಕರ್ನಾಟಕದ ಬಯಲುಸೀಮೆಗೆ ಸೇರಿದವನೆನ್ನಬಹುದು. ಆದರೆ, ಟೀಕಾಕೃತಿಯ ಮೂಲ ವ್ಯಾಖ್ಯಾನಕಾರನು ತನ್ನ ಹೆಸರನ್ನು ಬಿಟ್ಟುಕೊಡದೇ ಮೌನವಹಿಸಿರುವುದರಿಂದ ಲಿಪಿಕಾರರು ಹಂಪೆಯ ಇಲ್ಲವೇ ಉತ್ತರಕರ್ನಾಟಕ ಪ್ರದೇಶದವರಾಗಿರಬಹುದೆ? ಎಂಬ ಪ್ರಶ್ನೆ ಎದುರಾಗುತ್ತದೆ. ಅಂದರೆ, ಶ್ರೀಗುರುಬಸವರಾಜದೇವರು ಮೂಲ ಟೀಕಾಕಾರರಾಗಿದ್ದರೆ ಇಲ್ಲಿ ಸಮಸ್ಯೆ ಎದುರಾಗುತ್ತಿರಲಿಲ್ಲ. ''ನಿರೂಪಿಸಿದ'' ಎಂದಿರುವುದರಿಂದ ಇಲ್ಲಿ ಬೇರೊಬ್ಬ ಓದುಗ, ಲಿಪಿಕಾರ ಇದನ್ನು ಪ್ರತಿಮಾಡಿಕೊಂಡಿದ್ದಾನೆಂದು ತಿಳಿಯಬಹುದಲ್ಲವೆ? ಈ ಬಗ್ಗೆಯು ಖಚಿತವಾಗಿ ಹೇಳಲು ಲಿಪಿಕಾರನು ಎಲ್ಲಿಯೂ ಹೆಸರನ್ನು ಉಲ್ಲೇಖಿಸಿಲ್ಲ. ಹೀಗೆ, ಟೀಕಾಕಾರ ಮತ್ತು ಈತನ ಕಾಲದ ಬಗ್ಗೆ ಸ್ಪಷ್ಟತೆ ಇಲ್ಲ.

'' 'ಕ' ಪ್ರತಿಯ ಕೊನೆಯಲ್ಲಿ ಬರುವ ''.....ಜೋತ್ಪತ್ತಿನಾಮ ಸಂವತ್ಸರ ವೈಶಾಖ ಶುದ್ಧ ೬ ಬುಧವಾರ ಬಸವರಾಜದೇವರ ವಚನಶಾಸ್ತ್ರ ಮುಗಿಸಿದ್ದು'' ಎಂಬ ಹೇಳಿಕೆ ಈ ಕೃತಿರಚನೆಯ ಕಾಲನಿರ್ಣಯಕ್ಕೆ ನೆರವು ನೀಡುವುದಿಲ್ಲ. ಆದರೆ, ಈ ಟೀಕೆಯ ಬೇರೊಂದು ಪ್ರತಿ ಹೈದ್ರಾಬಾದಿನ ನಿಜಾಂ ಕಾಲೇಜಿನ ಪ್ರೊ.ಎಂ.ಎಸ್. ಮಹಾಂತಯ್ಯನವರ ಪ್ರತಿ. ಇದು ಈಗ ಕನ್ನಡ ಅಧ್ಯಯನಪೀಠದ ಹಸ್ತಪ್ರತಿ ಭಾಂಡಾರದಲ್ಲಿದೆ. ಕೊನೆಯಲ್ಲಿಯ ''ಶಕ ೧೭೬೨ ಪ್ರವರ್ತಮಾನೇ ಪ್ರಮೋದೂತ ಸಂವತ್ಸರ ಮಿತಿ ಮಾರ್ಗಶಿರ ಶುದ್ಧ ಪಂಚಮಿಯಲ್ಲಿ ಲೇಖನ ಸಮಾಪ್ತ'' ಎಂಬುದು ಇದರ ಇತ್ತೀಚಿನ ಗಡುವನ್ನು ಕಿ.ಶ. ೧೮೭೦ಕ್ಕೆ ನಿಲ್ಲಿಸುತ್ತದೆ. ಅದೇನೆ ಇದ್ದರೂ ಟೀಕೆಯುದ್ದಕ್ಕೂ ಬರುವ ಲುಕ್ಸಾನ, ಛಡೇದಾರ, ಛೋಪದಾರ, ಮಾಲದಾರ, ದುಕಾನ ಮೊದಲಾದ ಉರ್ದು ಪದಗಳ ನಿರರ್ಗಳ ಬಳಕೆ

ಮತ್ತು ಕನ್ನಡ ಭಾಷೆಯ ಆಧುನಿಕತೆಗಳು ಈತನು ೧೯ನೆಯ ಶತಮಾನಕ್ಕೆ ಸಂಬಂಧಪಟ್ಟವನೆಂದು ಸೂಚಿಸುತ್ತವೆ. "ಮೊಗಲ ಪಠಾಣರು ದಕ್ಕಣಿಯರು" ಎಂಬಲ್ಲಿಯ ದಕ್ಕಣಿ (ಡೆಕ್ಕನ್) ಎಂಬುದೂ ಈ ಅಭಿಪ್ರಾಯವನ್ನು ಬೆಂಬಲಿಸುತ್ತದೆ. ನಮ್ಮ ಗಮನಕ್ಕೆ ಬಂದ ಹಸ್ತಪ್ರತಿಗಳು ೧೯ನೆಯ ಶತಮಾನದಲ್ಲಿ ಲಿಪಿಸಿದವುಗಳೆಂಬುದನ್ನೂ ಇಲ್ಲಿ ನೆನೆಯಬೇಕು"[೨೧] ಎನ್ನುವ ಡಾ.ಎಂ.ಎಂ. ಕಲಬುರ್ಗಿಯವರ ಅಭಿಪ್ರಾಯವು ಸರಿಯಾಗಿಯೇ ಇದೆ. ಏಕೆಂದರೆ, ಉರ್ದು ಭಾಷೆಯ ಜೊತೆಯಲ್ಲಿ ಇಂಗ್ಲೀಷ್ ಭಾಷೆಯ ಪ್ರಭಾವವು ಇತ್ತೆಂಬುದಕ್ಕೆ 'ಡೆಕ್ಕನ್' ಪದ ಬಳಕೆಯಿಂದ ತಿಳಿಯುತ್ತದೆ.

"ಅಲ್ಲಲ್ಲಿ 'ಜಂಗಮ' 'ಭಕ್ತ' 'ಶರಣ' ಪದಗಳಿಗೆ ತಾತ್ವಿಕ ಅರ್ಥದ ಜೊತೆ ಲೌಕಿಕ ಅರ್ಥವನ್ನು ಹೇಳುವಲ್ಲಿ 'ಜಂಗಮ'ದ ಬಗ್ಗೆ ಒಲವಿನ ಧ್ವನಿ ಕೇಳಿಬರುವುದರಿಂದ ಈತನು ಜಂಗಮನಾಗಿರುವ ಸಾಧ್ಯತೆಯಿದೆ. ಟೀಕೆಯ ಒಡಲಲ್ಲಿ ಆಗಾಗ ಬರುವ ಅಡ್ಡಕತೆ, ಅತಿವಿವರ, ಅಗಾಧ ಲೋಕಾನುಭವ, ಮಾತನಾಡಿದಂತಿರುವ ಜಾನಪದ ಶೈಲಿ ಈತನು ವೃತ್ತಿಯಿಂದ ಪುರಾಣಿಕನಾಗಿರಬಹುದೆಂಬ ಭಾವ ಮೂಡಿಸುತ್ತದೆ"[೨೨] ಎನ್ನುವ ಡಾ.ಎಂ.ಎಂ. ಕಲಬುರ್ಗಿಯವರ ವಿಚಾರಗಳು ಸಮಂಜಸವಾಗಿವೆ ಎಂಬುದಕ್ಕೆ ಪ್ರಸ್ತುತ ೧ನೇ ಟೀಕಾಕಾರನು ಬಸವಣ್ಣನವರ ವಚನಗಳಿಗೆ ಬರೆದ ಲೋಕಾನುಭವದ ಸುದೀರ್ಘ ವಿವರಣೆಯುಳ್ಳ ಟೀಕುಗಳೇ ಸಾಕ್ಷಿಯಾಗಿವೆ ಎನ್ನಬಹುದು. ಈ ಹಿನ್ನೆಲೆಯಲ್ಲಿ ಶ್ರೀಗುರುಬಸವರಾಜದೇವರು ಬಸವಣ್ಣನವರ 'ಷಟ್‌ಸ್ಥಲದ ವಚನ ವ್ಯಾಖ್ಯಾನ' ಟೀಕಾಕೃತಿಯ ಕರ್ತೃವೆಂದು, ಹಂಪೆಯ ಇಲ್ಲವೇ ಉತ್ತರಕರ್ನಾಟಕ ಪ್ರದೇಶದವನೆಂದು, ಜಂಗಮನಾಗಿರಬಹುದಾಗಿದ್ದ ಈತ ಅಪಾರ ಲೋಕಾನುಭವದ ಜೊತೆಗೆ ವೃತ್ತಿಯಿಂದ ಪುರಾಣಿಕನಾಗಿ 'ಪ್ರವಚನ' ಹೇಳುತ್ತಿದ್ದನೆಂದು ಗ್ರಹಿಸಬಹುದಾಗಿದೆ. ಏಕೆಂದರೆ, ೫ ಜನ ಟೀಕಾಕಾರರಲ್ಲಿ 'ಶ್ರೀಗುರುಬಸವರಾಜದೇವರು ನಿರೂಪಿಸಿದ' ಟೀಕೆಗಳು ಸುದೀರ್ಘವಾಗಿವೆ. ಲೋಕಾನುಭವದ ಜೊತೆಗೆ ಅಲ್ಲಲ್ಲಿ ಕಥೆ, ಉಪಕಥೆ, ಜಾನಪದ ಶೈಲಿ, ನುಡಿಗಟ್ಟುಗಳನ್ನು ಟೀಕಿನಲ್ಲಿ ಬಳಸಿರುವುದರಿಂದ ಮತ್ತು ತನ್ನ ಕಾಲದ ಧಾರ್ಮಿಕ, ಸಾಮಾಜಿಕ, ರಾಜಕೀಯ, ಸಾಂಪ್ರದಾಯಿಕ ವಿದ್ಯಮಾನಗಳನ್ನು ಪ್ರಸ್ತಾಪಿಸುವುದರಿಂದ ನಾಡಿನ ಸಾಂಸ್ಕೃತಿಕ ಅಧ್ಯಯನಕ್ಕೆ ಈ ಟೀಕಾಕೃತಿ ಉತ್ತಮ ಆಕರವಾಗಿದೆ ಎನ್ನಬಹುದು.

**ಹಸ್ತಪ್ರತಿ ಸ್ವರೂಪ:** ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯ, ಕನ್ನಡ ಅಧ್ಯಯನ ಪೀಠದ 'ಹಸ್ತಪ್ರತಿ ಭಾಂಡಾರ'ದ ಕ್ರಮಾಂಕ ೪೮೧ನೆಯ ಕೋರಿಕಾಗದ ಪ್ರತಿಯು ಮೂಲತಃ ಕಲಬುರ್ಗಿಯ ಗುರುಬಸವಮಠಕ್ಕೆ ಸೇರಿದುದು. ಉದ್ದ ೧೨ x ಅಗಲ ೫.೨". ಪುಟ ೧–೪೧೪ರ ವರೆಗೆ ಸಂಪೂರ್ಣವಿದ್ದು ಕೊನೆಯ ೫ ಪುಟಗಳು ತ್ರುಟಿತವಾಗಿವೆ. ಅಕ್ಷರಗಳು ಸಾಧಾರಣವಿದ್ದು, ಪ್ರತಿಪುಟದಲ್ಲಿ ೮ ರಿಂದ ೧೨ ಸಾಲುಗಳಿವೆ. ಇದರಲ್ಲಿ ಬಸವಣ್ಣನವರ ೯೬೧ ವಚನಗಳಿದ್ದು ಅವುಗಳಿಗೆ ಟೀಕೆ ಬರೆಯಲಾಗಿದೆ.

**ಆದಿ:** ಶ್ರೀಗುರುಬಸವಲಿಂಗಾಯ ನಮಃ। ಶ್ರೀಗುರು ರೇವಣಸಿದ್ದೇಶ್ವರಾಯ ನಮಃ। ಶ್ರೀ ಬಸವೇಶ್ವರ ದೇವರು ನಿರೂಪಿಸಿದ ಷಟ್‌ಸ್ಥಲ ವಚನ ಲಿಖಿಸುವುದಕ್ಕೆ ಶುಭಮಸ್ತು। ಶೋಭನಮಸ್ತು॥ ಪ್ರಥಮದಲ್ಲಿ ಭಕ್ತಿಸ್ಥಲದ ಪಿಂಡಸ್ಥಲ॥

**ಅಂತ್ಯ:** ಶ್ರೀಶ್ರೀಶ್ರೀಶ್ರೀಶ್ರೀಶ್ರೀಶ್ರೀ.....ರನೆಂಬ ಮಹಾಜ್ಞಾನ ಗುರುಮೂರ್ತಿಗಳು ನಿರೂಪಿಸಿದ ಉಪದೇಶಿಸಿದ ಷಟ್‌ಸ್ಥಲದ ವಚನ ಷಡ್ವಿಧ ಅಂಗ ಲಿಂಗ ಭ.....ಮಾಹೇಶ್ವರರುಗಳು ಶ್ರೋತ ಮುಖದಲ್ಲಿಯೇ ಮುಕ್ತಾಯವಾಯಿತ್ತು. ಮಂಗಳ ಮಂಗಳವೆಂದರೆ ನಿರ್ಮಲವು.... ದೊಡ್ಡಿತ್ತಾದಂಥದು ಶ್ರೀ ಶ್ರೀಯೆಂದರೆ ಜ್ಞಾನ ಮತ್ತು ಶ್ರೀ ಯೆಂದರೆ..... ಬರೆದು ಪಾಠವ ಮಾಡಿಕೊಂಡು ಜ್ಞಾನ ಗುರುಮೂರ್ತಿಗಳಿದ್ದೆಡೆಗೆ ಹೋಗಿ ದೀರ್ಘದಂಡ ನಮಸ್ಕಾರ ಮುಂತಾದ..... ಅಭಿಪ್ರಾಯ ವರ್ಣಂಗಳನ್ನು ಶ್ರೋತ್ರಮುಖದಲ್ಲಿ ಕೇಳಿ ಮನೋಮುಖದಲ್ಲಿ ಹಾರೈಸಿ ಹೃದಯಮುಖದಲಿಂಬುಗೊಂಡು...... ದಲಿ ಜೈಶ್ವರ್ಯವನು ಪಡೆದು ಬಾಳುತ್ತಿಹರೆಂಬುದೀ ಶಾಸ್ತ್ರದ ಫಲಶ್ರುತಿಯು ಸಮಾಪ್ತ ಮಂಗಳ ಮಹಾ ಶ್ರೀಶ್ರೀಶ್ರೀಶ್ರೀಶ್ರೀಶ್ರೀಶ್ರೀಶ್ರೀ ಶ್ರೀಶ್ರೀಶ್ರೀಶ್ರೀ..... ಮಾಹೇಶ್ವರ ಸ್ಥಲಕ್ಕೆ ಸೇರಿದ ವಚನಂಗಳು ೨೪೦, ಪ್ರಸಾದಿಸ್ಥಲಕ್ಕೆ ಸೇರಿದ ವಚನಂಗಳು ೩೦, ಪ್ರಾಣಲಿಂಗಿಸ್ಥಲಕ್ಕೆ.....ನಂಗಳು...೬೫, ಐಕ್ಯಸ್ಥಲಕ್ಕೆ ಸೇರಿದ ವಚನಂಗಳು ೪೧ ಅಂತು ಏಕುವ ೯೬೧ಕ್ಕಂ ಮಂಗಳ ಮಹಾ ಶ್ರೀಶ್ರೀಶ್ರೀಶ್ರೀಶ್ರೀ...ಜೋತ್ಪತ್ತಿನಾಮ ಸಂವತ್ಸರ ವೈಶಾಖಶುದ್ಧ ೬ ಬುಧವಾರ ಬಸವರಾಜದೇವರ ವಚನಶಾಸ್ತ್ರ ಮುಗಿಸಿದ್ದು. ಕಂದ॥ ತಪ್ಪಂಬರ.....ಲು ಬಿಡಿರಿ ತಪ್ಪಕ್ಕು ಶುದ್ಧಮಕ್ಕುಂ। ತಪ್ಪುಳ್ಳಡೆ ತಿದ್ದಿಕೊಂಬುದುತ್ತಮಪುರುಷರ್ ॥೧॥ ಎಂದು ಹಸ್ತಪ್ರತಿಯ ಆರಂಭ ಮತ್ತು ಕೊನೆಯಲ್ಲಿ ಲಿಖಿಸಲಾಗಿದೆ. ಈ ಪ್ರತಿಗೆ 'ಕ' ಎಂದು ಡಾ. ಕಲಬುರ್ಗಿಯವರು ಹೆಸರಿಸಿದ್ದಾರೆ. ಇದೇ ಟೀಕಾಕೃತಿ ವಿಷಯವನ್ನೊಳಗೊಂಡ ಇನ್ನೊಂದು ಹಸ್ತಪ್ರತಿ ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ 'ಹಸ್ತಪ್ರತಿ ಭಾಂಡಾರ'ದಲ್ಲಿದೆ. ಇದಕ್ಕೆ 'ಗ' ಪ್ರತಿ ಎಂದು ಹೆಸರಿಸಲಾಗಿದ್ದು ಇದರ ಸ್ವರೂಪ ಇಂತಿದೆ.

ಈ ಹಸ್ತಪ್ರತಿ ಕೂಡಾ ಕೋರಿಕಾಗದ ಪ್ರತಿಯಾಗಿದ್ದು ಕ್ರಮಾಂಕ ೨೮೯೪. ಉದ್ದ ೧೩.೨" x ಅಗಲ ೪". "ಶ್ರೀಗುರು ಬಸವರಾಜದೇವರು ನಿರೂಪಿಸಿದ ಷಟ್‌ಸ್ಥಲದ ವಚನ ವ್ಯಾಖ್ಯಾನ" ಎಂದು ಕರೆಯಲ್ಪಟ್ಟಿದೆ. ಪುಟ ೧-೫೬೩ರ ವರೆಗೆ ಸಂಪೂರ್ಣವಿದ್ದು, ಪುಟ ೪೨೫ ರಿಂದ ೫೧೮ರ ವರೆಗೆ ರಂದ್ರಗಳಿದ್ದು, ೫೧೯ ರಿಂದ ೫೬೩ರ ವರೆಗೆ ಮೇಲಿನ ಭಾಗ ಮಾತ್ರ ತ್ರುಟಿತವಾಗಿದೆ. ಒಂದೊಂದು ಪುಟದಲ್ಲಿ ೯ ರಿಂದ ೧೦ ಸಾಲುಗಳಿದ್ದು ಅಕ್ಷರಗಳು ದುಂಡಗೆ ಇವೆ. ಈ ಪ್ರತಿಯಲ್ಲಿ ೯೫೮ ವಚನಗಳಿದ್ದು ಎಲ್ಲಕ್ಕೂ ಟೀಕೆ ಬರೆಯಲಾಗಿದೆ. ಮೊದಲನೆಯ 'ಕ' ಹಸ್ತಪ್ರತಿಗಿಂತ ಎರಡನೆಯ 'ಗ' ಹಸ್ತಪ್ರತಿಯಲ್ಲಿ ಕೇವಲ ಮೂರು ವಚನಗಳು ಪ್ರಕಟವಾಗಿಲ್ಲ.

**ಆದಿ:** ಶ್ರೀ ಗುರುಬಸವಲಿಂಗಾಯ ನಮಃ। ಶ್ರೀ ಗುರುಭ್ಯೋನಮಃ। ಶ್ರೀಗಣಾಧಿಪತಯೇ ನಮಃ। ಶ್ರೀ ಸರ್ವಮಂಗಲಾಯೈ ನಮಃ। ಶ್ರೀಗುರು ಚೆನ್ನವೀರೇಂದ್ರಾಯ ನಮಃ। ಶ್ರೀಗುರು ಬಸವರಾಜದೇವರು ನಿರೂಪಿಸಿದ ಷಟ್‌ಸ್ಥಲದ ವಚನವ್ಯಾಖ್ಯಾನ ಸಹಿತ ಬರೆಯುವುದಕ್ಕೆ ಶುಭಮಸ್ತು ಶ್ರೀರಸ್ತು ನಿರ್ವಿಘ್ನಮಸ್ತು॥ ಪ್ರಥಮದಲ್ಲಿ ಭಕ್ತಿಸ್ಥಲದೊಳಗಣ ಪಿಂಡಸ್ಥಲಂ॥

**ಅಂತ್ಯ:** ಶ್ರೀಶ್ರೀಶ್ರೀ ಬಸವೇಶ್ವರದೇವ...ರಾಧ್ಯರಾದ ಸಂಗನಬಸವೇಶ್ವರನೆಂಬ ಮಹಾಜ್ಞಾನ ಗುರುಮೂರ್ತಿಗಳು ನಿರೂಪಿಸಿದ ಉಪದೇಶಿಸಿದ ಷಟ್‌ಸ್ಥಲದ ವಚನ. ಷಡ್ವಿದ ಅಂಗ ಲಿಂಗ

ಭಕ್ತಿಗಳನು ಹೇಳುವಂಥಾ ವಾಕ್ಯಾನುಭಾವವು ಸಮಾಪ್ತ........ಶಾಸ್ತ್ರದ ಫಲಶ್ರುತಿಯು ಸಮಾಪ್ತ ಮಂಗಳ ಮಹಾ ಶ್ರೀಶ್ರೀಶ್ರೀಶ್ರೀಶ್ರೀಶ್ರೀಶ್ರೀಶ್ರೀಶ್ರೀ ಗುರುಬಸವಲಿಂಗಾಯ ನಮಃ। ಅಂತು ಭಕ್ತಿಸ್ಥಲಕ್ಕೆ ಸೇರಿಸಿದ ವಚನ ೫೨೪, ಮಹೇಶ್ವರ ಸ್ಥಲಕ್ಕೆ ೨೪೦, ಪ್ರಸಾದಿ ಸ್ಥಲದಲ್ಲಿ ೩೦, ಪ್ರಾಣಲಿಂಗಿಸ್ಥಲದಲ್ಲಿ ೫೮, ಶರಣಸ್ಥಲದಲ್ಲಿ ೬೫, ಐಕ್ಯಸ್ಥಲದಲ್ಲಿ ೪೧ ಅಂತು ಏಕೂನ ೯೫೮ಕ್ಕಂ ಮಂಗಳ ಮಹಾ ಶ್ರೀಶ್ರೀಶ್ರೀ ಶ್ರೀಗುರು ವೈರಾಗ್ಯ ಚನ್ನಬಸವೇಶ್ವರಾಯ ನಮಃ ಬಸವಾದಿ ಪ್ರಮಥಗಣಂಗಳ ಪಾದಕ್ಕೆ ನಮೋ ನಮೋ,.........೩೪ ಪರಿಧಾವಿನಾಮ ಸಂವತ್ಸರ ದಕ್ಷಿಣಾಯನೆ ವರ್ಷಋತು ಶ್ರಾವಣಮಾಸಕೆ ಸಮಾಪ್ತ ಮಂಗಳ ಮಹಾ ಶ್ರೀಶ್ರೀಶ್ರೀಶ್ರೀ ಶ್ರೀಗುರು ಬಸವಲಿಂಗಾಯ ನಮಃ। ಈ ವಚನಶಾಸ್ತ್ರ....ಪ್ಪನವರ ಕರಕಮಲ ಸಂಜಾತನಾದ ಷಡಕ್ಷರಪ್ಪ.....ಸ್ತೂರ ಖುದ್॥.....ತಪ್ಪಂ ಬರದವ ಕ.....ಡನಪ್ಪಾತಂ ಬರದನೆಂದು ಬೈಯಲು ಬ್ಯಾಡಿರಿ॥ ತಪ್ಪಕ್ಕುಂ ಶುದ್ಧಮಕ್ಕುಂ। ತಪ್ಪುಳ್ಳ.... ದುತ್ತಮ ಪುರುಷರ್ ॥೧॥ ಪ್ರತಿಯಿದ್ದಾಂಗ ಬರದೀನಿ। ನೀವು ಬಲ್ಲಂಥ ಜ್ಞಾನಿಗಳು ತಪ್ಪು ಇದ್ದರೆ ತಮ್ಮ ಬಾಲಕರ ಸರಿಯಂದ....ದಾರಿಸಿ ಓದುವುದು. ಹಸ್ತದೋಷ ವಾಚದೋಷಂಗಳಿದ್ದರೆ ಬಲ್ಲಂಥ ಪ್ರಾಜ್ಞರು ಬಯ್ಯಲಾಗದು. ಸಾಂಬ ಗೌರೀರವ........ಶ್ರೀಶ್ರೀಶ್ರೀಶ್ರೀಶ್ರೀ॥ ಶ್ರೀಗುರು ಬಸವಲಿಂಗಾಯನಮಃ ಶ್ರೀಶ್ರೀಶ್ರೀಶ್ರೀಶ್ರೀಶ್ರೀ ಶ್ರೀಗುರು ಬಸವಲಿಂಗಾಯ ನಮಃ.

ಹೀಗೆ, ಎರಡು ಹಸ್ತಪ್ರತಿಗಳನ್ನು ಆಧಾರವಾಗಿಟ್ಟುಕೊಂಡು ಪಾಠ ಪರಿಷ್ಕರಣ ಮಾಡಿ ಇಲ್ಲಿಯ ಎಲ್ಲ ವಚನಟೀಕುಗಳನ್ನು ಸಂಪಾದಿಸಿ ಒಂದೆಡೆ ಪ್ರಕಟಿಸಿದ ಹೆಗ್ಗಳಿಕೆ ವಿದ್ವಾಂಸರಾದ ಡಾ. ಎಂ.ಎಂ. ಕಲಬುರ್ಗಿಯವರಿಗೆ ಸಲ್ಲುತ್ತದೆ. 'ಗ' ಪ್ರತಿಯ ಅಂತ್ಯದಲ್ಲಿ "ಪ್ರತಿಯಿದ್ದಾಂಗ ಬರದೀನಿ" ಎಂದು ಲಿಪಿಕಾರ ಹೇಳಿರುವುದರಿಂದ ಮೂಲ ಕೃತಿಯನ್ನು ಈತ ಯಥಾಸ್ಥಿತಿ ನಕಲು ಮಾಡಿದನೆಂಬುದಕ್ಕೆ ಪುರಾವೆ ಲಭಿಸುತ್ತದೆ. ಆದರೆ, ಪ್ರತಿಗಳು ತ್ರುಟಿತವಾಗಿರುವುದರಿಂದ 'ಲಿಪಿಕಾರ'ನ ಹೆಸರನ್ನು ತಿಳಿಯಲು ಸಾಧ್ಯವಾಗುವುದಿಲ್ಲ.

**ಟೀಕುಗಳ ಸ್ವರೂಪ:** ಈಗಾಗಲೇ ಹೇಳಿದಂತೆ ಶ್ರೀಗುರುಬಸವರಾಜದೇವರು ಅಪಾರ ಪಾಂಡಿತ್ಯ ಮತ್ತು ಲೋಕಾನುಭವವುಳ್ಳ ಟೀಕಾಕಾರರಾಗಿದ್ದರು. ವಚನಗಳಲ್ಲಿಯ ತಾತ್ವಿಕಾರ್ಥವನ್ನು ಜನಸಾಮಾನ್ಯರಿಗೆ ತಿಳಿಸಲು ಜನರ ಆಡುಭಾಷೆಯಲ್ಲಿ ಲೌಕಿಕ ಉದಾಹರಣೆಗಳನ್ನು ಕೊಟ್ಟು ವ್ಯಾಖ್ಯಾನಿಸುವ ಪದ್ಧತಿ ಇಲ್ಲಿ ಪ್ರಧಾನವಾಗಿ ಕಂಡುಬರುತ್ತದೆ. ವಚನಗಳಲ್ಲಿಯ ಪದ ಮತ್ತು ವಾಕ್ಯಗಳಿಗೆ ಟೀಕಾಕಾರನು ವಾಚ್ಯಾರ್ಥ ಮತ್ತು ತಾತ್ವಿಕಾರ್ಥಗಳೆಂಬ ಎರಡು ಬಗೆಯ ಅರ್ಥ ಬರೆದುದು ಸರ್ವಸಾಮಾನ್ಯ. ಕೆಲವು ಸಲಮಾತ್ರ ಕೇವಲ ವಾಚ್ಯಾರ್ಥ ಬರೆದಿರುವನು.

**ಉದಾ:** "ದಯವಿಲ್ಲದ ಧರ್ಮವದೇನಯ್ಯ: ದಯವಿಲ್ಲದ–ಕರುಣವಿಲ್ಲದ, ಧರ್ಮವು–ಸದ್ಧರ್ಮವು, ಅದೇನಯ್ಯಾ– ಅದೇನು ಪ್ರಯೋಜನವಯ್ಯಾ. ದಯವೇ ಬೇಕು–ಕರುಣವೇ ಬೇಕು, ಸರ್ವಪ್ರಾಣಿಗಳೆಲ್ಲರಲ್ಲಿಯೂ– ಇರುವೆಯಾದಿಯಾಗಿ ಗಜವೇ ಕಡೆಯಾದ ಸಮಸ್ತ ಸ್ಥೂಲಸೂಕ್ಷ್ಮ ಜೀವರುಗಳಲ್ಲಿಯೂ, ದಯವೇ–ಕರುಣವೇ, ಧರ್ಮದ–ಸದ್ಧರ್ಮದ, ಮೂಲವಯ್ಯಾ–ಮೊದಲಯ್ಯ.

ಕೂಡಲಸಂಗಯ್ಯ-ಪರಶಿವಲಿಂಗವು, ಅಂತಲ್ಲದೆ- ಹಂಗಲ್ಲದೆ, ಒಲ್ಲನಯ್ಯಾ-ಒಲಿದು ನಿಜಮೋಕ್ಷವನ್ನು ಕೊಡಲೊಲ್ಲನಯ್ಯಾ".

ಹೀಗೆ ಶುದ್ಧ ವಾಚ್ಯಾರ್ಥ ಬರೆಯುವನಾದರೂ ಕೆಲವು ಸಲ ಲೋಕಾನುಭವ, ಉಪಮೆಯಗಳನ್ನು ಬಳಸಿಕೊಂಡು ಇದನ್ನು ವಿವರಣ ರೂಪದಲ್ಲಿಯೂ ಹೇಳುವನು. ಉದಾಹರಣೆಗೆ:

**ಸಂಸಾರವೆಂಬುದೊಂದು ಗಾಳಿಯ ಸೊಡರು**: "ಸಂಸಾರವೆಂಬುದೊಂದು-ಹೊನ್ನು, ಹೆಣ್ಣು, ಮಣ್ಣೇ ಮುಖ್ಯವಾದ ಸಕಲಸಂಸಾರ ಪ್ರಪಂಚವೆಂಬುದೊಂದು, ಗಾಳಿಯ ಸೊಡರು- ದೀಪವೇನಾದರೂ ಚಾಟಿಗಿಟ್ಟರೆ ತಾಸು, ಗಳಿಗೆ ಪಟುತರವಾಗಿ ಉರದೀತಲ್ಲದೆ ಗಾಳಿಗಿಟ್ಟರೆ ಚರ್ರೆಂದು ಆರಿಹೋಗುವುದು. ಹಾಂಗೆ, ಹೊನ್ನು, ಹೆಣ್ಣು, ಮಣ್ಣು ಮುಖ್ಯವಾದ ಸಕಲ ಪ್ರಪಂಚೆಂಬುವಂಥದು ದೀಪದೋಪಾದಿಯಲ್ಲಿ ವ್ಯರ್ಥಸ್ಯವಾಗಿರ್ಪುದು ಕಾಣಯ್ಯ.

**ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯ:** ಸಂತೆ ಪ್ಯಾಟಿಗೇನಾದರು ಗಾವುದು ಇಗ್ಗಾವುದ ಹರದಾರಿ ಕೂಗಳತೆಯಲ್ಲಿದ್ದಂಥ ಹಲವು ಆತ್ಮರುಗಳು ಒಂದು ತಾಸು ಎರಡು ತಾಸು ಮೂರು ತಾಸು ಪರಿಯಂತರ ಒಬ್ಬರ ಮಾತು ಒಬ್ಬರು ಕೇಳದ ಹಾಂಗೆ ಭೋರೆಂದು ಉಲಿಯುತ್ತಿಹುದು. ಸಾಯಂಕಾಲವಾದ ಮೇಲೆ ಕೈಗಳ ಕಡಲೆಕಾಳು ಹಾರಿಹೊಡೆದೋಪಾದಿಯಲ್ಲಿ ಎತ್ತಲವರತ್ತಲೇ ಹೋಗಿ ನೊಣಹೊಡೆವುದಕ್ಕೊಬ್ಬರೂ ದಿಕ್ಕಿಲ್ಲದ ಹಾಂಗೆ ಬರೆಬಾಜಾರವೆ ಉಳಿಯುತ್ತಿಹುದು. ಹಾಂಗೆ, ಸಿರಿಯೆಂಬುದು – ಅಷ್ಟಭೋಗ ಮಹದೈಶ್ವರ್ಯಯೆಂಬುವಂಥದು, ಸಂತೆಯ ಮಂದಿಯೋಪಾದಿಯಲ್ಲಿ ವ್ಯರ್ಥಸ್ಯವಾಗಿರ್ಪುದು ಕಾಣಯ್ಯ.

**ಇದ ನೆಚ್ಚಿ ಕೆಡಬೇಡ ಸಿರಿಯೆಂಬುದ:** ಸಿರಿಯೆಂಬುದ-ಹೊನ್ನು-ಹೆಣ್ಣು-ಮಣ್ಣು ಮೊದಲಾದ ಅಷ್ಟಭೋಗ ಅಷ್ಟೈಶ್ವರ್ಯವೆಂಬ ಭಾಗ್ಯವನ್ನು ನಚ್ಚಿ-ನಂಬಿ, ಕೆಡಬೇಡ-ಶಿವತತ್ವವಳಿದು ಜೀವನಾಗಬೇಡ, **ನಮ್ಮ ಕೂಡಲಸಂಗಮದೇವನ** – ಇಷ್ಟ ಮಹಾಲಿಂಗವನ್ನು, **ಮರೆಯದೆ** – ತ್ರಿಕಾಲಂಗಳಲ್ಲಿ ತಪ್ಪದೆ, ಪೂಜಿಸು- ಅಷ್ಟವಿಧಾರ್ಚನೆ ಷೋಡಶೋಪಚಾರ ಕ್ರಿಯೆಗಳಿಂದಾರಾಧಿಸಿ ಇಷ್ಟಾರ್ಥ ಸಿದ್ದಿಯನ್ನು ಪಡೆದುಕೋ"[೨೩]

ಹೀಗೆ ಜಾನಪದೀಯರ ಭಾಷೆಯನ್ನು ಬಳಸಿ, ಅಂದಿನ ಬದುಕಿನ ಜೀವನ ವಿಧಾನವನ್ನು, ಸಮಾಜದ ಒಳನೋಟವನ್ನು ಈ ಟೀಕಾಕಾರನ ಟೀಕೆಗಳಲ್ಲಿ ಅಪಾರವಾಗಿ ಕಾಣಬಹುದಾಗಿದೆ. ಟೀಕಾಕಾರನ ಲೋಕಾನುಭವ, ಭಾಷಾಶೈಲಿ, ಸಂತೆಪ್ಯಾಟಿ, ಹರದಾರಿ, ಕೂಗಳತೆ, "ನೊಣ ಹೊಡೆವುದಕ್ಕೊಬ್ಬರೂ ದಿಕ್ಕಿಲ್ಲದ ಹಾಂಗೆ ಬರೆಬಾಜಾರವೆ ಉಳಿಯುತ್ತಿಹುದು" ಎಂಬ ಮಾತುಗಳಿಂದ ಓದುಗರಲ್ಲಿ ಕುತೂಹಲವನ್ನುಂಟುಮಾಡುವ ವೈಚಿತ್ರ್ಯವನ್ನು ಇಲ್ಲಿ ಕಾಣಬಹುದಾಗಿದೆ.

ಹೀಗೆ, ಕೇವಲ ವಾಚ್ಯಾರ್ಥದ ಟೀಕೆಗಳನ್ನಲ್ಲದೆ ಜೊತೆಗೆ ತಾತ್ವಿಕ ಅರ್ಥವನ್ನು ಜೋಡಿಸುವುದನ್ನು ನೋಡಬಹುದು.

**ಉದಾ:** "ಕಾಡಬಸವನ–ಅಡವಿಯಲ್ಲಿರುವಂಥ ಗೂಳಿಬಸವನ, **ಹುಲಿ**–ವ್ಯಾಘ್ರನು, **ಕೊಂಡೊಯ್ದಡೆ**–ಮುರುಕೊಂಡು ತಿಂಬುವುದಕ್ಕೆ ತೆಗೆದುಕೊಂಡು ಹೋದರೆ, **ಆರಯ್ಯಲಾಗದೆ**–ಹುಲಿಯ ಬಾಯಿಂದ ಬಿಡಿಸಿ ಮನೆಗೆ ಹೊಡಕೊಂಡು ಹೋಗಿ ಹುಲ್ಲನ್ನು ಹಾಕಿ ನೀರನ್ನು ಕುಡಿಸಿ ಸಂರಕ್ಷಣೆಯ ಮಾಡಲಾಗದೆ, **ಕೂಡಲಸಂಗಮದೇವಾ**– ಎಲೆ ಒಡೆಯನೆ ಎಂಬ ದೃಷ್ಟೋಪಮಾನದ ಹಾಂಗೆ,

**ಕಾಡಬಸವನ** – ಭವಾರಣ್ಯಪ್ರವೇಶಿಯಾದ ಜೀವನ, **ಹುಲಿ**–ವ್ಯಾಘ್ರನು, **ಕೊಂಡೊಯ್ವಡೆ**–ಮರಣದಲ್ಲಿ ತಂದು ಸಂಹರಿಸುವರೆ, **ಆರಯ್ಯಲಾಗದೆ**–ಯಮನ ಬಾಧೆಯನ್ನು ನಷ್ಟವ ಮಾಡಿ ಗುರುವಿನಲ್ಲಿ ಉತ್ಪತ್ತಿ, ಲಿಂಗದಲ್ಲಿ ಸ್ಥಿತಿ, ಪರತತ್ವವಾದ ಜಂಗಮದಲ್ಲಿ ಐಕ್ಯತ್ವವಾಗಿ ಅಳವಡಿಸಲಾಗಿದೆ, **ಕೂಡಲಸಂಗಮದೇವಾ**–ಎಲೆ ಪರಶಿವಲಿಂಗವೆಯೆಂದು, ಅದುಕಾರಣ ಪರಶಿವಲಿಂಗಕ್ಕುಪಾವಸ್ಥೆಯ ಮಾಡುತ್ತಿಹನು ಜ್ಞಾನಕಲಾತ್ಮನು".[೨೪] ಇಂಥಹುದೇ ಮತ್ತೊಂದು ವಚನಟೀಕೆಯಲ್ಲಿ ತಾತ್ವಿಕತೆಗಿಂತ ಸಾಮಾಜಿಕ ಜೀವನದ ಒಳನೋಟವನ್ನು ಕಾಣಬಹುದು.

**ಆಸೆಗೆ ಹುಟ್ಟಿದ:** ಒಬ್ಬರಿಗೊಂದು ವಸ್ತುವನ್ನು ಕೇಳಿಕೊಂಡರೆ ಕೊಟ್ಟಾರೋ ಕೊಡರೋ ಎಂಬಂಥ ಅಪೇಕ್ಷೆಗೆ, ಹುಟ್ಟಿದ–ಉತ್ಪತ್ಯವಾದ, ಪ್ರಾಣಿ–ಜೀವನು, **ಆಸೆಯನೆ ಕಲಿತು**–ಒಬ್ಬರಿಂದ ಒಂದು ವಸ್ತುವನು ಕೇಳಿಕೊಂಡರೆ ಕೊಟ್ಟಾರೋ ಕೊಡರೋ ಎಂಬಂಥ ಅಪೇಕ್ಷವನೆ ಅಭ್ಯಸಿಸಿ, **ಪುಣ್ಯಪದವಿಯ** – ಮೋಕ್ಷಪದವಿಯನು, **ಬಯಸಿದಡೆ** ಇಚ್ಚೈಸಿದರೆ, **ಭವಮಾಲೆಯ** – ಉತ್ಪತ್ಯವಾದ ಸರಮಾಲೆಯ, **ಭರವು** – ಆಗುವಂಥದು, ತಪ್ಪದು – ವಾರಿಯಾಗದು, **ಬೇಡಲು**– ಒಬ್ಬರಿಂದ ಒಂದು ವಸ್ತುವನ್ನು ಕೇಳಿಕೊಂಡು ಘಟರಕ್ಷಣೆ ಮಾಡಿಕೊಂಬುದಕ್ಕೆ, ಹುಟ್ಟಿದ–ಉತ್ಪತ್ಯವಾದ, **ಪ್ರಾಣಿಗೆ–ಜೀವನಿಗೆ, ಬೇಡಲು** – ಒಬ್ಬರಿಂದ ಒಂದು ವಸ್ತುವನ್ನು ಕೇಳಿಕೊಂಡು ಮಾಡಿಕೊಂಬಂಥದು, **ವಿಧಿಯೇ? – ಪ್ರಾಪ್ತಿಯೇ?**

ಸೂಳೆಗೆ ಹುಟ್ಟಿದ ಪ್ರಾಣಿಗೆ ನಿಜಗುಣವಪ್ಪುದೆ – ಗರತಿ [ಗೃಹ] ಸ್ಥರಿಗೆ ಹುಟ್ಟಿದ ಮಕ್ಕಳೆ ಎದೆಬದಿಯನ್ನು ಮುಚ್ಚಿಕೊಂಡು ತಲೆತುಂಬ ಸೆರಗನ್ನು ಹೊದ್ದುಕೊಂಡು ಗರತಿಲಕ್ಷಣದಿಂದ ತಿರುಗಾಡುವರು. ಸೂಳೆಗೆ ಹುಟ್ಟಿದ ಮಕ್ಕಳೆ ತಲೆಯನ್ನು ಬಿಟ್ಟುಕೊಂಡು ಎದೆಬದಿಯನ್ನು ತೆರಕೊಂಡು ಕಣ್ಣು ಹುಬ್ಬು ಹಾರಿಸುತ್ತ ಹಲ್ಲಕಿಸಿವುತ್ತ ಅಂಗಚಾಷ್ಟಿಯೊಡನೆ ಕೂಡಿ ಚರಿಸುವರಲ್ಲದೆ ಗರತಿ [ಗೃಹ]ಸ್ಥರಿಗೆ ಹುಟ್ಟಿದ ಮಕ್ಕಳ ಹಾಂಗೆ ಸಹಜಸದ್ಗುಣ ಬಂದೀತೆ? ಬರಲರಿಯದು. **ಲಿಂಗದ** – ಮಹಾಲಿಂಗದಿಂದ, **ಉದಯ** – ಉತ್ಪತ್ಯವಾದ, ಶರಣನ – ಶಿವಶರಣನ, **ವಿಸ್ತಾರ** – ಸರ್ವಾಚಾರಸಂಪತ್ತಿನಾಚರಣೆ ಕ್ರಿಯೆಗಳ ವೈಶಾಲ್ಯವನ್ನು, **ಬಯಸಿದಡೊಳವೆ** – ಇಚ್ಛೈಸಿದೊಡೆ ದೊರಕೊಂಡಿತ್ತೇ? ದೊರಕೊಳ್ಳಲರಿಯದು, **ಕೂಡಸಂಗಮದೇವಾ** – ಎಲೆ ಪರಶಿವ ಲಿಂಗವೆ, ನಿಮ್ಮಲ್ಲಿ ಪರಶಿವಲಿಂಗದಲ್ಲಿ ಅಂತಪ್ಪ ಶರಣನು ಕೂಡಿಪ್ಪನಲ್ಲದೆ ಭಿನ್ನವಾಗಲುಂಟೆ? ಇಲ್ಲವು".[೨೫]

ಇನ್ನು ಕೆಲವು ಸಲ ಒಂದು ವಚನಕ್ಕೆ ಮೂರು ಬಗೆಯ ಅರ್ಥ ಹೇಳಿದ್ದನ್ನು ಕಾಣಬಹುದು. ಉದಾ – **ಹಬ್ಬಕ್ಕೆ ತಂದ ಹರಕೆಯ ಕುರಿ** – ಹಬ್ಬಕ್ಕೆ ತಂದ ಮಾರಿಮಸಣೆಯರ ಹಬ್ಬಕ್ಕೆಂದು ಆಗುಮಾಡಿಕೊಂಡು ಬಂದ. **ಹರಕೆಯ ಕುರಿ** – ಮಾರಿಮಸಣೆಯಂಗಾರೋಪಿಸಿದ ಅಜಪಶು.

**ತೋರಣಕ್ಕೆ ತಂದ** – ವಂದನಮಾಲೆಗೆ ಆಗುಮಾಡಿಕೊಂಡು ಬಂದ, **ತಳಿರ ಮೇಯಿತ್ತು** – ಮಾವಿನ ತಳಿರು ನೀರಲತಳಿರು ಮೇಯಿತ್ತು, **ಕೊಂದಹರೆಂಬುದನರಿಯದೆ** – ಇನ್ನೊಂದು ಕ್ಷಣ ಹೋತಿಗೆ ಕುತ್ತಿಗೆ ಕೊಯ್ಯುತ್ತಾರೆಂಬಂಥದನ್ನು ತಿಳಿಯದೆ, ಬೆಂದ–ಕ್ಷುದಾಗ್ನಿಯಿಂದ ದಗ್ಧವಾದ, **ಒಡಲ** – ಅಂಗವನು, **ಹೊರೆಯ ಹೋಯಿತ್ತು**– "ಪೊರೆ ಪೋಷಣೆ" ಎಂದು ಪೋಷಣೆಯ ಮಾಡಿಕೊಂಬುದಕ್ಕೆಂದು ಹೋಯಿತ್ತು.

ಅಂದಂದೆ ಹುಟ್ಟಿತ್ತು – ಮರಣವಾದಾಗಲೇ ಜನನವಾಯಿತ್ತು, ಅಂದಂದೆ ಹೊಂದಿತ್ತು – ಜನನವಾದಾಗಲೇ ಮರಣವಾಯಿತ್ತು. ಕೊಂದವರುಳಿದರೆ – ಅಜಪಶುವ ಸಂಹರಿಸಿದಂಥ ಕಿರಾತರು ಅವರೇನಾದರೂ ನಿತ್ಯರಾಗಿ ಉಳಿದರೆ? ಅವರು ಸತ್ತು ಹೋದರೆಂಬುದರ್ಥ.

**ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತು:** ಹಬ್ಬಕ್ಕೆ ತಂದ – ಪ್ರಾರಬ್ಧಭೋಗವನ್ನು ಪಡೆದನುಭವಿಸುವುದಕ್ಕೆ ಬ್ರಹ್ಮನ ಸೃಷ್ಟಿಗೊಳಗಾಗಿ ದೇಹಸಂಬಂಧಿಯಾಗಿ ಹುಟ್ಟಿಬಂದ, **ಹರಕೆಯ ಕುರಿ** –ಕಾಲಕಾಮಾದಿಗಳಿಗೆ ಆರೋಪಿಸಿದ ಜೀವನೆಂಬ ಅಜಪಶು, ತೋರಣಕ್ಕೆ ತಂದ – ಪ್ರಾರಬ್ಧಭೋಗವನ್ನು ಪಡೆದನುಭವಿಸುವುದಕ್ಕೋಸ್ಕರ ದೇಹಸಂಬಂಧಿಯಾಗಿ ಹುಟ್ಟಿಬಂದ, **ತಳಿರಮೇಯಿತ್ತು** – ಆ ಪ್ರಾರಬ್ಧಬೋಗವನ್ನು ಲಿಂಗಾರ್ಪಣವಿಹೀನವಾಗಿ ಆತ್ಮಾರ್ಪಣವಾಗಿ ಅನುಭವಿಸಿತ್ತು. **ಕೊಂದಹರೆಂಬುದನರಿಯದೆ** – ಪ್ರಾರಬ್ಧಬೋಗವನ್ನು ಆತ್ಮಾರ್ಪಣವಾಗಿ ಅನುಭವಿಸಿದರೆ ಕಾಲಕಾಮಾದಿಗಳಿಂದ ಶಿಕ್ಷೆ ಬಂದೀತೆಂಬಂಥದನ್ನು ತಿಳಿಯದೆ, ಬೆಂದ ಒಡಲ ಹೊರೆಯ ಹೋಯಿತ್ತಲ್ಲ; ಬೆಂದ ಆಶಾಗ್ನಿಯಿಂದ ದಗ್ಧವಾದ, ಒಡಲ ಅಂಗವನ್ನು, ಹೊರೆಯ ಹೋಯಿತ್ತಲ್ಲ – ಪೊರೆ ಪೋಷಣೆ ಎಂದು ಪೋಷಿಸುವುದಕ್ಕೆದು ಹೋಯಿತ್ತಲ್ಲ.

**ಅಂದಂದೆ ಹುಟ್ಟಿತ್ತು** – ಜನನವಾದಾಗಲೇ ಮರಣವಾಯಿತ್ತು, **ಅಂದಂದೆ ಹೊಂದಿತ್ತು** – ಮರಣವಾದಾಗಲೇ ಜನನವಾಯಿತ್ತು, **ಕೊಂದವರುಳಿದರೆ**? ಸಂಹರಿಸಿದಂಥ ಕಾಲಕಾಮಾದಿಗಳೇನಾದರೂ ನಿತ್ಯವಾಗಿ ಉಳಿದರೆ? ಅವರು ಸತ್ತು ಹೋದರೆಂಬುದರ್ಥ.

**ಹಬ್ಬಕ್ಕೆ ತಂದ** – ಅಷ್ಟಬೋಗ ಮಲತ್ರಯಂಗಳನು ಪಡೆದನುಭವಿಸುವುದಕ್ಕೋಸ್ಕರ ಶಿವಸೃಷ್ಟಿಗೊಳಗಾಗಿ ದೇಹಸಂಬಂಧಿಯಾಗಿ – ಹುಟ್ಟಿಬಂದ, **ಹರಕೆಯ ಕುರಿ** – ಕರಣಂಗಳಿಗೆ ಆರೋಪಿಸಿದ ಆತ್ಮನೆಂಬ ಅಜಪಶು, **ತೋರಣಕ್ಕೆ ತಂದ** – ಅಷ್ಟಬೋಗಮಲತ್ರಯಂಗಳನು ಪಡೆದನುಭವಿಸುವುದಕ್ಕೋಸ್ಕರ ಹುಟ್ಟಿಬಂದ, **ತಳಿರ** – ಇಂದ್ರಿಯಂಗಳಲ್ಲಿ ತಳಿತು ಒರಗಲ್ಪಟ್ಟ ವಿಷಯಗಳೆಂಬ ತಳಿರನು, **ಮೇಯಿತ್ತು** – ಲಿಂಗಾರ್ಪಣವಿಹೀನವಾಗಿ ಆತ್ಮಾರ್ಪಣವಾಗಿ ಅನುಭವಿಸಿತ್ತು, **ಕೊಂದಹರೆಂಬುದನರಿಯದೆ** – ಇಂದ್ರಿಯಂಗಳಲ್ಲಿ ತಳಿತು ಒರಗಲ್ಪಟ್ಟ ವಿಷಯಗಳೆಂಬ ತಳಿರನ್ನು ಲಿಂಗಾರ್ಪಣವಿಹೀನವಾಗಿ ಆತ್ಮಾರ್ಪಣವಾಗಿ ಅನುಭವಿಸಿದರೆ ಶಿವನಿಂದ ಶಿಕ್ಷೆ ಬಂದೀತೆಂಬಂಥದನ್ನು ತಿಳಿಯದೆ, **ಬೆಂದ ಒಡಲ ಹೊರೆಯಹೋಯಿತ್ತು** – **ಬೆಂದ** ತಾಪತ್ರಯಾಗ್ನಿಯಿಂದ ದಗ್ದವಾದ, **ಒಡಲ** – ಅಂಗವನ್ನು, **ಹೊರೆಯ ಹೋಯಿತ್ತಲಾ** – "ಪೊರೆ ಪೋಷಣೆ" ಎಂದು ಪೋಷಿಸುವುದಕ್ಕೆಂದು ಹೋಯಿತ್ತಲ್ಲ.

**ಅಂದಂದೆ ಹುಟ್ಟಿತ್ತು** – ಜನನವಾದಾಗಲೇ ಮರಣವಾಯಿತ್ತು, ಅಂದಂದೆ ಹೊಂದಿತ್ತು– ಮರಣವಾದಾಗಲೇ ಜನನವಾಯಿತ್ತು, ಕೊಂದವರುಳಿದರೆ? ಸಂಹರಿಸಿದಂಥ ಪರಮೇಶ್ವರನೇನಾದರೂ ನಿತ್ಯವಾಗಿ ಉಳಿದನಲ್ಲದೆ ಅವರೇನಾದರೂ ಉಳಿದರೆ? ಕೂಡಲ ಸಂಗಮದೇವಾ? ಎಲೆ ಪರಶಿವಲಿಂಗವೆ".[೨೫]

ಹೀಗೆ "ಧರಣಿಯ ಮೇಲೆ ಹಿರಿದಪ್ಪ ಅಂಗಡಿಯನಿಕ್ಕಿ ಹರದ ಕುಳ್ಳಿರ್ದ ನಮ್ಮ ಮಹದೇವಸೆಟ್ಟಿ. ಒಮ್ಮನವಾದರೆ ನುಡಿವ, ಇಮ್ಮನವಾದರೆ ನುಡಿಯ – ಈ ವಾಕ್ಯಕ್ಕೆ ಬರೆದ ಟೀಕೆಯನ್ನು ನೋಡಬಹುದು".[೨೬]

"ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತು" – ಎಂಬ ವಚನಕ್ಕೆ ಈ ಟೀಕಾಕಾರನು ಮೂರು ರೀತಿಯಲ್ಲಿ ಟೀಕೆ ಬರೆದಿದ್ದು, ಮೊದಲ ಟೀಕಿನಲ್ಲಿ ವಾಚ್ಯಾರ್ಥ. ಎರಡನೆಯದರಲ್ಲಿ ಲಕ್ಷಾರ್ಥ, ಮೂರನೆಯದರಲ್ಲಿ ತಾತ್ವಿಕಾರ್ಥವನ್ನು ನೀಡಿದಂತೆ ಕಂಡುಬರುತ್ತದೆ.

ಇದರಿಂದ ಟೀಕಾಕಾರನ ಉದ್ದೇಶ – ಇಲ್ಲಿಯ ವಚನಗಳನ್ನು ಓದಿ ಅರ್ಥಮಾಡಿಕೊಳ್ಳಲು ತಮಗೆ ಸಮಂಜಸವಾದ ಟೀಕೆಯನ್ನು ಮಾದರಿಯಾಗಿಟ್ಟುಕೊಳ್ಳಲು ಅನುಕೂಲವಾಗುವಂತೆ ದಾರಿತೋರಿರಬಹುದೆನಿಸುತ್ತದೆ. ಓದುಗರು ತಮ್ಮ ಶಕ್ತಿ – ಸಾಮರ್ಥ್ಯಕ್ಕೆ ಅಗತ್ಯವಾದುದನ್ನು ಸ್ವೀಕರಿಸಬಹುದೆಂಬ ಉದ್ದೇಶವೇ ವಚನಗಳಿಗೆ ಎರಡು ಇಲ್ಲವೇ ಮೂರು ತೆರನಾದ ಟೀಕು ಬರೆಯಲು ಕಾರಣವಾದ ಉದ್ದೇಶಗಳಲ್ಲಿ ಒಂದೆನ್ನಬಹುದು. ಅಥವಾ ಟೀಕಾಕಾರನು ತಾನು ಬಹುಮುಖ ಪ್ರತಿಭಾವಂತನೆಂಬುದನ್ನು ತಿಳಿಸಲು ಬರೆದಿರಬಹುದು. ಜೊತೆಗೆ, ತನ್ನ ಲೋಕಜ್ಞಾನದ ಮಹತಿಯನ್ನು, ಸಮಕಾಲೀನ ಸಮಾಜದ ಚಿತ್ರಣವನ್ನು ತಿಳಿಸುವ **ಉತ್ಕಟವಾದ ಇಚ್ಚೆಯಿಂದಲೂ** ಈ ರೀತಿ ಟೀಕನ್ನು ರಚಿಸಿರಬಹುದು.

ಈ ರೀತಿಯ ಯೋಜನೆ ರೂಪಿಸಿಕೊಂಡು ಟೀಕೆ ಬರೆಯುತ್ತಿರುವ ಟೀಕಾಕಾರ ಶಬ್ದಾರ್ಥ ಹೇಳುವಲ್ಲಿ, ಭಾವಾರ್ಥ ವಿವರಿಸುವಲ್ಲಿ ಕೆಲವು ಸಲ ಗೆಲುವಿನೊಂದಿಗೆ ಸೋಲನ್ನೂ ಅನುಭವಿಸಿದ್ದಾನೆ ಎಂಬುದನ್ನು ಡಾ.ಎಂ.ಎಂ.ಕಲಬುರ್ಗಿಯವರು ಉದಾಹರಣೆಸಹಿತ ನೀಡಿದ್ದಾರೆ. "**ಚಂದ್ರೋದಯಕ್ಕಂಬುಧಿ ಹೆಚ್ಚುವುದಯ್ಯಾ**" ಎಂಬ ಮಾತಿಗೆ ಬರೆದ ಎರಡು ಅರ್ಥಗಳು ಹೀಗಿವೆಃ

"ಚಂದ್ರೋದಯಕ್ಕೆ – ಪೌರ್ಣಮಿಚಂದ್ರನ, ಉದಯಕ್ಕೆ – ಅವಿರ್ಭಾವಕ್ಕೆ, ಅಂಬುಧಿ– ಸಮುದ್ರವು, ಹೆಚ್ಚುವುದಯ್ಯ – ನೊರೆತೆರೆಬುದ್ಬುದಶೀಕರಾದಿ ತುಂತುರ್ವನಿಗಳಿಂದ ಅದಲ್ಲದೆ ಹೆಣ್ಣುತೆರೆ ಗಂಡುತೆರೆಗಳಿಂದ ಭೋರ್ ಭೋರ್ ಎಂದು ಉಳಿಯುತ್ತಿಹುದಯ್ಯಾ" "ಚಂದ್ರೋದಯಕ್ಕೆ –ಆತ್ಮನು ಉಂಬುತ್ತ ಉಡುವುತ್ತ ಸುಖಸಂತೋಷದಲ್ಲಿ ಇದ್ದುದಕ್ಕೆ, ಅಂಬುಧಿ–ದೇಹವು, ಹೆಚ್ಚುವುದಯ್ಯಾ ಒಂದು ಹೊರೆ ಎರಡುಹೊರೆ ಮೂರುಹೊರೆ ನಾಲ್ಕುಹೊರೆ ಉಬ್ಬುತ್ತಿಹುದಯ್ಯಾ" ಇಲ್ಲಿ ಎರಡನೆಯ ಪ್ರತಿಯೊಂದು ವಚನಕ್ಕೂ ವಾಚ್ಯಾರ್ಥವಲ್ಲದೆ ತಾತ್ವಿಕಾರ್ಥವನ್ನೂ ಬರೆದೇ ತೀರಬೇಕೆಂದು ಹಠಹಿಡಿದು ಬರೆದಂತಾಗಿದೆ. ಇಂಥ ಪ್ರಸಂಗಗಳಲ್ಲಿ ಈತನ ಬರವಣಿಗೆ ತೀರ ಲಘುವಾಗಿ ತೋರುತ್ತದೆ. ಅಲ್ಲದೆ ನಾರಿವಾಣ– ಹರಿವಾಣ ಇತ್ಯಾದಿಯಾಗಿ ತಪ್ಪು ಅರ್ಥ ಬರೆದುದೂ ಸ್ಪಷ್ಟವಾಗುತ್ತದೆ"[೨೮] ಎಂಬುದನ್ನು ಗಮನಿಸಿದಾಗ ಟೀಕಾಕಾರನಿಂದಾದ ನ್ಯೂನತೆಯನ್ನು, ಅವರ ಮಿತಿಗಳನ್ನು ಅರಿಯಬಹುದಾಗಿದೆ.

ಆದರೆ, ಬಸವಣ್ಣನವರ ಷಟ್‌ಸ್ಥಲದ ಎಲ್ಲ ವಚನಗಳಿಗೆ ಬೇಸರವಿಲ್ಲದೇ ತುಂಬಾ ವಿಸ್ತಾರವಾದ ಟೀಕೆ ಬರೆದಿರುವ ಟೀಕಾಕಾರ ಶ್ರೀಗುರುಬಸವರಾಜದೇವರು ತನ್ನ ಕಾಲದ ಸಾಮಾಜಿಕ ಜನಜೀವನದ ವಿವಿಧ ಆಯಾಮಗಳನ್ನು ವ್ಯಾಖ್ಯಾನ ವಿವರಣೆಯಲ್ಲಿ ಬಳಸಿಕೊಂಡಿದ್ದಾನೆ. ಇಷ್ಟೆಲ್ಲಾ ಶ್ರಮಪಟ್ಟು ಬರೆದರೂ ಎಲ್ಲಿಯೂ ತನ್ನ ಹೆಸರನ್ನಾಗಲಿ, ಕಾಲವನ್ನಾಗಲಿ, ಗುರುಪಂರಂಪರೆಯನ್ನಾಗಲಿ ಹೇಳದಿರುವುದು ಮಾತ್ರ ಸೋಜಿಗ. ಟೀಕಾಕಾರನ ವ್ಯಾಖ್ಯಾನ ಭಾಷೆ, ಪ್ರಚಲಿತ ಆಡುಮಾತಿನ ರೀತಿ, ಸಾಮಾಜಿಕ ನಂಬಿಕೆ, ಆಚಾರ, ವಿಚಾರ ಸಮಕಾಲೀನ ಸ್ಥಿತಿಗತಿ ಮುಂತಾದ ವಿಷಯಗಳನ್ನು ಅರಿಯಲು ಇದೊಂದು ಮಹತ್ವದ ಟೀಕಾಕೃತಿಯೆನ್ನಬಹುದು. ಅದಕ್ಕಾಗಿ ಡಾ. ಎಂ. ಎಂ. ಕಲಬುರ್ಗಿಯವರು "ಈತನ ಟೀಕೆಗಳು ತುಂಬಾ ವಿಸ್ತಾರವಾಗಿದ್ದು ಎಲ್ಲ ವಚನಗಳಿಗೂ ಬರೆಯಲಾಗಿದೆ. ಬೇಸರವಿಲ್ಲದೆ ವ್ಯಾಖ್ಯಾನಮಾಡುತ್ತ ಹೋದ ಇವನ ಶ್ರಮ, ನಿಷ್ಠೆ ಮೆಚ್ಚುವಂತಹದು. ಈತನ ಕಾಲದ ಜನಜೀವನ ಅಧ್ಯಯನ ಮಾಡುವಷ್ಟರ ಮಟ್ಟಿಗೆ ಈ ಟೀಕೆ ಸಮಕಾಲೀನ ಜೀವನವನ್ನು ಹೊಸೆದುಕೊಂಡು ಮುಂದುವರಿದಿದೆ"[೨೯] ಎಂದು ಅಭಿಪ್ರಾಯಪಟ್ಟಿರುವುದರಲ್ಲಿ ಯಾವುದೇ ಅತಿಶಯೋಕ್ತಿ ಇಲ್ಲವೆನ್ನಬಹುದು.

**ಉ. ಶ್ರೀ ಬಸವೇಶ್ವರ ವಚನದೊಳಗೆ ಕಠಿಣವಾದ ಸಂಕ್ಷೇಪ ವಚನಕ್ಕೆ ಟಿಪ್ಪಣಿ**

ಪ್ರಸ್ತುತ ಟೀಕೆಯ ಹೆಸರು ಮತ್ತು ಟೀಕಾಕರ್ತೃವಿನ ಹೆಸರು ತಿಳಿದು ಬಂದಿಲ್ಲ. ಹೀಗಾಗಿ, ಇದೊಂದು ಅನಾಮಧೇಯ ಟೀಕಾಕೃತಿಯಾಗಿದೆ. ಈ ಕೃತಿಯನ್ನು ಪರಿಷ್ಕರಿಸಿ ಸಂಪಾದಿಸಿದ ಡಾ. ಎಂ. ಎಂ. ಕಲಬುರ್ಗಿಯವರು ತಮಗೆ ಲಭ್ಯವಾದ ಎರಡು ಹಸ್ತಪ್ರತಿಗಳನ್ನು ಬಳಸಿಕೊಂಡಿದ್ದಾರೆ. ಕೋರೆ ಕಾಗದದ ಪ್ರತಿಯೊಂದರಲ್ಲಿ ಕೊನೆಗೆ "ಶ್ರೀ ಬಸವೇಶ್ವರ ವಚನದೊಳಗೆ ಕಠಿಣವಾದ ಸಂಕ್ಷೇಪ ವಚನಕ್ಕೆ ಟಿಪ್ಪಣಿಯಾಗಿ ಲಿಂಗಾಂಗಸಾಮರಸ್ಯವನು ಬಲ್ಲ ಷಟ್‌ಸ್ಥಲ ಸಮ್ಯಕ್‌ಜ್ಞಾನ ಮಹಾನುಭಾವಿಗಳು ನಿರೂಪಿಸಿದುದು ಲಿಖಿಸಿ ಸಮಾಪ್ತಿಯಾಯಿತ್ತು" ಎಂಬ ಉಲ್ಲೇಖದಿಂದ ಟೀಕಾಕೃತಿ ಮತ್ತು ಟೀಕಾಕಾರನ ಬಗ್ಗೆ ಏನೊಂದು ತಿಳಿದುಬರುವುದಿಲ್ಲ. ಹೀಗಾಗಿ ಕೃತಿರಚನೆ ಕಾಲವು ಅಸ್ಪಷ್ಟವಾಗಿದೆ.

ಕನ್ನಡ ಅಧ್ಯಯನ ಪೀಠದಲ್ಲಿ 'ಹಸ್ತಪ್ರತಿ ಭಾಂಡಾರ' ದಲ್ಲಿರುವ ೬೧೫ ನೇ ಕ್ರಮಾಂಕದ ತಾಳೆಪ್ರತಿಯ ಕೊನೆಯಲ್ಲಿ ".....ಪ್ರಥಮಾಚಾರ್ಯರಾದ ಸಿದ್ದೇಶ್ವರಸ್ವಾಮಿಗಳು, ಅವರ ಬೋಧಾಪುತ್ರರಾದ ಬೋಳಬಸವೇಶ್ವರ ಸ್ವಾಮಿಗಳು, ಅವರ ಬೋಧಾಪುತ್ರರಾದ ಗುಮ್ಮಳಾಪುರದ ಸಿದ್ಧವೀರಣ್ಣಸ್ವಾಮಿಗಳು, ಅವರ ಬೋಧಾಪುತ್ರರಾದ ಗುಳೂರ ಸಿದ್ಧಲಿಂಗಸ್ವಾಮಿಗಳು, ಅವರ ಬೋಧಾಪುತ್ರರಾದ ಗಗನದಸ್ವಾಮಿಗಳು, ಅವರ ಬೋಧಾಪುತ್ರರಾದ ಕಟ್ಟಿಗೆಹಳ್ಳಿಸ್ವಾಮಿಗಳು, ಅವರ ಬೋಧಾಪುತ್ರರಾದ ಮುರಿಗೆಸ್ವಾಮಿಗಳು, ಅವರ ಬೋಧಾಪುತ್ರರಾದ ರೇವಣಸಿದ್ದೇಶ್ವರಸ್ವಾಮಿಗಳು" ಎಂದು ಗುರುಪರಂಪರೆ ಸ್ಥಗಿತವಾಗುತ್ತದೆ. ಇದರಿಂದ ಪ್ರಸ್ತುತ ಟೀಕಾಕರ್ತೃ ರೇವಣಸಿದ್ದೇಶ್ವರಸ್ವಾಮಿಗಳೆಂದು ಹೇಳಲು ಖಚಿತ ಆಧಾರ ಲಭಿಸಿದಂತಾಗುತ್ತದೆ. ಆದರೆ, ಉಲ್ಲೇಖಿತ ರೇವಣಸಿದ್ದನೇ ಟೀಕಾಕಾರನೆಂದು ಇಲ್ಲಿ ಹೇಳದಿರುವುದರಿಂದ ಮತ್ತು ರೇವಣಸಿದ್ದನೆಂಬ ಟೀಕಾಕಾರನಿರುವ ಬಗ್ಗೆಯಾಗಲಿ, ಆತನ ಜೀವನ – ಕಾಲದ ಬಗೆಗಾಗಲಿ ಯಾವುದೇ ಆಧಾರಗಳು ಲಭಿಸುವದಿಲ್ಲ. ಇದೇ ಕಾರಣವೋ ಏನೋ ಡಾ. ಎಂ.ಎಂ. ಕಲಬುರ್ಗಿಯವರು

"ರೇವಣಸಿದ್ದೇಶ್ವರ ಸ್ವಾಮಿಗಳು ಇದರ ಕರ್ತೃಗಳೆಂದು ಊಹಿಸಬಹುದಾದರೂ ಸಂದೇಹ ಉಳಿದುಕೊಳ್ಳುತ್ತದೆ"[೩೦] ಎಂದು ಅಭಿಪ್ರಾಯಪಟ್ಟಿದ್ದಾರೆ.

ಇದೇ ಟೀಕಾಕೃತಿಯ ಆರಂಭದಲ್ಲಿ "ಆಧ್ಯರು, ವೇಧ್ಯರು, ಸಾಧ್ಯರು ...." ಎಂಬ ಸುದೀರ್ಘ ಪ್ರಸ್ತಾವನೆಯನ್ನು ಆಧಾರವಾಗಿಟ್ಟುಕೊಂಡು "ಜಕ್ಕಣಾರ್ಯನ ಸ್ವರಯೇಕೋತ್ತರಶತಸ್ಥಲದ ಟೀಕೆಗೂ ಇರುವುದರಿಂದ ಅದನ್ನೂ ಈತನೇ ಬರೆದಿರುವ ಸಾಧ್ಯತೆ ಇದೆ"[೩೧] ಎನ್ನುವ ಡಾ. ಕಲಬುರ್ಗಿಯವರ ಅಭಿಪ್ರಾಯ ಚಿಂತನೆಯೋಗ್ಯವಾಗಿದೆ.

**ಹಸ್ತಪ್ರತಿ ಸ್ವರೂಪ:** ಮೂಲತಃ ಕಲಬುರ್ಗಿಯ ಗದ್ದಗಿಮಠಕ್ಕೆ ಸಂಬಂಧಿಸಿದ ತಾಳೆಪ್ರತಿಯ ಉದ್ದ ೧೬" x ಅಗಲ ೨.೪". ಇದು ಧಾರವಾಡ ಕನ್ನಡ ಅಧ್ಯಯನಪೀಠದ 'ಹಸ್ತಪ್ರತಿ ಭಂಡಾರದಲ್ಲಿದೆ. ಇದರ ಕ್ರಮಾಂಕ ೬೧೫. ತಾಳೆಪ್ರತಿ ಚೆನ್ನಾಗಿದೆ. ಈ ಕಟ್‌ನಲ್ಲಿ "ಸ್ವತಂತ್ರ ಸಿದ್ಧಲಿಂಗೇಶ್ವರ ವಚನ" ಗರಿ ೧–೨೬, "ಸಿದ್ದೇಶ್ವರನ ಷಟ್ಸ್ಥಲಜ್ಞಾನಸಾರಾಮೃತ ಗರಿ–೧–೩೯, ಬಸವರಾಜದೇವರ ಷಟ್ಸ್ಥಲವಚನ ಪುಟ ೪೦–೭೫ ಒಟ್ಟು ಮೂರು ಕೃತಿಗಳಿದರಲ್ಲಿವೆ.

ಇಲ್ಲಿ ಬಸವಣ್ಣನವರ ವಚನಗಳಿಗೆ ಸಂಬಂಧಿಸಿದ 'ಬಸವರಾಜ ದೇವರ ಷಟ್ಸ್ಥಲದ ವಚನ'ದಲ್ಲಿ ೩೧೪ ವಚನಗಳಿಗೆ ಟೀಕೆ ಇದೆ. ಲಿಪಿ ತುಂಬಾ ದುಂಡಗೆ ಇವೆ. ಪ್ರತಿ ಗರಿಯಲ್ಲಿ ೧೪ರಿಂದ ೧೫ ಸಾಲುಗಳಿವೆ.

**ಆದಿ:** ಶ್ರೀಗುರು ಬಸವಲಿಂಗಾಯ ನಮಃ। ನಿರ್ವಿಘ್ನಮಸ್ತು। ಶುಭಮಸ್ತು। ಬಸವರಾಜದೇವರ ಷಟ್ಸ್ಥಲದ ವಚನ॥ ಭಕ್ತಿಸ್ಥಲ। ಪಿಂಡಸ್ಥಲ। ಆದ್ಯರು ವೇದ್ಯರು ಸಾದ್ಯರು ಆದಿಪಿಂಡ ಮಧ್ಯಪಿಂಡ ಅಂತ್ಯಪಿಂಡ ಮರ್ಕಟಜ್ಞಾನ ವಿಹಂಗಜ್ಞಾನ ಪಿಪೀಲಿಕಜ್ಞಾನ ಆದಿಗತಿ ಮಧ್ಯಗತಿ ತೀವ್ರಗತಿ।........

**ಅಂತ್ಯ:** ಬಸವೇಶ್ವರನ ವಚನ ಸಮಾಪ್ತ ಮಂಗಳ ಮಹಾ ಶ್ರೀಶ್ರೀಶ್ರೀಶ್ರೀಶ್ರೀಮತ್ಸಚ್ಚಿದಾನಂದ ನಿತ್ಯಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪವಾದ ಅನಾದಿಪರಮೇಶ್ವರ ನಂತರಂಗದಲ್ಲಿ ಆದಿವಾಹನವಾದ ನಂದೀಶ್ವರನೆಂಬ ಅನಾದಿಭಕ್ತನ ಹೃದಯವಾಸವಾದ ಪ್ರಾಣಲಿಂಗವೆಂಬ ಪರಮಜಂಗಮವೇ ಲಿಂಗಾಂಗಸಮರಸದ ಷಟ್ಸ್ಥಲಾಚರಣೆಯ ನಟಿಸಿ ಮರವೆನೆಂಬ ಲೀಲಾವಿನೋದವನು ಕುರಿತು ಪ್ರಭುವೆಂಬಭಿಧಾನದಿಂದ ಮರ್ತ್ಯಲೋಕಕ್ಕವತರಿಸಿ ಮಂಗಳವಾಡದೊಳಗಿರ್ದ ಬಸವಾದಿ ಪ್ರಮಥರ್ಗೆ ಭಾವಬ್ರಹ್ಮದಲ್ಲಿ ನಿಃಪತಿಯನೆಯ್ದುವ ನಿಜಲಿಂಗೈಕ್ಯವನರುಹಿಟ್ಟಕೊಟ್ಟುದ್ಧರಿಸಿ ಅಂತಪ್ಪ ಆದ್ಯರಾಚರಣೆಯ ನೊಳಕೊಂಡು ಸಾಧ್ಯಗಣಂಗಳಿಗೆ ತಾ ಸಾಧ್ಯನಾಗಿ ಇಪ್ಪತ್ತೊಂದು ಗುರುಸಂಪ್ರದಾಯವಿಡಿದು ಬಂದ ಆಚಾರ್ಯಪೀಠದ ಚೆನ್ನಬಸವೇಶ್ವರನೆಂಬ ದಿವ್ಯಜ್ಞಾನಗುರುಮೂರ್ತಿಯ ಕರಕಮಲದೊಳುದಯವಾಗಿ ಸಿದ್ದೇಶ್ವರನೆಂಬಭಿದಾನವ ತಳೆದು ಸ್ಥಲವ ಬಿಟ್ಟು ಕರಸ್ಥಲದವರೊಡಗೂಡಿ ತಿರಣಾಮಲೆಯ ಅಣ್ಣಾಮಲ್ಲೇಶ್ವರನೆಂಬ ಲಿಂಗದ ಗುಡಿಗೆ ಬಂದು........ ಆ ನಿರೂಪಣೆವಿಡಿದು ಷಟ್ಸ್ಥಲಾನುಭಾವವನು ಬೋಧಿಸುವಲ್ಲಿ ಪ್ರಥಮಾಚಾರ್ಯರಾದ ಸಿದ್ದೇಶ್ವರಸ್ವಾಮಿಗಳು, ಅವರ ಬೋಧಾಪುತ್ರನಾದ ಗುಮ್ಮಳಾಪುರದ ಸಿದ್ಧವೀರಣ್ಣ ಸ್ವಾಮಿಗಳು, ಅವರ ಬೋಧಾಪುತ್ರರಾದ ಗೂಳೂರ ಸಿದ್ಧಲಿಂಗಸ್ವಾಮಿಗಳು ಅವರ

ಬೋಧಾಪುತ್ರರಾದ ಕಟ್ಟಿಗೆಹಳ್ಳಿಸ್ವಾಮಿಗಳು, ಅವರ ಬೋಧಾಪುತ್ರರಾದ ರೇವಣಸಿದ್ದೇಶ್ವರ ಸ್ವಾಮಿಗಳು" ಎಂದು ಕೊನೆಗೊಳ್ಳುತ್ತದೆ.

ಹಾಗೆಯೇ ಡಾ.ಎಸ್.ಆರ್. ಗುಂಜಾಳರಿಂದ ದೊರೆತ ಕೋರಿಕಾಗದ ಪ್ರತಿಯ ಉದ್ದ ೧೧" x ಅಗಲ ೬" ಇದೆ. "ಬಸವರಾಜದೇವರ 'ಷಟ್ಸ್ಥಲ ವಚನ' ಎಂದಿದೆ. ಇದು ಪುಟ ೧-೨೫೩ರ ವರೆಗಿದೆ. ಒಟ್ಟು ೯೫೭ ವಚನಗಳಿದ್ದರೂ ಕೇವಲ ೩೧ಳ ವಚನಗಳಿಗೆ ಮಾತ್ರ ಟೀಕೆ ಬರೆಯಲಾಗಿದೆ. ಲಿಪಿ ಸಾಧಾರಣವಿದೆ. ಎಲ್ಲ ಪುಟಗಳು ಚೆನ್ನಾಗಿವೆ. ಒಂದು ಪುಟದಲ್ಲಿ ೯-೧೦ ಸಾಲುಗಳಿವೆ. ಇದನ್ನು ಪುರಾಣಿಕ ಸಿದ್ಧಮಲ್ಲಪ್ಪನು ಲಿಖಿಸಿರುವುದು ತಿಳಿಯುತ್ತದೆ.

**ಆದಿ:** ಶ್ರೀಮದ್ಗುರು ಮುರಿಗೇಂದ್ರಾಣಿ ವೀರಾಭ್ಯಾಂ ನಮಃ॥ ಬಸವರಾಜದೇವರ ಷಟ್ಸ್ಥಲವಚನ॥ ಭಕ್ತಿಸ್ಥಲ ಪಿಂಡಸ್ಥಲ ಆದ್ಯರು ವೇದ್ಯರು ಸಾಧ್ಯರು ಆದಿಪಿಂಡ ಮಧ್ಯಪಿಂಡ ಅಂತ್ಯಪಿಂಡ ಮರ್ಕಟಜ್ಞಾನ ವಿಹಂಗಜ್ಞಾನ ಪಿಪೀಲಿಕಜ್ಞಾನ ಆದಿಗತಿ ಮಧ್ಯಗತಿ ತೀವ್ರಗತಿ......

**ಅಂತ್ಯ:** "ಭಕ್ತಿಸ್ಥಲಕ್ಕೆ ಸೇರಿಸಿದ ವಚನಂಗಳು ೫೨೫.
ಮಾಹೇಶ್ವರಸ್ಥಲಕ್ಕೆ ಸೇರಿಸಿದ ವಚನಂಗಳು ೨೩೯.
ಪ್ರಸಾದಿಸ್ಥಲಕ್ಕೆ ಸೇರಿಸಿದ ವಚನಂಗಳು ೦೩೦
ಪ್ರಾಣಿಲಿಂಗಿಸ್ಥಲಕ್ಕೆ ಸೇರಿಸಿದ ವಚನಂಗಳು ೦೫೮
ಶರಣಸ್ಥಲಕ್ಕೆ ಸೇರಿಸಿದ ವಚನಂಗಳು ೦೬೫
ಐಕ್ಯಸ್ಥಲಕ್ಕೆ ಸೇರಿಸಿದ ವಚನಂಗಳು ೦೪೦,

ಅಂತುಸ್ಥಲ ೬ಕ್ಕಂ ೩೬ಕ್ಕಂ ಸೇರಿಸಿ ವಚನ ೯೫೭ಕ್ಕಂ ಮಂಗಳ ಮಹಾ ಶ್ರೀಶ್ರೀ ಬಸವೇಶ್ವರ ವಚನದೊಳಗೆ ಕಠಿಣವಾದ ಸಂಕ್ಷೇಪ ವಚನಕ್ಕೆ ಟಿಪ್ಪಣವಾಗಿ ಲಿಂಗಾಂಗಸಾಮರಸ್ಯವನು ಬಲ್ಲ ಷಟ್ಸ್ಥಲ ಸಮ್ಯಜ್ಞಾನ ಮಹಾನುಭಾವಿಗಳು ನಿರೂಪಿಸಿದುದು ಲಿಖಿಸಿ ಸಮಾಪ್ತಿಯಾಯಿತ್ತು. ಸಮಾಪ್ತ ಮಂಗಳಮಸ್ತು ಶುಭಮಸ್ತು। ಶೋಭನಮಸ್ತು। ಆಯುಷ್ಯಮಸ್ತು। ಶ್ರೀರಸ್ತು। ಈ ವಚನ ಪುಸ್ತಕ ಮುಗದುದು ೧೬೬೪ ಶುಭಕ್ರತುನಾಮ ಸಂವತ್ಸರ। ಕಾರ್ತಿಕ ಬಹುಳ ॥೩॥ ತದಿಗಿ ರವಿವಾರದೊಳಗೆ ಸಮಾಪ್ತಿಯಾಯಿತ್ತು. ಶ್ರೀಮದ್ಗುರು ಮುರಿಗೇಂದ್ರಾಣಿ ವೀರಾಭ್ಯಾಂ ನಮಃ । ಶ್ರೀ ಶಿವಮೂರ್ತಯೋ ನಮಃ । ಈ ವಚನಪುಸ್ತಕದಾರದೆಂದರೆ ಹೇರಲಗಿ ದಾನಪ್ಪನ ತನುಜಾತನಾದ ಶಾಂತವೀರಪ್ಪನು ಭಕ್ತಿಯಿಂದ ಬರಿಸಿಕೊಂಡನು. ಬರದವರು ಆರೆಂದರೆ ಪುರಾಣಿಕರೊಳಗೆ ಶ್ರೇಷ್ಠವಹ ಪ್ರಭುಸ್ವಾಮಿ ಆ ಪ್ರಭುಸ್ವಾಮಿಯ ತನುಜಾತನಾದ ವೀರಪಾಕ್ಷಪ್ಪ ಪುರಾಣಿಕರು, ಆ ಪುರಾಣಿಕರ ಕರಕಮಲಸಂಭವ ಪುರಾಣಿಕ ಸಿದ್ಧಮಲ್ಲಪ್ಪನು ಲಿಖಿಸಿದನು. ಇದಕ್ಕೆ ಸಂದೇಹವಿಲ್ಲವು. ಈ ಮಾತು ಋಜು, ಸಹಜವು, ನಿಶ್ಚಯವು, ಶಾಶ್ವತವು"[೨] ಎಂದು ಕೊನೆಯಾಗುತ್ತದೆ. ಅಪ್ರಕಟಿತ ಎರಡು ಹಸ್ತಪ್ರತಿ ಆಧಾರದಿಂದ ಪರಿಷ್ಕರಿಸಿ, ಸಂಪಾದನೆಗೈದು ಪ್ರಕಟಿಸಿದ ಡಾ.ಎಂ.ಎಂ. ಕಲಬುರ್ಗಿಯವರು 'ಬಸವಣ್ಣನವರ ಟೀಕಿನ ವಚನಗಳು' ಸಂಪುಟದಲ್ಲಿ ೨ನೇ ಟೀಕೆ ಎಂದು ಹೆಸರಿಸಿದ್ದಾರೆ.

**ಟೀಕುಗಳ ಸ್ವರೂಪ:** ಈತನು ವಚನಗಳಲ್ಲಿಯ ವಾಕ್ಯಗಳಿಗೆ, ಕೆಲವೊಮ್ಮೆ ಇಡೀ ವಚನಕ್ಕೆ ಅರ್ಥ ಇಲ್ಲವೇ ಗದ್ಯರೂಪದ ಸಾರಾರ್ಥವನ್ನು ಬರೆದಿದ್ದಾನೆ. ಒಂದು ವಚನಕ್ಕೆ ಒಂದೇ ಅರ್ಥ ಬರೆದಿದ್ದರೂ ಕ್ವಚಿತ್ತಾಗಿ ಎರಡು ಅರ್ಥ ಬರೆಯುತ್ತಾನೆ. ಎರಡನೇ ಅರ್ಥ ಬರೆಯುವಾಗ 'ಮತ್ತಂ' ಎಂದು ಆರಂಭಿಸಿದರೆ, ಕೆಲವು ವಚನಗಳ ಕೆಲವೇ ಸಾಲುಗಳಿಗೆ ಅರ್ಥ ಬರೆದು "ಮುಂದಕ್ಕೆ ಕಾಣಬಂದರ್ಥ" ಎಂದು ಮುಗಿಸಿಬಿಡುತ್ತಾನೆ. ಒಂದೆಡೆ ವಾಚ್ಯಾರ್ಥವನ್ನು ಹೇಳುವನೆನಿಸಿದರೂ ಅಂತಿಮವಾಗಿ ತಾತ್ವಿಕಾರ್ಥವನ್ನು ಹೇಳುವುದೇ ಈತನ ಟೀಕಾಸ್ವರೂಪವಾಗಿದೆ.

**೧. ವಚನಗಳಲ್ಲಿಯ ವಾಕ್ಯ ಆದರಿಸಿ ಬರೆದ ಒಂದೇ ಅರ್ಥಕ್ಕೆ ಉದಾಹರಣೆ**

**ವಚನ:** ಹಾವಿನ ಬಾಯ ಕಪ್ಪೆ ಹಸಿದು, ಹಾಱುವ ನೊಣಕ್ಕೆ ಆಸೆಮಾಡುವಂತೆ
ಶೂಲವನೇರುವ ಕಳ್ಳನು ಹಾಲು ತುಪ್ಪವ ಕುಡಿದು ಮೇಲೇಸು
ಕಾಲ ಬದುಕುವನೋ? ಕೆಡುವ ಒಡಲ ನಚ್ಚಿ, ಕಡುಹುಸಿಯನೆ
ಹುಸಿದು, ಒಡಲ ಹೊರೆವರ ಕೂಡಲಸಂಗಮದೇವನವರನೊಲ್ಲ
ಕಾಣಿರಣ್ಣಾ!

**ಟೀಕು:** ಹಾವಿನ ಬಾಯ ಕಪ್ಪೆ ಹಸಿದು ಹಾಱುವ ನೊಣಕ್ಕೆ ಆಸೆ ಮಾಡುವಂತೆ– ಶಂಕಾವಿಷಯಸಂಬಂಧವಾದ ಮನೋಸರಿಸ್ರುಪನ ಭಿನ್ನಾಪೇಕ್ಷೆಯಲ್ಲಿ ಸಿಲ್ಕಿರ್ದ ಜೀವನೆಂಬ ಮಂಡೂಕನು ಕ್ಷುಧೆಯಡಸಿ ವಿಷಯಂಗಳನಿಚ್ಛೈಸುವ ಮಲತ್ರಯಂಗಳೆಂಬ ಮಕ್ಷಿಕಂಗೆ ಅಪೇಕ್ಷೆಬಡುತಿರ್ಪುದೆಂಬುದರ್ಥ. ಶೂಲವನೇಱುವ ಕಳ್ಳ ಹಾಲುತುಪ್ಪವ ಕುಡಿದು ಮೇಲೇಸುಕಾಲ ಬದುಕುವನೊ ಅಹಂಕಾರವೆಂಬ ದಾರುದೂರ್ದಸಿಯುನಾರೋಹಿಸುವ ಜೀವನೆಂಬ ತಸ್ಕರನು ಸಂಸಾರ ವಿಷಯರಸವನು ಮಲತ್ರಯಂಗಳೆಂಬ ದುಸ್ಸಾರವನೀಂಟಿ ಆ ಅಹಂಕಾರವೆಂಬ ದಾರುದೂರ್ದಸಿಯ ಅಗ್ರದಲ್ಲಿ ಎಷ್ಟು ದಿನ ಜೀವಿಸುವನೊ? ಕೆಡುವೊಡಲ ನಚ್ಚಿ ಕಡುಹುಸಿಯನೆ ಹುಸಿದು – ಆಗ ತೋಱಿ ಬೇಗ ಅಡಗುವಂಥ ದೇಹಭಾವವನು ನಂಬಿ ಭಕ್ತಮಾಹೇಶ್ವರರುಗಳಲ್ಲಿ ಅತ್ಯಂತ ಬದ್ಧವನೆ ಬಗಳಿ, ಒಡಲ ಹೊರೆವರ ಮೆಚ್ಚ ಕೂಡಲಸಂಗಮದೇವಾ–ಘಟವ ರಕ್ಷಿಸುವ ಘಟಸಂಸಾರಿಗಳಿಗೆ ಪರಶಿವಲಿಂಗವು ಒಲಿದು ಮುಕ್ತಿಯ ಕೊಡನೆಂಬುದರ್ಥ".[೩೩] ಇದು ಬಸವಣ್ಣನವರ ಬೆಡಗಿನ ವಚನವಾಗಿದೆ. ಸಂಸಾರದ ಹೇಯತೆಯನ್ನು ತೊಡೆದು ಪರಶಿವಲಿಂಗವನು ಮೆಚ್ಚಿ ನಡೆದರೆ ಜೀವನ್ಮುಕ್ತಿ ಸಾಧ್ಯವೆಂಬುದನ್ನು ತಿಳಿಸಲಾಗಿದೆ. ಆದರೆ, ಟೀಕಾಕಾರನು ವಚನದಲ್ಲಿಯ 'ಕಳ್ಳನು' ಎಂಬ ಶಬ್ದಕ್ಕೆ 'ತಸ್ಕರನು' ಎಂದು ಸಂಸ್ಕೃತಾರ್ಥವುಳ್ಳ ಕಠಿಣಶಬ್ದ ಬಳಸಿರುವುದು ಅಚ್ಚರಿಯುಂಟುಮಾಡುತ್ತದೆ. ಏಕೆಂದರೆ, ಕಾಠಿಣ್ಯತೆಯಿಂದ ಸರಳತೆಯತ್ತ ಮುಖಮಾಡುವುದು ಟೀಕಿನ ಉದ್ದೇಶಗಳಲ್ಲಿ ತುಂಬಾ ಪ್ರಮುಖವಾದುದು. ಇದೇ ರೀತಿ ಹಲವು ಕಡೆಗಳಲ್ಲಿ ತಮ್ಮ ಪಾಂಡಿತ್ಯವನ್ನು ತೋರಿರುವ ಉದಾಹರಣೆಗಳನ್ನು ಇಲ್ಲಿ ಕಾಣುತ್ತೇವೆ.

**೨. ವಚನದ ಕೆಲವೇ ವಾಕ್ಯಗಳಿಗೆ ಬರೆದ ವಾಕ್ಯಾರ್ಥಕ್ಕೆ ಉದಾಹರಣೆ**

**ವಚನ:** ಕಲ್ಲನಾಗರ ಕಂಡರೆ ಹಾಲನೆಜೆಯೆಂಬರಯ್ಯಾ. ದಿಟದ ನಾಗರ ಕಂಡಡೆ ಕೊಲ್ಲೆಂಬರಯ್ಯಾ. ಉಂಬುವ ಜಂಗಮ ಬಂದಡೆ ನಡೆಯೆಂಬರಯ್ಯಾ. ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ. ನಮ್ಮ ಕೂಡಲಸಂಗನ ಶರಣರ ಕಂಡು ಉದಾಸೀನವ ಮಾಡಿದಡೆ, ಕಲ್ಲತಾಗಿದ ಮಿಟ್ಟೆಯಂತಪ್ಪರಯ್ಯ.

**ಟೀಕು:** "ಕಲ್ಲನಾಗರ ಕಂಡಡೆ ಹಾಲನೆಜೆಯೆಂಬರು, ದಿಟದ ನಾಗರ ಕಂಡಡೆ ಕೊಲ್ಲೆಂಬರಯ್ಯಾ ಅವರಂದ [ರೂ] ಆಡಿದ [ರೂ] ಅನಿಸಿಕೊಂಡಿರುವ ಪಾಷಂಡಿ ಜಂಗಮವ ಕಂಡರೆ, ನಮ್ಮಯ್ಯ ಒಳ್ಳಾತ ಕ್ಷೀರವ ನೀಡೆಂಬರು. ಗೋವ ಗುಲಾಮ ತೊಂಡ ನೀಚ ಎಂದು ಜರಿದು ಝುಂಕಿಸುವಂಥ ಮಹಾಜ್ಞಾನಿ ಜಂಗಮವ ಕಂಡರೆ, ಈ ಜಂಗಮ ಬಲು ಕೆಟ್ಟವ ತಳ್ಳಿ ಬಿಡೆಂಬರಯ್ಯಾ. ಮುಂದಕ್ಕೆ ಕಾಣಬಂದರ್ಥ"[೩೪] ಎಂದು ಟೀಕು ಮುಕ್ತಾಯವಾಗುತ್ತದೆ. ಇದೇ ಮಾದರಿಯ ಹಲವಾರು ಉದಾಹರಣೆಗಳನ್ನು ಈತನ ಟೀಕಾಕೃತಿಯಲ್ಲಿ ಕಾಣುತ್ತೇವೆ.

**೩. ಒಂದು ವಚನಕ್ಕೆ ಸಾರರೂಪದ ಎರಡು ಅರ್ಥ ಬರೆದುದಕ್ಕೆ ಉದಾಹರಣೆ**

**ವಚನ:** ಓಡೆತ್ತ ಬಲ್ಲುದು ಅವಲಕ್ಕಿಯ ಸವಿಯ? ಕೋಡುಗ ಬಲ್ಲದೆ ಸೆಳೆಮಂಚದ ಸುಖವ? ಕಾಗೆ ನಂದನವನದೊಳಗಿದ್ದಡೇನು?
ಕೋಗಿಲೆಯಾಗಬಲ್ಲುದೆ ಹೇಳಾ?
ಕೊಳನ ತಡಿಯಲೊಂದು ಹೊರಸು ಕುಳ್ಳಿರ್ದಡೇನು,
ಕಳಹಂಸಿಯಾಗಬಲ್ಲುದೆ; ಕೂಡಲಸಂಗಮದೇವಾ?

**ಟೀಕು:** ಓಡೆತ್ತ ಬಲ್ಲುದು ಅವಲಕ್ಕಿಯ ಸವಿಯ?– ದೇಹಭಾವ ಲೋಷ್ಟವನುಳ್ಳಂಥ ವಿಶ್ವಜೀವನು ಸತ್ತೆಂಬ ನಿಜತಂಡುಲ ಸ್ವರೂಪವಾದ ಇಷ್ಟಲಿಂಗದಷ್ಟವಿಧಾರ್ಚನೆ ಷೋಡಶೋಪಚಾರ ಪೂಜಾಕ್ರೀಗಳ ಸ್ವಾದವನು ಆವಕಡೆಯಲ್ಲಿ ತಿಳಿದುಬಲ್ಲುದು? ಕೋಡಗ ಬಲ್ಲುದೆ ಸೆಳೆಮಂಚದಸುಖವ?– ಸಂಕಲ್ಪ ವಿಕಲ್ಪವನುಳ್ಳ ಮನೋಮರ್ಕಟನು ಭಕ್ತಿಜ್ಞಾನ ವೈರಾಗ್ಯೈಶ್ವರ್ಯವೆಂಬ ಚತುರ್ವಿಧ ಕುಶಲಕೆಲಸದ ಪರ್ಯಂಕದ ಮೇಲಿರ್ದ ಪ್ರಾಣಲಿಂಗದಲ್ಲಿ ಕೂಡಿ ಆ ಪ್ರಾಣಲಿಂಗವೇ ತಾನಾಗಿ ಪರಿಣಾಮಿಸುವ ಪರಿಣಾಮವನಾವ ಕಡೆಯಲ್ಲಿ ತಿಳಿದುಬಲ್ಲುದೆ?

ಕಾಗೆ ನಂದನವನದೊಳಗಿದ್ದಡೇನು ಕೋಗಿಲೆಯಾಗಬಲ್ಲುದೆ? ಹೇಳಾ ಪ್ರಪಂಚಾತ್ಮಾನುಭಾವಲಿಂಗದ ಮನೋಲಯ ನಿರಂಜನ ಭಕ್ತಿಪೂಜಾಕ್ರೀಗಳೆಂಬ ವಿಂಧ್ಯಾವನದಲ್ಲಿದ್ದರೇನು ಆ ಭಾವಲಿಂಗವೆಂಬ ಪರಪುಟ್ಟನಾಗಬಲ್ಲುದೆ? ನಿರೂಪಿಸಾ ಕೊಳನ ತಡಿಯಲೊಂದು ಹೊಜಸು ಕುಳ್ಳಿರ್ದಡೆನು ಕಳಹಂಸೆಯಾಗಬಲ್ಲುದೆ ಶಿವಾನುಭಾವವೆಂಬ?– ಕಾಸಾರದ ತೀರದಲ್ಲಿ ಏಕವಾದಂಥ ಬಹಿರ್ವೇಷ ಹೃದಯಘಾತಕವನುಳ್ಳ ಜೀವನು ಅಧಿಷ್ಠಿಸಿಕೊಂಡಿದ್ದರೇನು ಶಿವಾನುಭಾವಿಯೆಂಬ ಚಕ್ರವಾಕಪಕ್ಷಿಯಾಗಬಲ್ಲುದೆ?

**ಮತ್ತಂ ಪ್ರಾಣವಾಯುವಿನ ಪ್ರಕೃತಿಯನುಳ್ಳಂಥ ಜೀವನು ಕಾಯಶೂನ್ಯಲಿಂಗ** ಪ್ರಾಣಶೂನ್ಯಶರಣ ಭಾವಭೇದವಿಲ್ಲವಾಗಿ ಎಂದು ಬ್ರಹ್ಮರಂದ್ರದ ಸಹಸ್ರದಳಕಮಲದಲ್ಲಿರ್ದ ನಿಃಕಲಲಿಂಗದಲ್ಲಿ ಶಿವಯೋಗ ಸಂಪತ್ತಿನ ಸಾಧನದಿಂದೆಯ್ದಿ ಕೂಡುವಂಥ ಸ್ವಾದವನಾವಕಡೆಯಲ್ಲಿ ತಿಳಿದುಬಲ್ಲುದು? ಸಪ್ತದಾತು ಪಂಚಕರಣಯುಕ್ತವಾದ ಜೀವನೆಂಬ ಮರ್ಕಟನು ಸೂಸುವೆಲ್ಲವು ಪಂಚಾಕ್ಷರಿ ತುಂಬುವೆಲ್ಲವು ಷಡಕ್ಷರಿ ಪಡೆದು ನಿಲಿಸುವೆಲ್ಲವು ಪರಶಕ್ತಿ ಪ್ರಣವವಾಗಿ ಇಂತೀ ಮಂತ್ರಯೋಗದ ಸಂಚವನರಿದಾಚರಿಸುವಂಥ ಪರಿಣಾಮವನಾವ ಕಡೆಯಲ್ಲಿ ತಿಳಿದುಬಲ್ಲುದು? ಅಜ್ಞಾನದೃಷ್ಟಿಯನುಳ್ಳಂಥ ಮಾಯೆ ಮನಪವನವೆಂಬ ರೆಕ್ಕೆಯ ಮಾಡಿಕೊಂಡು ಷಡಾಧಾರಚಕ್ರದೈವತ್ತೆರಡು ದಳಕುಳ ಅಕ್ಷರವರ್ಣ ಅಧಿದೇವತೆಗಳೆಂಬ ವಿಂಧ್ಯಾವನದಲ್ಲಿ ರೋಹಾರೋಹವಾಗಿ ಚರಿಸಾಡುತ್ತಿದ್ದರೇನು? ದಳಕುಳ ಅಕ್ಷರ ವರ್ಣಾಧಿದೇವತೆಗಳನು ಐವತ್ತೆರಡು ಮಂತ್ರಲಿಂಗಸ್ವರೂಪವ ಮಾಡಿಕೊಂಡಾಚರಿಸುವಂಥ ಸದ್ವಿದ್ಯೆಯೆಂಬ ಪರಪುಟ್ಟನಾಗಬಲ್ಲುದೆ? ಅಂತರಂಗವೆಂಬ ಮನೋಕಾಸಾರದ ತೀರದಲ್ಲಿ ಜೀವನೆಂಬ ಕೊಕ್ಕರನು ಅಧಿಷ್ಠಿಸಿಕೊಂಡಿರ್ದರೇನು? ಪರಮಾತ್ಮನೆಂಬ ಹಂಸೆಯಾಗಬಲ್ಲುದೆ, ಎಲೆ ಲಿಂಗವೆ?" ಹೀಗೆ ಗದ್ಯದಲ್ಲಿ ಸಾರರೂಪದ ಅರ್ಥಬರೆದ ಟೀಕಾಕಾರನು ದಳಕುಳ ಅಕ್ಷರ ವರ್ಣಗಳು ೫೨ ಇದ್ದುವೆಂಬುದನ್ನು ತಿಳಿಸುವ ಮೂಲಕ ಕನ್ನಡ ಲಿಪಿಯ ಇತಿಹಾಸ ಮತ್ತು ಗದ್ಯದ ಬೆಳವಣಿಗೆಯ ಮೇಲೆ ಬೆಳಕು ಚಲ್ಲುತ್ತಾನೆ.

**೪. ವಚನವೊಂದರ ಕಠಿಣ ವಾಕ್ಯಕ್ಕೆ ಮಾತ್ರ ಬರೆದ ಸಾರಾರ್ಥ ಸಂಕ್ಷಿಪ್ತ ಟೀಕೆ.**

**ವಚನ:** ಭೂಮಿಯೊಳಗೆ ನಿಧಾನವಿದ್ದುದ ಅಂಜನವುಳ್ಳವರು ತೋಜಿರಯ್ಯಾ
ಅಂಜಲುಬೇಡ ಕಂಡಾ ಮನದಲ್ಲಿ ಸಂದೇಹವ ಮಾಡದಿರಾ.
ಜಂಗಮದೊಳಗೆ ಲಿಂಗಯ್ಯನಿದ್ದಾನೆಂದು ನಂಬುಗೆಯುಳ್ಳಡೆ ತನ್ನ
ತೋಱುವ ಕೂಡಲಸಂಗಮದೇವ (ವ – ೧೮೯)

**ಟೀಕು:** "ಭೂಮಿಯೊಳಗೆ ನಿಧಾನವಿದ್ದುದ ಅಂಜನವುಳ್ಳವರು ತೋಜಿರಯ್ಯಾ ಶರಣನಾಚಾರಾಂಗವೆಂಬ ಚಿದ್ಭುಮಿಯಲ್ಲಿ ಸರ್ವಾಚಾರಸಂಪತ್ತಿನಾಚರಣೆಯನ್ನುಳ್ಳ ಪ್ರಾಣಲಿಂಗವೆಂಬ ನಿಕ್ಷೇಪದ್ರವ್ಯವಡಗಿರ್ದುದನು ಮಹಾಜ್ಞಾನ ಕಜ್ಜಳವನುಳ್ಳವರುಗಳು ಅರುಹಿಕೊಡಿರಿ ಅಯ್ಯಾ, ಮುಂದಕ್ಕೆ ಕಾಣಬಂದರ್ಥ".[೨೫]

ಹೀಗೆ ಪ್ರಸ್ತುತ ಟೀಕಾಕೃತಿಯಲ್ಲಿ ಅನಾಮಧೇಯನಾದ ಟೀಕಾಕಾರನು ಬಸವಣ್ಣನವರ ವಚನಗಳಿಗೆ ತಾತ್ವಿಕಾರ್ಥವುಳ್ಳ ಟೀಕು ಬರೆದಿದ್ದಾನೆ. ವಚನಗಳನ್ನು ಸಾಮಾನ್ಯರು ಅರ್ಥಮಾಡಿಕೊಳ್ಳಬೇಕೆಂಬ ಉದ್ದೇಶವಿದ್ದುದರಿಂದ ಸರಳಗದ್ಯವನ್ನು ಬಳಸಿದ್ದಾನೆ. ಕೆಲವೊಮ್ಮೆ ವಚನಕ್ಕಿಂತಲೂ ಟೀಕು ಕಠಿಣವಾಗಿ ಅರ್ಥವಾಗದಿರುವ ಕೆಲವು ಉದಾಹರಣೆಗಳು ಕಾಣಬರುತ್ತವೆ. ಡಾ.ಎಂ.ಎಂ. ಕಲಬುರ್ಗಿಯವರು ಹೇಳುವಂತೆ "ಸಾಮಾನ್ಯವಾಗಿ ವಾಚ್ಯಾರ್ಥವನ್ನು ಬಿಟ್ಟು ಒಮ್ಮೆಲೇ ತಾತ್ವಿಕಾರ್ಥ ಹೇಳುವ ಧೋರಣೆ ಇಟ್ಟುಕೊಂಡಿದೆ, ಈ ಟೀಕೆ"[೨೬] ಎಂಬ ಅಭಿಪ್ರಾಯ ಈತನ ಟೀಕಾಸ್ವರೂಪದ ಸ್ಪಷ್ಟತೆಗೆ ಸಾಕ್ಷಿಯಂತಿದೆ.

**ಬಸವಣ್ಣನವರ ಟೀಕೆಗಳ ಸಾಧನೆ**

ಟೀಕೆಗಳು ಒಂದು ಕೃತಿಯ ಒಳನೋಟ ಹಾಗೂ ಹೊರನೋಟ ಇವೆರಡನ್ನು ಕುರಿತು ಅಂದರೆ, ಭಾವಾರ್ಥ ಪಾತಳಿ ಮತ್ತು ಶಬ್ದಾರ್ಥ ಪಾತಳಿಯಲ್ಲಿ ಬಳಕೆಯಾಗುವ ಮೂಲಕ ಸಾಹಿತ್ಯ ಕೃತಿ ಓದುಗರಲ್ಲಿಯ ಗೊಂದಲಗಳನ್ನು ನಿವಾರಿಸಿ ಸರಿಯಾದ ದಿಕ್ಕಿನಲ್ಲಿ ಮುನ್ನಡೆಯಲು, ಅರ್ಥೈಸಲು ನೆರವಾಗುತ್ತವೆ. ಡಾ.ಎಂ.ಎಂ. ಕಲಬುರ್ಗಿಯವರು "ಟೀಕೆಯೆಂಬುದು ಸಾಹಿತ್ಯ ಕೃತಿಗೆ ಬರೆದ ಒಂದು ವಿಧದ ವಿಮರ್ಶೆಯೇ ಸರಿ. ಆದರೆ, ಸಾಹಿತ್ಯವನ್ನು ವಿಮರ್ಶಿಸುವ ದೃಷ್ಟಿ ಜನಾಂಗದಿಂದ ಜನಾಂಗಕ್ಕೆ ಕಾಲದಿಂದ ಕಾಲಕ್ಕೆ ಭಿನ್ನವಾಗುವುದು ಸಹಜ. ವಚನ ನಿಧಿಯನ್ನೇ ಕುರಿತು ಹೇಳುವುದಾದರೆ ಅದನ್ನು ಹರಿಹರಾದಿಗಳು ಸಾಹಿತ್ಯ ದೃಷ್ಟಿಯಿಂದ ನೋಡಿದರೆ ತರುವಾಯದ ನೂರೊಂದು ಮತ್ತು ಏಳು ನೂರೊಂದು ವಿರಕ್ತರು ತಾತ್ವಿಕ ದೃಷ್ಟಿಯಿಂದ ನೋಡಿದರು..."[೩೭] ಎಂಬ ಅಭಿಪ್ರಾಯ ಟೀಕಾಸಾಹಿತ್ಯದ ಪ್ರಯೋಜನ ಮತ್ತು ಬಹುಮುಖ ಆಯಾಮಗಳನ್ನು ಮುಂದಿನ ಪೀಳಿಗೆಗೆ ಪರಿಚಯಿಸುವ ಧಾರ್ಮಿಕ ಶಿಕ್ಷಣದ ಮಾಧ್ಯಮವಾಗಿ ಕಾಲದಿಂದ ಕಾಲಕ್ಕೆ ವಿಭಿನ್ನ ರೂಪ ತಾಳುತ್ತ ಬಂದಿದೆ ಎನ್ನಬಹುದು.

ಕವಿಯಾದವನು ವಿಮರ್ಶಕನಾಗಿರುವಂತೆ ವಿಮರ್ಶಕನು ಕೂಡಾ ಕವಿಯಾಗಿರಬೇಕಾಗುತ್ತದೆ. ಅದರಂತೆ ೧೨ನೇ ಶತಮಾನದ ವಚನಕಾರರು ವಚನ ರಚನೆಯ ಜೊತೆ ಜೊತೆಗೆ ಅವುಗಳ ವಿಮರ್ಶಕರು ಆಗಿದ್ದಂತೆ ತೋರುತ್ತದೆ. ಏಕೆಂದರೆ – " ಹತ್ತು ಸಾವಿರ ಗೀತವ ಹಾಡಿ ಅರ್ಥವಿಟ್ಟಲ್ಲಿ ಫಲವೇನು?" "ಆದ್ಯರ ವಚನ ಪರುಷ ಕಂಡಯ್ಯಾ" "ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ..." ಎಂಬ ವಚನೋಕ್ತಿಗಳು ಮೇಲಿನ ಅಭಿಪ್ರಾಯವನ್ನು ಪುಷ್ಟೀಕರಿಸುತ್ತವೆ. ಆದರೆ, ಅಪಾರ ಪ್ರಮಾಣದಲ್ಲಿ ಟೀಕುಗಳು ರಚನೆಯಾದದ್ದು..."....ವಚನಗಳನ್ನು ತಾತ್ವಿಕ ದೃಷ್ಟಿಯಿಂದ ನೋಡುತ್ತಲಿದ್ದ ಕಾಲದಲ್ಲಿ. ಹೀಗಾಗಿ ಸಾಹಿತ್ಯಿಕ, ಸಾಮಾಜಿಕ ದೃಷ್ಟಿಗಳಿಂದ ಈ ಟೀಕೆಗಳನ್ನು ನೋಡಬಯಸುವವರಿಗೆ ನಿರಾಸೆ ಖಂಡಿತ, ಟೀಕಾಕಾರರ ಉದ್ದೇಶವು ಅದಾಗಿರಲಿಲ್ಲ. ಕಾರಣ ಈ ಟೀಕೆಗಳು ವಚನಗಳಿಗೆ ಬರೆದ ಸಾಹಿತ್ಯಿಕ, ಸಾಮಾಜಿಕ ವಿಮರ್ಶೆಗಳಾಗಿರದೇ ಶಬ್ದಕ್ಕೆ ಅರ್ಥವನ್ನು ಕೊಡುತ್ತ ಬರೆದ ತಾತ್ವಿಕ ವಿವರಣೆ – ವಿಮರ್ಶೆಗಳಾಗಿವೆಯೆಂಬುದನ್ನು ಓದುಗರು ನೆನಪಿನಲ್ಲಿಟ್ಟುಕೊಳ್ಳಬೇಕು"[೩೮] ಎಂಬ ಡಾ. ಕಲಬುರ್ಗಿಯವರ ಅಭಿಪ್ರಾಯ ಗಮನಾರ್ಹವಾದುದು. ಇದಲ್ಲದೇ "ಈ ಟೀಕೆಗಳು ಹುಟ್ಟಿದುದು ವೀರಶೈವವು ಧರ್ಮದ ತಿಳಿಜಲ ಪ್ರವಾಹ ಘಟ್ಟವನ್ನು ದಾಟಿ, ಒಂದು ವ್ಯವಸ್ಥೆಗೆ ಒಳಪಟ್ಟು ಮತೀಯ ತಟಾಕವಾಗಿದ್ದ ಮತ್ತು ಅದನ್ನೂ ದಾಟಿ ಜಾತಿಕೂಪವಾಗಿದ್ದ ಕಾಲದಲ್ಲಿ; ಪಾರಿಭಾಷಿಕ ಪದಗಳು ವಾಚ್ಯಾರ್ಥಕ್ಕೆ ಇಳಿಯುತ್ತಿದ್ದ ಕಾಲದಲ್ಲಿ. ಹೀಗಾಗಿ ಇವುಗಳಲ್ಲಿ ಶಕ್ತಿವಿಶಿಷ್ಟಾದ್ವೈತದ ಶುದ್ಧ ತಾತ್ವಿಕ ವಿವರಣೆ ಕೆಲವು ಸಲ ಕಂಡುಬರುವದಿಲ್ಲ. ಅಂದರೆ, ಆ ಕಾಲದಲ್ಲಿ ವಚನಗಳಿಗೆ ಹೇಳುತ್ತಿದ್ದ ಸಾಂಪ್ರದಾಯಿಕ ಅರ್ಥ ಮತ್ತು ಟೀಕಾಕಾರನ ವ್ಯಕ್ತಿಗತ ಪರಿಮಿತಿಗಳ ಹಿನ್ನಲೆಯಲ್ಲಿ ಈ ಟೀಕೆಗಳು ಹುಟ್ಟಿಕೊಂಡಿವೆ. ಈ ಮಾತು ಸ್ವಲ್ಪ ಹೆಚ್ಚು ಕಡಿಮೆ ಮಹಾಲಿಂಗದೇವಕೃತ ಪ್ರಭುದೇವರ ವಚನ ಟೀಕೆ, ಕಲ್ಲುಮಠದ ಪ್ರಭುದೇವಕೃತ ಲಿಂಗಲೀಲಾ ವಿಲಾಸ ಚಾರಿತ್ರ ಟೀಕೆ

ಮೊದಲಾದವುಗಳಿಗೂ ಅನ್ವಯಿಸುತ್ತದೆ"[೬೯] ಎಂದು ಡಾ. ಎಂ.ಎಂ. ಕಲಬುರ್ಗಿಯವರು ಪ್ರಸ್ತಾವನೆಯಲ್ಲಿ ಹೇಳಿರುವುದನ್ನು ಗಮನಿಸಿದರೆ ವಚನ ಸಾಹಿತ್ಯ ಟೀಕುಗಳು ಟೀಕಾಕಾರರ ವೈಯಕ್ತಿಕ ಮತ್ತು ಧಾರ್ಮಿಕ ಚೌಕಟ್ಟಿನ ಇತಿಮಿತಿಗಳ ನೆಲೆಯಲ್ಲಿಯೇ ರೂಪಗೊಂಡವು.

ಬಸವಣ್ಣನವರ ವಚನಗಳನ್ನು ಆದರಿಸಿ ಬರೆಯಲಾದ ೫ ಟೀಕಾಗ್ರಂಥಗಳು ಬಸವಣ್ಣನವರ ತಾತ್ವಿಕ ಮುಖವನ್ನು ಪರಿಚಯಿಸಲು ಪ್ರಯತ್ನಿಸಿವೆ. ಆದರೆ, ಶ್ರೀಗುರುಬಸರಾಜದೇವರು ನಿರೂಪಿಸಿದ 'ಷಟ್ಸ್ಥಲದ ವಚನ ವ್ಯಾಖ್ಯಾನ' ಕೃತಿಯ ಟೀಕಾಕಾರನು ಅಪವಾದವೆಂಬಂತೆ ಲೌಕಿಕ, ವ್ಯವಹಾರಿಕ ಪ್ರಧಾನವಾದ ವಿವರಣಾತ್ಮಕ ಟೀಕೆಗೆ ಒತ್ತು ನೀಡಿದ್ದರೂ ಆತನ ಉದ್ದೇಶ ವಚನಗಳನ್ನು ತಾತ್ವಿಕವಾಗಿ ಅರ್ಥೈಸುವದೇ ಆಗಿದೆ. ಡಾ.ಎಂ.ಎಂ. ಕಲಬುರ್ಗಿಯವರು ಹೇಳುವಂತೆ –"—ಟೀಕೆಗಳಲ್ಲಿ ಎಷ್ಟೇ ಲೌಕಿಕ ಉದಾಹರಣೆಗಳಿದ್ದರೂ ಅದು ಗೌಣ. ತಾತ್ವಿಕ ವಿವರಣೆಯೇ ಪ್ರಧಾನ. ಕಾರಣ ಸಾಮಾನ್ಯವಾಗಿ ಎಲ್ಲಾ ಟೀಕೆಗಳು ಲೌಕಿಕದಿಂದ ಪ್ರಾರಂಭವಾದರೂ ವಿರಮಿಸುವುದು ಪಾರಮಾರ್ಥದಲ್ಲಿ. ಕೆಲವಂತೂ ಕೇವಲ ಪಾರಮಾರ್ಥಿಕ ಪ್ರಪಂಚದಲ್ಲಿಯೇ ವಿಹರಿಸುತ್ತವೆ....."[೭೦] ಹೀಗೆ, ತಾತ್ವಿಕ ನೆಲೆಯ ಟೀಕುಗಳಲ್ಲಿ ಲೌಕಿಕ, ಸಾಮಾಜಿಕ, ಐತಿಹಾಸಿಕ, ಸಾಂಸ್ಕೃತಿಕ ಹೊಳವುಗಳನ್ನು ಶೋಧಿಸಿ ಪ್ರಕಟಿಸುವ ಕಾರ್ಯ ಆಧುನಿಕರಿಂದ ನಡೆಯಬೇಕಾಗಿದೆ. ಈಗಾಗಲೇ ಹೇಳಿದಂತೆ ಬಸವಣ್ಣನವರ ವಚನಗಳು ತುಂಬಾ ಸರಳವಾಗಿವೆ ಎಂದು ಭಾವಿಸಿದರೂ ಕೂಡಾ ಅವುಗಳಲ್ಲಿ ರೂಪಕ, ಉಪಮೆಗಳಿಂದ ಕೂಡಿದ ಶಾಸ್ತ್ರವಚನಗಳು, ಬೆಡಗಿನ ವಚನಗಳು ಇವೆ. ಟೀಕಾಕಾರ ಸೋಮಶೇಖರ ಶಿವಯೋಗಿಯು "ಘಟ್ಟಿಘಟ್ಟಿ ವಚನ ಟೀಕೆ" ಎಂದು ಹೆಸರಿಸುವ ಮೂಲಕ ಬಸವಣ್ಣನವರ ಬೆಡಗಿನ ವಚನಗಳನ್ನು ಪ್ರಧಾನವಾಗಿಟ್ಟುಕೊಂಡು ಟೀಕುಬರೆದು ತದನಂತರದ ಕಾಲಘಟ್ಟಗಳ ಓದುಗರಲ್ಲಿ ಉದ್ಭವಿಸಬಹುದಾದ ಗೊಂದಲಗಳಿಗೆ ಉತ್ತರ ನೀಡಲು ಪ್ರಯತ್ನಿಸಿದ್ದಾರೆ ಎನ್ನಬಹುದು. ಉದಾಹರಣೆಗೆ ಶಾಸ್ತ್ರ ವಚನವೊಂದಕ್ಕೆ ಬರೆದ ಟೀಕನ್ನು ಗಮನಿಸಬಹುದು.

**ವಚನ :** ತನುವ ಕೊಟ್ಟು ಗುರುವನೊಲಿಸಬೇಕು,
ಮನವ ಕೊಟ್ಟು ಲಿಂಗವನೊಲಿಸಬೇಕು,
ಧನವ ಕೊಟ್ಟು ಹೊಜಗುಮಾಡಿ, ಹಜೆಯ ಹೊಯಿಸಿ
ಕುಙಹ ಪೂಜಿಸುವರ ಮೆಚ್ಚ ಕೂಡಲಸಂಗಮದೇವ

**ಟೀಕು:** ತನುವ ಕೊಟ್ಟು – ಅಂಗದಲ್ಲಿ ಗುರುಸಂಬಂಧವ ಮಾಡಿಕೊಂಡು ಅಂಗ ಆಪ್ತಸ್ಥಾನ ಸದ್ಭಾವವೆಂಬ ಚತುರ್ವಿಧಭಕ್ತಿಯ ಮಾಡುವ ನೆವದಿಂದ ತನುಪದಾರ್ಥವ ಗುರುವಿಂಗೆ ಸಮರ್ಪಣೆಯ ಮಾಡಿ, ಗುರುವನೊಲಿಸಬೇಕು – ಗುರುಭಕ್ತಿಯನ್ನು ಮಾಡಿ ಗುರುವಿನ ಕರುಣವ ಹಡೆದುಕೊಳಬೇಕು. ಮನವ ಕೊಟ್ಟು – ಮನದಲ್ಲಿ ಲಿಂಗಸಂಬಂಧವ ಮಾಡಿಕೊಂಡು ಆ ಲಿಂಗಕ್ಕೆ ಅಷ್ಟವಿದಾರ್ಚನೆ ಷೋಡಶೋಪಚಾರ ಕ್ರಿಯೆಗಳ ಮಾಡುವ ನೆವದಿಂದ ಮನಃಪದಾರ್ಥ ಲಿಂಗಕ್ಕೆ ಸಮರ್ಪಣೆಯ

ಮಾಡಿ, ಲಿಂಗವನೊಲಿಸಬೇಕು – ಲಿಂಗಪೂಜೆಯ ಮಾಡಿ ಲಿಂಗದ ಕರುಣವ ಹಡೆದುಕೊಡಬೇಕು. ಧನವಕೊಟ್ಟು – ಪ್ರಾಣಜ್ಞಾನದಲ್ಲಿ ಜಂಗಮದ ಸಂಬಂಧವ ಮಾಡಿಕೊಂಡು ಅನ್ನೋದಕ ಸಜ್ಜೆ ಶಿವದಾರ ಕೊಡೆ ಪಾದರಕ್ಷೆ ವಸ್ತ್ರ ಕಪ್ಪಟಂಗಳನು ಕೊಟ್ಟು ಭಕ್ತಿಮಾಡುವ ನೆವದಿಂದ ಧನ ಪದಾರ್ಥವ ಜಂಗಮಕ್ಕೆ ಸಮರ್ಪಿಸಿ, ಜಂಗಮವನೊಲಿಸಬೇಕು – ಜಂಗಮ ಭಕ್ತಿಮಾಡಿ ಜಂಗಮದ ಕರುಣವ ಹಡೆದುಕೊಳಬೇಕು. ಈ ತ್ರಿವಿಧವ – ಈ ತನುಮನಧನವೆಂಬ ತ್ರಿವಿಧಪದಾರ್ಥವನ್ನು, ಹೊಜಗುಮಾಡಿ – ವಂಚಿಸಿಕೊಂಡು, ಹಜೆಯ ಹೊಯಿಸಿ – ಪಂಚಮಹಾವಾದ್ಯಂಗಳ ನುಡಿಸಿ, ಕುಜುವ ಪೂಜಿಸುವರ – ಸ್ಥಾವರಲಿಂಗಪೂಜೆಯ ಮಾಡುವವರ, ಕೂಡಲಸಂಗಮದೇವ – ಪರಶಿವಲಿಂಗವು, ಮೆಚ್ಚ – ಮಮಕರಿಸಿಕೊಂಡು ನಿಜಮೋಕ್ಷವನ್ನು ಕರುಣಿಸಿಕೊಟ್ಟಾನೆ? ಕರುಣಿಸಿಕೊಡನು" ಎಂದು ಪದಾರ್ಥ, ಶಬ್ದಾರ್ಥ ಟೀಕು ಬರೆಯುವ ಮೂಲಕ ವಚನಕಾರರ ಉದ್ದೇಶಿತ ಅರ್ಥವನ್ನು ಅರಿಯಲು ಸಹಾಯಕವಾಗುತ್ತವೆ. ಡಾ. ಸಿ.ವಿ. ಪ್ರಭುಸ್ವಾಮಿಮಠರು "ಇಂಥ ಟೀಕೆಗಳನ್ನು ಅಭ್ಯಾಸಿಸುವಾಗ ಗಮನಿಸಬೇಕಾದ ಅಂಶಗಳನ್ನು ಕುರಿತು ವ್ಯಕ್ತವಾದ ಅಭಿಪ್ರಾಯವು ಬಸವಣ್ಣನವರ ವಚನಗಳ ಟೀಕೆಗಳಿಗೆ ಒಂದು ಸರಿಯಾದ ಪ್ರವೇಶವನ್ನು ನೀಡುವಂತೆ ಕಂಡುಬರುತ್ತದೆ"[೯] ಎಂಬ ಅಭಿಪ್ರಾಯವು ಸ್ವೀಕಾರಯೋಗ್ಯವಾಗಿದೆ. ಪ್ರೊ.ಶಿ.ಶಿ. ಬಸವನಾಳ ಅವರು "ಇಂಥ ಬೆಡಗಿನ ವಚನಗಳಲ್ಲಿ ಅಡಗಿರುವ ಮಾಂತ್ರಿಕತೆಯು ಟೀಕೆಯಲ್ಲಿ ಎಲ್ಲಿಯೂ ಸ್ಫೋಟವಾದ ಅನುಭವವನ್ನು ಕೊಡುವುದೇಯಿಲ್ಲ. ಇದಲ್ಲದೆ ಟೀಕೆಗಳಲ್ಲಿಯ ಲೋಕಾನುಭವ, ಸೂಕ್ಷ್ಮನಿರೀಕ್ಷೆ, ಹೊಸ ಹೊಸ ದೇಶೀ ಪದಗಳ ಅಪೂರ್ವ ಪ್ರಯೋಗ, ಅಪರೂಪವಾದ ಶಬ್ದಾರ್ಥಗಳ ಲವಲವಿಕೆಯನ್ನು ಮೆಚ್ಚಿಯೂ ನಮ್ಮ ಗಣ್ಯವಿದ್ವಾಂಸರು ಈ ಟೀಕೆಗಳನ್ನು ಕುರಿತು ಅಷ್ಟೊಂದು ಉತ್ಸಾಹ ತೋರದಿರುವುದಕ್ಕೆ ಕಾರಣಗಳೇನಿರಬಹುದು?"[೨] ಎಂಬ ಪ್ರಶ್ನೆ ನಿಜಕ್ಕೂ ಚಿಂತನಾರ್ಹವಾಗಿದೆ.

ಬಸವಣ್ಣನವರ ವಚನಗಳಿಗೆ ರಚನೆಯಾದ 'ಪಂಚಟೀಕೆ'ಗಳು ಲೌಕಿಕದಿಂದ ಆರಂಭವಾದರೂ ಪರಮಾರ್ಥದಲ್ಲಿಯೇ ಮುಕ್ತಾಯವಾಗುತ್ತವೆ. ವಚನಗಳಲ್ಲಿಯ ಸೃಜನಶೀಲವಾದ, ಭಾವಸ್ಪರ್ಶವುಳ್ಳ ರಸಾನುಭವವುಂಟುಮಾಡಬಲ್ಲ ಅಂಶಗಳು ಟೀಕುರಚನೆಯಿಂದಾಗಿ ಮೂಲ ಸ್ವಾರಸ್ಯವನ್ನು ಕಳಚಿಕೊಂಡು ನೀರಸಗೊಂಡಿವೆ. ಮೂಲವಚನ ಓದಿನಲ್ಲಿ ಸಿಗುವ ಅನುಭವ, ಸಂತೋಷ ಟೀಕಿನಿಂದಾಗಿ ಮಾಯವಾಗಿ ಅತೃಪ್ತಿಯುಂಟುಮಾಡುತ್ತವೆ. ಅಂದರೆ, ಜಂಗಮರೂಪಿ ವಚನಗಳನ್ನು 'ಸ್ಥಾವರ' ಗೊಳಿಸಿದಂತಹ ಅನುಭವ ಕೆಲವೊಂದು ಟೀಕುಗಳಿಂದ ವ್ಯಕ್ತವಾಗುತ್ತದೆ.

ಒಟ್ಟಾರೆ, ಬಸವಣ್ಣನವರ ಟೀಕಿನ ವಚನಗಳಿಂದ ಲಿಂಗಾಯತ ಧರ್ಮದ ತಾತ್ವಿಕ ಸಿದ್ಧಾಂತವನ್ನು ಅರಿಯಲು ಸಹಾಯಕವಾಗಿದೆ. ವಚನಕಾರರ ವೈಚಾರಿಕ, ಐತಿಹಾಸಿಕ, ಸಾಂಸ್ಕೃತಿಕ ಒಳನೋಟಗಳನ್ನು ಕಂಡುಕೊಳ್ಳಲು ಪ್ರೇರಕವಾಗಿವೆ. ವೈವಿಧ್ಯತೆ ಇಲ್ಲದ ಟೀಕುಗಳಿಂದ ಓದುಗರಿಗೆ ಬೇಸರವೆನಿಸಿದರೂ ಶಬ್ದಾರ್ಥ, ವಾಕ್ಯಾರ್ಥ ಮಾದರಿಯ ಟೀಕುಗಳಿಂದ ಕನ್ನಡ ಭಾಷೆಯ ವೈಶಿಷ್ಟ್ಯ ಮತ್ತು ಶಬ್ಧಭಂಡಾರದ ವಿಪುಲತೆಯನ್ನು ಅರಿಯಲು ಎಂದೆಂದಿಗೂ ನೆರವಾಗುತ್ತವೆ.

ಈ ಹಿನ್ನಲೆಯಲ್ಲಿ ಕನ್ನಡನಾಡಿನ ಭಾಷಿಕ ಹಾಗೂ ಸಾಂಸ್ಕೃತಿಕ ಅಧ್ಯಯನವನ್ನು ಕೈಗೊಳ್ಳುವ ಮೂಲಕ ವಚನಟೀಕಾ ಸಾಹಿತ್ಯವನ್ನು ಆಧುನಿಕ ಸಂದರ್ಭಕ್ಕೆ ಮುಖಾಮುಖಿಗೊಳಿಸಿ, ಅನುಸಂಧಾನಕ್ಕೊಳಪಡಿಸಬೇಕಾದ ತುರ್ತು ಅಗತ್ಯವಿದೆ. ಅಂದರೆ, ಪರಂಪರೆಯ ಮೌಲ್ಯಾದರ್ಶಗಳನ್ನು ಆಧುನಿಕತೆಯೊಂದಿಗೆ ಬೆಸೆಯಲು ಬಸವಣ್ಣನವರ ಟೀಕಿನ ವಚನಗಳು ಸಹಾಯಕವಾಗಲಿರುವುದರಿಂದ ಪ್ರಯೋಜನಮುಖಿಯಾಗಿವೆಯೆನ್ನಬಹುದು.

**೨. ಅಲ್ಲಮಪ್ರಭುದೇವರ ಟೀಕಿನ ವಚನಗಳು**

ಬಸವಣ್ಣನವರ ಹಿರಿಯ ಸಮಕಾಲೀನ ವಚನಕಾರರಲ್ಲಿಯೇ ಅಗ್ರಗಣ್ಯನಾದ ಅಲ್ಲಮಪ್ರಭು ೧೨ನೇ ಶತಮಾನದ ಧಾರ್ಮಿಕ, ಸಾಹಿತ್ಯಿಕ ಕ್ಷೇತ್ರದ ಉತ್ತುಂಗ ಶಿಖರದ ಮಹಾನುಭಾವಿಯಾಗಿ, ಯೋಗಿಯಾಗಿ ಬಾಳಿ ಬೆಳಗಿದ ದಿವ್ಯಪರಂಜ್ಯೋತಿ.

ಅಲ್ಲಮಪ್ರಭುದೇವರ ಜೀವನ ಇತಿಹಾಸವನ್ನು ಅರಿಯಲು ನಮಗೆ ಸಮಕಾಲೀನ ಶಿವಶರಣರ ವಚನಗಳು, ಹರಿಹರನ ಪ್ರಭುದೇವರ ರಗಳೆ, ಚಾಮರಸನ ಪ್ರಭುಲಿಂಗಲೀಲೆ, ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ, ಅಲ್ಲಮರ ವಚನಗಳಿಗೆ ಬರೆದ ಮಹಲಿಂಗದೇವ, ಕಲ್ಲುಮಠದ ಪ್ರಭುದೇವರ ವಚನಗಳ ವ್ಯಾಖ್ಯಾನ, ಶೂನ್ಯ ಸಂಪಾದನೆ ಕೃತಿಗಳು, ಎಳಂದೂರು ಹರೀಶ್ವರನ ಪ್ರಭುದೇವರ ಪುರಾಣ, ಪರ್ವತೇಶನ ಪ್ರಭುದೇವರ ಸಾಂಗತ್ಯದಂತಹ ರಗಳೆ, ಇತರೆ ಕಾವ್ಯ, ಪುರಾಣ ಗ್ರಂಥಗಳಲ್ಲಿ ಅಲ್ಲಮಪ್ರಭುದೇವರ ಜೀವನದ ಇತಿವೃತ್ತವನ್ನು ಕಂಡರಿಸಲಾಗಿದೆ. ಜೊತೆಗೆ, ಪಾಲ್ಕುರಿಕೆ ಸೋಮನಾಥ, ರಾಘವಾಂಕ, ಭೀಮ ಕವಿಗಳ ಕಾವ್ಯಗಳು, ಲಭ್ಯ ಶಾಸನಗಳು ಪ್ರಮುಖ ಆಕರಗಳಾಗಿವೆ.

ಶಿವತತ್ವ ಚಿಂತಾಮಣಿಯಲ್ಲಿ– "ವೈವಸ್ವತನೆಂಬ ಏಳನೆಯ ಮನುವಿನ ಕಾಲದಲ್ಲಿ ನಂದಿಕೇಶ್ವರನು ವೃಷಭ (ಬಸವ)ನೆಂಬ ಭಕ್ತನಾಗಿ ಅವತರಿಸಿದಾಗ, ಶಿವನು ಪ್ರಭುವೆಂಬ ಜಂಗಮವಾಗಿ ಬಂದು ಶಿವಧರ್ಮವನ್ನು ಸಾರಿದನು."[೪೩] ಪ್ರಭುಲಿಂಗಲೀಲೆಯಲ್ಲಿ– "ಅಲ್ಲಮನು ನಿರ್ಮಾಯನೆಂಬ ಶರಣನಲ್ಲವೇ ಅಲ್ಲ. ಅವನು ಪರಶಿವನ ನೇರವಾದ ಅವತಾರವೆಂದೂ[೪೪] ಹೇಳಿದೆ. ಸಿಂಗಿರಾಜ ಪುರಾಣವಂತೂ– "ದ್ವಾಪರ–ತ್ರೇತಾ–ಕೃತಯುಗಗಳಲ್ಲಿ ಕ್ರಮವಾಗಿ ಅನಿಮಿಷ, ಶೂನ್ಯಕಾಯ, ಸ್ಥೂಲಕಾಯ ಎಂಬ ಅವತಾರಗಳನ್ನೆತ್ತಿದನೆಂದು[೪೫] ಹೇಳಲಾಗಿದೆ. ಈ ರೀತಿಯ ವಿಭನ್ನವಾದ ಹೇಳಿಕೆಗಳನ್ನು ಗ್ರಹಿಸುತ್ತಲೇ "ಬಸವೇಶ್ವರರು ತಮ್ಮ ಪ್ರಭಾವಕ್ಕೊಳಗಾದ ಜನರ ಮನದಲ್ಲಿ ಭಕ್ತಿಯನ್ನು ಅರಳಿಸುವ ಜ್ಯೋತಿ ಸ್ವರೂಪವಾದ ಮೂಲವಿಗ್ರಹವಾದರೆ, ಅಲ್ಲಮಪ್ರಭುದೇವನು ಆ ಭಕ್ತಿಗೆ ಪ್ರೇರಕವೂ ಪೂರಕವೂ ಆದ 'ಜ್ಞಾನ'ವನ್ನು ದೇಶದೇಶಗಳಲ್ಲಿ ದೂರದೂರದಲ್ಲಿರುವ ಮುಮುಕ್ಷುಗಳ ಮಾರ್ಗದರ್ಶನಕ್ಕಾಗಿ ಪ್ರಸರಿಸಲು ಜಂಗಮರಶ್ಮಿರೂಪಿಯಾಗಿರುವ ಉತ್ಸವ ಮೂರ್ತಿಯಾದಾತನು. ಅವನು ಸಾಧಿಸಿದ ಸಿದ್ಧಿ ಮತ್ತು ಉಪದೇಶಿಸಿದ ಪರಮಾರ್ಥವು ನಿರ್ವಾಣ ಅಥವಾ ಬಯಲು, ಅದನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಹೇಳಿದ ಮಾರ್ಗ ಯೋಗ[೪೬] ಎಂದು ಡಾ. ಎಲ್. ಬಸವರಾಜ ಹೇಳುತ್ತಾರೆ.

ಇತ್ತೀಚೆಗೆ ಅಲ್ಲಮಪ್ರಭುವಿನ ವಚನಗಳ ಗಂಭೀರ ಅಧ್ಯಯನ ನಡೆಸಿದ ಡಾ. ಎಸ್. ನಟರಾಜ ಬೂದಾಳು ಅವರು– "ಪ್ರಧಾನ ಶ್ರಮಣಧಾರೆಗಳಾದ ಬೌದ್ಧ, ಜೈನ, ಚಾರ್ವಾಕ, ಸಿದ್ಧ, ನಾಥ, ಆಜೀವಿಕ ಮುಂತಾದ ಪರಂಪರೆಗಳು ಪ್ರಭಾವ ಬೀರಿವೆ. ಶ್ರಮಣ ಪರಂಪರೆಯ ಎಲ್ಲ ಪ್ರಮುಖ ಆಶಯಗಳು ಅಲ್ಲಮನಲ್ಲಿ ಪುನರುಕ್ತವಾಗುತ್ತಲೇ ಇರುತ್ತವೆ. ಅವನು ವೇದ ವಿರೋಧಿ, ಶಾಸ್ತ್ರ ವಿರೋಧಿ, ಪುರಾಣ ವಿರೋಧಿ, ತರ್ಕವಿರೋಧಿ ಮತ್ತು ಭಕ್ತಿ ವಿರೋಧಿ ಕೂಡಾ. ಅವನಿಗೆ ಗುರುಹಿರಿಯರ ಹಂಗಿಲ್ಲ; ಮೂಲಮಾತೃಕೆಗಳ ಹಂಗಿಲ್ಲ, ಭಾಷೆಯ ಹಂಗಿಲ್ಲ, ಅನ್ಯಾರ್ಥಶಾಸ್ತ್ರಗಳ ಹಂಗಿಲ್ಲ, ಚರಿತ್ರೆಯ ಹಂಗಿಲ್ಲ"[೬] ಎಂದು ಅಭಿಪ್ರಾಯಪಡುತ್ತಾರೆ.

ಹೀಗೆ, ನಾನಾ ಪಂಥಗಳ ಧಾರ್ಮಿಕ, ತಾತ್ವಿಕ ಪ್ರಭಾವ ಹೊಂದಿರುವ ಅಲ್ಲಮಪ್ರಭುದೇವರು ಬಸವಾದಿ ಶಿವಶರಣರ ಲಿಂಗಾಯತ ಧರ್ಮದ ತಾತ್ವಿಕ ಚೌಕಟ್ಟನ್ನು, ಅದರ ಮಿತಿಗಳನ್ನು ಮೀರಿನಿಂದ ಅನುಭಾವಿಯಾಗಿ ಕಂಡುಬರುತ್ತಾರೆ. ಈ ಹಿನ್ನೆಲೆಯಲ್ಲಿ ಅಲ್ಲಮರ ವಚನಗಳನ್ನು ಅರ್ಥೈಸಿ ವ್ಯಾಖ್ಯಾನ ಮಾಡಲಾಗಿದೆಯೇ? ಇವರ ವಚನಗಳಿಗೆ ಟೀಕು ಬರೆದ ಟೀಕಾಕಾರರಲ್ಲಿದ್ದ ತಾತ್ವಿಕ ನಿಲುವುಗಳೇನು? ತಾತ್ವಿಕ ಚೌಕಟ್ಟಿನಲ್ಲಿಯೇ ಅಲ್ಲಮರ ವಚನಗಳನ್ನು ಗ್ರಹಿಸಿ, ವ್ಯಾಖ್ಯಾನ ಮಾಡಿದ ಪರಿಣಾಮವಾಗಿ ಮುಕ್ತವಾದ ಇಲ್ಲವೇ ನೈಜಜೀವನದ ಚಿಂತನೆ, ಅನುಭಾವದ ನಾನಾ ಮುಖಗಳನ್ನು ಅರಿಯಲು ಸಾಧ್ಯವಾಗದೇ ಹೋಗಿರಬಹುದೇ? ಮುಂತಾದ ಪ್ರಶ್ನೆಗಳನ್ನು ಹಾಕಿಕೊಂಡು ಇಲ್ಲಿಯ ವಚನ ವ್ಯಾಖ್ಯಾನದ ಲಕ್ಷಣ, ಸ್ವರೂಪವನ್ನು ಪರಾಮರ್ಶಿಸಬೇಕಾಗುತ್ತದೆ.

"ಅಲ್ಲಮನ ವಚನಗಳ ವ್ಯಾಖ್ಯಾನದ ಉದ್ದೇಶದ ಜೋಡಣೆಗಳಲ್ಲಿ ಒಂದು ಹಂತದ ಕ್ರಿಯೇಟಿವಿಟಿ ಇದೆಯಾದರೂ, ಅಂತಹ ಜೋಡಣೆಯ ಆಚೆಗಿನ ವಚನಗಳ ರಾಶಿಯೂ ದೊಡ್ಡದಿದೆ. ಮರು ಜೋಡಣೆಯ ಅನೇಕ ಪ್ರಯತ್ನಗಳು ನಡೆದಿವೆ. ಅಲ್ಲಮಪ್ರಭುವಿನ ಅನುಸಂಧಾನಗಳೆಂದು ಹೆಸರಿಸಬಹುದಾದ ಶೂನ್ಯ ಸಂಪಾದನೆಗಳು, ಪ್ರಭುಲಿಂಗಲೀಲೆ, ಪ್ರಭುದೇವರ ಪುರಾಣ, ರಗಳೆ ಮುಂತಾದವು ಅವರ ವಚನಗಳನ್ನು ನಿರ್ದಿಷ್ಟವಾದ ಒಂದು ಪಾಂಥಿಕ ದೃಷ್ಟಿಕೋನದವು. ಇವುಗಳಿಂದಾಗಿ ಅವನು ಅನುಭವ ಮಂಟಪದ ಅಧ್ಯಕ್ಷನೆಂದು ವೀರಶೈವ ವಿಚಾರದಲ್ಲಿ ಮಾತ್ರ ಸ್ಥಾನಪಡೆದನೆ ಹೊರತು ವೀರಶೈವ ಆಚಾರದಲ್ಲಿ ಮಾನ್ಯತೆ ಪಡೆಯಲಿಲ್ಲ. ಅಲ್ಲಮರನ್ನು ಪಂಥಾತೀತವಾಗಿ ವ್ಯಾಖ್ಯಾನಿಸಬಹುದೆ? ಎಂಬ ಪ್ರಶ್ನೆಯನ್ನು ಎದುರಿಗಿಟ್ಟುಕೊಂಡು ನಡೆಸಬಹುದಾದ ಪ್ರಯತ್ನಗಳು ಆಕರ್ಷಕವೆನ್ನಿಸಿಯಾವು"[೭] ಎಂಬ ಅಭಿಪ್ರಾಯಗಳ ನೆಲೆಯಲ್ಲಿಯೇ ವಚನ ವ್ಯಾಖ್ಯಾನಗಳ ಅಧ್ಯಯನ ಮಾಡಿದಲ್ಲಿ ಅಲ್ಲಮಪ್ರಭುದೇವರ ಜೀವನ ದರ್ಶನದ ನವನವೀನ ಹೊಳಹುಗಳ ಮೇಲೆ ಬೆಳಕು ಚೆಲ್ಲಲು ಸಾಧ್ಯವಾಗಬಹುದು.

**ಅಲ್ಲಮಪ್ರಭು ಮತ್ತು ಬೆಡಗಿನ ವಚಗಳು**

'ವಚನ' ಎಂದರೆ ಆಜ್ಞೆ, ಮಾತು, ಒಂದು ರೀತಿಯ ವಿಶಿಷ್ಟ ಬರಹ ಎನ್ನಬಹುದು. ಈ ರೀತಿಯ ಬರಹವು ಒಗಟಿನಂತೆ ನಿಗೂಢ ಧ್ವನಿಯೊಂದಿಗೆ ರಚನೆಯಾದಲ್ಲಿ ಅದುವೇ 'ಬೆಡಗಿನ ವಚನ'ವೆಂದು

ಹೇಳಬಹುದು. ಇಂತಹ ವಿಶಿಷ್ಟ ಮಾದರಿಯ ವಚನಗಳನ್ನು ರಚಿಸಿದ ಹೆಗ್ಗಳಿಕೆಗೆ ಅಲ್ಲಮಪ್ರಭುದೇವರು ಪಾತ್ರರಾಗುತ್ತಾರೆ. ಉದಾಹರಣೆಗೆ–

> "ಅಜ್ಞಾನವೆಂಬ ತೊಟ್ಟಿಲಲ್ಲಿ ಜ್ಞಾನವೆಂಬ ಶಿಶುವ ಮಲಗಿಸಿ
> ಸಕಲವೇದ ಶಾಸ್ತ್ರಗಳೆಂಬ ನಿಗಳ ಹಗ್ಗಗಳ ಕಟ್ಟಿ
> ತೂಗುತ್ತಿದ್ದಾಳೆ ಭ್ರಾಂತಿಯೆಂಬ ತಾಯಿ
> ನಿಗಳ ಹರಿದು ತೊಟ್ಟಿಲು ಮುರಿದು
> ಶಿಶು ಕೆಳಗೆ ಬಿದ್ದಲ್ಲದೆ ಗೋೇಗೇಶ್ವರ ಲಿಂಗವ ಕಾಣಬಾರದು ನೋಡಾ."

> "ಊರ ಹೊರಗೊಂದು ದೇಗುಲ
> ದೇಗುಲದೊಳಗೊಬ್ಬಳು ಗರತಿ ನೋಡಯ್ಯ
> ಆ ಗರತಿಯ ಕೈಯಲ್ಲಿ ಹದಿನಾಲ್ಕು ಲೋಕ
> ಗರತಿಯ, ಸೂಜಿಯ ಹದಿನಾಲ್ಕು ಲೋಕವ
> ಒಂದು ಇರುವೆ ನುಂಗಿದ್ದ ಕಂಡೆ ಗುಹೇಶ್ವರ"

ಈ ರೀತಿಯ ಅದ್ಭುತವಾದ ಅನುಭಾವಗಮ್ಯವಾದ, ತರ್ಕಬದ್ಧವಾದ ಬೆಡಗಿನ ವಚನಗಳನ್ನು ರಚಿಸಿದ ಅಲ್ಲಮಪ್ರಭುದೇವರು ಬುದ್ಧನಂತೆ ಆತ್ಮಜ್ಞಾನಿಯಾಗಿ ಬ್ರಹ್ಮಸತ್ಯವನ್ನು ಶಬ್ದಾರ್ಥಗಳ ಬೆರಗಿನಲ್ಲಿ ಹಿಡಿಯಲು ಪ್ರಯತ್ನಿಸಿದ ಮಹಾನುಭಾವಿಯಾಗಿದ್ದಾನೆ. 'ಬೆಡಗು' ಎಂದರೆ ರಹಸ್ಯ, ಜಾಣ್ಮೆ, ಚಮತ್ಕಾರ, ಮತ್ತಿತರ ಅರ್ಥದಲ್ಲಿ ಸಾಮಾನ್ಯರು ಅರ್ಥೈಸುತ್ತಾರೆ. ಈ ಬೆಡಗಿನ ಸಾಹಿತ್ಯ ಪ್ರಕಾರ ಜನಪದ ಸಾಹಿತ್ಯ, ಕಾವ್ಯ ಹಾಗೂ ವಚನಗಳಲ್ಲಿ ಪ್ರಾಚೀನ ಕಾಲದಿಂದಲೂ ಬಳಕೆಯಾಗಿದೆ. ಈಗಲೂ ಬಳಕೆಯಾಗುತ್ತಲೇ ಜೀವಂತವಾಗಿದೆ. "ವಚನಗಳು ನೆನಪಿನಲ್ಲಿರಬೇಕು. ಆ ತತ್ವಾರ್ಥ ಮನನವಾಗಬೇಕಾದರೆ ವಿರುದ್ಧಾರ್ಥಕ ಮಾತುಗಳಲ್ಲಿ ಹೇಳಬೇಕೆಂದು ವಚನಕಾರರು ಈ ಬೆಡಗಿನ ರೀತಿಯನ್ನು ಬಳಸಿರಬೇಕು. ಒಡೆದು ನೋಡಿದಾಗ ವಿಶಿಷ್ಟಾರ್ಥ ಹೊಳೆಯುತ್ತದೆ. ಇಲ್ಲಿ ಪ್ರತಿ ಮಾತಿಗೂ ಸಾಂಕೇತಿಕ ಅರ್ಥವಿರುತ್ತದೆ..... ಇವುಗಳನ್ನು ಅರ್ಥಮಾಡಿಕೊಳ್ಳಲು ಅಪಾರವಾದ ಪಾಂಡಿತ್ಯ, ಯೋಗದ ಜ್ಞಾನ ಅವಶ್ಯಕ"[೪೯] ಎಂದು ಹೆಚ್. ದೇವಿರಪ್ಪ ಹೇಳುತ್ತಾರೆ.

ಶಿವಶರಣರ ವಚನಗಳಲ್ಲಿ ನೇರವಾದ ಸರಳ ವಚನಗಳು (ಲೌಕಿಕ ಅರ್ಥವಿರುವ) ಮತ್ತು ಬೆಡಗಿನ ವಚನಗಳು (ಅಲೌಕಿಕ ಅರ್ಥವಿರುವ) ಎಂದು ಎರಡು ರೀತಿಯಲ್ಲಿ ವಿಭಜಿಸಿ ಅಧ್ಯಯನ ಮಾಡಬಹುದು. ಈ ರೀತಿಯ ವಿಭಜನೆ ಸ್ವತಃ ವಚನಕಾರರಲ್ಲಿರಲಿಲ್ಲ. ನಂತರದ ವಚನ ಸಂಗ್ರಹ ಸಂಕಲನಕಾರರು, ಟೀಕಾಕಾರರು ಬೆಡಗಿನ ವಚನಗಳನ್ನು ಗುರುತಿಸಿ, ಬೇರ್ಪಡಿಸಿ ವ್ಯಾಖ್ಯಾನಿಸುವ ಪ್ರಕ್ರಿಯೆ ನಡೆದಿರಬಹುದು.

ಸ್ವತಃ ಅಲ್ಲಮಪ್ರಭುದೇವರ ವಚನಗಳಲ್ಲಿ ಬೆಡಗು ಶಬ್ಧದ ಬಳಕೆಯಾದುದನ್ನು ಅರ್ಥೈಸಿದ ರೀತಿಯನ್ನು ಕಾಣಬಹುದು.[೫೦]

* ಗುಹೇಶ್ವರ, ನಿನ್ನ **ಬೆಡಗಿನ ಬಿನ್ನಾಣವನಱಿದೆ** ನೋಡಾ – (ವಚನ ಸಂಖ್ಯೆ ೦೫)
* ನಿಜದುದಯದ **ಬೆಡಗಿನ ಕೀಲ,** ಗುಹೇಶ್ವರ
  ನಿಮ್ಮ ಶರಣರ ಅನುಭಾವ ಸಂಗದಲ್ಲಿದ್ದು ಕಂಡೆನಯ್ಯ – (ವಚನ ಸಂಖ್ಯೆ ೬೨)
* ಗಮನಾಗಮನದ ನುಡಿಯ **ಬೆಡಗಿನ ಕೀಲ**
  ಮಡಗಿದಾತ ಬಲ್ಲ, ಗುಹೇಶ್ವರ – (ವಚನ ಸಂಖ್ಯೆ ೧೭೪)
* ನಾರಿವಾಳದ ಕಾಯೊಳಗಣ ತಿರುಳನೊಡೆಯದೇ ಮೆಲಬಲ್ಲಡೆ
  **ಬೆಡಗು** ಗುಹೇಶ್ವರ – (ವಚನ ಸಂಖ್ಯೆ ೨೮೯)
* ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾ **ಬೆಱಗಾದೆನು** – (ವಚನ ಸಂಖ್ಯೆ ೩೪)
* ನಮ್ಮ ಗುಹೇಶ್ವರ ಲಿಂಗದಲ್ಲಿ **ನಿಬ್ಬೆಱಗಾಗೋ** ಮರುಳೆ – (ವಚನ ಸಂಖ್ಯೆ ೪೧೯)

'ಬೆಡಗಿನ ಬಿನ್ನಾಣ', 'ಬೆಡಗಿನ ಕೀಲ', 'ಬೆಡಗು' ಶಬ್ಧಗಳ ಜೊತೆಗೆ ಅಲ್ಲಮನು 'ಬೆಱಗಾದೆನು', 'ನಿಬ್ಬೆಱಗಾಗೋ' ರೀತಿಯಲ್ಲಿ ಬಳಸಿರುವುದರಿಂದ 'ಬೆಡಗು–ಬೆಱಗುಗಳನ್ನು ಬೇರ್ಪಡಿಸಿ ನೋಡುವ ದೃಷ್ಟಿ ಸರಿಯಲ್ಲ[೫೧] ವೆನ್ನುತ್ತಾರೆ ಡಾ. ಚಂದ್ರಶೇಖರ ನಂಗಲಿ ಅವರು. ಏಕೆಂದರೆ, ವಚನ ಓದುಗರನ್ನು ಬೆಱಗಿನೆಡೆ ಕರೆದೊಯ್ಯುವುದೇ ಬೆಡಗಿನ ವಚನಗಳ ಉದ್ದೇಶವಾಗಿದೆ. ಅಂದರೆ ಬೆಱಗನ್ನುಂಟುಮಾಡುವ ಯಾವುದೇ ವಚನವಿರಲಿ ಅವನ್ನು ಬೆಡಗಿನ ವಚನವೆಂದು ಪರಿಭಾವಿಸದೇ ಕೇವಲ ದ್ವಂದ್ವಾರ್ಥ ಮತ್ತು ಅಗಲೀಕರಣಕ್ಕೆ ಒಳಗಾದ ರಚನೆಗಳನ್ನು ಮಾತ್ರ ಸೀಮಿತ ತಾತ್ವಿಕ ಚೌಕಟ್ಟಿಗೆ ಒಳಪಡಿಸಿ ವ್ಯಾಖ್ಯಾನ ಮಾಡಿರುವುದು ತಿಳಿದುಬರುತ್ತದೆ. ಇದರಿಂದ ಟೀಕಾಕಾರರ ವೈಯಕ್ತಿಕ ಅಭಿಪ್ರಾಯಗಳ ಅಭಿವ್ಯಕ್ತಿಗೆ ಇಲ್ಲಿ ಪ್ರಾಧಾನ್ಯತೆ ಸಿಗದೆ, ಪರಂಪರಾಗತ ತಾತ್ವಿಕ ಅರ್ಥವೇ ಮುಖ್ಯವಾಗಿಬಿಡುತ್ತದೆ.

'......... ಬೆಡಗಿನ ವಚನಗಳಿಗೆ ೧೫, ೧೬ ಹಾಗೂ ೧೭ನೇ ಶತಮಾನದಲ್ಲಿ ತಾತ್ವಿಕಾರ್ಥ ಬರೆದಿದ್ದರೂ, ಇವು ೧೨ನೇ ಶತಮಾನದಲ್ಲಿ ಹೇಳುತ್ತಿದ್ದ ತಾತ್ವಿಕಾರ್ಥವೆನಿಸುತ್ತದೆ. ಹೀಗಾಗಿ, ಈ ಬೆಡಗಿನ ವಚನಗಳ ಸಮಕಾಲೀನ ಅರ್ಥ, ಪರಂಪರಾಗತ ಅರ್ಥಕ್ಕಿಂತ ಭಿನ್ನವಾಗಿರಲಿಲಕ್ಕಿಲ್ಲ."[೫೨] ನಿರಂತರ ಚಲನಶೀಲವಾಗಿ ವಿಭಿನ್ನವಾದ ಅರ್ಥ, ಹೊಳಹುಗಳನ್ನು ನೀಡಬಹುದಾಗಿದ್ದ ಬೆಡಗಿನ ವಚನಗಳಿಗೆ ಒಂದು ಮಿತಿಯನ್ನು ಕಲ್ಪಿಸಿ ತಾತ್ವಿಕಾರ್ಥ ನೀಡಿರುವುದು ಸಮಂಜಸವಾದ ಪ್ರಕ್ರಿಯೆಯಾಗಲಾರದು. ಇದೇ ರೀತಿಯ ಮಿತಿಯನ್ನು, ನೀರಸವಾದ ತಾತ್ಪರ್ಯವನ್ನು ಇತರೆ ವಚನಗಳ ವ್ಯಾಖ್ಯಾನಗಳ ಮಾದರಿಗಳಲ್ಲಿಯೂ ಕಾಣಬಹುದಾಗಿದೆ.

"ಅಲ್ಲಮನ ವಚನಗಳನ್ನು ಸರಳ ವಚನಗಳು (ಲೌಕಿಕಾರ್ಥವುಳ್ಳವು) ಮತ್ತು ಬೆಡಗಿನ ವಚನಗಳು (ಅಲೌಕಿಕಾರ್ಥವುಳ್ಳವು) ಎಂದು ವಿಭಜಿಸುವ ನೆಲೆ ಕೃತಕವಾದುದು. ಅಲ್ಲಮನ ವಚನಗಳನ್ನು ಅಲ್ಲಮತ್ವದ ವಚನಗಳು ಅಥವಾ ಬೆಱಗಿನ ವಚನಗಳು ಎಂದು ಕರೆಯುವುದು ಹೆಚ್ಚು ಉಚಿತವಾದುದು. ಅಲ್ಲಮನು ಅಂತರಂಗ– ಬಹಿರಂಗ, ಲೌಕಿಕ–ಅಲೌಕಿಕ, ಸಾಮಾಜಿಕ–ಲೌಕಿಕ ಎಂಬ ಖಂಡದೃಷ್ಟಿಯ

ಸೀಳು ವ್ಯಕ್ತಿತ್ವವನ್ನು ಹೊಂದಿರಲಿಲ್ಲ[೫೩] ಎನ್ನುತ್ತಾರೆ ಡಾ. ಚಂದ್ರಶೇಖರ ನಂಗಲಿ. ಇವರ ಮಾತಿಗೆ ಪೂರಕವೆಂಬಂತೆ ಡಾ. ಎಲ್. ಬಸವರಾಜು ಅವರು– "ಅಲ್ಲಮನು ಯಾವ ಮತವನ್ನಾಗಲಿ ಖಂಡಿಸಲೂ ಇಲ್ಲ ಮಂಡಿಸಲೂ ಇಲ್ಲ. ವಿಶ್ವಧರ್ಮದ ಅಭಿಮತವೇ ಅವನ ಮತ.... ಅವನ ಆಲೋಚನೆಯೆಲ್ಲ ಮೂಲಭೂತವಾದ ಸುಧಾರಣೆಯತ್ತ ಕೇಂದ್ರೀಕೃತವಾಗಿತ್ತು"[೫೪] ಎಂದು ಸ್ಪಷ್ಟವಾಗಿ ಹೇಳುವುದರಿಂದ ಅಲ್ಲಮಪ್ರಭುವಿನ ವಚನಗಳು ಮತ್ತು ಅವುಗಳಿಗೆ ಬರೆದ ವ್ಯಾಖ್ಯಾನಗಳನ್ನು ಕೂಡಾ ತುಂಬಾ ಎಚ್ಚರವಹಿಸಿ ಅಧ್ಯಯನ ಮಾಡಬೇಕಾಗುತ್ತದೆ. ಅವರ ನಿಲುವು ಏನಿತ್ತು? ಎಂಬುದನ್ನು ಅರಿಯಲು ಪ್ರಸ್ತುತ ವಚನ ಟೀಕುಗಳ ಮೊರೆ ಹೋಗಬೇಕಾಗುತ್ತದೆ.

ಡಾ. ಜಯಶ್ರೀ ದಂಡೆಯವರು– "ಬೆಡಗಿನ ವಚನಗಳ ಟೀಕಾಕಾರರ ಟೀಕೆಗಳನ್ನು ಗಮನಿಸಿದರೆ 'ಬೆಡಗಿನ ವಚನ'ಗಳಿಗೊಂದು ಸಾಂಪ್ರದಾಯಿಕ ಅರ್ಥ ಪರಂಪರೆಯಿದ್ದು ನಿರ್ದಿಷ್ಟವಾಗಿ ಆಯಾ ಸಂದರ್ಭದಲ್ಲಿ ಒಂದು ಸಂಕೇತ, ಪ್ರತೀಕ, ಪ್ರತಿಮೆ ಅದೇ ಅರ್ಥಗಳನ್ನು ಹೊಂದಿರುತ್ತವೆಂಬುದು ತಿಳಿದುಬರುತ್ತದೆ. ಆದರೆ, ಉಳಿದ ಕಡೆ ಇಂತಹ ನಿರ್ಧಿಷ್ಟ ಕಲ್ಪನೆಗಳು ಕಾಣಿಸುವುದಿಲ್ಲ"[೫೫] ಎಂದು ಹೇಳುತ್ತಾರೆ. ಅಂದರೆ, ಬೆಡಗಿನ ವಚನಗಳಿಗೆ ಮಾತ್ರ ಸಾಂಪ್ರದಾಯಿಕ ಅರ್ಥವನ್ನು ನೀಡುವ ಟೀಕಾಕಾರರು ಇನ್ನುಳಿದ ವಚನಗಳಿಗೆ ಮುಕ್ತವಾಗಿ ವ್ಯಾಖ್ಯಾನ ಮಾಡಿದರೆಂಬುದು ಡಾ. ದಂಡೆಯವರ ನಿಲುವು ಆದಲ್ಲಿ ಇವರ ಅಭಿಪ್ರಾಯ ಸರಿಯೋ? ತಪ್ಪೋ? ಎಂಬುದನ್ನು ವಚನ ಟೀಕೆಗಳ ಸ್ವರೂಪವನ್ನು ಗಮನಿಸುತ್ತಲೇ ಸೂಕ್ತವಾದ ನಿರ್ಣಯಕ್ಕೆ ಬರಬೇಕಾಗುತ್ತದೆ.

ಈ ಲೋಕದ ಮಿಥ್ಯೆಯನ್ನು ನಿರಾಕರಿಸುವ ಅಲ್ಲಮಪ್ರಭು ನಾಮ ರೂಪಗಳಿಲ್ಲದ, ಅಗಮ್ಯ, ಅಗೋಚರವಾದ, ಸತ್ಯದ ಪ್ರತೀಕದಂತೆ ಕಂಡು ಪ್ರರಬ್ರಹ್ಮನನ್ನು ಪರಿಪಕ್ವ ಹೃದಯ–ಮನಸ್ಸು–ಭಾವಗಳ ಮೂಲಕ ಶೋಧಿಸಲು ಯತ್ನಿಸಿದ ರೀತಿ, ಲಿಂಗಲೀಲಾವಿಲಾಸದ ಅನುಭಾವಜನ್ಯವಾದ ಶಬ್ದಾತೀತವಾದ 'ಬೆಳಗಿನೊಳಗಣ ಬೆಳಗು' ಆಗಿ, ನಿಬ್ಬೆಱಗಾಗಿ ರಚಿಸಿದ ವಚನಗಳೇ ಓದುಗರಲ್ಲಿ ಬೆಱಗು ಹುಟ್ಟಿಸುತ್ತವೆ. **ಉದಾಹರಣೆಗೆ– ಹಾಳೂರೊಳಗೆ ನಾಯ ಜಗಳವ ಕಾಣುವುದು, ಬೆಕ್ಕು ನುಂಗಿದ ಕೋಳಿ ಸತ್ತು ಕೂಗುವುದು, ಆನೆಯ ಹೆಣ ಬಿದ್ದರೆ ಕೋಡಗ ಮುದ್ದಾಡುವುದು, ತಲೆಯಿಲ್ಲದ ಮೃಗ ಒಡಲಿಲ್ಲದೇ ಆಹಾರವ ಕೊಂಡುಕೊಳ್ಳುವುದು, ತಾನಿಟ್ಟ ಬೇತಾಳ ತನ್ನನ್ನೇ ತಿನ್ನುವುದು, ಸರ್ಪ ಆಕಾಶವ ನುಂಗುವುದು, ಐದು ಸರ್ಪಗಳಿಗೆ ಒಡಲಾದ ತನು, ಬೇರಿಲ್ಲದ ಗಿಡದಲ್ಲಿ ಪರಿಮಳವಿಲ್ಲದ ಪುಷ್ಪ ಅಪೇಕ್ಷಿಸುವುದು, ರಕ್ಕಸಿ ಬಾಣತಿಯ ತೊಟ್ಟಿಲು ನುಂಗುವುದು, ತಲೆಯಿಲ್ಲದ ಅಟ್ಟೆ ಜಗವ ನುಂಗುವುದು.......** ಹೀಗೆ ಪಂಚೇಂದ್ರಿಯಗಳ ತಾಮಸ ಗುಣದ ಪರಿಣಾಮವಾಗಿ ಹೆಣ್ಣು–ಮಣ್ಣು–ಹೊನ್ನಿಗಾಗಿ ಆಸೆಪಡುವ ಮನಸ್ಸು ದೇಹದ ಜೊತೆಗೆ ಈ ಜೀವನವನ್ನೇ ನಿರರ್ಥಕಗೊಳಿಸುತ್ತದೆ. ಸಕಲ ಜೀವರಾಶಿಯನ್ನು ದಾರಿ ತಪ್ಪಿಸುತ್ತದೆ. ಅದಕ್ಕಾಗಿ ಜೀವಾತ್ಮವನ್ನು ರಕ್ಷಿಸಿಕೊಳ್ಳುವುದೇ ಮನುಜರ ಪರಮ ಉದ್ಧೇಶವಾಗಬೇಕೆಂಬುದು ಇಲ್ಲಿಯ ಬೆಡಗಿನ ವಚನಗಳಲ್ಲಿ ಕಂಡುಬರುವ ಆಶಯವಾಗಿದೆ ಎನ್ನಬಹುದು.

ಡಾ. ಎಂ.ಎಸ್. ಸುಂಕಾಪೂರ ಅವರು– "ಬೆಡಗಿನ ವಚನಗಳನ್ನು ಇತರರು ಬರೆದಿದ್ದರೂ ಅವರೆಲ್ಲರೂ ಪ್ರಭುವಿನ ಎತ್ತರಕ್ಕೆ ಬರಲಾರರು. ಅದಕ್ಕೆ ಕಾರಣವೂ ಇದೆ. ಅಲ್ಲಮಪ್ರಭುವಿನದು ಬೆಡಗಿನ ಬದುಕು, ಬೆಡಗಿನ ಬಾಳು. ಅಂತಹ ಬಾಳು ಅನ್ಯರಿಗಿಲ್ಲ...... ಕಣ್ಣಮೊದಲಲ್ಲಿ ಕುಳಿತು ಬಣ್ಣತೋರುವ ಪರಿ ಪ್ರಭುವಿನದು. ಬಣ್ಣವಿಲ್ಲದ ಬಣ್ಣವನುಟ್ಟು ಸುಳಿವ ಸಡಗರ ಆತನದು. ಆತ ನೀರ ಬೊಂಬೆಗೆ ನಿರಾಳದ ಗೆಜ್ಜೆಯಕಟ್ಟಿ ಕುಣಿಸಿದ ತಾತ. ಬಯಲು ಬೊಂಬೆಯ ಕೈಯಲ್ಲಿ ಹಿಡಿದು ಮುದ್ದಾಡುವ ಮುಕ್ತಿನಾಥ. ಕಪ್ಪುರದ ಪುತ್ಥಳಿಗೆ ಅಗ್ನಿಯ ಗದ್ದುಗೆಯ ಹಾಸಿ ಮಲಗಿಸಿದಾತ. ಸಾಮಾನ್ಯರ ಕಣ್ಣಲ್ಲಿ ಬೆರಗು ತೋರಿ ನಲಿವ ಶರಣನಾತ. ಆತನ ಮಾತು ಜ್ಯೋತಿರ್ಲಿಂಗ. ಆತನ ನುಡಿಲಿಂಗ, ನಡೆಲಿಂಗ, ಆತ ಅವರ್ಣನೀಯ, ಅನಿರ್ವಚನೀಯ. ಅದೇ ಬೆಡಗಿನ ರಹಸ್ಯವಾಗಿದೆ"[೫೬] ಎಂದು ತುಂಬಾ ಅರ್ಥಪೂರ್ಣವಾಗಿ ಹೇಳಿದ್ದಾರೆ.

ಅದೇ ರೀತಿ ಅಲ್ಲಮಪ್ರಭುದೇವರ ವಚನ ನಿರ್ವಚನ ವ್ಯಾಖ್ಯಾನ ಕೃತಿಯ ಪ್ರಸ್ತಾವನೆಯಲ್ಲಿ ಬಿಜಾಪೂರದ ಸಿದ್ಧೇಶ್ವರ ಶ್ರೀಗಳು– " ಬೆಡಗಿನ ವಚನಗಳು ಕೇವಲ ಬೌದ್ಧಿಕ ಚಮತ್ಕಾರಗಳಾಗಿರದೆ ಆಧ್ಯಾತ್ಮಿಕ ಅನುಭಾವವನ್ನು ಗರ್ಭೀಕರಿಸಿಕೊಂಡಿರುವ ಕಲಾತ್ಮಕ ಕಾವ್ಯಮಯ ಸೃಷ್ಟಿಗಳು. ಅಲ್ಲಮಪ್ರಭುಗಳ ಬೆಡಗಿನ ವಚನಗಳು ಅವರ ಆಧ್ಯಾತ್ಮದ ಒಲವು–ನಿಲುವುಗಳನ್ನು ಮಾತ್ರವಲ್ಲದೆ ಅಭಿವ್ಯಕ್ತಿಯ ಅದ್ವಿತೀಯ ಸಾಮರ್ಥ್ಯವನ್ನು ವ್ಯಕ್ತಪಡಿಸುತ್ತವೆ. ಅವರ ಬೆಡಗಿನ ವಚನಗಳನ್ನು ಬೌದ್ಧಿಕವಾಗಿ ವಿಶ್ಲೇಷಿಸಿ ಅಥವಾ ಒಳಹೊಕ್ಕು ನೋಡಿದವರಿಗೆ ಒಂದು ವಿನೂತನ ಸತ್ಯದ ಹೊಳವು ಕಾಣದಿರದು"[೫೭] ಎಂದು ಹೇಳುವುದರಿಂದ ಅವರವರ ಭಾವ–ಭಕ್ತಿ, ಶಕ್ತಿ–ಯುಕ್ತಿಗೆ ಅನುಗುಣವಾಗಿ ಬೆಡಗಿನೊಳಗಿನ ಸತ್ಯವನ್ನು ವಿಭಿನ್ನವಾಗಿ, ವಿನೂತನವಾಗಿ, ಕಾಲದ ಕಟ್ಟಳೆಯನ್ನು ಮೀರಿ ಅರ್ಥೈಸಿಕೊಳ್ಳಲು ಸಾಧ್ಯವಿದೆ ಎನ್ನಬಹುದು.

ಆದರೆ, ಬೆಡಗಿನ ವಚನಗಳ ತಂತ್ರ ಆಧರಿಸಿ– "ವಚನಕಾರರ ಬೆಡಗಿನ ವಚನಗಳಿಗೆ ಜಾನಪದ ಒಗಟು ಮೂಲ"[೫೮] ಎನ್ನುವ ಪ್ರೊ. ಸುಧಾಕರರ ಅಭಿಪ್ರಾಯ ಅರ್ಧಸತ್ಯವಾದರೂ ಪೂರ್ಣಸತ್ಯವೆನ್ನಲಾಗದು. ಏಕೆಂದರೆ, ಜನಪದರಲ್ಲಿ ಬಳಕೆಯಾಗುವ ಒಗಟುಗಳು ಬೆಡಗಿನ ವಚನಗಳಂತೆಯೇ ರಹಸ್ಯವಾದ ವಿಶಿಷ್ಟ ಅರ್ಥ ಹೊಂದಿರುತ್ತವೆ. ಜನಪದರ ಒಗಟು ಲೌಕಿಕ ವ್ಯಾಪ್ತಿಯ ಅರ್ಥ ನೀಡಿದರೆ, ಬೆಡಗಿನ ವಚನಗಳು ಅಲೌಕಿಕ ಅರ್ಥವನ್ನು ನೀಡುತ್ತವೆ. ಒಗಟುಗಳಿಗೆ ನಿರ್ದಿಷ್ಟವಾದ ಉತ್ತರವಿದ್ದರೆ, ಬೆಡಗಿನ ವಚನಗಳಿಗೆ ಹಲವು ರೀತಿಯ ಉತ್ತರ ಕೊಡಬಹುದಾಗಿದೆ. ಈ ಹಿನ್ನೆಲೆಯಲ್ಲಿ "ಅಲ್ಲಮನ ವಚನಗಳನ್ನು ಯಾವುದೇ ಪೂರ್ವಗ್ರಹಿಕೆಯ ಚೌಕಟ್ಟುಗಳಿಲ್ಲದೆ ಮುಕ್ತ ಗ್ರಹಿಕೆಯ ನೆಲೆಯಿಂದ ಪ್ರವೇಶಿಸಬೇಕಾಗುತ್ತದೆ. ಆಗ ಮಾತ್ರ ಅಲ್ಲಮನ ವಚನಗಳಲ್ಲಿ ಬೆಡಗು ಬೆಜಗಾಗುವ, ನಿಬ್ಬೆಜಗು ಬೆಳಗಾಗುವ ಜ್ಞಾನದ ಚಲನಶೀಲ ಪ್ರಕ್ರಿಯೆ ಗೋಚರವಾಗುತ್ತದೆ[೫೯] ಎನ್ನುವ ಡಾ. ಚಂದ್ರಶೇಖರ ನಂಗಲಿಯವರ ಅಭಿಪ್ರಾಯವನ್ನು ಸ್ವೀಕರಿಸಿಯೇ ಬೆಡಗಿನ ವಚನಗಳ ವ್ಯಾಖ್ಯಾನವನ್ನು ಪರಾಮರ್ಶಿಸುವುದು ಸೂಕ್ತವೆನ್ನಬಹುದು. "ಅಲ್ಲದೇ ಬೆಡಗಿನ ವಚನಗಳಿಗೆ ಬರೆಯಲ್ಪಟ್ಟ ವಿವಿಧ ವ್ಯಾಖ್ಯಾನಕಾರರ ಟೀಕು, ವ್ಯಾಖ್ಯಾರ್ಥಗಳ ಸ್ವರೂಪ ಬೇರೆ ಬೇರೆಯಾಗಿದ್ದರೂ ಬೆಡಗಿನ ಪದಗಳಿಗೆ ಸೂಚಿಸಿದ ಅರ್ಥಗಳು ಮಾತ್ರ

ಏಕರೂಪದಲ್ಲಿವೆ"[೬೦]..... 'ಟೀಕುಗಳು ವಚನಗಳ ಎದೆ ಮಿಡಿವ ಭಾಷೆಯನ್ನು ಶುಷ್ಕ ಯೋಗಿಕ ಜಿಜ್ಞಾಸುಕರ ಭಾಷೆಗೆ ಅನುವಾದಿಸುತ್ತವೆ ಮತ್ತು ಬೆಡಗಿನ ವಚನಗಳ ಪ್ರತಿಮಾವೈವಿಧ್ಯತೆಯನ್ನು ಸಿದ್ಧ ಅರ್ಥಗಳಿಗೆ ಇಳಿಸಿಬಿಡುತ್ತದೆ.....'[೬೧] ಎಂಬ ಹಲವು ಅಭಿಪ್ರಾಯಗಳ ಆಧಾರದಲ್ಲಿ ಅಲ್ಲಮನ ವಚನಗಳ ಟೀಕನ್ನು ಪುನರ್ ಅವಲೋಕನ ಮಾಡಬೇಕಾಗುತ್ತದೆ.

ಇಲ್ಲಿಯವರೆಗೆ ಅಲ್ಲಮಪ್ರಭುದೇವರ ೧೬೭೫ ವಚನಗಳು ಲಭಿಸಿವೆ. ಷಟಸ್ಥಲಾನುಕ್ರಮದಲ್ಲಿ ಜೋಡಿಸಿದ ವಚನಗಳು ೬೯೪. ಒಟ್ಟು ವಚನಗಳಲ್ಲಿ ೩೬೦ ಕ್ಕೂ ಹೆಚ್ಚು ಬೆಡಗಿನ ವಚನಗಳಿವೆ. ಅವುಗಳಲ್ಲಿ ಮಹಾಲಿಂಗದೇವ (೧೪೩೦) ಪ್ರಭುದೇವರ ಷಟ್ಸ್ಥಲಗಳಿಗೆ ಸಂಬಂಧಿಸಿದ ೬೯೪ ವಚನಗಳಿಗೆ ಟೀಕು ಬರೆದಿದ್ದಾನೆ. ಕೃತಿ–ಪ್ರಭುದೇವರ ಷಟ್ಸ್ಥಲ ವಚನದ ಟೀಕಾ ಕೃತಿಯಾಗಿದೆ. ಕುಮಾರ ಬಂಕನಾಥ (೧೪೩೦)ನು ಪ್ರಸಿದ್ಧ ಟೀಕಾಕಾರನಾಗಿದ್ದು ಮಹಾಲಿಂಗದೇವನ ಕರಕಮಲ ಸಂಜಾತ. ಕೃತಿಯ ಹೆಸರು 'ಪ್ರಭುದೇವರ ಷಟ್ಸ್ಥಲ ಜ್ಞಾನ ಚಾರಿತ್ರ ವಚನದ ಟೀಕು'. ಇದಕ್ಕೆ ಪರ್ಯಾಯವಾಗಿ ಷಟ್ಸ್ಥಲೋಪದೇಶ ಎಂದು ಕರೆಯಲಾಗುತ್ತದೆ. ಮಹಾಲಿಂಗದೇವನಂತೆಯೇ ಆರು ಸ್ಥಲಗಳಲ್ಲಿ ಅಲ್ಲಮನ ೬೯೪ ವಚನಗಳಿಗೆ ಟೀಕು ಬರೆದಿದ್ದಾರೆ. ಇತರ ವಚನಕಾರರ ಜೊತೆಗೆ ಪ್ರಭುದೇವನ ವಚನಗಳಿಗೆ ಟೀಕು ಬರೆದ ಕಲ್ಲುಮಠದ ಪ್ರಭುದೇವನು ನೂರೊಂದು ವಿರಕ್ತರ ಸಮಕಾಲೀನ. ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿದ್ದನು (೧೪೩೦). ಈತನ ಕೃತಿ ಲಿಂಗಲೀಲಾವಿಲಾಸ ಚಾರಿತ್ರ. ಇದು ವಚನ ಸಂಕಲನವೂ ಆಗಿರುವಂತೆ ವ್ಯಾಖ್ಯಾನ ಕೃತಿಯೂ ಆಗಿದೆ. ಇದರಿಂದ ಕಲ್ಲುಮಠದ ಪ್ರಭುದೇವ ವಚನ ಸಂಕಲನಕಾರನಾಗಿರುವಂತೆ, ಟೀಕಾಕಾರನಾಗಿಯೂ ಕಾರ್ಯಮಾಡಿದ ಶ್ರೇಯಸ್ಸಿಗೆ ಪಾತ್ರವಾಗುತ್ತಾನೆ. ೧೬ ಸ್ಥಲಗಳಲ್ಲಿ ೩೬ ವಚನಕಾರರ ೭೨೯ ವಚನಗಳಿಗೆ ವ್ಯಾಖ್ಯಾನಿಸಿದ ಸಂಕಲನವಾಗಿದೆ. ಇದರಲ್ಲಿ ಅಲ್ಲಮಪ್ರಭುವಿನ ೧೦೬ ವಚನಗಳಿಗೆ ವ್ಯಾಖ್ಯಾನವಿದೆ. ಬೆಡಗಿನ ವಚನಗಳಿಗೆ ಹೆಚ್ಚಿನ ಟೀಕೆ ಬರೆಯಲಾಗಿದೆ. ಜೊತೆಗೆ ೧೩೫ ಸಂಸ್ಕೃತ ಶ್ಲೋಕಗಳೂ ಇಲ್ಲಿವೆ. ಸಿಂಗಳದ ಸಿದ್ಧಬಸವರಾಜ (ಸು. ೧೫೯೦)ನು ೪೭ ಸಕಲಪುರಾತನರ ೫೪೧ ಬೆಡಗಿನ ವಚನಗಳನ್ನು ಒಂದೆಡೆ ಸಂಗ್ರಹಿಸಿದ್ದಲ್ಲದೇ ಅವುಗಳಿಗೆ ಟೀಕನ್ನು ಬರೆದಿದ್ದಾನೆ. ಇದರಲ್ಲಿ ಪ್ರಭುದೇವರ ಬೆಡಗಿನ ೧೨ ವಚನ ಟೀಕೆಗಳಿವೆ. ಚನ್ನವೀರಾಚಾರ್ಯ (ಸು. ೧೬೫೦)ನು ತೋಂಟದ ಸಿದ್ಧಲಿಂಗರ ಪರಂಪರೆಯವನು. ಕೃತಿ ವಿಶೇಷಾನುಭವ ಷಟ್ಸ್ಥಲ. ಇದು ವಚನ ಸಂಕಲನ ಹಾಗೂ ಸ್ವಕೃತ ಟೀಕಾಕೃತಿಯಾಗಿದೆ. ೧೬ ಸ್ಥಲಗಳಲ್ಲಿ ೪೬ ಶಿವಶರಣರ ೭೪೨ ವಚನಗಳಿವೆ. ಪ್ರಭುದೇವರ ೫೧ ವಚನಗಳಿಗೆ ಟೀಕು ಬರೆಯಲಾಗಿದೆ.

ಒಟ್ಟಾರೆ, ಮಹಾಲಿಂಗದೇವ ೬೯೪, ಕುಮಾರ ಬಂಕನಾಥ ೬೯೪ ವಚನಗಳಿಗೆ ಟೀಕು ಬರೆದಿರುವುದರಿಂದ ಅಲ್ಲಮಪ್ರಭುದೇವರ ವಚನಗಳನ್ನು ಷಟ್ಸ್ಥಲಾನುಕ್ರಮದಲ್ಲಿ ಜೋಡಿಸಿ ವ್ಯಾಖ್ಯಾನಿಸಿದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಅಲ್ಲದೆ, ಅಲ್ಲಮಪ್ರಭುದೇವರ ವಚನಗಳಿಗಾಗಿಯೇ ಸ್ವತಂತ್ರ ಟೀಕಾಕೃತಿ ರಚಿಸಿದ ಶ್ರೇಯಸ್ಸು ಇವರಿಗೆ ಸಲ್ಲುತ್ತದೆ.

ಕಲ್ಲುಮಠದ ಪ್ರಭುದೇವರು ಅಲ್ಲಮಪ್ರಭುದೇವರ ೧೦೬ ವಚನಗಳಿಗೆ, ಸಿಂಗಳದ ಸಿದ್ಧಬಸವರಾಜನು ಬೆಡಗಿನ ೧೨ ವಚನಗಳಿಗೆ, ಚನ್ನವೀರಾಚಾರ್ಯನು ೫೧ ವಚನಗಳಿಗೆ ವ್ಯಾಖ್ಯಾನ ಬರೆದಿದ್ದಾರೆ. ಹೀಗಾಗಿ, ಅಲ್ಲಮಪ್ರಭುವಿನ ವಚನಗಳಿಗೆ ಕ್ರಮವಾಗಿ ೬೯೪+೬೯೪+೧೦೬+೧೨+೫೧=೧೫೫೭ ವಚನಗಳಿಗೆ ವ್ಯಾಖ್ಯಾನ ಮಾಡಿರುವುದು ತಿಳಿದುಬರುತ್ತದೆ.

ಇವುಗಳಲ್ಲಿ ಅಲ್ಲಮಪ್ರಭುವಿನ ಒಂದೇ ತರದ ವಚನಗಳಿಗೆ ಬರೆದ ಟೀಕು, ಬೇರೆ ಬೇರೆ ವಚನಗಳಿಗೆ ಬರೆದ ಟೀಕು ಎಷ್ಟಿವೆ? ಒಂದೇ ತರದ ವಚನಗಳಿಗೆ ಬರೆಯಲಾದ ವ್ಯಾಖ್ಯಾನಗಳು ವಿಭಿನ್ನವಾಗಿವೆಯೇ? ಇಲ್ಲವೇ ಒಬ್ಬರು ಮತ್ತೊಬ್ಬರ ವ್ಯಾಖ್ಯಾನವನ್ನು ಅನುಸರಿಸುವರೇ? ಅಲ್ಲದೇ, ಸರಳವಚನಗಳು ಮತ್ತು ಬೆಡಗಿನ ವಚನಗಳು ಸೇರಿ ಒಟ್ಟು ಎಷ್ಟು ವಚನಗಳಿಗೆ ವ್ಯಾಖ್ಯಾನ ಬರೆಯಲಾಗಿದೆ ಎಂಬುದನ್ನು ನೋಡಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಲಭಿಸಿದ ಹಸ್ತಪ್ರತಿಗಳ ಮರುಪರಿಶೀಲನೆ ಮತ್ತು ನೂತನ ಹಸ್ತಪ್ರತಿಗಳು ಲಭಿಸಿದಲ್ಲಿ ಅಲ್ಲಮಪ್ರಭುದೇವರ ವಚನಗಳ ವ್ಯಾಖ್ಯಾನ ಮತ್ತು ಟೀಕಾಕಾರರ ಬಗ್ಗೆ ನಿಖರವಾಗಿ ಹೇಳಲು ಸಾಧ್ಯವಿದೆ. ಸದ್ಯಕ್ಕಂತೂ ೫ ಜನ ವಚನ ಟೀಕಾಕಾರರು ಲಭಿಸಿರುವುದರಿಂದ ಇವರ ವಚನ ವ್ಯಾಖ್ಯಾನಗಳ ಲಕ್ಷಣ, ಸ್ವರೂಪ, ವೈಶಿಷ್ಟ್ಯ ಕುರಿತು ವಿವರವಾಗಿ ಚರ್ಚಿಸಲು ಅವಕಾಶವಿದೆ. ಪ್ರಸ್ತುತ ಮಹಾಲಿಂಗದೇವ ಮತ್ತು ಕುಮಾರ ಬಂಕನಾಥರು ಕೇವಲ ಪ್ರಭುದೇವರ ವಚನಗಳಿಗೆ ಮಾತ್ರ ಟೀಕೆ ಬರೆದಿರುವುದರಿಂದ ಇವರ ಟೀಕಾಕೃತಿಗಳ ಸ್ವರೂಪ ಕುರಿತು ಇಲ್ಲಿ ಚರ್ಚಿಸಲಾಗುವುದು.

### ಅ. ಪ್ರಭುದೇವರ ಷಟ್‌ಸ್ಥಲ ವಚನದ ಟೀಕೆ

ಪ್ರಾಚೀನ ಕಾವ್ಯ,ಶಾಸ್ತ್ರಗ್ರಂಥಗಳಿಗೆ ವ್ಯಾಖ್ಯಾನ ಬರೆಯಲು ಸಮಕಾಲೀನ ಸಂದರ್ಭದಲ್ಲಿಯೇ ಪ್ರಯತ್ನಗಳು ನಡೆದಿವೆ. ಅದರಂತೆ ವಚನಗಳ ಹುಟ್ಟಿನೊಂದಿಗೆ ಅವುಗಳಿಗೆ ವ್ಯಾಖ್ಯಾನ ಮಾಡುವ ಗುರುಶಿಷ್ಯ ಪರಂಪರೆ ತುಂಬಾ ಪ್ರಾಚೀನ ಇತಿಹಾಸ ಹೊಂದಿದೆ. ಇಲ್ಲಿ ಕನ್ನಡ ವಚನ ಟೀಕಾ ಸಾಹಿತ್ಯಕ್ಕೆ ವಚನಗಳಷ್ಟೇ ಪ್ರಾಚೀನತೆ ಇರಬಹುದಾದರೂ ಈ ಬಗ್ಗೆ ಅಧಿಕೃತವಾಗಿ ಲಭ್ಯವಾಗುವ ಮಾಹಿತಿಯಂತೆ ಪುಲಿಗೆರೆಯ ಮಹಾಲಿಂಗದೇವನೆ (೧೪೩೦) ಮೊದಲ ವಚನ ಟೀಕಾಕಾರನಾಗಿದ್ದಾನೆ. ಹೀಗಾಗಿ, ಮಹಾಲಿಂಗದೇವನ ಸಂಕ್ಷೇಪ ಜೀವನ ಪರಿಚಯದೊಂದಿಗೆ ಈತನ ವಚನ ವ್ಯಾಖ್ಯಾನದ ಸ್ವರೂಪವನ್ನು ಇಲ್ಲಿ ಸಮಾಲೋಚಿಸಲಾಗುವುದು.

ಪುಲಿಗೆರೆ (ಈಗಿನ ಲಕ್ಷ್ಮೇಶ್ವರ)ಯ ನಿರಂಜನ ಸ್ವರೂಪಿ ಮಹಾಸ್ವಾಮಿಯಾಗಿದ್ದ ಮಹಾಲಿಂಗದೇವನು ಅಲ್ಲಿಯ ಸೋಮನಾಥ ದೇವರ ಆರಾಧಕನಾಗಿದ್ದ. ಈತನಿಗೆ ವಾರಣಾಸೀಂದ್ರನೆಂಬ ಇನ್ನೊಂದು ಹೆಸರಿದೆ. ಪರಮವೀರಶೈವಾಗಮಾಚಾರ್ಯನಾಗಿ, ವೇದಶಾಸ್ತ್ರಾಗಮಕೋವಿದನಾಗಿ, ಸಂಸ್ಕೃತ ಪಂಡಿತನಾಗಿ ಹೆಸರಾದವನು. ಅಲ್ಲದೇ, ಪ್ರಶಿಷ್ಯ ಜಕ್ಕಣ್ಣನವರೆಗಿನ ೨೨ ಜನರ ಗುರುಪರಂಪರೆಯಲ್ಲಿ ಈತ ೨೦ನೆಯವನಾಗಿದ್ದನು.

ಡಾ. ಎಫ್.ಟಿ. ಹಳ್ಳಿಕೇರಿಯವರು ಅಭಿಪ್ರಾಯಪಡುವಂತೆ– “ಕುಮಾರ ಬಂಕನಾಥ ಮತ್ತು ಜಕ್ಕಣ್ಣಾರ್ಯ ಈ ಉಭಯತರು ಮಹಾಲಿಂಗದೇವನಲ್ಲಿ ಅತ್ಯಂತ ಶ್ರದ್ಧಾಭಕ್ತಿಯಿಂದ ಇರುತ್ತಿದ್ದರೆಂಬ ಸಂಗತಿಗಳು ಗಮನಿಸುವಂಥವುಗಳಾಗಿವೆ.”[೬೨] ಏಕೆಂದರೆ, ಶಿಷ್ಯ ಜಕ್ಕಣ್ಣಾರ್ಯನ ಬಿನ್ನಹದ ಮೇರೆಗೆ ಮಹಾಲಿಂಗದೇವ ಏಕೋತ್ತರ ಶತಸ್ಥಲ ರಚಿಸಿದರೆ, ಗುರುವಿನಿಂದ ಪ್ರೇರಿತನಾದ ಜಕ್ಕಣ್ಣ ನೂರೊಂದು ಸ್ಥಲ ಕೃತಿ ರಚಿಸಿರುವುದೇ ಉಭಯತರ ಗಾಢಸಂಬಂಧಕ್ಕೆ ಸಾಕ್ಷಿಯೆನ್ನಬಹುದು. ಕವಿಚರಿತೆಕಾರರ ಅಭಿಪ್ರಾಯದಂತೆ– ಮಹಾಲಿಂಗದೇವನ ಕೃತಿಗಳು ಎರಡು. ೧. ಏಕೋತ್ತರ ಶತಸ್ಥಲ, ೨. ಪ್ರಭುದೇವರ ಷಟ್‌ಸ್ಥಲ ಜ್ಞಾನಚಾರಿತ್ರ ವಚನದ ಟೀಕೆ ಅಥವಾ ಷಟ್‌ಸ್ಥಲವಿವೇಕ.

**ಟೀಕಾಕೃತಿ ಸ್ವರೂಪ:**

ಪ್ರಭುದೇವರ ೬೯೪ ವಚನಗಳನ್ನು ಷಟ್‌ಸ್ಥಲಗಳಿಗನುಗುಣವಾಗಿ ವಿಂಗಡಿಸಿದ ಮಹಾಲಿಂಗದೇವ ಅವಕ್ಕೆ ಟೀಕನ್ನು ಬರೆದಿದ್ದಾನೆ. ಷಟ್‌ಸ್ಥಲ ಜ್ಞಾನ ಚಾರಿತ್ರ ವಚನ ಟೀಕಾ ಗ್ರಂಥವನ್ನು ಶಿಷ್ಯ ಜಕ್ಕಣ್ಣನಿಗಾಗಿಯೇ ರಚಿಸಿದನೆಂಬುದು ಗ್ರಂಥಾಂತ್ಯವಾಕ್ಯಗಳಿಂದ ಅರಿಯಬಹುದಾಗಿದೆ. ಕನ್ನಡ ವಚನ ಟೀಕಾ ಗ್ರಂಥಗಳಲ್ಲಿಯೇ ಮೊದಲನೆಯದೆಂಬ ಹೆಗ್ಗಳಿಕೆಗೆ ಪಾತ್ರವಾಗಬಹುದಾದ ಈ ಗ್ರಂಥದ ಪ್ರತಿ ಸ್ಥಲದ ಆರಂಭದಲ್ಲಿ ಸೂತ್ರ, ಸ್ಥಲ ವಚನ, ಟೀಕೆ ಈ ರೀತಿಯಲ್ಲಿ ಕ್ರಮಾಗತಗೊಂಡಿದೆ. ಪೀಠಿಕೆಯಲ್ಲಿ ಏಕೋತ್ತರ ಶತಸ್ಥಲದ ರೀತಿ ತನ್ನ ಹಾಗೂ ಗುರುಪರಂಪರೆಯನ್ನು ಪರಿಚಯಿಸುತ್ತಾನೆ.

ಈಗಾಗಲೇ ಹೇಳಿದಂತೆ ಇದರಲ್ಲಿಯ ೬೯೪ ವಚನಗಳನ್ನು ಪಿಂಡಸ್ಥಲ ೪, ಪಿಂಡಜ್ಞಾನ ಸ್ಥಲ ೭, ಮಾಯಾವಿಡಂಬನ ಸ್ಥಲ ೩೪, ಸಂಸಾರ ಹೇಯ ಸ್ಥಲ ೫, ಗುರುಕರುಣ ಸ್ಥಲ ೧೩, ಭಕ್ತಸ್ಥಲ ೪೯, ಮಾಹೇಶ್ವರ ಸ್ಥಲ ೪೪, ಪ್ರಸಾದಿಸ್ಥಲ ೧೭, ಪ್ರಾಣಲಿಂಗಿಸ್ಥಲ ೧೩೭, ಶರಣ ಸ್ಥಲ ೨೯೫, ಐಕ್ಯಸ್ಥಲ ೧೯೨. ಒಟ್ಟು ೭೯೭ ವಚನಗಳಿವೆ. ಇದರಲ್ಲಿ ಐಕ್ಯಸ್ಥಲದ ಗದ್ಯಭಾಗ ೬೯೪ನೇ ವಚನಕ್ಕೆ ಬಂದು ಮುಕ್ತಾಯವಾದಂತೆ ಕಂಡುಬಂದರೂ ಅನಂತರ ೧೪೩ ವಚನಗಳು ಬರುತ್ತವೆ.

ಪ್ರತಿಯೊಂದು ಸ್ಥಲದ ಆರಂಭದಲ್ಲಿ ಸೂತ್ರಗಳ ಮೂಲಕ ನಿರ್ದೇಶನ ಮಾಡುತ್ತಾನೆ. ಉದಾಹರಣೆಗೆ ಪಿಂಡಜ್ಞಾನ ಸ್ಥಾಲದ ಆರಂಭದಲ್ಲಿ ಬರುವ ಸೂತ್ರ ಹೀಗಿದೆ– “ಇಂತಪ್ಪ ಮಹತ್ ಪಿಂಡಸ್ಥಲವು ತನ್ನ ಲೀಲೆಯಂ ತನ್ನೊಳಡಗಿದ ಸಕಳನಿಃಕಳಾತ್ಮ ತತ್ವಂಗಳನುಂಟುಮಾಡಿ ತೋರಬೇಕೆಂದು ಇಚ್ಛೈಸಲು ಅಲ್ಲಿ ಜ್ಞಾನೋದಯವಾಯಿತ್ತಾಗಿ ಮುಂದೆ ಪಿಂಡಜ್ಞಾನಸ್ಥಲವಾದುದು.”[೬೩] ಈ ರೀತಿಯ ಸೂತ್ರಗಳನ್ನು ಎಲ್ಲ ಸ್ಥಲಗಳ ಆದಿಯಲ್ಲಿ ಉಲ್ಲೇಖಿಸುತ್ತ, ನಂತರ ವಚನ, ವಚನಕ್ಕೆ ಟೀಕುವನ್ನು ಮಹಾಲಿಂಗದೇವ ಕ್ರಮಾಗತವಾಗಿ ಅನುಸರಿಸಿದ್ದಾನೆ. ಕೆಲವು ವಚನಗಳಿಗೆ ಸುಧೀರ್ಘ ಟೀಕು ಬರೆದರೆ, ಮತ್ತೆ ಕೆಲವು ವಚನಗಳಿಗೆ ಸಂಕ್ಷೇಪದಲ್ಲಿ ಟೀಕು ಬರೆಯುತ್ತಾನೆ. ಅಲ್ಲದೇ ಈತನ ಹಾಗೂ ಕುಮಾರ ಬಂಕನಾಥನ ಟೀಕುವಿನಲ್ಲಿ ಸಾಮ್ಯತೆ ಕಂಡುಬರುತ್ತದೆ. ಕಲ್ಲುಮಠದ ಪ್ರಭುದೇವನು ಮಾತ್ರ ಟೀಕು ರಚನೆಯಲ್ಲಿ ಭಿನ್ನವಾಗಿ ನಿಲ್ಲುತ್ತಾನೆ. ಈ ರೀತಿಯಲ್ಲಿ ಒಂದೇ ವಚನಗಳಿಗೆ ನಂತರದ ಟೀಕಾಕಾರರು ಅನುಸರಿಸಿದ

ಟೀಕಿನ ಸ್ವರೂಪವನ್ನು ವಿಶ್ಲೇಷಿಸಿ ಅರ್ಥೈಸುವ ಮೊದಲು ಮಹಾಲಿಂಗದೇವನ ವಚನ ಟೀಕು ಸ್ವರೂಪವನ್ನು ಇಲ್ಲಿ ಗಮನಿಸಲಾಗುವುದು.

**ಟೀಕಾ ಸ್ವರೂಪ:**

ಗುರುಕರುಣಸ್ಥಲದಲ್ಲಿ (೫೨) ಬರುವ ಅತ್ಯಂತ ಜನಪ್ರಿಯವಾಗಿರುವ ಅಲ್ಲಮಪ್ರಭುವಿನ ವಚನವಿದು:

"ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದೊಡಾಗಲಿ ಮಹಾಪ್ರಸಾದವೆಂದೆನಯ್ಯ;
ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದೊಡಾಗಲಿ ಮಹಾಪ್ರಸಾದವೆಂದೆನಯ್ಯ;
ದ್ವಾಪರದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದೊಡಾಗಲಿ ಮಹಾಪ್ರಸಾದವೆಂದೆನಯ್ಯ;
ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದೊಡಾಗಲಿ ಮಹಾಪ್ರಸಾದವೆಂದೆನಯ್ಯ;
ಗುಹೇಶ್ವರ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾನು ಬೆರಗಾದೆನು."

**ಟೀಕು:** ಸಕಲ ಕರ್ಮಂಗಳಳಿದುಳಿದ ಶೇಷನೆಂಬ ಶಿಷ್ಯನು ಗುರುಕರುಣವ ಹಡದಪರಿ ಎಂತೆಂದೊಡೆ ಪ್ರಥಮದಲ್ಲಿ ತನ್ನ ತಾನೆಚ್ಚತ್ತು ಸಂಸಾರದ ಘಾತಿಯಲ್ಲಿ ಸಿಕ್ಕಿನೊಂದೆನಲ್ಲ ಎಂದು ಉಪತಾಪ ಹುಟ್ಟಿ ತನ್ನತಾ ಬೋಧಿಸಿಕೊಳ್ಳುತ್ತಿರಲು ಅದು – ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದೊಡಾಗಲಿ ಮಹಾಪ್ರಸಾದವೆಂದೆನಯ್ಯ ಎಂಬ ಶಬ್ಧಕ್ಕರ್ಥ.

ಆ ಗುರುಕರುಣವ ಹಡೆದ ಶಿಷ್ಯನು ದ್ವಿತೀಯದಲ್ಲಿ ಕರಣಂಗಳ ನಿವೃತ್ತಿಯ ಮಾಡಿ ಲಿಂಗಭಾವಭರಿತನಾಗಿರ್ದನೆಂಬುದೀಗ – ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದೊಡಾಗಲಿ ಮಹಾಪ್ರಸಾದವೆಂದೆನಯ್ಯ ಎಂಬ ಶಬ್ಧಕ್ಕರ್ಥ.

ತೃತೀಯದಲ್ಲಿ ಸರ್ವಾಂಗಲಿಂಗವಾಗಿ ಕೋಹಂಭಾವವಳಿದು ಸೋಹಂಭಾವವಳವಟ್ಟಿತ್ತೆಂಬುದೀಗ– ದ್ವಾಪರಯುಗದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದೊಡಾಗಲಿ ಮಹಾಪ್ರಸಾದವೆಂದೆನಯ್ಯ ಎಂಬ ಶಬ್ಧಕ್ಕರ್ಥ.

ಚತುರ್ಥದಲ್ಲಿ ಗುರುಶಿಷ್ಯ ಸಂಬಂಧವೆಂಬ ಭಿನ್ನಭಾವವಳಿದು ಸೋಹಂಭಾವವಡಗಿ ನಿರಹಂಭಾವಸ್ವರೂಪನಾಗಿ ಸೇವ್ಯಸ್ಥಲವನಿಂಬುಗೊಂಡಿದ್ದನೆಂಬುದೀಗ ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದೊಡಾಗಲಿ ಮಹಾಪ್ರಸಾದವೆಂದೆನಯ್ಯ ಎಂಬ ಶಬ್ಧಕ್ಕರ್ಥ. ಇಂತು ನಾಹಂಭಾವ ಕೋಹಂಭಾವ ಸೋಹಂಭಾವ ಶಿವೋಹಂಭಾವವೆಂಬ ಚತುರ್ವಿಧಭಾವವು ನಿರ್ಭಾವವನೆಯ್ದಿ ನಿಜದಲ್ಲಿ ನಿಂದು ಪರಮಕಾಷ್ಠೆಯಾಗಿದ್ದನೆಂಬುದೀಗ– ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾನು ಬೆರಗಾದೆನೆಂಬ ಶಬ್ಧಕ್ಕರ್ಥ.

ತ್ರಿಕಾಲ ಸತ್ಯವನ್ನು ಪ್ರತಿಪಾದಿಸುವ ಅಲ್ಲಮರ ಈ ವಚನಕ್ಕೆ ಮಹಾಲಿಂಗದೇವರು ವ್ಯಾಖ್ಯಾನ ಬರೆಯದೇ ಇದ್ದರೆ ಇಂದಿನ ವಿದ್ವಾಂಸರು ನಿಜಕ್ಕೂ ವಚನಕಾರರ ಭಾವಾರ್ಥಕ್ಕೆ ವಿರುದ್ಧವಾದ ರೀತಿಯಲ್ಲಿ ಅರ್ಥೈಸಲು ಕಾರಣವಾಗುತ್ತಿತ್ತು. ವಿಚಿತ್ರವೆಂದರೆ, ಈಗಲೂ ಈ ವಚನದ ವ್ಯಾಖ್ಯಾನವನ್ನು

ಗಮನಿಸದವರು, **'ಗುರುವಾದವನು ಶಿಷ್ಯನಿಗೆ ವಂದಿಸಿ ಕಲಿಸುವಷ್ಟರಮಟ್ಟಿಗೆ ಕಲಿಗಾಲ ಕೆಟ್ಟುಹೋಗಿದೆ'** ಎಂದು ಅರ್ಥೈಸುವಂತಾಗಿದೆ.

ವ್ಯಾಖ್ಯಾನಕಾರ ಮಹಾಲಿಂಗದೇವನು ತುಂಬಾ ಅರ್ಥಪೂರ್ಣವಾದ ವಿವರಣೆ ನೀಡಿದ್ದು ಸಂಕ್ಷೇಪಿಸಿ ಹೀಗೆ ಹೇಳಬಹುದು.

೧. ಸಂಸಾರದ ಗಾಲಿಯಲ್ಲಿ ಸಿಲುಕಿ ಕೆಟ್ಟುಹೋಗುವೆನಲ್ಲಾ ಎಂದು ಉಪತಾಪ ಹುಟ್ಟಿ ತನ್ನಲ್ಲೇ ತಾನು ಎಚ್ಚೆತ್ತುಕೊಳ್ಳುವನು.

೨. ತನ್ನ ಕರಣೇಂದ್ರಿಯಗಳನ್ನು ನಿವೃತ್ತಿ ಮಾಡಿಕೊಂಡು (ಸಕಲ ಕಾಮನೆಗಳನ್ನು ಕಳೆದುಕೊಂಡು) ಲಿಂಗಾಂಗಭಾವ ತಾಳುವನು.

೩. ಸರ್ವಾಂಗಲಿಂಗಿಯಾಗಿ ಮಾರ್ಪಡುವ ಶಿಷ್ಯ ಕೋಹಂಭಾವ (ದೇಹಭಾವ) ಅಳಿದು ಸೋಹಂಭಾವ (ಲಿಂಗಭಾವ) ಮೀರಿದ ಸಾಧಕನಾಗುವನು.

೪. ಗುರು–ಶಿಷ್ಯ ಸಂಬಂಧದ ಲೌಕಿಕ ಸಂಬಂಧವನ್ನು ಮೀರಿ ಅಲೌಕಿಕ ಅನುಭಾವಿಯ ದೈವತ್ವದ ಎತ್ತರಕ್ಕೇರುವುದು.

ಹೀಗೆ ನಾಹಂಭಾವ–ಕೋಹಂಭಾವ–ಸೋಹಂಭಾವ–ಶಿವೋಹಂಭಾವವೆಂಬ ಚತುರ್ವಿಧ ಭಾವವು ನಿರ್ಭಾವ (ಇಲ್ಲದಂತಾಗಿ)ವಾಗಿ ಪರಮಸತ್ಯವೇ ತಾನೆಂದು ಅರಿಯಬಲ್ಲವರನ್ನು ಉದ್ಧೇಶಿಸಿ "ಗುಹೇಶ್ವರಾ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾನು ಬೆಱಗಾದೆನು" ಎಂದು ಅನುಭಾವಿ ಅಲ್ಲಮಪ್ರಭು ಅಭಿಪ್ರಾಯಪಟ್ಟಿರುವಂತೆ ಇಲ್ಲಿ ವ್ಯಾಖ್ಯಾನ ಮಾಡಿರುವುದು ಮಹಾಲಿಂಗದೇವನ ವಿದ್ವತ್ತಿಗೆ ಸಾಕ್ಷಿಯೆನ್ನಬಹುದು.

ಇದೇ ವಚನದ ವ್ಯಾಖ್ಯಾನವನ್ನು ಮಾಡಿದ ಡಾ. ಎಲ್. ಬಸವರಾಜು ಅವರು– "ಯುಗದಿಂದ ಯುಗಕ್ಕೆ ಕಾಲಕೆಡುತ್ತಿದೆಯೆಂಬುದು ಪ್ರಗತಿವಿರೋಧಿಗಳ ಬೇಸರದ ಮಾತು. ಶಿಕ್ಷಣ ಮಾರ್ಗದಲ್ಲಿಯಾದರೋ ಕಾಲದಿಂದ ಕಾಲಕ್ಕೆ ಗುರುವಿನ ಕಡೆಯಿಂದ ಗುರುವಿನಲ್ಲೇ ಆದ ಬದಲಾವಣೆಯನ್ನು ಶಿಷ್ಯನೇ ತೃಪ್ತಿಯಿಂದ ಗುರುತಿಸುವುದಾದರೆ ಅದು ಉತ್ತರೋತ್ತರ ಉತ್ತಮದ ಕಡೆಗೇ ಆದ ಬದಲಾವಣೆಯಾದೀತು. ಆದ್ದರಿಂದ ಕಾಲದ ಕಟ್ಟಳೆಯ ಕಲಿತನಕ್ಕೆ ನಾ ಬೆರಗಾದೆನೆಂಬ" ಪ್ರಭುದೇವರ ಮಾತು ಅವರ ಅಸಮಾಧಾನದ ಮಾತಾಗಬೇಕಾಗಿಲ್ಲ– ಅವರು ಸ್ವತಃ ಕೈಯಲ್ಲಿ ಬೆತ್ತ ಹಿಡಿದವರಲ್ಲ– ಸಂವಾದಕ್ಕೆ ಸದಾ ಸಿದ್ಧರಾಗಿದ್ದವರು"[೬೪] ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ "....ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದಡೆ ಆಗಲಿ...." ಎಂದು ಸಕಾರಾತ್ಮಕವಾಗಿ ಸ್ವೀಕರಿಸಬೇಕಾಗುತ್ತದೆ.

ಡಾ. ಎಫ್.ಟಿ. ಹಳ್ಳಿಕೇರಿಯವರು– "ಮೇಲಿನ ವಚನ ಮತ್ತು ಟೀಕುವನ್ನು ಓದಿದಾಗ ಸರಳವಾದ ಒಂದು ವಚನಕ್ಕೆ ಮಹಾಲಿಂಗದೇವ ಗಹನವಾದ, ಸಾಂಕೇತಿಕವಾದ ಆಧ್ಯಾತ್ಮಿಕ ಅರ್ಥವನ್ನು ಕೊಟ್ಟಿದ್ದಾನೆನ್ನುವುದು ಸ್ಪಷ್ಟವಾಗುತ್ತದೆ. ಇದಕ್ಕೆ ಆತ ಬದುಕಿದ ಕಾಲವೇ ಕಾರಣ....."[೬೫] ಎಂದು

ಅಭಿಪ್ರಾಯಪಡುತ್ತಾರೆ. ಇದೇ ವಚನಕ್ಕೆ ಕಲ್ಲುಮಠದ ಪ್ರಭುದೇವರಾಗಲಿ, ಇತರರಾಗಲಿ ವ್ಯಾಖ್ಯಾನ ಬರೆಯದೇ ಇದ್ದುದರಿಂದ ಆಧ್ಯಾತ್ಮಿಕ ನೆಲೆಯಲ್ಲಿ ವ್ಯಾಖ್ಯಾನ ಮಾಡಿದ ಮಹಾಲಿಂಗದೇವರ ಅಭಿಪ್ರಾಯವನ್ನು ಸ್ವೀಕರಿಸುವುದು ಅನಿವಾರ್ಯವೆನ್ನಬಹುದು.

ಗುರು–ಶಿಷ್ಯ ಸಂಬಂಧವಾದ ಮತ್ತೊಂದು ವಚನವನ್ನು ಇಲ್ಲಿ ನೋಡಬಹುದು. ಉದಾಹರಣೆಗೆ–

"ಆಯ್ಯಾ ನೀನೆನಗೆ ಗುರುವಪ್ಪಡೆ, ನಾ ನಿನಗೆ ಶಿಷ್ಯನಪ್ಪಡೆ ಎನ್ನ
ಕರಣಾಧಿ ಗುಣಂಗಳ ಕಳೆದು, ಎನ್ನ ಕಾಯದ ಕರ್ಮವ ತೊಳೆದು,
ಎನ್ನ ಪ್ರಾಣನ ಧರ್ಮವ ನಿಲಿಸಿ, ನೀನೆನ್ನ ಕಾಯದಲಡಗಿ,
ನೀನೆನ್ನ ಪ್ರಾಣದಲಡಗಿ, ನೀನೆನ್ನ ಭಾವದಲಡಗಿ, ನೀನೆನ್ನ ಕರ
ಸ್ಥಲಕ್ಕೆ ಬಂದು, ಕಾರುಣ್ಯವ ಮಾಡು ಗುಹೇಶ್ವರ" (ಪುಟ ೩೫, ವ–೫೩)

**ಟೀಕು:** ಶ್ರೀ ಗುರು ಉಪದೇಶವ ಮಾಡುವ ಕಾಲದಲ್ಲಿ ಶಿಷ್ಯನು ತನ್ನ ಕಾಯದ ಕರ್ಮವ ಕಳೆದು ಪ್ರಾಣನ ಧರ್ಮವ ತೊಡೆದು ಕರಣಂಗಳ ನಿವೃತ್ತಿಯ ಮಾಡಿ ಶಿವಕಾಯದಲಡಗಿ ಶಿವಚೈತನ್ಯದಲಡಗಿ ಶಿವಭಾವದಲಡಗಿ ಇಪ್ಪ ಭೇದವ ತಿಳುಹಿ ನೀನೇ ಎನ್ನ ಕರಸ್ಥಲಕ್ಕೆ ಲಿಂಗವಾಗಿ ಬಂದು ಕಾರುಣ್ಯವ ಮಾಡೆಂದು ಭಿನ್ನಹವ ಮಾಡುತಿರ್ದನೆಂಬುದೀ ವಚನಾರ್ಥ.

ಅಲ್ಲಮನ ಗುರು ಅನಿಮಿಷ. "ಅನಿಮಿಷ ಪ್ರಭುದೇವರ ಪರಿಚಯ ಪುರಾಣಗಳಲ್ಲಿರುವಂತೆ ನಡೆಯದೆ ಅವರಿಬ್ಬರು ಒಬ್ಬರನ್ನೊಬ್ಬರು ಲೌಕಿಕ ರೀತಿಯಲ್ಲಿ ಕಂಡವರಿರಬೇಕು"[೬೬] ಎಂಬ ಎಲ್. ಬಸವರಾಜು ಅವರ ಅಭಿಪ್ರಾಯ ಮತ್ತು "ಶ್ರೀಗುರು ಉಪದೇಶವ ಮಾಡುವ ಕಾಲದಲ್ಲಿ ಶಿಷ್ಯನು ತನ್ನ ಕಾಯದ ಕರ್ಮವ ಕಳೆದು....."[೬೭] ಎಂಬ ಮಹಾಲಿಂಗದೇವನ ವ್ಯಾಖ್ಯಾನವನ್ನು ಗಮನಿಸಿದಾಗ ಅಲ್ಲಮಪ್ರಭು ಗುರುವಿನಿಂದ ಲಿಂಗಪಡೆಯುವ ಮುಂಚೆಯೇ ತುಂಬಾ ವಿನೀತನಾಗಿ ಪ್ರಾರ್ಥಿಸಿಕೊಳ್ಳುವ, ತನ್ನ ದೇಹದ ಎಲ್ಲ ಕಾಮನೆ ದೂರಮಾಡಿ, ಶಿವಚೈತನ್ಯನನ್ನಾಗಿ ಮಾಡಿ ಅಂಗೈಗೆ ಲಿಂಗವನ್ನು ಕರುಣಿಸಬೇಕೆಂಬ ಆಶಯವನ್ನು ಹೊಂದಿರುವುದು ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿಯೇ ಶಿವಶರಣರ ವಚನಗಳನ್ನು ಆಧರಿಸಿ ಬರೆಯಲಾದ ವ್ಯಾಖ್ಯಾನಗಳ ಮಾದರಿಗಳಿಂದ ಶರಣರ ಜೀವನದ ನಾನಾ ಮುಖಗಳನ್ನು ಅವರದೇ ಭಾವಸನ್ನಿಧಿ ಮೂಲಕ ಅರ್ಥೈಸಲು ತುಂಬಾ ಸಹಕಾರಿಯಾಗಿವೆ ಎಂಬುದನ್ನು ಅಲ್ಲಗಳೆಯಲಾಗದು.

**ಬೆಡಗಿನ ವಚನಗಳಿಗೆ ಟೀಕೆ:**

"ಸಂಸಾರವೆಂಬ ಹೆಣ ಬಿದ್ದಿರೆ ತಿನಬಂದ ನಾಯ ಜಗಳವ ನೋಡಿರೆ।
ನಾಯ ಜಗಳವ ನೋಡಿ ಹೆಣನೆದ್ದು ನಗುತಿದೆ
ಗುಹೇಶ್ವರನೆಂಬ ಲಿಂಗವಲ್ಲಿಲ್ಲ ಕಾಣಿರೆ।"

**ಟೀಕು :** ಅಮೃತವೆಂದರೆ ನಿತ್ಯಕ್ಕೆ ಪೆಸರು. ಮೃತವೆಂದರೆ ಅನಿತ್ಯಕ್ಕೆ ಪೆಸರು. ಇಂತೆರಡರೊಳಗೆ ಸಂಸಾರವೆಂಬುದು ನಿತ್ಯವಾಗಿ ಜೀವನ್ಮೃತವೆನಿಸಿಪ್ಪ ಕಾರಣದಿಂ ಸಂಸಾರವೆಂಬ ಹೆಣ ಬಿದ್ದಿರೆ ಎಂಬ ಶಬ್ದಕ್ಕರ್ಥ. ಆ ಜೀವನ್ಮೃತಪಿಂಡದ ಮಾಂಸಬಿಂದುವ ಇಂದ್ರಿಯಂಗಳೆಂಬ ಶ್ವಾನಂಗಳು ಭಕ್ಷಿಸುತ್ತ

ಅಲ್ಲಿ ಕರಣ ಮಥನವೆಂಬ ಕರ್ಕಶದಿಂದಿರುತ್ತಿರಲು ಅದು ತಿನಬಂದ ನಾಯ ಜಗಳವ ನೋಡಿರೆ ಎಂಬ ಶಬ್ಧಕರ್ಥ. ಈ ಭೇದವನು ಸದ್ವಿವೇಕದಿಂದೆಚ್ಚತ್ತು ನೋಡಿದರೆ ತನಗೆ ತನ್ನ ಸ್ಥಿತಿ ಹಾಸ್ಯವಾಗಿ ತೋರುತ್ತಿರಲು – ನಾಯ ಜಗಳವ ನೋಡಿ ಹೆಣನೆದ್ದು ನಗುತ್ತಿದೆ ಎಂಬ ಶಬ್ಧಕ್ಕರ್ಥ. ಈ ಭೇದವನುಳ್ಳ ಕಾರಣ ಅಲ್ಲಿ ಲಿಂಗದ ನಿಜವನರಿಯಬಾರದೆಂಬುದೀಗ ಗುಹೇಶ್ವರನೆಂಬ ಲಿಂಗವಲ್ಲಿಲ್ಲ ಕಾಣಿರೆ ಎಂಬ ಶಬ್ಧಕ್ಕರ್ಥ"[೬೮]

ಇಲ್ಲಿ ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆಯುವ ಟೀಕಾಕಾರ ಕೊನೆಗೆ 'ಎಂಬ ಶಬ್ಧಕ್ಕರ್ಥ' ಎಂದು ಮುಕ್ತಾಯಗೊಳಿಸುತ್ತಾನೆ. ಮೊದಲ ಸಾಲಿನ ಟೀಕೆ ಮುಗಿದ ನಂತರ ಸಂಬಂಧ ಕಲ್ಪಿಸಲು 'ಈ ಭೇದವನು, ಅದು ಕಾರಣ, 'ಆ' ಇಲ್ಲವೇ ಅಂತಪ್ಪ' ಎಂಬ ಪದವನ್ನು ಸೇರಿಸಲಾಗಿದೆ. ಹೀಗೆ ವಚನದ ವಾಕ್ಯವನ್ನು ಬದಿಸರಿಸಿ ಅಥವಾ ಹಿಮ್ಮೆಟ್ಟಿಸಿ ತಾತ್ವಿಕಾರ್ಥ ನೀಡುವ ಟೀಕಾಕಾರನ ಜಾಣ್ಮೆ ಗಮನಸೆಳೆಯುತ್ತದೆ. ಇಡೀ ವಚನಕ್ಕೆ ಸಾರರೂಪದ ಸಂಕ್ಷೇಪ ವಚನಾರ್ಥ ನೀಡಿರುವುದನ್ನು ಇಲ್ಲಿ ನೋಡಬಹುದು.

**ವಚನ:** "ಹಳ್ಳದೊಳಗೊಂದು ಹುಳ್ಳಿ ಬರುತ್ತಿರಲು, ನೊರೆತೊರೆಗಳು ತಾಗಿದವಲ್ಲ!
ಸಂಸಾರವೆಂಬ ಸಾಗರದೊಳಗೆ, ಸುಖದುಃಖಗಳು ತಾಗಿದವಲ್ಲ!
ಇದಕ್ಕಿದು ಮೂರ್ತಿಯಾದ ಕಾರಣ, ಪ್ರಳಯವಾಯಿತ್ತು ಗುಹೇಶ್ವರ"

**ಟೀಕು :** ಸಂಸಾರವೆಂಬ ಸಾಗರದ ತೆರೆಯೊಳಗೆ ಅಳುತ್ತ ಮುಳುಗುತ್ತಲಿಹ ಜೀವಂಗೆ ಸುಖದುಃಖಗಳು ಮಯ್ಯುಂಡಿಪ್ಪವು. ಇದು ಕಾರಣ ಎಲ್ಲಾ ಜೀವರುಗಳು ಪ್ರಳಯ ಬಾಧೆಗೊಳಗಾದರೆಂಬುದೀ ವಚನಾರ್ಥ. (ವಚನ–೪೭ ಪುಟ–೩೧) ಹೀಗೆ ಮಹಾಲಿಂಗದೇವ ವಚನಗಳ ವಾಕ್ಯವನ್ನು ಹಿಮ್ಮೆಟ್ಟಿಸಿ, ಸಾರರೂಪದಲ್ಲಿ, ಸಂಕ್ಷೇಪದಲ್ಲಿ ತಾತ್ವಿಕವಾಗಿ ವಚನಾರ್ಥ ನೀಡಿರುವುದನ್ನು ಕಾಣುತ್ತೇವೆ.

**ಸರಳ ವಚನಕ್ಕೆ ತಾತ್ವಿಕಾರ್ಥ ನೀಡಿರುವುದು:**

**ವಚನ:** "ಎತ್ತಣ ಮಾಮರ? ಎತ್ತಣ ಕೋಗಿಲೆ? ಎತ್ತಣಿಂದೆತ್ತ ಸಂಬಂಧವಯ್ಯ!
ಬೆಟ್ಟದ ನೆಲ್ಲಿಕಾಯಿ, ಸಮುದ್ರದೊಳಗಣ ಉಪ್ಪು, ಎತ್ತಣಿಂದೆತ್ತ ಸಂಬಂಧವಯ್ಯ!
ಗುಹೇಶ್ವರ ಲಿಂಗಕ್ಕೆಯೂ, ಎನಗೆಯೂ ಎತ್ತಣಿಂದೆತ್ತ ಸಂಬಂಧವಯ್ಯ."

ಕಾವ್ಯಶೈಲಿಯಲ್ಲಿ ರಚಿತವಾದ ಈ ಸುಂದರ ವಚನವನ್ನು ಓದುವ ಮೂಲಕ, ಸುಶ್ರಾವ್ಯವಾಗಿ ಹಾಡುವ ಮೂಲಕ ಆನಂದದ ತುತ್ತತುದಿಗೇರಲು ಸಾಧ್ಯವಿದೆ. ಯಾವ ಸಂಬಂಧವೇ ಇಲ್ಲದ ಅಂಗವು ಮಾಮರ ಅರಸಿಹೋಗುವ ಕೋಗಿಲೆಯಂತೆ, ನೆಲ್ಲಿಕಾಯಿಯಲ್ಲಿ ಉಪ್ಪನ್ನು ಬೆರಸಿ ತಿನ್ನುವುದರಲ್ಲಿಯ ಅಪ್ಯಾಯಮಾನ ರುಚಿಯಂತೆ, ಅನಿಮಿಷ ಗುರುವೇ ನಿನಗೂ ನನಗೂ ಉಂಟಾದ ಅನಿರ್ವಚನೀಯ ಸಂಬಂಧವೂ ಹೇಗೆ ಸಾಧ್ಯವಾಯಿತೆಂಬ ಆಶ್ಚರ್ಯವನ್ನು ಅಲ್ಲಮಪ್ರಭು ವ್ಯಕ್ತಪಡಿಸಿದ್ದಾನೆ.

ಈ ವಚನಕ್ಕೆ ಮಹಾಲಿಂಗದೇವನು ಸಾರರೂಪದಲ್ಲಿ ವ್ಯಾಖ್ಯಾನ ಮಾಡಿದ್ದು ಹೀಗಿದೆ– "ಅಂಗಕ್ಕೆಯೂ ಲಿಂಗಕ್ಕೆಯೂ ಸಂಬಂಧವಿಲ್ಲ. ಅದೇನು ಕಾರಣವೆಂದೊಡೆ ಅಂಗವೆ ಜಡನು, ಲಿಂಗವೆ ಅಜಡನಾಗಿ ಮನಕ್ಕೆಯೂ ಅರಿವಿಂಗೆಯೂ ಸಂಬಂಧವಿಲ್ಲ. ಅದೇನು ಕಾರಣವೆಂದೊಡೆ ಮನವೆ ಮರವೆ, ಅರಿವೆ

ಬೆಳಗಾಗಿ, ಇಂತಪ್ಪ ತನುಮನವಿಡಿದಾತಂಗೆ ಮಹಾಲಿಂಗದ ಸಂಗ ಒಮ್ಮೆಯೂ ಇಲ್ಲದಿರುತ್ತಿರಲು ಕರ್ಮಾವಶೇಷದಿಂ ತನುಧರ್ಮ ಮನಧರ್ಮವುಳಿದು ಮಹಾಲಿಂಗವು ಕರಸ್ಥಲಕ್ಕೆ ಇಷ್ಟಲಿಂಗವಾಗಿ ಬರಲು ಆ ಲಿಂಗದ ಮಹಿಮೆಯನು ತನ್ನ ಕ್ಷೀಣವನು ತಾನೆ ನೋಡಿ ಆಶ್ಚರ್ಯಬಡುತ್ತಿರಲು ಅದೀಗ ಈ ವಚನಕ್ಕರ್ಥ"[೬] ಕಲ್ಲುಮಠದ ಪ್ರಭುದೇವನ ಲಿಂಗಲೀಲಾವಿಲಾಸ ಚಾರಿತ್ರದಲ್ಲಿಯೂ ಕೂಡಾ ಇದೇ ರೀತಿಯ ವ್ಯಾಖ್ಯಾನವಿದೆ. ಇಲ್ಲಿ ಯಾರು ಯಾರನ್ನು ಅನುಸರಿಸಿದರೆಂಬುದು ಮಾತ್ರ ತಿಳಿಯದು.

**ಏಕಾರ್ಥದ ನಿರ್ವಚನಕ್ಕೆ:**

**ವಚನ:** "ಮೇರುವ ಸಾರಿದ ಕಾಗೆ ಹೊಂಬಣ್ಣವಾಗದಿದ್ದೊಡೆ ಆ ಮೇರುವಿಂದತ್ತಣ ಹುಲುಮೊರಡಿ ಸಾಲದೆ? ದೇವಾ ನಿಮ್ಮ ಪೂಜಿಸಿ ಧಾವತಿಗೊಂಬೊಡೆ ಆ ಧಾವತಿಯಿಂದ ಮುನ್ನಿನ ವಿಧಿಯೇ ಸಾಲದೆ? ಗುಹೇಶ್ವರ, ನಿಮ್ಮ ಪೂಜಿಸಿ ಸಾವಡೆ ನಿಮ್ಮಿಂದ ಹೊರಗಣ ಜವನೆ ಸಾಲದೆ?

**ಟೀಕು :** ಅಂಗದ ಮೇಲೆ ಲಿಂಗಸಂಬಂಧಿಯಾದ ಬಳಿಕ ದೇಹಧರ್ಮ ಜನನ ಮರಣವ ಗೆಲಲೇಬೇಕು. ಗೆಲುವ ಬುದ್ಧಿಯನರಿಯದೇ ಲೋಕ ಲೌಕಿಕದ ಹಾಂಗೆ ಹುಟ್ಟುವ ಹೊಂದುವ ದಂದುಗದೊಳಿಪ್ಪುದೆಂಬುದು ವ್ಯರ್ಥ ಜನ್ಮವೆಂಬುದೀ ವಚನದ ಉಪದೃಷ್ಟಂಗಳಿಗೇಕಾರ್ಥ ನಿರ್ವಚನ"[೭] ಎಂದು ಮಹಾಲಿಂಗದೇವನೆ ಹೇಳುತ್ತಾನಲ್ಲದೇ ಈ ರೀತಿಯಲ್ಲಿ ವ್ಯಾಖ್ಯಾನ ಮಾಡಿದ ಹಲವು ವಚನಗಳ ಮಾದರಿ ಇವೆ.

"ಕೊಟ್ಟ ಕುದುರೆಯನೇರಲರಿಯದೇ ಮತ್ತೊಂದು ಕುದುರೆಯ ಬಯಸುವವರು...." (ವಚನ-೧೨೭) "ಆದ್ಯರಲ್ಲ ವೇದ್ಯರಲ್ಲ; ಸಾಧ್ಯರಲ್ಲದ ಹಿರಿಯರ ನೋಡಾ....." (ವ-೧೨೯) ಇಂತಹ ಜನಪ್ರಿಯವಾದ ವಚನಗಳಿಗೆ ಒಂದು ಇಲ್ಲವೇ ಎರಡೇ ವಾಕ್ಯಗಳಲ್ಲಿ ವ್ಯಾಖ್ಯಾನ ಮಾಡಿರುವುದು ಮಹಾಲಿಂಗದೇವನ ಪಾಂಡಿತ್ಯಕ್ಕೆ ಸಾಕ್ಷಿ ಎನ್ನಬಹುದು. ಉದಾಹರಣೆಗೆ ೩೮೪, ೩೮೬, ೧೩೦, ೧೩೧, ೧೩೨, ೧೩೩, ೪೩೮, ೪೬೫, ೪೬೬, ೪೭೩, ೫೨೭ ಮತ್ತಿತರ ವಚನ ವ್ಯಾಖ್ಯಾನಗಳಲ್ಲಿ ಕಾಣುತ್ತೇವೆ. ಇಲ್ಲಿಯ ೫೨೭ನೇ ವಚನಕ್ಕೆ ವ್ಯಾಖ್ಯಾನಕಾರನು- "ಸರ್ವೇದ್ರಿಯಂಗಳ ವಿಷಯದ ಆಸೆಯ, ಲಿಂಗದಲ್ಲಿ ಸವೆಸಿಯಲ್ಲದೇ ಆತ ಶರಣನಲ್ಲವೆಂಬುದೀ ವಚನದ ತಾತ್ಪರ್ಯಾರ್ಥ"[೮] ಎಂದು ನೇರವಾಗಿ ಅರ್ಥಹೇಳಿದ್ದಾನೆ. ಹೀಗೆ, ಅಲ್ಲಮಪ್ರಭುವಿನ ಮೂರ್‍ನಾಲ್ಕು ಸಾಲಿನ ವಚನಗಳಿಗೆ ಒಂದೆರಡೇ ವಾಕ್ಯಗಳಲ್ಲಿ ಎರಡರಿಂದ ಮೂರು ಸಾಲಿನಲ್ಲಿ ಟೀಕೆ ಬರೆದಿರುವ ಮಹಾಲಿಂಗದೇವನು, ನಾಲ್ಕೈದು ಸಾಲಿನ ಚಿಕ್ಕ ವಚನಕ್ಕೆ ಸುಧೀರ್ಘವಾದ ವ್ಯಾಖ್ಯಾನ ಬರೆದಿದ್ದಾನೆ.

"ಶರಣರು ತಮ್ಮ ವಚನಗಳಲ್ಲಿ ಮುಖ್ಯವಾಗಿ ಬೆಡಗಿನ ವಚನಗಳಲ್ಲಿ ಹುದುಗಿಸಿಟ್ಟಿರುವ ಗೂಢಾತಿಗೂಢ ತತ್ವನಿಧಿಯನ್ನು ಕಾಣಲು ಟೀಕಾಗ್ರಂಥಗಳು ಅಂಜನದಂತಿವೆ"[೯] ಎಂಬ ಅಭಿಪ್ರಾಯ ಸಮಂಜಸವೇ ಆಗಿದೆ. ಅಲ್ಲದೇ, "ಪ್ರಭುದೇವರ ವಚನಗಳನ್ನು ಸಂಗ್ರಹಿಸಿದ ಮತ್ತು ಅವುಗಳನ್ನು ಒಂದು ವ್ಯವಸ್ಥಿತ ರೀತಿಯಲ್ಲಿ ಜೋಡಿಸಿ, ಅವಕ್ಕೆ ವ್ಯಾಖ್ಯಾನ ಬರೆದು ಅವು ಸುಲಭ ಗಮ್ಯವಾಗುವಂತೆ ಮಾಡಿದ ಕೀರ್ತಿ ಮೊದಲು ಮಹಾಲಿಂಗದೇವನಿಗೆ ಸಲ್ಲಬೇಕಾದುದು"[೧೦] ಎಂಬುದರಲ್ಲಿ ಎರಡು ಮಾತಿಲ್ಲ.

**ಆ. ಪ್ರಭುದೇವರ ಷಟ್ಸ್ಥಲ ಜ್ಞಾನಚಾರಿತ್ರ ವಚನದ ಟೀಕು:**

೧೨ನೇ ಶತಮಾನದ ಶಿವಶರಣರ ವಚನ ಸಂಕಲಿಸಿ, ಅವಕ್ಕೆ ಟೀಕು ಬರೆದ ಪಂಡಿತ ಮಹಾಲಿಂಗದೇವನ ಕರಕಮಲ ಸಂಜಾತನಾದ ಟೀಕಾಕಾರನೇ ಕುಮಾರ ಬಂಕನಾಥ. ಈತನ ದಿವ್ಯಜ್ಞಾನಾನಂದ ಕರಕಮಲದಲ್ಲಿ ಉದಯವಾದ ಶಿಷ್ಯನೇ ಭಕ್ತಿಭಂಡಾರಿ ಜಕ್ಕಣ್ಣನು ಎಂಬ ಏಕೋತ್ತರ ಶತಸ್ಥಲದ ಉಲ್ಲೇಖದಿಂದಾಗಿ ಇಲ್ಲಿಯ ಮೂವರು ವಿದ್ವಜ್ಜನರ ಪರಂಪರೆಗೆ ಚಾರಿತ್ರಿಕ ಇತಿಹಾಸವಿದೆ. ಅಲ್ಲದೆ, "ಘನವೀರಶೈವಕ್ಕೆ ಇಪ್ಪತ್ತು ಒಂದನೆಯ ಗುರು ಸಾಂಪ್ರದಾಯಕ ಶ್ರೇಷ್ಠ ಸುಕುಮಾರನು ಬಂಕನಾಥ ಗುರುಬಸವನಜಯುಗಳವನು ಹೃದಯದೊಳು ನೆಲಗೊಳಿಸುತ"[೨೪] ಎಂದು ಅದೃಶ್ಯಕವಿಯು ಉಲ್ಲೇಖಿಸಿರುವುದರಿಂದ ಕುಮಾರ ಬಂಕನಾಥನ ಘನವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ.

ಕುಮಾರ ಬಂಕನಾಥನ (ಕ್ರಿ.ಶ.೧೪೩೦) ಕೃತಿಗಳು ಒಂದೇ, ಎರಡೇ ಎಂಬ ಬಗ್ಗೆ ವಿದ್ವಾಂಸರರಲ್ಲಿ ಒಮ್ಮತವಿಲ್ಲ. ಕವಿಚರಿತೆಕಾರರು– ಷಟ್ಸ್ಥಲೋಪದೇಶ, ಪ್ರಭುದೇವರ ಷಟ್‌ಸ್ಥಲ ಜ್ಞಾನ ಚಾರಿತ್ರ ವಚನ ಟೀಕು ಕೃತಿ ರಚಿಸಿರುವನೆಂದು ಹೇಳುತ್ತಾರೆ. ರಂ.ಶ್ರೀ ಮುಗಳಿಯವರು– ಇವೆರಡೂ ಕೃತಿ ಒಂದೇ ಎಂದು ಅಭಿಪ್ರಾಯಪಡುತ್ತಾರೆ. ಅಲ್ಲದೇ ಪ್ರಭುದೇವರ ಟೀಕಿನ ವಚನದ ಕರ್ತೃವಿನ ಬಗ್ಗೆಯೂ ಒಮ್ಮತವಿಲ್ಲ. "ಹೀಗಾಗಿ ಮಹಲಿಂಗದೇವ ಮತ್ತು ಬಂಕನಾಥನ ಕೃತಿಗಳಾವುವು ಎಂಬ ಬಗ್ಗೆ ಇನ್ನೂ ತೊಡಕುಗಳಿವೆ"[೨೫] ಎನ್ನುತ್ತಾರೆ. ಡಾ. ಎಫ್.ಟಿ ಹಳ್ಳಿಕೇರಿಯವರು.

ಡಾ.ವಿ.ಶಿವಾನಂದ ಅವರು ತಮ್ಮ ಮಹಾಪ್ರಬಂಧದಲ್ಲಿ "ಈ ಬಗ್ಗೆ ಸಾಕಷ್ಟು ಚರ್ಚೆ ನಡೆಸುವ ಮೂಲಕ ಇವರಿಬ್ಬರೂ ಪ್ರಭುದೇವರ ವಚನಗಳಿಗೆ ಪ್ರತ್ಯೇಕವಾಗಿಯೇ ಟೀಕು ಬರೆದಿದ್ದಾರೆ. ಆದರೆ, ಎರಡೂ ಕೃತಿಗಳಲ್ಲಿ ಸಾಕಷ್ಟು ಸಾಮ್ಯತೆಗಳಿವೆ"[೨೬] ಎಂದು ಹೇಳುವುದರಿಂದ ಗೊಂದಲ ಸಂಪೂರ್ಣ ನಿವಾರಣೆಯಾಗಿಲ್ಲ. ಆದರೆ, ಕುಮಾರ ಬಂಕನಾಥನು ಪ್ರಭುದೇವರ ವಚನ ಟೀಕು ಒಂದೇ ಕೃತಿ ರಚಿಸಿದ್ದನೆಂಬುದನ್ನು ಸ್ವೀಕರಿಸಬೇಕಾಗುತ್ತದೆ.

ಟೀಕಾಕೃತಿಯ ಆರಂಭದಲ್ಲಿ– "ಶ್ರೀಕುಮಾರ ಬಂಕನಾಥದೇವರ ದಿವ್ಯಜ್ಞಾನಾನಂದ ಕರಕಮಲದಲ್ಲಿ ಉದಯನಾದ ತತ್‌ಶಿಷ್ಯ ಭಕ್ತಿಭಂಡಾರಿ ಜಕ್ಕಣ್ಣನು ಆ ಶ್ರೀ ಗುರುರಾಯಂಗೆ ಬಿನ್ನಪಂಗೈಯ್ಯುಂ, ಎನ್ನ ಷಡಾಂಗವು ಲಿಂಗದಲ್ಲಿ ಲೀಯವಹ ಭೇದವ ನಿರೂಪವ ಕೊಟ್ಟು ಪಾಲಿಪುದೆಂದೆನೆ, ಆ ಶ್ರೀಗುರುಸ್ವಾಮಿ ತಮ್ಮ ಪರಮ ಜ್ಞಾನಾನುಭಾವ ಪ್ರಸನ್ನ ಪ್ರಕಾಶದಿಂದ ಶ್ರೀ ಷಟ್ಸ್ಥಲವನು ಶ್ರೀಮದಲ್ಲಮ ಶ್ರೀ ಪ್ರಭುದೇವರ ವಚನಂಗಳಿಂದ ಸಂಕಲ್ಪಿಸಿ ಸುಲಲಿತ ವಾಕ್ಯಾಮೃತವಾಗಿ ಆ ವಚನಗಳನ್ನು ಟೀಕೆ ಪರಮಾರ್ಥ ತತ್ವ ಬೋಧೆಯನು ನಿರೂಪಿಸಿದ ಭೇದವೆಂತಿರ್ದಿತೆಂದಡೆ ಪ್ರಥಮದಲ್ಲಿ ಪಿಂಡಸ್ಥಲ..."[೨೭] ಎಂದು ಹೇಳಿಕೊಂಡಿದ್ದಾನೆ. "ಈ ಹೇಳಿಕೆ ಬಂಕನಾಥನೇ ಈ ಕೃತಿಯ ಕರ್ತೃವೆಂಬುದಕ್ಕೆ ಪುಷ್ಠಿ ನೀಡುತ್ತದೆ"[೨೮] ಎಂದು ಡಾ.ಎಫ್.ಟಿ.ಹಳ್ಳಿಕೇರಿ ಅಭಿಪ್ರಾಯಪಟ್ಟಿರುವುದು ಸಮಂಜಸವಾಗಿದೆ.

ಮೇಲ್ಕಂಡ ಎಲ್ಲಾ ಅಭಿಪ್ರಾಯಗಳು ಸರಿಯೆಂಬಂತೆ ಈ ಕೃತಿಯನ್ನೊಳಗೊಂಡ ಒಂದು ಹಸ್ತಪ್ರತಿಯ ಆರಂಭದಲ್ಲಿ– "ಓಂ ಸ್ವಸ್ತಿ ಸುಸಮಸ್ತ ಶ್ರೀಮನ್ನಿರಂಜನ ಶರಣ ಹೃತ್ಕಮಲ ಪರಂಜ್ಯೋತಿ ಶ್ರೀಮದಲ್ಲಮ ಪ್ರಭುದೇವರು ನಿರೂಪಿಸಿದ ಶ್ರೀ ಮನ್ಮಹಾ ಷಟ್ಸ್ಥಲ ವಚನಮಂ ಶ್ರೀ ಕುಮಾರಬಂಕನಾಥದೇವರು ತಮ್ಮ ಶಿಷ್ಯ ಶ್ರೀ ಭಕ್ತಿಭಂಡಾರಿ ಜಕ್ಕಣಾರ್ಯಂಗೆ ಸಟಿಪ್ಪಣಮಾಗಿ ಬೋಧಿಸಿರುವುದನ್ನು ಬರೆಯುವುದಕ್ಕೆ ಚರಗುರು ಶಿವಾರ್ಚಕರ ಮೆಲ್ಲಡಿಗಳಂ ಬಲಗೊಳ್ವೆಂ"[೮] ಎಂದು ಲಿಪಿಕಾರ ಹೇಳಿರುವುದನ್ನು ಆಧರಿಸಿ ಈ ಕೃತಿಯನ್ನು ಬಂಕನಾಥನೇ ರಚಿಸಿರುವುದು ಖಚಿತವೆನ್ನಬಹುದು.

**ಟೀಕಿನ ಕೃತಿಯ ಸ್ವರೂಪ:**

ಮಹಾಲಿಂಗದೇವರಂತೆ ಈತನೂ ಕೂಡಾ ಭಕ್ತಸ್ಥಲ (೧೧೨), ಮಾಹೇಶ್ವರ ಸ್ಥಲ (೪೪), ಪ್ರಸಾದಿ ಸ್ಥಲ (೧೭), ಪ್ರಾಣಲಿಂಗಿ ಸ್ಥಲ (೧೩೭), ಶರಣ ಸ್ಥಲ (೨೯೫), ಐಕ್ಯಸ್ಥಲ (೮೯) ಹೀಗೆ ಆರು ಸ್ಥಲಗಳಲ್ಲಿ ೬೯೪ ಪ್ರಭುವಿನ ವಚನಗಳಿಗೆ ಟೀಕು ಬರೆದಿದ್ದಾನೆ. ಈ ಕೃತಿಯ ಮುಖ್ಯ ಲಕ್ಷಣಗಳನ್ನು ಡಾ.ವಿ. ಶಿವಾನಂದ ಅವರು ಮಹಾಪ್ರಬಂಧದ (ಪು.೨೭೦)ರಲ್ಲಿ ಗುರುತಿಸಿದ್ದು ಈ ಕೆಳಗಿನಂತಿವೆ.

೧. ಸ್ಥಲ ನಿರ್ದೇಶನ, ಆ ಸ್ಥಲಸಂಬಂಧಿಯಾದ ವಚನಗಳು, ಆ ವಚನಗಳ ಸಂಖ್ಯೆ ಪ್ರಸಾದಿಸ್ಥಲದಲ್ಲಿ ಎಲ್ಲಕ್ಕಿಂತ ಕಡಿಮೆ ಎಂದರೆ ೧೭ ಇವೆ. ಶರಣಸ್ಥಲದಲ್ಲಿ ಹೆಚ್ಚು ಎಂದರೆ ೨೯೫ ಇವೆ.

೨. ಆಯಾ ವಚನಗಳಿಗೆ ಪ್ರತಿಪದದ ಟೀಕೆ ಇರುತ್ತದೆ

೩. ವಚನದ ಪ್ರತಿಯೊಂದು ವಾಕ್ಯಗಳನ್ನು ಎತ್ತಿಕೊಂಡು ಅರ್ಥ ವಿವರಣೆ ಮಾಡಿದ ಮೇಲೆ, ಆ ಅರ್ಥ ಹೇಳಿದ ವಚನದ ಸಾಲನ್ನು ಪುನಃ ಪೂರ್ತಿಯಾಗಿ ಕೊಟ್ಟು ಎಂಬುದೀಗ ಈ ಶಬ್ಧಕ್ಕರ್ಥ ಎಂಬಲ್ಲಿ ವಾಕ್ಯಾನ್ವಯದ ಕ್ರಿಯಾಪದ ಪೂರ್ತಿಯಾಗಿರುವುದು.

೪. ಆಯಾ ವಚನದ ಇಡೀ ಭಾವವು ಯಾವ ಸ್ಥಲಕ್ಕೆ ಸಂಬಂಧಿಸಿರುತ್ತದೆಯೋ ಆ ಸ್ಥಲ ತತ್ವವನ್ನು ಪುನಃ ವಚನಗಳಿಗೆ ಟೀಕೆಯಲ್ಲಿ ಅಳವಡಿಸಿರುತ್ತದೆ.

೫. ಅಲ್ಲಲ್ಲಿ ಸಂಸ್ಕೃತ ಶ್ಲೋಕಗಳನ್ನು ಪ್ರಮಾಣವಾಗಿ ಕೊಟ್ಟಿರುವುದು.

೬. ಪ್ರಭುದೇವನ ಬೆಡಗಿನ ವಚನಗಳಿಗೆ ಶಿವಾನುಭವ ಹಿನ್ನೆಲೆಯಲ್ಲಿ ಟೀಕು ಬರೆದದ್ದು"[೮೦] ಉದಾಹರಣೆಗೆ ಒಂದು ಮಾದರಿ ನೋಡಬಹುದು.

**ವಚನ:** "ಶಿಲೆಯೊಳಗಣ ಪಾವಕನಂತೆ
ಪಾವಕದೊಳಗಣ ಪ್ರತಿಬಿಂಬದಂತೆ
ಬೀಜದೊಳಗಣ ವೃಕ್ಷದಂತೆ
ಶಬ್ಧದೊಳಗಣ ನಿಶ್ಯಬ್ಧದಂತೆ ಗುಹೇಶ್ವರಾ ನಿಮ್ಮ ಶರಣರ ಸಂಬಂಧ"

ಪಿಂಡಸ್ಥಲಕ್ಕೆ ಸಂಬಂಧಿಸಿದ ಅಲ್ಲಮನ ಈ ವಚನಕ್ಕೆ ಬಂಕನಾಥನ ಟೀಕು ಹೀಗಿದೆ. "ಶಿಲೆಯೊಳಗಿಪ್ಪ ಅಗ್ನಿ ಮೈದೋರದ ಹಾಗೆ ಪರಬ್ರಹ್ಮವು ಪಿಂಡಸ್ಥವಾಗಿದ್ದು ಕಾಣಿಸಬಾರದೆಂಬುದೀಗ ಶಿಲೆಯೊಳಗಣ

ಪಾವಕನಂತೆ ಎಂಬ ಶಬ್ದಕ್ಕರ್ಥ. ಆವುದಾದರೊಂದು ಪ್ರತಿಬಿಂಬವು ಉದಕದೊಳಗಿರ್ದು ಉದಕದ ಗುಣಧರ್ಮ ಕರ್ಮವ ಹೊದ್ದದ ಹಾಂಗೆ ಆ ಪರಬ್ರಹ್ಮವು ಪಿಂಡಸ್ಥವಾಗಿರ್ದು ಆ ಪಿಂಡದ ಗುಣಧರ್ಮ ಕರ್ಮವ ಹೊದ್ದದಿಪ್ಪುದೀಗ ಉದಕದೊಳಗಣ ಪ್ರತಿಬಿಂಬವೆಂಬ ಶಬ್ದಕ್ಕರ್ಥ. ಬೀಜದೊಳಗಣ ವೃಕ್ಷದ ಹಾಂಗೆ ಆ ಪರಬ್ರಹ್ಮವು ಪಿಂಡವಾಗಿರ್ದು ಪಿಂಡದ ಮಧ್ಯದಲ್ಲಿ ಗೂಢವಾಗಿಪ್ಪುದೀಗ ಬೀಜದೊಳಗಣ ವೃಕ್ಷದಂತೆ ಎಂಬ ಶಬ್ದಕ್ಕರ್ಥ. ಶಬ್ದದೊಳಗಣ ನಿಶ್ಯಬ್ದವಿದ್ದುದನು ಭೇದಿಸಬಾರದ ಹಾಂಗೆ ಆ ಪರಬ್ರಹ್ಮವು ಪಿಂಡಸ್ಥವಾಗಿರ್ದು ಅಭೇದವಾಗಿಪ್ಪುದೆಂಬುದೀಗ ಶಬ್ದದೊಳಗಣ ನಿಶ್ಯಬ್ದದಂತೆ ಗುಹೇಶ್ವರ ನಿಮ್ಮ ಶರಣಸಂಬಂಧ ಎಂಬ ಶಬ್ದಕ್ಕರ್ಥ."

ಮೇಲಿನ ಟೀಕನ್ನು ಕುರಿತು ಡಾ. ಎಫ್.ಟಿ. ಹಳ್ಳಿಕೇರಿಯವರು ಬಂಕನಾಥನ ಭಾಷೆ ನಡುಗನ್ನಡ ಗದ್ಯದ ಹೃದ್ಯತೆ, ವಾಕ್ಯ ವಿನ್ಯಾಸ ವಿಶಿಷ್ಟವಾದುದು.... ಪಿಂಡಸ್ಥವಾಗಿರ್ದು ಹೊದ್ದದಿಪ್ಪುದೀಗ ಕಾಣಿಸಬಾರದೆಂಬುದೀಗ ಗೂಢವಾಗಿಪ್ಪುದೆಂಬುದೀಗ ಎಂಬಂಥ ಪರ್ಯಾಯ ಪದಗಳನ್ನು ಬಳಸಿರುವುದನ್ನು ನೋಡಿದರೆ ಬಂಕನಾಥನ ಶಬ್ದಭಂಡಾರ, ವಿದ್ವತ್ತು ಎದ್ದು ಕಾಣುತ್ತದೆ. ಟೀಕು ಎಂಬುದಕ್ಕೆ ಸಮನಾಗಿ ಅರ್ಥ, ಅನ್ವಯ, ದ್ರಷ್ಟ, ತಾತ್ಪರ್ಯ ಮತ್ತು ನಿರ್ವಚನ ಎಂಬ ವೈವಿಧ್ಯಪೂರ್ಣ ಪದಗಳನ್ನು ಇಲ್ಲಿ ಬಳಸಿಕೊಂಡಿದ್ದಾನೆ."[೮೧]

ಅಲ್ಲದೇ ಸಂದರ್ಭಾನುಸಾರ ಸಂಸ್ಕೃತ ಶ್ಲೋಕ ಉಲ್ಲೇಖಿಸುವ ಮೂಲಕ ತನ್ನ ದ್ವಿಭಾಷಾ ಪಾಂಡಿತ್ಯವನ್ನು ತೋರಿದ್ದಾನೆ. ಉದಾಹರಣೆಗೆ– "ಆತ್ಮಾಕಾಶಮಯಂತಾವತ್ (ಭೂಮಿಯ ಕಠಿಣವನು ಆಕಾಶದ ಮೃದುವನು), ಪಿಂಡಬ್ರಹ್ಮಾಂಡಯೋರೈಕ್ಯಂ (ಭೂಮಿಯಾಕಾಶ ಒಂದೇ ಜೀವನದುದರ.)"

ಆಧ್ಯಾತ್ಮ ದರ್ಶನ ತೋರಲು ಧ್ವನಿಪೂರ್ಣ ಉಪಮೆಗಳ ಮೂಲಕ ಬೆಡಗಿನ ವಚನಗಳನ್ನು ಅಭಿವ್ಯಕ್ತಿಸಿದ ಪ್ರಭುದೇವರ ಯೋಗಪ್ರತಿಭೆ ಅಸಾಧಾರಣವಾದುದು. ಈತನ ಪ್ರತಿಭೆಗೆ ತಾನೇನು ಕಡಿಮೆಯಿಲ್ಲವೆಂಬಂತೆ ಅರ್ಥಪೂರ್ಣವಾಗಿ ವಚನ ಟೀಕು ಬರೆದ ಕುಮಾರ ಬಂಕನಾಥನ ಪಾಂಡಿತ್ಯವು ಅಸಾಮಾನ್ಯವೆಂಬುದರ ನಿದರ್ಶನಕ್ಕಾಗಿ ಇಲ್ಲಿ ಒಂದೆರೆಡು ಉದಾಹರಣೆ ನೋಡಬಹುದು.

**'ತಲೆಯಿಲ್ಲದ ತಲೆಯಾತಂಗೆ ಕರುಳಿಲ್ಲದ ಒಡಲು ನೋಡಾ......'** ವಚನವೊಂದರ ಸಾಲಿಗೆ ಬಂಕನಾಥನು "ಜ್ಞಾನದ ತೂರ್ಯವೆಂಬ ವೃತ್ತಿಜ್ಞಾನವಳಿದು ಶುದ್ಧಜ್ಞಪ್ತಿಯೇ ತಲೆಯಿಲ್ಲದ ತಲೆ ಅಜ್ಞಪ್ತಿಯೇ ಸಿರಸ್ಸಾಗಿ ಪರಬ್ರಹ್ಮಕ್ಕೆ ಕರಣಾದಿಗಳೆಂಬ ಕರುಳಿಲ್ಲದ ಒಡಲಾಯಿತ್ತಾಗಿ ಕರುಳಿಲ್ಲದ ಒಡಲು" ಎಂದು ವ್ಯಾಖ್ಯಾನಿಸಿರುವನು. ಹೀಗೆ ಅನುಭಾವದ ನೆಲೆಯಲ್ಲಿ ನಿಂತು ವ್ಯಾಖ್ಯಾನಿಸುವ ರೀತಿ ಬಂಕನಾಥನ ಪ್ರತಿಭೆಗೆ ಹಿಡಿದ ಕನ್ನಡಿಯಾಗಿದೆ.

**ವಚನ:** **"ನೆಲದ ಬೊಂಬೆಗೆ ಜಲದ ಬಣ್ಣವೆಯನುಡಿಸಿ"**

**ಟೀಕು:** ಪೃಥ್ವಿಯಂಶದ ತನುವೆಂಬುದೀಗ ನೆಲದ ಬೊಂಬೆ. ಅಪ್ಪುವಿನಂಶದ ಸದಿಂಬದ್ದಮಾಡಿ ಎಂಬುದೀಗ ಜಲದ ಬಣ್ಣವನುಡಿಸಿ ಎಂಬರ್ಥ.

**ವಚನ:** **'ತಲೆಯ ಮೇಲೆ ತಲೆ ಇದ್ದಿತ್ತಲ್ಲಾ ತಲೆತಲೆಯ ನುಂಗಿತ್ತಲ್ಲಾ'**

**ಟೀಕು:** ತಲೆ ಎಂದರೆ ಜ್ಞಾನ. ಆದರೆ ಇದು ವೃತ್ತಿ ಜ್ಞಾನ. ವೃತ್ತಿ ಜ್ಞಾನದ ಮೇಲಣ ಜ್ಞಾನ ಮಹಾಜ್ಞಾನ ಎಂಬುದಕ್ಕೆ ತಲೆಯ ಮೇಲೆ ತಲೆ ಎಂದರ್ಥ. ಜ್ಞಾನವೃತ್ತಿ ಜ್ಞಾನಗಳೆರಡೂ ಮಹಾಜ್ಞಾನದಲ್ಲಿ ಒಂದಾಗುವುದೇ ತಲೆ ತಲೆಯನ್ನು ನುಂಗುವುದು ಎಂದರ್ಥ. ಹೀಗೆ– "ಪ್ರಭುದೇವನ ಮಹಿಮೋನ್ನತ ವಚನಗಳಿಗೆ ಟೀಕೆ ಬರೆಯುವ ತನ್ನ ಸಾಹಸವನ್ನು 'ನನ್ನ ಅಲ್ಪಮತಿಗೆ ತೋರಿದ ಅನ್ವಯ ಮಾಡಿದೆನು' ಎನ್ನುವಲ್ಲಿ ಅವನ ವಿನೀತ ಭಾವವನ್ನು ಕಾಣಬಹುದು"[೮೨] ಎನ್ನುತ್ತಾರೆ ಜಿ.ಎ. ಶಿವಲಿಂಗಯ್ಯ.

ಡಾ. ವಿ. ಶಿವಾನಂದ ಅವರು– "ಪ್ರಭುದೇವರ ಅತ್ಯಂತ ಜಟಿಲವಾದ ವಚನಗಳಿಗೆ ಬಂಕನಾಥ ಟೀಕೆ ಬರೆದಿರುವುದು, ಅವನ್ನು ವೀರಶೈವ ಷಟ್‌ಸ್ಥಲ ತತ್ವಗಳಲ್ಲಿ ನಿಯೋಜಿಸಿ, ಆ ವಚನಗಳಲ್ಲಿ ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸಿರುವುದು, ವಚನ ಸಾಹಿತ್ಯ ಪ್ರಪಂಚದಲ್ಲಿಯೇ ಅವನಿಗೆ ವಿಶಿಷ್ಟ ಸ್ಥಾನವನ್ನು ಕಲ್ಪಿಸಿಕೊಟ್ಟಿವೆ. ಅವನ ಟೀಕೆ ಸಮಗ್ರವೂ ಸ್ವಯಂಪೂರ್ಣವೂ, ಸರಳವೂ ಆಗಿದೆ. ಸುಲಲಿತವಾದ ವಾಕ್ಯಾಮೃತಗಳಲ್ಲಿ ವಚನಗಳಿಗೆ ಟೀಕೆ ಬರೆದುದಾಗಿ ಬಂಕನಾಥನೇ ಹೇಳಿರುವುದು ಅರ್ಥಪೂರ್ಣವಾಗಿದೆ. ನಡುಗನ್ನಡದ ಸಾಮಾನ್ಯ ಗದ್ಯ ಶೈಲಿಗೆ ಇವನ ಟೀಕೆ ಉತ್ಕೃಷ್ಟ ನಿದರ್ಶನವಾಗಿದೆ"[೮೩] ಎಂದು ಅಭಿಪ್ರಾಯಪಟ್ಟಿದ್ದಾರೆ.

### ೩. ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಟೀಕಿನ ವಚನಗಳು

೧೨ನೇ ಶತಮಾನದ ಕಲ್ಯಾಣದ ಕ್ರಾಂತಿಯ ನಂತರದಲ್ಲಿ 'ನೆಲದ ಮರೆಯ ನಿಧಾನ'ದಂತಿದ್ದ ಶಿವಶರಣರ ವಚನ ಸಾಹಿತ್ಯವನ್ನು ಸಂಗ್ರಹಿಸುವ–ಸಂಕಲಿಸುವ–ಸಂಪಾದಿಸುವ–ಟೀಕು–ವ್ಯಾಖ್ಯಾನ ಬರೆಯುವ ಕಾರ್ಯ ವಿಜಯನಗರದ ಅರಸ ಪ್ರೌಢದೇವರಾಯನ ಕಾಲದಲ್ಲಿ ನಡೆಯಿತು. ೧೫–೧೬ನೇ ಶತಮಾನದಲ್ಲಿ ರಾಜಸತ್ತೆಯೊಂದಿಗೆ ಪ್ರಜಾಸತ್ತೆ ಕೈಜೋಡಿಸಿದ ಕಾರಣ ನೂರೊಂದು ವಿರಕ್ತರು ಶ್ರಮವಹಿಸಿ ಕಾರ್ಯಮಾಡಿದ್ದರಿಂದ ವಿಶ್ವಮಾನ್ಯವಾಗಬಲ್ಲ 'ವಚನ ಸಾಹಿತ್ಯ'ವೆಂಬ ಅಕ್ಷಯ ನಿಧಿಗೆ ಪುನರುಜ್ಜೀವನ ಲಭಿಸಲು ಸಾಧ್ಯವಾಯಿತು. ಸಂಗಮ ವಂಶದ ಆಳ್ವಿಕೆಯಲ್ಲಿ ಹಂಪೆಯು "ವಿಜಯಕಲ್ಯಾಣ"ವಾಯಿತು.

ಆದರೆ, ಸಂಗಮ ವಂಶದ ಆಳ್ವಿಕೆ ಸರಿದು ಸಾಳ್ವ ವಂಶವು ಅಧಿಕಾರಕ್ಕೆ ಬರುತ್ತಿದ್ದಂತೆ ವೀರಶೈವ ಧರ್ಮದ ಅವನತಿಯೂ ಆರಂಭವಾಯಿತು. ರಾಜಾಶ್ರಯ ತಪ್ಪಿ ವೀರಶೈವ ಧರ್ಮ, ಸಾಹಿತ್ಯ ರಚನೆ ಪ್ರಸಾರಗಳಲ್ಲಿ ಉಂಟಾದ ಆತಂಕಗಳನ್ನು ದೂರಮಾಡಿ, ಮರುಜನ್ಮ ನೀಡಿದವರು ತೋಂಟದ ಸಿದ್ಧಲಿಂಗ ಶಿವಯೋಗಿಗಳು ಎಂದರೆ ತಪ್ಪಾಗದು. ಏಕೆಂದರೆ "ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರ ಮುಂದಾಳುತನದಲ್ಲಿ ನಡೆದ ಕ್ರಾಂತಿಯ ನಂತರ ವಚನ ರಚನೆ ನಿಂತುಹೋಯಿತು. ಆ ಮೇಲಿನ ಸುಮಾರು ಮೂರು ಶತಮಾನಗಳಲ್ಲಿ ಶರಣರ ಬಗೆಗೆ ರಗಳೆ, ಕಾವ್ಯ ಪುರಾಣಗಳು ರಚಿತವಾದವು. ಆದರೆ ವಚನಗಳನ್ನು ಯಾರೂ ರಚಿಸಲಿಲ್ಲ. ವಚನ ರಚನೆ ಮತ್ತೆ ಪ್ರಾರಂಭವಾದುದು

ಸಿದ್ಧಲಿಂಗ ಶಿವಯೋಗಿಗಳು ಮತ್ತು ಅವರ ಶಿಷ್ಯ ಪರಂಪರೆಯಿಂದಾಗಿ"[೮೪] ಎಂದು ಡಾ.ಎನ್.ಜಿ. ಮಹಾದೇವಪ್ಪ ಅಭಿಪ್ರಾಯಪಡುತ್ತಾರೆ.

"ಹದಿನಾರನೇ ಶತಮಾನದಲ್ಲಿ ಏಳುನೂರೊಂದು ಶಿಷ್ಯಸಮುದಾಯದೊಂದಿಗೆ ನಿರಂಜನ ಮೂರ್ತಿಯಾಗಿ, ಶಿವಯೋಗಸೂರ್ಯನಂತೆ ನಾಡಿನಲ್ಲೆಲ್ಲಾ ಸಂಚರಿಸಿ, ಷಟ್‌ಸ್ಥಲ ಬೋಧೆಯ ಮೂಲಕ ಜನಮನವನ್ನು ಬೆಳಗುತ್ತ ಧರ್ಮಜಾಗೃತಿ ಹಾಗೂ ಶರಣಧರ್ಮ ಸಾಹಿತ್ಯ ಸಂಸ್ಕೃತಿಗಳ ಪುನರುಜ್ಜೀವನ ಕಾರ್ಯವನ್ನು ವ್ಯಾಪಕವಾಗಿ ಕೈಗೊಂಡ ಇವರಿಗೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅದರಲ್ಲಿಯೇ ಶರಣ ಸಾಹಿತ್ಯ ಚರಿತ್ರೆಯಲ್ಲಿ ತುಂಬ ಗೌರವದ ಸ್ಥಾನ ಮೀಸಲಾಗಿದೆ".[೮೫]

ಹೀಗೆ ಎಡೆಯೂರು ತೋಂಟದ ಸಿದ್ಧಲಿಂಗ ಯತಿಗಳು ಅವರ ಅಪಾರ ಶಿಷ್ಯರು ಸ್ವತಃ ವಚನ ರಚನೆ, ಸಂಪಾದನೆ, ವ್ಯಾಖ್ಯಾನ ಬರೆಯಲು ಪ್ರೋತ್ಸಾಹ, ಪ್ರೇರಣೆ ನೀಡಿದರು. ತನ್ಮೂಲಕ ಲಿಂಗಾಯತ ಧರ್ಮದ ಪ್ರಸಾರಕ್ಕಾಗಿ ಜಂಗಮರಾಗಿ ಸಂಚರಿಸಿ, ನಾಡಿನುದ್ದಗಲಕ್ಕೂ ಸಂಚಲನವುಂಟುಮಾಡಿದರು. '**ದ್ವಿತೀಯ ಅಲ್ಲಮ**'ನೆಂಬ ಖ್ಯಾತಿಪಡೆದ ಇವರು ಅಲ್ಲಮಪ್ರಭುವಿನ ಅನುಭಾವ, ಬಸವಣ್ಣನ ಭಕ್ತಿ, ಮತ್ತು ಸಂಘಟನಾ ಶಕ್ತಿ, ಚೆನ್ನಬಸವಣ್ಣನ ಜ್ಞಾನ ಹೀಗೆ ಬಹುಮುಖ ಪ್ರತಿಭೆಯ ಸಂಗಮವಾಗಿ ಮಾಡಿದ ಸಾಧನೆಗಳು ಚಾರಿತ್ರಿಕ ಮಹತ್ವ ಪಡೆದಿವೆ.

ಅಷ್ಟೆ ಏಕೆ, ಸಿದ್ಧಲಿಂಗಯತಿಗಳ ಜೀವನ–ಸಾಧನೆ–ಸಿದ್ಧಿ ಕುರಿತು ನಾಡಿನ ಶಾಸನಗಳು, ಕಾವ್ಯಗಳು ರಚನೆಗೊಂಡು ಇವರ ಮಹೋನ್ನತವಾದ ಚರಿತ್ರೆಯನ್ನು ಕಟ್ಟಿಕೊಡಲು ಯತ್ನಿಸಿವೆ. ಡಾ. ವೀರಣ್ಣ ರಾಜೂರ "ಅವರು ೧. ಸಿದ್ದಲಿಂಗರ ಜೀವನ ಚರಿತ್ರೆಗಾಗಿಯೇ ಸಂಪೂರ್ಣ ಮೀಸಲಾದ ಕೃತಿಗಳು ೨. ಸಿದ್ಧಲಿಂಗರ ಚರಿತ್ರೆಯನ್ನು ಪ್ರಾಸಂಗಿಕವಾಗಿ ಹೇಳುವ ಕೃತಿಗಳು ೩. ಸಿದ್ಧಲಿಂಗರ ಮಹಿಮಾತಿಶಯಗಳನ್ನು ಸ್ತುತಿಸುವ ಸ್ತೋತ್ರರೂಪದ ಕೃತಿಗಳು"[೮೬] ಎಂದು ವಿಂಗಡಿಸಿರುವುದನ್ನು ವಿವರವಾಗಿ ನೋಡಿದಾಗ ಅವರು ಜೀವಿಸಿದಾಗ ಮತ್ತು ಅನಂತರದ ಕಾಲದಲ್ಲೂ ಬೀರಿದ ಪ್ರಭಾವ ನಿಜಕ್ಕೂ ವಿಸ್ಮಯವುಂಟು ಮಾಡುತ್ತದೆ. ಇಷ್ಟಾಗಿಯೂ ಇವರ ಜೀವನದ ಸವಿವರಗಳು ನಿಖರವಾಗಿ ಲಭ್ಯವಾಗಿಲ್ಲ.

ಇದಕ್ಕೆ ಕಾರಣ, ಲಭ್ಯ ಆಕರಗಳೆಲ್ಲಾ –"ಐತಿಹಾಸಿಕ ಸಂಗತಿಗಳಿಗಿಂತ ಅಲೌಕಿಕ ಪವಾಡಗಳಿಗೇ ಹೆಚ್ಚಿನ ಮಹತ್ವ ಕೊಟ್ಟಿರುವದರಿಂದ ಸಿದ್ಧಲಿಂಗೇಶ್ವರರ ಸ್ಪಷ್ಟ ಚರಿತ್ರೆಯನ್ನು ನಿರೂಪಿಸುವುದು ಇನ್ನೂ ಸಾಧ್ಯವಾಗಿಲ್ಲ. ಆದರೂ ಕಾವ್ಯ, ಶಾಸನ ಮತ್ತು ಅವರೇ ರಚಿಸಿದ ವಚನಗಳ ಆಧಾರದಿಂದ ಅವರ ಜೀವನ ಚರಿತ್ರೆಯನ್ನು....."[೮೭] ಅರಿಯಲು ವಿದ್ವಾಂಸರು ಪ್ರಯತ್ನಿಸಿದ್ದಾರೆ.

ಚಾಮರಾಜ ನಗರ ಜಿಲ್ಲೆಯ ಹರದನಹಳ್ಳಿ ಸಿದ್ಧಲಿಂಗರ ಹುಟ್ಟೂರು. ಬ್ರಾಹ್ಮಣ ಕವಿ ಹೇರಂಬನು 'ಸಿದ್ಧಲಿಂಗ ಸಾಂಗತ್ಯ'ದಲ್ಲಿ ಪೂರ್ವಾಶ್ರಮದ ವಿವರಣೆ ನೀಡುತ್ತಾ ಮಲ್ಲಿಕಾರ್ಜುನ ಮತ್ತು ಜ್ಞಾನಾಂಬೆ ಸಿದ್ದಲಿಂಗೇಶ್ವರರ ತಂದೆ–ತಾಯಿಗಳು. ಗೋಸಲ ಚೆನ್ನಬಸವೇಶ್ವರ ದೇವರ ಶಿಷ್ಯರಾಗಿದ್ದರೆಂಬುದು ಇವರ ವಚನಗಳಿಂದ ತಿಳಿಯುತ್ತದೆ. ಅಪಾರ ಶಿಷ್ಯರನ್ನು ಹೊಂದಿದ್ದ ಇವರು ದೇಶಸಂಚಾರಗೈದು.

ತುಮಕೂರು ಜಿಲ್ಲೆ ಕಗ್ಗೆರೆಯ ತೋಟವೊಂದರಲ್ಲಿ ಅನುಷ್ಠಾನಗೈದದ್ದರಿಂದ "ತೋಂಟದ ಸಿದ್ಧಲಿಂಗ ಯತಿಗಳು" ಎಂಬ ಹೆಸರು ಬಂದಿದೆ. ಇಲ್ಲಿಯೇ ಹಲವು ವರ್ಷ ತಪಸ್ಸು ಮಾಡಿ, ಐಕ್ಯರಾದ ಕಾರಣ– "ಎಡೆಯೂರ ಸಿದ್ಧಲಿಂಗೇಶ್ವರ" ಎಂಬ ಹೆಸರು ಪ್ರಚಲಿತವಾಗಿದೆ ಎಂದು ತಿಳಿದುಬರುತ್ತದೆ. ಅಂತ್ಯಕಾಲದಲ್ಲಿ ಶಿಷ್ಯ ಬೋಳಬಸವರಿಗೆ ನಿರಂಜನ ಪಟ್ಟಾಧಿಕಾರವಹಿಸಿದ ಸಿದ್ಧಲಿಂಗರು ನಿರ್ವಿಕಲ್ಪ ಸಮಾಧಿ ಹೊಂದಿದರು.

**ಕಾಲ**: ತೋಂಟದ ಸಿದ್ಧಲಿಂಗ ಯತಿಗಳ ಜೀವಿತಾವಧಿ ಕಾಲದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಸಿ. ಮಹದೇಪ್ಪ ೧೪೦೦–೧೪೭೦; ಡಾ. ಆರ್.ಸಿ. ಹೀರೇಮಠ ೧೪೦೦–೧೪೮೦; ಎಚ್. ದೇವಿರಪ್ಪ ೧೪೫೦– ೧೫೦೦; ಕವಿಚರಿತೆಕಾರರು ೧೪೭೦; ಬಿ. ಶಿವಮೂರ್ತಿಶಾಸ್ತ್ರಿ ೧೫ನೇ ಶತಮಾನ; ಡಾ. ಎಂ.ಎಂ. ಕಲಬುರ್ಗಿ ೧೬ನೇ ಶತಮಾನದ ಮೂರನೆಯ ಪಾದ; ಎಂ.ಆರ್. ಶ್ರೀ ೧೫೬೧; ಡಾ. ಎಲ್ ಬಸವರಾಜು ೧೫೦೦–೧೫೮೪; ಡಾ.ಎಂ. ಚಿದಾನಂದಮೂರ್ತಿ ೧೫೬೧–೧೫೮೪; ಡಾ.ಎಸ್. ಶಿವಣ್ಣ ೧೫೬೧.[೮೮]

ಹೀಗೆ, ಬಹುತೇಕ ವಿದ್ವಾಂಸರು ವಚನ, ಕಾವ್ಯಗಳ ಆಧಾರದ ಮೇಲೆ ಸಿದ್ಧಲಿಂಗಯತಿಗಳ ಜೀವಿತ ಕಾಲವನ್ನು ೧೪೦೦ ರಿಂದ ೧೫೮೪ರ ವರೆಗೂ ಇರಬಹುದೆಂದು ಊಹಿಸಿದ್ದಾರೆ. ಆದರೆ, ಹಂಪಿ ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಶೋಧಕ ಡಾ. ಡಿ.ವಿ. ಪರಶಿವಮೂರ್ತಿಯವರು ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನ ಬೆಳ್ಳೂರು ಹೋಬಳಿಯ ಕಾಮಿಡಿಹಳ್ಳಿಯಲ್ಲಿ ಪತ್ತೆಯಾದ ಶಿಲಾಶಾಸನದ ಆಧಾರದಿಂದ "ಸಿದ್ಧಲಿಂಗಯತಿಗಳ ಕಾಲವನ್ನು ಕ್ರಿ.ಶ. ೧೪೯೦ ಅಥವಾ ೧೪೯೫ರ ನಡುವೆ ಜನಿಸಿ ೧೫೮೪ರ ವರೆಗೂ ಬದುಕ್ಕಿದ್ದರೆಂದು ಹೇಳಬಹುದಾಗಿದೆ"[೮೯] ಎಂದು ಉಲ್ಲೇಖಿಸಿರುವುದರಿಂದ ಪ್ರಸ್ತುತ ಇವರ ಶಾಸನಾಧಾರಿತ ಅಭಿಪ್ರಾಯವು ಸತ್ಯಕ್ಕೆ ಸಮೀಪವಾಗಿದ್ದುದರಿಂದ ಸ್ವೀಕರಿಸಬಹುದಾಗಿದೆ. ಹಾಗೂ ಸಿದ್ಧಲಿಂಗ ಯತಿಗಳು ಕ್ರಿ.ಶ. ೧೫೨೧, ಎಪ್ರಿಲ್ ೧೭ ರಂದು ಹಂಪೆ ವಿರೂಪಾಕ್ಷನ ದರ್ಶನ ಪಡೆದರಲ್ಲದೇ, ಅರಸ ಕೃಷ್ಣದೇವರಾಯನ ರಾಣಿ ಚಿನ್ನಾದೇವಿ ಕಾಮಿಡಿಹಳ್ಳಿಯನ್ನು ದಾನವಾಗಿ ನೀಡಿದಳೆಂದು ಶಾಸನ ತಿಳಿಸುತ್ತದೆ. ಅಂದರೆ, ಕ್ರಿ.ಶ. ೧೫೭೧ರ ವೇಳೆಗೆ ಪ್ರಸಿದ್ಧರಾಗಿದ್ದ ಸಿದ್ಧಲಿಂಗರು ಬಹುಶಃ ೨೫ ರಿಂದ ೩೦ ವರ್ಷದವರಾಗಿದ್ದಿರಬಹುದೆಂದು ಊಹಿಸುವ ಡಾ. ಡಿ.ವಿ. ಪರಶಿವಮೂರ್ತಿಯವರ ಅಭಿಪ್ರಾಯ ಗಮನಾರ್ಹವಾದುದು ಮತ್ತು ಸತ್ಯಕ್ಕೆ ಹತ್ತಿರವಾಗಿದೆಯೆನ್ನಬಹುದು.

ತೋಂಟದ ಸಿದ್ಧಲಿಂಗರು ೭೦೧ ವಚನಗಳನ್ನು ರಚಿಸಿದ್ದಾರೆ. ಅವೆಲ್ಲಾ 'ಷಟ್‌ಸ್ಥಲಜ್ಞಾನಸಾರಾಮೃತ' ವಚನ ಸಂಕಲನದಲ್ಲಿವೆ. "ಈ ವಚನ ಸಂಖ್ಯೆ ಏಳನೂರೊಂದು ವಿರಕ್ತರನ್ನು ಸಂಕೇತಿಸುವಂತಿದೆ"[೯೦] ಎಂಬ ಅಭಿಪ್ರಾಯವು ಗಮನಿಸಬೇಕಾದುದು. ಸಿದ್ಧಲಿಂಗರ ವಚನಾಂಕಿತ "ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ".

ತೋಂಟದ ಸಿದ್ಧಲಿಂಗ ಯತಿಗಳ ಶಿವಯೋಗಾನುಭವದ ಬೆಳಕಿನಲ್ಲಿ ಅರಳಿದ ಸುಂದರ ಪುಷ್ಪಗಳಂತಿರುವ ವಚನಗಳನ್ನು ಸ್ಥಲಕಟ್ಟಿನಲ್ಲಿ ಸಂಯೋಜಿಸಲಾಗಿದೆ. ಹೀಗಾಗಿ, 'ಷಟ್‌ಸ್ಥಲಜ್ಞಾನ

ಸಾರಾಮೃತ' ವಚನ ಸಂಕಲನದಲ್ಲಿ ೨೧ ಸ್ಥಲಗಳಲ್ಲಿ ವಚನಗಳನ್ನು ವಿಭಜಿಸಿರುವದನ್ನು ಕಾಣುತ್ತೇವೆ. ಉದಾಹರಣೆಗೆ ೧. ಸರ್ವಶೂನ್ಯ ನಿರಾಲಂಬ ಸ್ಥಲ. ೨. ಶೂನ್ಯಲಿಂಗಸ್ಥಲ ೩. ನಿಃಕಲಲಿಂಗಸ್ಥಲ ೪. ಮಹಾಲಿಂಗಸ್ಥಲ ೫. ಅಂಗಲಿಂಗೋದ್ಬವಸ್ಥಲ ೬. ಪಂಚಮೂರ್ತಿಲಿಂಗಸ್ಥಲ ೭. ಪಿಂಡಸ್ಥಲ ೮. ಪಿಂಡಜ್ಞಾನಸ್ಥಲ ೯. ಸಂಸಾರಹೇಯಸ್ಥಲ ೧೦. ಗುರುಕರುಣಸ್ಥಲ ೧೧. ಲಿಂಗಧಾರಣ ಸ್ಥಲ ೧೨. ವಿಭೂತಿಸ್ಥಲ ೧೩. ರುದ್ರಾಕ್ಷಿಸ್ಥಲ ೧೪. ಪಂಚಾಕ್ಷರಿ ಸ್ಥಲ ೧೫. ಭಕ್ತಸ್ಥಲ ೧೬. ಮಾಹೇಶ್ವರ ಸ್ಥಲ ೧೭. ಪ್ರಸಾದಿಸ್ಥಲ ೧೮. ಪ್ರಾಣಲಿಂಗಿಸ್ಥಲ ೧೯. ಶರಣಸ್ಥಲ ೨೦. ಐಕ್ಯಸ್ಥಲ ೨೧. ನಿರವಯಸ್ಥಲ

ಇಲ್ಲಿಯ ಭಕ್ತಸ್ಥಲದಿಂದ ಐಕ್ಯಸ್ಥಲದವರೆಗೆ ಆರು ಸ್ಥಲಗಳಲ್ಲಿ ಮತ್ತೆ ಬಕ್ತನ ಭಕ್ತ. ಭಕ್ತನ ಮಹೇಶ ಹೀಗೆ ಒಂದೊಂದರಲ್ಲಿ ಆರರಂತೆ ೩೬ ಅವಾಂತರ ಸ್ಥಲಗಳನ್ನು ಮಾಡಲಾಗಿದೆ. ಪ್ರತಿ ಸ್ಥಲದ ಆರಂಭದಲ್ಲಿ 'ಸೂತ್ರ' ಕೊಡಲಾಗಿದ್ದು ಇದು ಆಯಾ ಸ್ಥಲದ ಲಕ್ಷಣವನ್ನು ಸಂಕ್ಷೇಪದಲ್ಲಿ ತಿಳಿಸುತ್ತದೆ. ಕೃತಿಯ ಅಂತ್ಯದಲ್ಲಿ "ಅಂತು ಸ್ಥಲ ೨೧ಕ್ಕಂ ವಚನ ೭೦೧ಕ್ಕಂ ಮಂಗಳ ಮಹಾ" ಎಂದು ಮುಕ್ತಾಯಗೊಳಿಸಿರುವುದರಿಂದ ಇಲ್ಲಿ ೨೧ ಸ್ಥಲಗಳೇ ಪ್ರಮುಖವೆಂದು ತಿಳಿಯಬಹುದು. ಹೀಗೆ, ವಚನ ಸಾಹಿತ್ಯದ ದ್ವಿತಿಯ ಘಟ್ಟದ ಕೇಂದ್ರ ವ್ಯಕ್ತಿಯಾಗಿ, ಏಳುನೂರೊಂದು ವಿರಕ್ತರ ನೇತಾರರಾಗಿ, ಸ್ವತಃ ವಚನಗಳನ್ನು ರಚಿಸಿದ ತೋಂಟದ ಸಿದ್ಧಲಿಂಗರು ಅಪಾರ ಶಿಷ್ಯವೃಂದಕ್ಕೆ ಪ್ರೇರಣೆ ನೀಡಿದರು. ಶರಣಧರ್ಮದ ಪ್ರಸಾರದಲ್ಲಿ ಚಾರಿತ್ರಿಕ ಪಾತ್ರವಹಿಸಿದರು.

ಜೀವಾತ್ಮನು ಪರಮಾತ್ಮನಾಗುವ ಸಾಧನ ಮಾರ್ಗಗಳು ಷಟ್‌ಸ್ಥಲಗಳು. ಈ ಆರು ಸ್ಥಲಗಳನ್ನು ತಾತ್ವಿಕ ನೆಲೆಯಲ್ಲಿ ಅರ್ಥೈಸಿಕೊಳ್ಳಲು, ಭಕ್ತನು ಶಿವಯೋಗ ಸಿದ್ದಿಪಡೆಯಬೇಕೆಂಬುದು ತೋಂಟದ ಸಿದ್ಧಲಿಂಗಯತಿಗಳ 'ಷಟ್‌ಸ್ಥಲ ಜ್ಞಾನ ಸಾರಾಮೃತ' ವಚನ ಸಂಕಲನದ ಉದ್ದೇಶವೆನ್ನಬಹುದು. ಸ್ವತಃ ತಪಸ್ವಿಯಾಗಿ, ಶಿವಯೋಗ ಸಾಧಕರಾಗಿ ಮಹೋನ್ನತವಾದ ಜೀವನ ಕಳೆದ ಸಿದ್ಧಲಿಂಗರು ಆರಂಭದ ಆರು ಸ್ಥಲಗಳಲ್ಲಿ ಪರಶಿವತತ್ವದ ಸ್ವರೂಪ, ಅದರಲ್ಲಿ ಜೀವಾತ್ಮವು ಲೀನವಾಗುವ ರೀತಿಯನ್ನು ತಿಳಿಸುತ್ತಾರೆ. ಉಳಿದ ೧೫ ಸ್ಥಲಗಳಲ್ಲಿ ಆ ಜೀವಾತ್ಮನ ವಿಕಾಸದ ಹಂತ ಹಾಗೂ ಪರಮಾತ್ಮನಲ್ಲಿ ನಿರವಯವಾಗುವ ರೀತಿ ವಚನಗಳಲ್ಲಿ ಅಭಿವ್ಯಕ್ತವಾಗಿದೆ. ಡಾ. ಆರ್.ಸಿ. ಹೀರೇಮಠರು– "ಇಲ್ಲಿ ಕ್ರಮ ಸಮುಚ್ಚಯಕ್ಕೆ ಪ್ರತಿಯಾಗಿ ಸಮಸಮುಚ್ಚಯವಿದೆ. ಅಂದರೆ, ಪ್ರತಿಯೊಂದು ಸ್ಥಲದಲ್ಲಿಯೂ ಅವಾಂತರ ಷಟ್‌ಸ್ಥಲಗಳು ಅಂತರ್ಗತವಾಗಿವೆ. ಆದುದರಿಂದ ಆವಾವ ಸ್ಥಲದಲ್ಲಿ ನಿಂದರೂ ಐಕ್ಯವನ್ನು ಸಾಧಿಸಬಹುದು"[೯] ಎನ್ನುತ್ತಾರೆ.

ತೋಂಟದ ಸಿದ್ಧಲಿಂಗರ ವಚನಗಳನ್ನು ಡಾ. ವೀರಣ್ಣ ರಾಜೂರರು ಎರಡು ನೆಲೆಗಳಲ್ಲಿ ವಿವೇಚಿಸಲು ಪ್ರಯತ್ನಿಸುತ್ತಾರೆ – ೧. ತಾತ್ವಿಕ ನೆಲೆ ೨. ಅನುಭಾವಿಕ ನೆಲೆ. ತಾತ್ವಿಕ ವಚನಗಳಲ್ಲಿ ಶಾಸ್ತ್ರನಿಷ್ಠೆ, ಧರ್ಮಶ್ರದ್ಧೆ ಎದ್ದು ತೋರಿದರೆ, ಅನುಭಾವಿಕ ವಚನಗಳಲ್ಲಿ ಕವಿಹೃದಯ ಕಣ್ದೆರೆದಿದೆ. ಆದರೂ ತತ್ವದ ಕೈ ಮೇಲಾಗಿದೆ. ತತ್ವ ನಿರೂಪಣೆಯ ವಚನಗಳು ಹೆಚ್ಚು ದೀರ್ಘವಾಗಿದ್ದರೆ,

ಅನುಭಾವಪ್ರಧಾನ ವಚನಗಳು ಚಿಕ್ಕವಾಗಿವೆ; ಭಾವಸಾಂದ್ರತೆಯನ್ನು ಪಡೆದುಕೊಂಡಿವೆ[೨] ಎಂದು ಹೇಳಿರುವುದು ಸಿದ್ಧಲಿಂಗರ ವಚನ ವೈಶಿಷ್ಟ್ಯದ ಗತಿ ಗಮನಕ್ಕೆ ಬರುತ್ತದೆ.

ಸರ್ವಶೂನ್ಯ ನಿರಾಲಂಬ ಸ್ಥಲದಿಂದ ಪಿಂಡಸ್ಥಲದ ಕೊನೆಯವರೆಗೂ ತಾತ್ವಿಕ ನೆಲೆಯ ವಚನಗಳನ್ನು ಕಾಣುತ್ತೇವೆ. ಉದಾಹರಣೆಗೆ– "ಹರಿವ ನೀರ ಮಧ್ಯದಲ್ಲಿ ಉರಿವ ಜ್ಯೋತಿಯ ಬೆಳಗ ನೋಡಿ ಕಂಡೆನಯ್ಯ", "ಚಿನ್ನದ ಗಿರಿಯಲ್ಲಿ ಚಿನ್ಮೂರ್ತಿಯ ಕಂಡೆನಯ್ಯ" "ಮಿಂಚಿನ ಪ್ರಭೆಯಲ್ಲಿ ಪಂಚವದನನ ಕಂಡೆನಯ್ಯ" ಎಂದು ಅರ್ಥಪೂರ್ಣವಾಗಿ ಹೇಳುತ್ತಾರೆ. ಸಂಸಾರದ ವಿಷಯ ಸುಖಗಳು ನಿರುಪಯುಕ್ತವೆಂಬುದನ್ನು– "ಉರಿಗೆ ತೋರಿದ ಬೆಣ್ಣೆ ಕರಗುವಂತೆ ಅಸಿಯ ಜವ್ವನೆಯರ ಕಂಡು ವಿಷಯಾತುರರಾಗಿ ಕುಸಿವುತ್ತಿಪ್ಪರು ನೋಡಾ", "ಹೆಂಗಳೊಲವೆಂಬುದು ಅಂಗಜನ ಅರಮನೆ; ಭಂಗಬಡುತ್ತಿದ್ದಾರೆ ನೋಡಾ ತ್ರೈಜಗವೆಲ್ಲ', "ವಿಷಯ ರತಿಯುಳ್ಳವಂಗೆ ಈಶ್ವರರತಿಯಿನ್ನೆಲ್ಲಿಯದೊ?" "ಹಾಲೋಗರವನುಂಡು ಬಾಲೆಯರ ತೋಳ ಮೇಲೊರಗಿದೊಡೆ ಬಾರದಭವದಲ್ಲಿ ಬಪ್ಪುದು ತಪ್ಪುದು ಕಾಣಿರಣ್ಣಾ" "ಯುವತಿಯರ ವ್ಯವಹಾರವೆಂಬ ವಿಕಳತೆ ಹತ್ತಿ ಯೋಗದ ಸಮತೆ ಸಡಿಲಿತ್ತು ನೋಡಾ, ಸತ್ಯ ಸತ್ತಿತ್ತು, ಭಕ್ತಿಯರತಿತ್ತು" ಎನ್ನುತ್ತಾರೆ.

ಸ್ವತಃ ಸಿದ್ಧಲಿಂಗ ಶಿವಯೋಗಿಗಳು ಹೆಣ್ಣು–ಹೊನ್ನು–ಮಣ್ಣಿನ ಆಸೆಯಲ್ಲಿ ತೊಳಲುತ್ತಿದ್ದಾಗ ಅದರಿಂದ ಕಳಚಿಕೊಳ್ಳಲು ಯತ್ನಿಸಿರುವುದನ್ನು ಅವರ ವಚನಗಳಿಂದ ಅರಿಯಬಹುದು. ಉದಾಹರಣೆಗೆ "ಕಾಮದಿಂದ ಕರಗಿದೆನಯ್ಯ, ಕ್ರೋಧದಿಂದ ಕೊರಗಿದೆನಯ್ಯ ಅರಿಷಡ್ವರ್ಗಂಗಳ ಕಳೆದು, ಎನ್ನನಿರಹಂಕಾರಿ ಎಂದೆನಿಸಯ್ಯಾ (ವ–೧೨೭) "ಎನ್ನ ಮನಸ್ಸು ಹೊನ್ನು ಹೆಣ್ಣು ಮಣ್ಣ ನೆನೆನೆನೆದು ನಿಮ್ಮ ನೆನೆಯಲೊಲ್ಲದು ನೋಡಾ....."(ವ–೧೩೧) "ಸಂಸಾರದಲ್ಲಿ ಸವೆಸವೆದು ಅವಿವೇಕಿಯಾದೆನಯ್ಯಾ ಎನ್ನ ಅವಿವೇಕವ ಕಳೆದು ಶಿವತತ್ವವಿವೇಕವನಿತ್ತು ಕರುಣಿಸಯ್ಯ" (ವ–೧೩) "ಜೀವಭಾವದ ಭ್ರಮೆಯ ಕಳೆಯಯ್ಯ"(ವ–೧೩೨) "ಈ ಮಾಯಿ ಸಂಬಂಧವಾದ ದೇಹ ತಾನೆಂದೆಂಬ ಮೂಢಾತ್ಮರ ನಾನೇನೆಂಬೆನಯ್ಯ (ವ–೧೩೪) ಹೀಗೆ ಭವಾರಣ್ಯವನ್ನು ದಾಟಲು ಬಸವಾದಿ ಶಿವಶರಣರನ್ನು ಸ್ಮರಿಸುವ ಸಿದ್ಧಲಿಂಗರು – "ಚೆನ್ನಬಸವಣ್ಣನೇ ಎನ್ನ ಅಂತರಂಗದ ಸುಜ್ಞಾನ ಪ್ರಾಣಲಿಂಗವೆಂದರಿದು ಪ್ರಾಣಲಿಂಗಿಯಾದೆನು ಕಾಣಾ" ಎಂದರೆ; ಬಸವಣ್ಣನವರು ಸರ್ವಾಂಗಲಿಂಗವಾದ ಪರಿಯನ್ನು –

'ಜೀವದ್ವಯವಾದ ಬಸವಣ್ಣನೇ
ಎನ್ನಂಗಲಿಂಗ, ಪ್ರಾಣಲಿಂಗ, ಭಾವಲಿಂಗ
ಎನ್ನ ಸರ್ವಾಂಗ ಲಿಂಗವು ಕಾಣಾ.
ಎನ್ನ ಷಡಾಧಾರದಲ್ಲಿ ಸಂಬಂಧವಾದ
ಷಡಕ್ಷರ ಮಂತ್ರವು ಬಸವಣ್ಣನಾದ ಕಾರಣ,
ಬಸವಲಿಂಗಾ, ಬಸವಲಿಂಗಾ, ಬಸವಲಿಂಗಾ ಎಂದು
ಜಪಿಸಿ ಭವಾರಣ್ಯವ ದಾಂಟಿದೆನು" ಎಂಬ ವಚನದಲ್ಲಿ ಕಾಣಬಹುದು.

ಅಲ್ಲದೇ ಭಕ್ತಸ್ಥಲದ ಲಕ್ಷಣ (೨೧೨), ಶರಣಸ್ಥಲದ ಲಕ್ಷಣ (೪೪೩) ಸೃಷ್ಟಿಯ ವಿಕಾಸಕ್ರಮ (೩೮,೩೯) ಪಂಚಮೂರ್ತಿ ಲಿಂಗದ ಸ್ವರೂಪ (೬೩), ಮಂತ್ರ ಮಹತ್ವ (೧೭೩), ಅಷ್ಟಾಂಗಯೋಗ, ಶಿವಯೋಗದ ಲಕ್ಷಣ (೩೫೮, ೩೬೪), ಅರ್ಪಣ ವಿಧಾನ (೪೧೪) ಮತ್ತಿತರ ವಚನಗಳಲ್ಲಿ ಸಿದ್ಧಲಿಂಗರ ತಾತ್ವಿಕ ನಿಲವು, ಶಾಸ್ತ್ರಪ್ರಭುತ್ವ, ವ್ಯಾಪಕವಾದ ಅಧ್ಯಯನದ ಅರಿವು ನಮಗಾಗುತ್ತದೆ".[೯]

ಅದೇ ರೀತಿ ಧರ್ಮ, ತತ್ವ, ಸಾಹಿತ್ಯವನ್ನೊಳಗೊಂಡ ಅನುಭಾವದ ವಚನಗಳನ್ನು ತೋಂಟದ ಸಿದ್ಧಲಿಂಗರು ರಚಿಸಿದ್ದು ಕೆಲವು ಮಾದರಿ ಗಮನಿಸಬಹುದು.

"ಸುಧೆಯೊಳಗೆ ವಿಷವುಂಟೆ? ಮಧುರದೊಳಗೆ ಕಹಿಯುಂಟೆ?
ದಿನಮಣಿಯೊಳಗೆ ಕಪ್ಪುಂಟೆ? ಬೆಳುದಿಂಗಳೊಳಗೆ ಕಿಚ್ಚುಂಟೆ?
ಅಮೃತ ಸಾಗರದೊಳಗೆ ಬೇವಿನ ಬಿಂದುವುಂಟೆ? (ವ-೫೮)

"ಮಸಿ ಎಂದಾದರೂ ಬೆಳ್ಪಾದುದುಂಟೆ?
ಅಂಬರ ಮಾಸಿದರೆ ತೊಳೆದರೆ ಬೆಳ್ಪಹುದಲ್ಲದೆ
ಮಲದಲ್ಲಿ ಸೀರೆಯ ಮಾಡಿ ತೊಳೆದರೆ ಬಿಳಿದಾಗಬಲ್ಲುದೆ?" (ವ-೫೯)

"ಕತ್ತಲೆಯನೊಳಕೊಂಡ ಬೆಳಕಿನಂತೆ
ಪಕ್ಷಿಯನೊಳಕೊಂಡ ತತ್ತಿಯಂತೆ
ಮುತ್ತನೊಳಕೊಂಡ ಚಿಪ್ಪಿನಂತೆ
ಸಾಗರವನೊಳಕೊಂಡ ಶಶಿಯಂತೆ
ಜಗವನೊಳಕೊಂಡ ಆಕಾಶದಂತೆ
ಎನ್ನ ನೀವು ಒಳಕೊಂಡಿರಿ" (ವ-೨೬೨)

"ಹೊನ್ನು ತನ್ನ ಬಣ್ಣದ ಲೇಸ ತಾನರಿಯದಂತೆ
ಬೆಲ್ಲ ತನ್ನ ಮಧುರವ ತಾನರಿಯದಂತೆ
ಪುಷ್ಪ ತನ್ನ ಪರಿಮಳವ ತಾನರಿಯದಂತೆ
ಮನವು ಮಹಾಲಿಂಗದಲ್ಲಿ ಲಯವಾಯಿತು" (ವ-೨೬೩)

ಹೀಗೆ ಶರಣನಿಗೂ ಲಿಂಗಕ್ಕೂ ಭೇದವಿಲ್ಲ, ದ್ವೈತಕ್ಕೆ ಮುಕ್ತಿಯಿಲ್ಲ, ಗುರು ನರನಲ್ಲ, ಮಹಾಲಿಂಗದೊಳಗೆ ಲೀನವಾಗುವ ಲಿಂಗಾಂಗ ಸಾಮರಸ್ಯ ಕುರಿತಾದ ಅರ್ಥಸ್ಫುರಿಸುವ ವಚನಗಳು ಇವರ ಲೋಕಾನುಭವಕ್ಕೆ, ಕಾವ್ಯಾನುಭವಕ್ಕೆ ಸಾಕ್ಷಿಯಾಗಿವೆ. "ಹುಲಿಯ ಬಣ್ಣಕ್ಕೆ ನರಿ ಮೈಸುಟ್ಟುಕೊಂಡಂತೆ, ನವಿಲಾಡಿತೆಂದು ಕೆಂಬೋತ ಪಕ್ಕವ ತೆರಕೊಂಡಂತೆ, "ಕೋಗಿಲೆ ಸರಗೈಯ್ದುದೆಂದು ಕಾಗೆ ಕರ್ರೆಂದಂತೆ", "ಕೆರೆಯೊಡೆದ ಬಳಿಕ ತೂಬು ತಡೆಯಬಲ್ಲುದೆ?" ಮತ್ತಿತರ ಉಪಮೆಗಳನ್ನು ವಚನಗಳಲ್ಲಿ ಅರ್ಥಪೂರ್ಣವಾಗಿ ಬಳಸಿದ್ದಾರೆ.

ಅಲ್ಲಮಪ್ರಭುವಿನಂತೆ ಬೆಡಗಿನ ವಚನ ರಚಿಸಿರುವ ಸಿದ್ಧಲಿಂಗರು–

> "ಅದ್ಭುತದಾಕಾಶದಲ್ಲಿ ಶುಭ್ರವರ್ಣದ ಅಂಗನೆ
> ವಿದ್ಯುಲ್ಲತೆಯ ಹಡೆದಳು ನೋಡಾ" (ವ–೩೩೨)

ಅಂದರೆ, ಅದ್ಬುತದ ಆಕಾಶ ಎಂದರೆ ಚಿದಾಕಾಶ, ಅಂದರೆ ಪರಮಾತ್ಮ; ಶುಭ್ರವರ್ಣದ ಅಂಗನೆ ಎಂದರೆ ಶಕ್ತಿ. ವಿದ್ಯುಲ್ಲತೆ ಎಂದರೆ ಪ್ರಕೃತಿ, ಶಿವಶಕ್ತಿಯ ಸಂಯೋಗದಿಂದ ಸೃಷ್ಟಿ ಉದಯವಾಯಿತು ಎಂದರ್ಥ. ಹೀಗೆ, ಸರಳ ಹಾಗೂ ಬೆಡಗಿನ ವಚನಗಳಲ್ಲಿ ಕಾವ್ಯ ಹಾಗೂ ಲೋಕಾನುಭವದ ತೀವ್ರತೆಯನ್ನು, ಲೋಕೋಕ್ತಿಯ ನುಡಿಗಳನ್ನು, ನಿಷ್ಠುರವಾದ ಮಾತುಗಳನ್ನು ಹಲವು ದೃಷ್ಟಾಂತ, ಉಪಮೆಗಳ ಮೂಲಕ ಹೇಳುವ ತೋಂಟದ ಸಿದ್ಧಲಿಂಗರ ವಚನಗಳು ಗಮನಸೆಳೆಯುತ್ತವೆ.

ಹೀಗೆ, ಬಸವ, ಅಲ್ಲಮಾದಿಗಳ ವಚನಗಳ ಪ್ರಭಾವವು ಸಿದ್ಧಲಿಂಗರ ವಚನಗಳಲ್ಲಿ ಕಂಡುಬರುತ್ತದೆ. ಇದನ್ನು ಡಾ. ವೀರಣ್ಣ ರಾಜೂರ ಅವರು "ವಚನದ ರೂಪ, ವಿನ್ಯಾಸ, ವಸ್ತು, ನಿರೂಪಣೆ, ತಂತ್ರ, ಭಾಷೆ, ಅಲಂಕಾರ, ಶೈಲಿ, ನುಡಿಗಟ್ಟು, ಆಶಯ ಎಲ್ಲದರಲ್ಲಿಯೂ ಈ ಪ್ರಭಾವ ಎದ್ದುಕಾಣುತ್ತದೆ. ಆದರೆ ೧೨ನೇ ಶತಮಾನದಲ್ಲಿದ್ದ ಧಾರ್ಮಿಕ, ಸಾಮಾಜಿಕ ಪರಿಸರದ ಒತ್ತಡ, ಆ ಮೂಲಕ ಒದಗಿ ಬಂದ ಭಾವತೀವ್ರತೆ, ಅಭಿವ್ಯಕ್ತಿ ಸಹಜತೆ ಸಿದ್ಧಲಿಂಗರ ವಚನಗಳಲ್ಲಿ ತೋರುವುದಿಲ್ಲ. ಅವರು ವಚನ ರೂಪವನ್ನು ಧರ್ಮತತ್ವದ ಪ್ರಸಾರದ ಉದ್ದೇಶಕ್ಕಾಗಿ ಬಳಸಿಕೊಂಡಿದ್ದಾರೆ"[೯೪] ಎಂದು ಅಭಿಪ್ರಾಯಪಡುತ್ತಾರೆ. ಡಾ. ಜಿ.ಎಸ್. ಶಿವರುದ್ರಪ್ಪನವರು– "ಪರಂಪರಾಗತವಾದ ಅಭಿವ್ಯಕ್ತಿ ಮಾರ್ಗದೊಂದಿಗೆ ತಮ್ಮನ್ನು ಬೆಸೆದುಕೊಳ್ಳುವುದರಲ್ಲಿ ತೃಪ್ತರಾಗಿದ್ದಾರೆ"[೯೫] ಎಂದು ಹೇಳಿರುವುದರಿಂದ ತೋಂಟದ ಸಿದ್ಧಲಿಂಗರ ವಚನಗಳು ಪರಂಪರೆಯ ವಚನಕಾರರ ಪ್ರಭಾವಕ್ಕೆ ಒಳಗಾಗಿರುವಂತೆ ಸಾಕಷ್ಟು ವಚನಗಳಲ್ಲಿ ಸ್ವಂತಿಕೆಯನ್ನು ಮೆರೆದಿದ್ದಾರೆ. ಹೀಗಾಗಿ, ಸಮಕಾಲೀನ ಮತ್ತು ನಂತರದ ಪೀಳಿಗೆಯ ವಚನಕಾರರ ಮೇಲೂ ಪ್ರಭಾವ ಬೀರಿದ್ದನ್ನು ಈಗಲೂ ಇವರ ವಚನಗಳ ಪ್ರಭಾವವಿರುವುದನ್ನು ಅರಿತಾಗ ತಪೋನಿಧಿ ಸಿದ್ಧಲಿಂಗರ ಮಹೋನ್ನತಿಗೆ ಸಾಕ್ಷಿ ಎನ್ನಬಹುದು.

ಈ ಹಿನ್ನೆಲೆಯಲ್ಲಿ ತಾನೇತಾನಾಗಿದ್ದ ವಿಶ್ವತತ್ವವು ಅಂಗ–ಲಿಂಗವಾಗಿ, ಶಕ್ತಿ–ಭಕ್ತಿಯಾಗಿ, ಭಾವವೆಲ್ಲಾ ಶಿವಪ್ರಸಾದವಾಗಿ ಪುನಃ ವಿಶ್ವತತ್ವದಲ್ಲಿ ಐಕ್ಯವಾಗುವ ದಾರ್ಶನಿಕತೆಯನ್ನು ಇಲ್ಲಿನ ವಚನಗಳುದ್ದಕ್ಕೂ ಕಾಣುತ್ತೇವೆ. ಇದನ್ನು ಡಾ.ಬಿ.ಕೆ. ಹಿರೇಮಠರು –"ಸಿದ್ಧಲಿಂಗ ಯತಿಗಳ ಷಟ್‌ಸ್ಥಲ ಜ್ಞಾನ ನಿರೂಪಣೆಗೆ ಇಳಿಜಾರಿನಲ್ಲಿ ಹರಿದು ಹೋಗುವ ಪ್ರವಾಹದ ರಭಸವಿಲ್ಲ. ಆಳ ತುಂಬಿ, ವಿಸ್ತಾರಗೊಂಡು ಹರಿಯುವ ಸಮಾಧಾನವಿದೆ"[೯೬] ಎಂದು ಹೇಳಿರುವುದು ಸಮಂಜಸವಾಗಿದೆ.

**ತೋಂಟದ ಸಿದ್ಧಲಿಂಗರ ಷಟ್‌ಸ್ಥಲ ಜ್ಞಾನಸಾರಾಮೃತ ಟೀಕು**

ಬಸವಾದಿ ಶಿವಶರಣರ ಜೀವನ–ಸಾಧನೆ–ಅನುಭಾವದ ದರ್ಶನವನ್ನು ತಿಳಿಸಲು ಕಾವ್ಯ–ಪುರಾಣಗಳು ರಚನೆಯಾದಂತೆಯೇ ತೋಂಟದ ಸಿದ್ಧಲಿಂಗರ ಜೀವನ ಅನುಭಾವ ದರ್ಶನ ಪರಿಚಯಿಸಲು

ಕಾವ್ಯಗಳು, ವಚನಗಳು, ಸ್ತುತಿಗೀತಗಳು ರಚನೆಯಾದವು. ಇವುಗಳ ಜೊತೆಯಲ್ಲಿಯೇ ಕಾವ್ಯ ವಚನಗಳಲ್ಲಿಯ ತಾತ್ವಿಕ ದರ್ಶನವನ್ನು ಬಿಚ್ಚಿ ತೋರಲು ಟೀಕಿನ ಗ್ರಂಥಗಳು ರಚನೆಯಾದವು.

ಪ್ರಭುದೇವರ ಬೆಡಗಿನ ವಚನಗಳಿಗೆ ಮಹಾಲಿಂಗದೇವ (೧೪೨೫) ಟೀಕೆ ಬರೆಯುವ ಮೂಲಕ ಕನ್ನಡ ವಚನ ಟೀಕಾ ಪರಂಪರೆಗೆ ಅಡಿಪಾಯ ಹಾಕಿಕೊಟ್ಟನು. ಅದೇ ರೀತಿ ಬಸವಣ್ಣನವರ ವಚನಗಳಿಗೆ, ಸಮಕಾಲೀನ ಶಿವಶರಣರ ಸಕಲಪುರಾತನರ ವಚನಗಳಿಗೆ ಐದಕ್ಕೂ ಹೆಚ್ಚು ಟೀಕಾಗ್ರಂಥಗಳು ರಚನೆಯಾದವು. ವಚನ ಟೀಕಾಕಾರರ ಪರಂಪರೆ ವ್ಯಾಪಕವಾಗಿ ಬೆಳೆದಿರುವುದು ಕಂಡುಬರುತ್ತದೆಯಾದರೂ ಅವರ ವಚನ ಟೀಕಾ ಗ್ರಂಥಗಳು ಲಭ್ಯವಾಗದಿರುವುದರಿಂದ, ಟೀಕಾ ಗ್ರಂಥಗಳು ಲಭ್ಯವಾದರೆ ಕೃತಿಯ ಟೀಕಾಕಾರರು ಯಾರೆಂಬುದು ತಿಳಿಯದೇ ಅನಾಮಧೇಯವಾಗಿ ಲಭ್ಯವಾಗುವುದರಿಂದ ಈ ಕ್ಷೇತ್ರದಲ್ಲಿ ಇನ್ನೂ ಕತ್ತಲೆಯೇ ಆವರಿಸಿದಂತಿದೆ.

ಇಂತಹ ಕತ್ತಲೆಯ ಮಧ್ಯೆಯು ಅಲ್ಲಲ್ಲಿ ಬೆಳಕಿನ ಕಿರಣಗಳು ಚೆಲ್ಲುವರಿದ ಕಾರಣ ಆ ಅಲ್ಪ ಬೆಳಕಿನ ಜಾಡಿನಲ್ಲಿಯೇ ಕನ್ನಡ ಟೀಕಿನ ವಚನಗಳ ಪರಂಪರೆಯನ್ನು ಗುರುತಿಸುತ್ತ ಭರವಸೆಯ ಹೆಜ್ಜೆಗಳನ್ನು ಇಡಬೇಕಾಗಿದೆ. ಏಕೆಂದರೆ, ಬೆಡಗಿನ ವಚನಗಳಿಗಾಗಿಯೇ ವ್ಯಾಖ್ಯಾನ ಬರೆಯುವ ಸಂಪ್ರದಾಯ ಬೆಳೆದು ಬಂದ ಕಾರಣ ಪ್ರಮುಖ ವಚನಕಾರರ ಎಲ್ಲ ರೀತಿಯ ವಚನಗಳಿಗೂ ವ್ಯಾಖ್ಯಾನ ಬರೆಯಲು ಮುಂದಾದರು. ಈ ರೀತಿಯ ಸಂಪ್ರದಾಯ "ಬಸವಣ್ಣನವರ ವಚನಗಳಿಂದ ಆರಂಭವಾಗಿ ತೋಂಟದ ಸಿದ್ಧಲಿಂಗರ ವಚನಗಳವರೆಗೂ ಬೆಳೆದು ನಿಂತಿತು. ಮೊದಮೊದಲು ತೋಂಟದ ಸಿದ್ಧಲಿಂಗರ ಕೇವಲ ಬೆಡಗಿನ ವಚನಗಳಿಗೆ ಮಾತ್ರ ಬರೆದ ಟೀಕೆಗಳು ಹುಟ್ಟಿಕೊಂಡರೆ, ಆ ಮೇಲೆ ಎಲ್ಲ ವಚನಗಳಿಗೂ ಬರೆದ ಟೀಕೆಗಳು ರಚನೆಗೊಂಡವು"[೯]

೧೨ನೇ ಶತಮಾನದ ಬಸವಣ್ಣ, ಅಲ್ಲಮಪ್ರಭುಗಳ ವಚನಗಳಿಗೆ ಟೀಕಿನ ವಚನಗಳು ರಚನೆಯಾದಂತೆ, ೧೬ನೇ ಶತಮಾನದ ತೋಂಟದ ಸಿದ್ಧಲಿಂಗರ ವಚನಗಳಿಗೂ ಹಲವು ಟೀಕಾಕಾರರು ವ್ಯಾಖ್ಯಾನ ಬರೆದಿರುವುದು ಇವರ ಘನವಾದ ವ್ಯಕ್ತಿತ್ವಕ್ಕೆ ಸಾಕ್ಷಿ ಎನ್ನಬಹುದು. ಇವರ ೭೦೧ ವಚನಗಳಲ್ಲಿ ಅರ್ಧಕ್ಕೂ ಹೆಚ್ಚು ಬೆಡಗಿನ ವಚನಗಳಿರುವುದು ಕೂಡಾ ವಚನ ವ್ಯಾಖ್ಯಾನಗಳು ಹೆಚ್ಚೆಚ್ಚು ಹುಟ್ಟಲು ಕಾರಣವಾಗಿರಬಹುದು. ಏಕೆಂದರೆ, ವಚನಗಳಲ್ಲಿಯ ಬೆಡಗಿನ ನಿಗೂಢಾರ್ಥ ಅರಿಯುವುದು ಎಲ್ಲರಿಗೂ ಸುಲಭವಾಗಿರಲಿಲ್ಲ. ಹೀಗಾಗಿ, ವಚನಗಳಿಗೆ ಟೀಕೆ, ವ್ಯಾಖ್ಯಾನ, ತಾತ್ಪರ್ಯ, ನಿರ್ವಚನ ಬರೆಯುವುದು ಅನಿವಾರ್ಯವಾಗಿರಬೇಕು. ಈ ಹಿನ್ನಲೆಯಲ್ಲಿ ತೋಂಟದ ಸಿದ್ಧಲಿಂಗೇಶ್ವರರ ವಚನಗಳಿಗೆ ೬ ಜನ ಟೀಕಾಕಾರರು ಅಂದರೆ, ಆರು ಟೀಕಾಗ್ರಂಥಗಳು ರಚನೆಯಾಗಿದ್ದು ಅವುಗಳ ವಿವರ ಇಂತಿದೆ.

೧. ಷಟ್‌ಸ್ಥಲ ಜ್ಞಾನಿ ಸೋಮಶೇಖರ ಶಿವಯೋಗಿ. ಈತನು ಕೇವಲ ೧೫೨ ಬೆಡಗಿನ ವಚನಗಳಿಗೆ ಮಾತ್ರ ಟೀಕೆ ಬರೆದಿದ್ದಾನೆ. ಟೀಕಾ ಕೃತಿ – 'ಷಟ್‌ಸ್ಥಲಜ್ಞಾನ ಸಾರಾಮೃತದ ಬೆಡಗಿನ ವಚನದ ಟೀಕೆ'. ಡಾ. ಬಿ.ವಿ. ಶಿರೂರ ಸಂಪಾದಿಸಿದ್ದಾರೆ.

೨. ಅಜ್ಞಾತ ಕರ್ತೃ – 'ಷಟ್‌ಸ್ಥಲ ಜ್ಞಾನಸಾರಾಮೃತ ಟೀಕೆ'. ಇಲ್ಲಿಯು ಬೆಡಗಿನ ವಚನಗಳಿಗೆ ಮಾತ್ರ ಟೀಕೆ ಬರೆಯಲಾಗಿದೆ. ಡಾ. ಎಸ್. ವಿದ್ಯಾಶಂಕರ ಸಂಪಾದಿಸಿ ಪ್ರಕಟಿಸಿದ್ದಾರೆ.

೩. ಅಜ್ಞಾತ ಕರ್ತೃ – "ತೋಂಟದ ಸಿದ್ಧೇಶ್ವರ ದೇವರು ನಿರೂಪಿಸಿದ ಷಟ್‌ಸ್ಥಲ ಜ್ಞಾನಸಾರಾಮೃತ ವಚನಂಗಳು". ಎಲ್ಲ ವಚನಗಳಿಗೂ ಟೀಕೆ ಬರೆಯಲಾಗಿದೆ. ಡಾ. ಸಾ.ಶಿ. ಮರುಳಯ್ಯನವರು ಈ ವಚನ ಟೀಕಾಕೃತಿ ಸಂಪಾದಿಸಿದ್ದಾರೆ. ೭೦೨ ಬೆಡಗಿನ ವಚನಗಳಿಗೆ ಟೀಕೆ ಇದೆ.

೪. ಅಜ್ಞಾತ ಕರ್ತೃ – "ತೋಂಟದ ಸಿದ್ಧೇಶ್ವರ ದೇವರು ನಿರೂಪಿಸಿದ ಷಟ್‌ಸ್ಥಲ ಜ್ಞಾನಸಾರಾಮೃತ ವಚನಗಳು". ಎಲ್ಲ ವಚನಗಳಿಗೂ ಟೀಕೆ ಬರೆಯಲಾಗಿದೆ.

೫. ಹುಮನಾಬಾದ ನಿರಂಜನಸ್ವಾಮಿಯ – 'ಷಟ್‌ಸ್ಥಲ ಜ್ಞಾನಸಾರಾಮೃತ ಟೀಕೆ'. ಎಲ್ಲ ವಚನಗಳಿಗೂ ಟೀಕೆ ಬರೆಯಲಾಗಿದೆ. ಹಸ್ತಪ್ರತಿಯು ಚಿತ್ರದುರ್ಗದ ಮುರುಘಾಮಠದಲ್ಲಿರುವುದಾಗಿ ಹಸ್ತಪ್ರತಿಸೂಚಿಯಿಂದ ತಿಳಿಯುತ್ತದೆ. ಈಗ ಈ ಹಸ್ತಪ್ರತಿ ಅಲ್ಲಿಲ್ಲ.

೬. ಅಜ್ಞಾತ ಕರ್ತೃವಿನ – 'ಷಟ್‌ಸ್ಥಲ ಜ್ಞಾನಸಾರಾಮೃತ'. ಇಲ್ಲಿ ಕೇವಲ ಘಟ್ಟಿ ಘಟ್ಟಿ ಪದಗಳಿಗೆ ಮಾತ್ರ ಟೀಕೆ ಬರೆಯಲಾಗಿದೆ.[೮]

'ತೋಂಟದ ಸಿದ್ಧಲಿಂಗೇಶ್ವರರ' ಷಟ್‌ಸ್ಥಲ ಜ್ಞಾನ ಸಾರಾಮೃತ ೭೦೧ ವಚನಗಳ ಸಂಕಲನಕ್ಕೆ ಬರೆದ ಟೀಕೆಗಳು ಆರು ಎಂದು ತಿಳಿದು ಬಂದರೂ "ಸದ್ಯ ಈಗ ಉಪಲಬ್ದವಾದುವು ಐದು ಮಾತ್ರ".[೯] ಹೀಗಾಗಿ, ಲಭ್ಯವಾದ ವಚನ ಟೀಕೆಗಳನ್ನು ಆಧಾರವಾಗಿಟ್ಟುಕೊಂಡು ಇವುಗಳ ಕರ್ತೃ, ಕಾಲ, ಟೀಕಾ ಸ್ವರೂಪ ಕುರಿತು ಇಲ್ಲಿ ವಿವೇಚಿಸಲಾಗುವುದು. ಮೊದಲನೆಯದಾಗಿ, ತೋಂಟದ ಸಿದ್ಧಲಿಂಗರ ಶಿಷ್ಯ ಪರಂಪರೆಗೆ ಸೇರಿದ ಟೀಕಾಕಾರ ಸೋಮಶೇಖರ ಶಿವಯೋಗಿಯ ಪರಿಚಯ, ವಚನ ಟೀಕಾ ಸ್ವರೂಪವನ್ನು ಇಲ್ಲಿ ನೋಡೋಣ.

**ಅ. ಟೀಕಾಕಾರ ಸೋಮಶೇಖರ ಶಿವಯೋಗಿ**

ತೋಂಟದ ಸಿದ್ಧಲಿಂಗಯತಿಗಳ ಪರಂಪರೆಯಲ್ಲಿ ಗುರುತಿಸಿಕೊಂಡ ಸೋಮಶೇಖರ ಶಿವಯೋಗಿ (ಸು.೧೭೨೦) ಮುರಿಗಾ ಇಮ್ಮಡಿ ಗುರುಸಿದ್ದಸ್ವಾಮಿಗಳ (ಲಿಂಗೈಕ್ಯ ೧೭೨೯) ನೇರ ಶಿಷ್ಯ. ಈತನು "ತೋಂಟದ ಸಿದ್ಧಲಿಂಗೇಶ್ವರ ಷಟ್ಥಲ ಜ್ಞಾನ ಸಾರಾಮೃತ ಬೆಡಗಿನ ವಚನ ಟೀಕೆ", ಬಸವನ ಷಟ್ಸ್ಥಲದ ಬೆಡಗಿನ ವಚನ ಟೀಕೆ ಬರೆದಿದ್ದಾನೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಎರಡನೇ ಕೃತಿಗೆ ಸಂಬಂಧಿಸಿದ ಪೂರ್ಣ ಹಸ್ತಪ್ರತಿ ಲಭ್ಯವಾಗದ ಕಾರಣ ಅಪೂರ್ಣವಾಗಿದೆ.

ತೋಂಟದ ಸಿದ್ಧಲಿಂಗರ ಷಟ್ಸ್ಥಲ ಜ್ಞಾನಸಾರಾಮೃತ ಬೆಡಗಿನ ವಚನ ಟೀಕೆಯ ಹಸ್ತಪ್ರತಿ ಪೂರ್ಣ ಲಭ್ಯವಾಗಿದೆ. ಇದನ್ನು ಗದಗಿನ ತೋಂಟದಾರ್ಯ ಮಠವು ೧೯೭೭ರಲ್ಲಿ ಪ್ರಕಟಗೊಳಿಸಿದೆ. ಡಾ.ಬಿ.ವಿ. ಶಿರೂರ ಸಂಪಾದಿಸಿಕೊಟ್ಟಿದ್ದಾರೆ. ಅಲ್ಲದೇ, ಪ್ರಸ್ತುತ ವಚನ ಟೀಕಾ ಗ್ರಂಥದ ಕರ್ತೃ ಸೋಮಶೇಖರ ಶಿವಯೋಗಿಯೇ ಎಂಬುದಕ್ಕೆ ಹಸ್ತಪ್ರತಿಯ ಆದಿ ಮತ್ತು ಅಂತ್ಯದ ಪ್ರಶಸ್ತಿ ಬರಹಗಳಿಂದ ಖಚಿತವಾಗುತ್ತದೆ.

ಕೃತಿಯ ಕೊನೆಯಲ್ಲಿ ತನ್ನನ್ನು – "ಶ್ರೀಮದನುಪಮ ನಿತ್ಯಸತ್ಯ ನಿರ್ದ್ವಂದ್ವ ನಿರಾಳ ನಿರತಿಶಯ ನಿರ್ಗುಣ ನಿರಾಧಾರ ನಿರಂಜನ ಲಿಂಗಲೀಲಾ ವಿಗ್ರಹ ನಿಗಮಾಗಮ ಪುರಾಣ ಸ್ಮೃತೇತಿಹಾಸಾದಿ ಸಕಲ ಶಾಸ್ತ್ರ ಸನ್ನುತ ಸಚ್ಚಿದಾನಂದ ಸನ್ಮುನಿಜನವಂದಿತ ಇಂದು ಶೇಖರಲಿಂಗ ಚರಣಕಮಲ ಮಕರಂದ ಮತ್ತ ಮಧುಕರಾಯಮಾನ ಷಟ್‌ಸ್ಥಲಜ್ಞಾನಿ"[೧೦೦] ಎಂದು ಸೋಮಶೇಖರ ಶಿವಯೊಗಿ" ಎಂದು ಹೇಳಿಕೊಂಡಿದ್ದಾನೆ. ಅಲ್ಲದೇ ತನ್ನ ಗುರುಪರಂಪರೆಯನ್ನು ಟೀಕಾಕೃತಿಯ ಆದಿಯಲ್ಲಿ ಹೀಗೆ ಹೇಳಿಕೊಂಡಿದ್ದಾನೆ. – "ಶ್ರೀಮನ್ನಿರಾಳ ನಿರಾಮಯ ನಿರಂಜನ ನಿಶ್ಶೂನ್ಯ ನಿಃಕಲ ಪರಬ್ರಹ್ಮವು ತಿಳಿದುಪ್ಪವೆ ಹೆತ್ತೂಪ್ಪವಾದ ಹಾಂಗೆ, ಸಚ್ಚಿದಾನಂದ ನಿತ್ಯಪರಿಪೂರ್ಣನೆಂಬ ಪಂಚಲಕ್ಷಣವನು ಗರ್ಭೀಕರಿಸಿಕೊಂಡು, ಘನೀಭೂತವಾಗಿ, ಅಖಂಡಗೋಳಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗದ ಲೀಲಾವಿಗ್ರಹಮೂರ್ತಿಗಳಾದ ತೋಂಟದ ಸಿದ್ಧಲಿಂಗೇಶ್ವರನೆಂಬ ದೇಶಿಕ ಶಿರೋಮಣಿ ಕರುಣ ಪ್ರಸಾದ ಪಾತ್ರರಾದ ಗೂಳೂರ ಸಿದ್ಧಲಿಂಗಯ್ಯನವರು, ಅವರ ಕರುಣಾಪ್ರಸಾದ ಪಾತ್ರರಾದ ಗಗನದಯ್ಯನವರು, ಅವರ ದಯಾನುಗ್ರಹಕ್ಕೆ ಯೋಗ್ಯರಾದ ಕಟ್ಟಿಗೆಹಳ್ಳಿ ಸಿದ್ಧಲಿಂಗೇಶ್ವರರು, ಅವರನುಗ್ರಹ ಪಾತ್ರರಾದ ಮುರಿಗಾ ಶಾಂತವೀರೇಶ್ವರನು, ಅವರಿಂದನುಗ್ರಹ ಪಡೆದ ಮುರಿಗಾಗುರುಸಿದ್ಧೇಶ್ವರನು ಹೀಂಗೆ ಗುರುಸಂಪ್ರದಾಯವಿಡಿದು ಬಂದ ಬಸವಾದಿಪ್ರಮಥಗಣಂಗಳ ವಚನಾನುಭವವನು ಬೆಸಗೊಂಡ ಸೋಮಶೇಖರ ಶಿವಯೋಗಿ" ಎಂದಿದ್ದಾನೆ. ಇದರಿಂದ ಶ್ರೀಮಂತ ಗುರುಪರಂಪರೆಯಲ್ಲಿ ಬಂದ ಸೋಮಶೇಖರ ಶಿವಯೋಗಿ ತಾನೇ ವಿಶ್ಲೇಷಿಸಿಕೊಂಡಂತೆ ಷಟ್‌ಸ್ಥಲಜ್ಞಾನಿಯಾಗಿದ್ದನು.

ಕವಿಚರಿತ್ರೆಕಾರರು ಈತನ ಕಾಲವನ್ನು ಸು.೧೭೦೦ ಎಂದು ನಿರ್ಧರಿಸಿದ್ದರು. ಆದರೆ, ತೋಂಟದ ಸಿದ್ಧಲಿಂಗರ ಕಾಲವೆ ಈಗ ಒಂದು ಶತಮಾನ ಮುಂದೆ ಹೋಗಿರುವ ಕಾರಣ "ಈ ಟೀಕಾಕಾರನ ಕಾಲವನ್ನು ೧೯ನೇ ಶತಮಾನದ ಪೂರ್ವಾರ್ಧವೆಂದು ಇಟ್ಟುಕೊಳ್ಳಬಹುದೆಂದು"[೧೦೧] ಡಾ.ಬಿ.ವಿ. ಮಲ್ಲಾಪೂರ ಹೇಳುತ್ತಾರೆ. ಡಾ.ಎಸ್.ವಿದ್ಯಾಶಂಕರ ಅವರು –"– ಮುರಿಗಾ ಗುರುಸಿದ್ಧೇಶ್ವರರ ಕಾಲ ಕ್ರಿ.ಶ.೧೭೨೦ ಎಂದು ಖಚಿತಗೊಂಡಿರುವಾಗ ಅವರ ಶಿಷ್ಯನಾದ ಇವನ ಕಾಲವನ್ನು ಸು.೧೭೪೦"[೧೦೨] ಎಂದು ಹೇಳುತ್ತಾರೆ. ಡಾ. ಎಂ.ಎಂ. ಕಲಬುರ್ಗಿ, ಡಾ. ವೀರಣ್ಣ ರಾಜೂರ–" ಕ್ರಿ.ಶ.೧೮೦೦ ಎಂದು ಪರಿಗಣಿಸುತ್ತಾರೆ".[೧೦೩] ಇದೆಲ್ಲವನ್ನು ಗಮನಿಸಿದಾಗ, ಅವರ ಟೀಕಿನ ವಚನದ ಭಾಷೆ, ಗುರುಪರಂಪರೆಯ ಇತಿಹಾಸ ಆಧರಿಸಿ ಸೋಮಶೇಖರ ಶಿವಯೋಗಿಯು ೧೮ನೇ ಶತಮಾನದ ಮಧ್ಯಭಾಗದಿಂದ ೧೯ನೇ ಶತಮಾನದ ಮೊದಲ ಪಾದದಲ್ಲಿ ಜೀವಿಸಿದ್ದನೆಂದು ತಿಳಿಯಬಹುದಾಗಿದೆ.

**ಕೃತಿ ಸ್ವರೂಪ** : ತೋಂಟದ ಸಿದ್ಧಲಿಂಗರ ೭೦೧ ವಚನಗಳಲ್ಲಿ ಕೇವಲ ೧೫೨ ಬೆಡಗಿನ ವಚನಗಳನ್ನು ಆಯ್ದುಕೊಂಡು ಟೀಕೆ ಬರೆಯಲಾಗಿದೆ. ಅಂದರೆ, ಪಿಂಡಜ್ಞಾನಸ್ಥಲ–೧೫, ಸಂಸಾರ ಹೇಯಸ್ಥಲ–೨೦, ಮಾಹೇಶ್ವರ ಸ್ಥಲ–೧, ಪ್ರಸಾದಿಸ್ಥಲ–೭, ಪ್ರಾಣಲಿಂಗಿಸ್ಥಲ–೫೬, ಶರಣಸ್ಥಲ–೨೮, ಐಕ್ಯಸ್ಥಲ–೨೫. ಇಲ್ಲಿ ವಚನಗಳ ಪೂರ್ಣಪಾಠ ಕೊಡದೆ ಅದರಲ್ಲಿಯ ವಾಕ್ಯಗಳನ್ನು ಎತ್ತಿಕೊಂಡು ಟೀಕೆಯನ್ನು ಬರೆಯಲಾಗಿದೆ. ಹೀಗಾಗಿ, ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ಟೀಕೆಯಾಗಿದೆ. ಕೆಲವೊಮ್ಮೆ

ಪದಗಳಿಗೆ ಪ್ರತಿಪದಾರ್ಥ ಟೀಕೆ, ವಾಕ್ಯಗಳಿಗೆ ಎರಡು ಅರ್ಥ ನೀಡುವ ಮೂಲಕ ವಚನ ಓದುಗರಿಗೆ ನೆರವಾಗಿದ್ದಾರೆ.

ಸೋಮಶೇಖರ ಶಿವಯೋಗಿಕೃತ ವಚನ ಟೀಕಾಕೃತಿಯನ್ನು ೧೯೭೭ರಲ್ಲಿ ಗದಗಿನ ಶ್ರೀಮಠದಿಂದ ಪ್ರಕಟಿಸಲಾಯಿತು. ಡಾ. ಬಿ.ವಿ. ಶಿರೂರ ಅವರು 'ಬೆಡಗಿನ ವಚನ ಟೀಕೆ' ಹೆಸರಿನಲ್ಲಿ ಇದನ್ನು ಸಂಪಾದಿಸಿದ್ದಾರೆ. ಪ್ರಸ್ತಾವನೆಯಲ್ಲಿ – "ನನಗೆ ದೊರೆತುದು ಒಂದೇ ಒಂದು ತಾಡೋಲೆಯ ಪ್ರತಿ. ಡಾವಣಗೇರಿಯ ಕೆ.ಎ.ಆರ್.ಜಿ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಶ್ರೀ.ಎಸ್.ಉಮಾಪತಿ ಅವರ ಬಳಿಯದು.... ಆ ಪ್ರತಿ ಹೆಚ್ಚು ಶುದ್ಧ ಕಂಡುಬಂದುದರಿಂದ ಅದೊಂದನ್ನೇ ಆದರಿಸಿ ಈ ಸಂಪಾದನೆ ಮಾಡಲಾಗಿದೆ" ಎಂದು (ಪುಟ.೩೦–೩೧) ಸ್ಪಷ್ಟಪಡಿಸಿದ್ದಾರೆ. ಅಲ್ಲದೇ ಮೂಲ ಹಸ್ತಪ್ರತಿಯಲ್ಲಿ ಟೀಕೆಗಳ ತಲೆಯ ಮೇಲೆ ವಚನಗಳಿರಲಿಲ್ಲ. ಷಟ್‌ಸ್ಥಲಜ್ಞಾನಸಾರಾಮೃತದಲ್ಲಿಯ ವಚನಗಳನ್ನು ಇಟ್ಟುಕೊಂಡು ಪ್ರಕಟಿಸಿದ ಬಗ್ಗೆ ತಿಳಿಯುತ್ತದೆ.

**ಟೀಕಾ ಸ್ವರೂಪ:** ಈಗಾಗಲೇ ಹೇಳಿದಂತೆ ತೋಂಟದ ಸಿದ್ಧಲಿಂಗೇಶ್ವರರ ಷಟ್‌ಸ್ಥಲಜ್ಞಾನಸಾರಾಮೃತ ಗ್ರಂಥದಲ್ಲಿ ೭೦೧ ವಚನಗಳಿವೆ. ಈ ಗ್ರಂಥದಲ್ಲಿಯ ೧೫೨ ಬೆಡಗಿನ ವಚನಗಳಿಗೆ ಸೋಮಶೇಖರ ಶಿವಯೋಗಿಯು ಟೀಕೆ ಬರೆದಿದ್ದಾನೆ. ಈತನ ಟೀಕಾ ಸ್ವರೂಪ ಕುರಿತು – "ಸಾಂಪ್ರದಾಯಿಕವಾದ ಸೂತ್ರಸಿದ್ದ ಟೀಕೆಗಳನ್ನು ಬರೆದಿದ್ದಾನೆ"[೧೦೪] ಎನ್ನುತ್ತಾರೆ ಪ್ರೊ.ಅ.ರಾ.ಮಿತ್ರ.

ಡಾ.ಬಿ.ವ್ಹಿ. ಮಲ್ಲಾಪೂರ ಅವರು – "ವಚನದಲ್ಲಿ ಬರುವ ಪ್ರತಿಯೊಂದು ಶಬ್ದಕ್ಕೆ ಅರ್ಥಬರೆಯುವುದು, ಮೂಲವಚನದಲ್ಲಿಯ ಒಂದು ವಾಕ್ಯವನ್ನು ಎತ್ತಿಕೊಂಡು ಅವರ ಬೆಡಗಿನ ರಹಸ್ಯವನ್ನು ಒಡೆಯುವುದು..... ವಾಕ್ಯರೂಪದ ಅರ್ಥವನ್ನೇ ಮೊದಲು ಬರೆದು ತದನಂತರ ಅದಕ್ಕೆ ಸಂವಾದಿಯಾದ ವಚನದ ಭಾಗವನ್ನು ಕೊನೆಗೆ 'ಎಂಬ ಶಬ್ದಕ್ಕರ್ಥ' ಎಂದು ಮುಗಿಸಲಾಗುತ್ತದೆ. ಬೆಡಗಿನ ವಚನಗಳಿಗೆ ಬರೆದ ಟೀಕೆಗಳು ಸಾಮಾನ್ಯವಾಗಿ ಹೀಗೆ ಇರುತ್ತವೆ (೮೦೫ನೆಯ ವಚನಟೀಕು ನೋಡಬಹುದು). ಬೆಡಗಿನ ವಚನಗಳಿಗೆ ಮಾತ್ರ ವಿಸ್ತಾರವಾದ ಟೀಕೆಯನ್ನು ಎರಡು ಮೂರು ವಿಧದಲ್ಲಿ ಬರೆದಿದ್ದಾನೆ. ಸುಲಭವೆನಿಸಿದ ವಚನಗಳಿಗೆ ವಿಸ್ತಾರವಾಗಿ ಟೀಕೆಯನ್ನು ಬರೆಯಲು ಹೋಗದೆ ಬೆಡಗನ್ನು ಒಳಗೊಂಡ ಒಂದೊಂದು ವಾಕ್ಯಕ್ಕೆ ಮಾತ್ರ ಟೀಕೆ ಬರೆದಿದ್ದಾನೆ. ಕೆಲವೊಮ್ಮೆ ವಾಕ್ಯದಲ್ಲಿರುವ ಬೆಡಗಿನ ಶಬ್ದಗಳಿಗೂ ಅರ್ಥ ಬರೆದಿದ್ದಾನೆ"[೧೦೫] ಎಂದು ಅಭಿಪ್ರಾಯಪಡುತ್ತಾರೆ.

ಡಾ. ಎಸ್. ವಿದ್ಯಾಶಂಕರ ಅವರು "..... ಮೊದಲಿಗೆ ಅರ್ಥವನ್ನು ಹೇಳಿ ಅನಂತರ 'ಎಂಬುದೀಗ' ಎಂದು ಸೂಚಿಸಿ ಮೂಲವಾಕ್ಯ, ಖಂಡವಾಕ್ಯಗಳನ್ನು ತಿಳಿಸಿ ಅಂತಿಮವಾಗಿ 'ಎಂಬ ಶಬ್ದಕ್ಕರ್ಥ' ಎಂದು ಮುಕ್ತಾಯ ಮಾಡುವನು. ಇದರಿಂದಾಗಿ ಓದುಗರಿಗೆ ವಿವರಣೆಯು ಸುಲಭವಾಗಿ, ಸುಲಲಿತವಾಗಿ ಗ್ರಾಹ್ಯವಾಗುವುದಿಲ್ಲ"[೧೦೬] ಎನ್ನುತ್ತಾರೆ. ಅಲ್ಲದೇ–"— ಅನುಭಾವಿಗಳಲ್ಲದವರಿಗೆ ಈ ವಚನಗಳಲ್ಲಿ ಅಂತರ್ಗತವಾಗಿರುವ ನಿಗೂಢ ತಾತ್ವಿಕ ವಿವರಣೆ ದಕ್ಕದು–"[೧೦೭] ಎಂದು ಅಭಿಪ್ರಾಯಪಡುವುದರಿಂದ ಸೋಮಶೇಖರ ಶಿವಯೋಗಿಯ ವಚನ ಟೀಕೆಗಳು ಸುಲಭವಾಗಿ ಗ್ರಾಹ್ಯವಾಗಲಾರವೆಂದು ತಿಳಿಯಬಹುದು.

ಬಸವಣ್ಣನವರ ವಚನಗಳಿಗೆ (ವ-೪೨,೪೯) ಟೀಕೆ ಬರೆಯುವಲ್ಲಿ "ತೀರ ಕ್ವಚಿತ್ತಾಗಿ ಒಂದು ವಚನಕ್ಕೆ ಎರಡು ಅರ್ಥ ಬರೆದುದೂ ಕಂಡುಬರುತ್ತದೆ. ಸಾಮಾನ್ಯವಾಗಿ ಪ್ರತಿಪದಾರ್ಥ ಬರೆವ ಇಲ್ಲವೆ ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆವ ಟೀಕಾಲೇಖನ ಪದ್ಧತಿಯನ್ನು ಇಟ್ಟುಕೊಂಡಿದ್ದರೂ ಕೆಲವು ಸಲ ಇವುಗಳ ಮಿಶ್ರಣವೂ ಎಡೆವರೆದಿದೆ"[೧೦೮] ಎಂದು ಡಾ.ಎಂ.ಎಂ. ಕಲಬುರ್ಗಿಯವರು ಹೇಳುತ್ತಾರೆ. ಈ ಹಿನ್ನಲೆಯಲ್ಲಿ ತೋಂಟದ ಸಿದ್ಧಲಿಂಗಶಿವಯೋಗಿಗಳ ಷಟ್‌ಸ್ಥಲ ಜ್ಞಾನಸಾರಾಮೃತ ವಚನಟೀಕೆಗಳ ಸಮಗ್ರವಾದ ಅಧ್ಯಯನ ಮಾಡಿದ ವಿದ್ವಾಂಸರಾದ ಡಾ.ವೀರಣ್ಣ ರಾಜೂರ ಅವರು ಸೋಮಶೇಖರ ಶಿವಯೋಗಿಯ ವಚನ ಟೀಕಾ ವಿಧಾನವನ್ನು ಈ ಕೆಳಗಿನಂತೆ ಗುರುತಿಸುತ್ತಾರೆ.

೧. "ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ತಾತ್ವಿಕಾರ್ಥ ಟೀಕೆ.

೨. ವಚನದಲ್ಲಿನ ಕೆಲವು ವಾಕ್ಯಗಳಿಗೆ ಬರೆದ ಎರಡು ತಾತ್ವಿಕಾರ್ಥ ಟೀಕೆ.

೩. ಕೆಲವು ವಚನಗಳಿಗೆ ಬರೆದ ವಾಕ್ಯವನ್ನು ಹಿಮ್ಮೆಟ್ಟಿಸಿದ ಅರ್ಥ ಮತ್ತು ಪ್ರತಿಪದಾರ್ಥ ಟೀಕೆ.

೪. ಇಡೀ ವಚನಕ್ಕೆ ಬರೆದ ಪ್ರತಿಪದಾರ್ಥ ಟೀಕೆ.

೫. ಇಡೀ ವಚನಕ್ಕೆ ಬರೆದ ಸಾರರೂಪದ ತಾತ್ಪರ್ಯಾರ್ಥ ಟೀಕೆ."[೧೦೯]

ಮೇಲ್ಕಂಡ ವಚನ ಟೀಕೆಗಳ ಹಲವು ವಿಧಾನಗಳನ್ನು (ಸ್ವರೂಪ) ಸೋಮಶೇಖರ ಶಿವಯೋಗಿಯು ಬಳಸಿದ್ದು ಅವುಗಳನ್ನು ಕೆಲವು ಉದಾಹರಣೆಗಳ ಮೂಲಕ ನೋಡಲಾಗುವುದು.

**೧. ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ತಾತ್ವಿಕಾರ್ಥದ ಟೀಕೆ –**

ಇಲ್ಲಿ ವಚನ ದೀರ್ಘವಾಗಿದ್ದರೆ ಎಂಟು ಖಂಡಗಳಲ್ಲಿ, ಕಡಿಮೆ ಎಂದರೆ ಒಂದೇ ಖಂಡದಲ್ಲಿ, ಕೆಲವೊಮ್ಮೆ ಎರಡು ಅಥವಾ ಮೂರು ಖಂಡಗಳಲ್ಲಿ ಬರೆದು ಮುಗಿಸಲಾಗಿದೆ. ಉದಾಹರಣೆಗೆ ಒಂದು ವಚನ –

> "ನೀರಜದೊಳಗೆ ಹುಟ್ಟಿದ ಕಿಚ್ಚು ವಾರುಧಿಯ ಕುಡಿವುದ ಕಂಡೆನಯ್ಯಾ
> ಸಾಗರಬತ್ತಿ, ಇಪ್ಪತ್ತೈದು ಗ್ರಾಮವ ನುಂಗಿದ ಕಪ್ಪೆ ಬಾಯಾರಿ ಸತ್ತಿತ್ತು
> ಕಾಣಾ ದೇವ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ" (ವಚನ ೯೦)

**ಟೀಕೆ:** "ಶರಣನ ಮನಃ ಕಮಲದಲ್ಲುದಯವಾದ ಸುಜ್ಞಾನಾಗ್ನಿಯು ಭವಸಾಗರವ ನಷ್ಟವಮಾಡುವ ಭೇದವನ್ನು, ಶ್ರೀಗುರುವಿನ ಜ್ಞಾನೋಪದೇಶದಿಂದೆ ನಿದರ್ಶನವಾದೆನೆಂಬುದೀಗ – ನೀರಜದೊಳಗೆ ಹುಟ್ಟಿದ ಕಿಚ್ಚು ವಾರುಧಿಯ ಕುಡಿವುದ ಕಂಡೆನಯ್ಯ ಎಂಬ ಶಬ್ದಕ್ಕರ್ಥ.

ಅಂತಪ್ಪ ಭವಸಾಗರದ ಸಮ್ಯಕ್‌ಜ್ಞಾನ ಸತ್ಕ್ರಿಯಾಚರಣೆಯಿಂದೆ ನಷ್ಟವಮಾಡಿ, ಪಂಚಭೂತಮುಕ್ತವಾದ ದೇಹಭಾವವನು ಮಂತ್ರಲಿಂಗ ಸಂಬಂಧದಿಂದ ನಿವೃತ್ತಿಯನೆಯ್ದಿಸಿ, ಪರಮಶಾಂತಿ ಜ್ಞಾನ ಸ್ವರೂಪನಾದ ಶರಣನು, ಶಿವಾಪೇಕ್ಷೆಯಿಂದ ಸತ್ವರೂಪವಾದ ಬ್ರಹ್ಮವೇ ಆದನೆಂಬುದೀಗ – ಸಾಗರ ಬತ್ತಿ, ಇಪ್ಪತ್ತೈದು ಗ್ರಾಮವ ನುಂಗಿದ ಕಪ್ಪೆ ಬಾಯಾರಿ ಸತ್ತಿತ್ತು ಕಾಣಾ ದೇವ ಎಂಬ ಶಬ್ದಕ್ಕರ್ಥ".

ಹೀಗೆ ಮೂರು ಖಂಡಗಳಲ್ಲಿ ಬರೆದುದಕ್ಕೆ ೯೨, ೯೮, ೧೦೩ ಮತ್ತಿತರ ವಚನ ಟೀಕೆಗಳನ್ನು; ಎಂಟು ಖಂಡಗಳಲ್ಲಿ ಬರೆದುದಕ್ಕೆ ೩೧೭, ೩೮೦ ನೆಯ ವಚನಗಳ ಟೀಕೆಗಳನ್ನು; ಒಂದೇ ಖಂಡದಲ್ಲಿ ಬರೆದುದಕ್ಕೆ ೬೦೧ ನೆಯ ವಚನದ ಟೀಕೆಯನ್ನು ನೋಡಬಹುದಾಗಿದೆ.

**೨. ಕೆಲವು ವಾಕ್ಯಗಳಿಗೆ ಎರಡು ತಾತ್ವಿಕಾರ್ಥ ಬರೆದುದಕ್ಕೆ –**

**ವಚನ** –"— ದೇವಸಾಲೆಯಲ್ಲಿ ದಿವ್ಯಮೂರ್ತಿಯ ಕಂಡೆನಯ್ಯ (ವ–೩೨೨)

**ಟೀಕೆ:** "ಸಕಲ ಕರ್ಣೇಂದ್ರಿಯಗಳಿಗೆ ವಿಶ್ರಾಂತಿ ಸ್ಥಾನವಾದ ಬ್ರಹ್ಮರಂದ್ರವೆಂಬ ಮಂದಿರದಲ್ಲಿ ಮನೋಹರದಿಂದೆ ಬೆಳಗಲ್ಪಟ್ಟ ನಿಃಕಲಬ್ರಹ್ಮವನು ಜ್ಞಾನದೃಕ್ಕಿನಿಂದೆ ನಿದರ್ಶನವಾದೆನೆಂಬುದೀಗ – ದೇವಸಾಲೆಯಲ್ಲಿ ದಿವ್ಯ ಮೂರ್ತಿಯ ಕಂಡೆನಯ್ಯ ಎಂಬ ಶಬ್ದಕ್ಕರ್ಥ.

ಮತ್ತಂ, ಚಿತ್ಕರಣೇಂದ್ರಿಯಂಗಳ ವ್ಯಾಪಾರಕ್ಕಾಶ್ರಮವಾಗೊಪ್ಪಲ್ಪಟ್ಟ ಶರಣನ ಚಿದಂಗವೆಂಬ ಮಂದಿರದಲ್ಲಿ, ಮನೋಹರದಿಂದೆ ಬೆಳಗಲ್ಪಟ್ಟ ಪರಬ್ರಹ್ಮವನು, ಶ್ರೀಗುರುವಿನ ವೇದಾಮಂತ್ರ ಕ್ರಿಯೋಪದೇಶದಿಂದೆ ಬಹಿರಂಗದಲ್ಲಿ ಇಷ್ಟಲಿಂಗವಾಗಿ ನಿದರ್ಶನವ ಮಾಡಿದೆನೆಂಬುದೀಗ – ದೇವಸಾಲೆಯಲ್ಲಿ ದಿವ್ಯಮೂರ್ತಿಯ ಕಂಡೆನಯ್ಯ ಎಂಬ ಶಬ್ದಕ್ಕರ್ಥ".

**೩. ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ಅರ್ಥ ಮತ್ತು ಪ್ರತಿಪದಕ್ಕೆ ಬರೆದ ಅರ್ಥಕ್ಕೆ:**

**ವಚನ:** ಆಡಿನ ಶಿರದ ಮೇಲೆ ಕುಣಿದಾಡುವ ಕೋಡಗ, ಮಾರುತನ ಕೂಡೆ ಉಡುವ ಹಡೆಯಿತ್ತು ನೋಡಾ. ಉಡುವಿನ ನಾಲಗೆಯಲ್ಲಿ ಅಜಹರಿಸುರ ಮನುಮುನಿಗಳು ಅಡಗಿದರು. ಇವರೆಲ್ಲರ ಯಜನಾಧಿಕೃತಂಗಳು ಉಡುವಿನ ಕಾಲಿನಲ್ಲಿ ಅಡಗಿದವು. ತ್ರಿಜಗವೆಲ್ಲವೂ ಹೀಂಗೆ ಪ್ರಳಯದಲ್ಲಿ ಮುಳಿಗಿದೆಯಲ್ಲಾ! ಉಡುವಿನ ನಾಲಿಗೆಯ ಕೊಯಿದು, ಕುಣಿದಾಡುವ ಕೋಡಗನ ಕಾಲಮುರಿದು, ಅಜಪಶುವ ಕೊಂದು, ಅಗ್ನಿಯಲ್ಲಿ ಸುಟ್ಟು ಭಸ್ಮವ ಮಾಡಬಲ್ಲಾತನ ಜನನ–ಮರಣ ವಿರಹಿತನೆಂಬೆ; ತ್ರಿಜಗಾಧಿಪತಿಗಳಿಗೆ ಒಡೆಯನೆಂಬೆ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ (ವಚನ–೧೫೪)

ಮೇಲಿನ ವಚನದ ಅರ್ಧಭಾಗಕ್ಕೆ ಮಾತ್ರ ಟೀಕು ಬರೆಯಲಾಗಿದೆ. ಹಾಗೂ ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ಅರ್ಥ, ವಾಕ್ಯವನ್ನು ಅನುಸರಿಸಿ ಬರೆದ ಅರ್ಥ, ಕೆಲವು ಪದಗಳಿಗೆ ಪ್ರತಿಪದವನ್ನು ಎತ್ತಿಕೊಂಡು ಟೀಕೆಯನ್ನು ಬರೆದಿರುವುದರಿಂದ ಸಮ್ಮಿಶ್ರಣ ಟೀಕಾ ಮಾದರಿ ಕಾಣುತ್ತೇವೆ. ಉದಾಹರಣೆಗೆ ವಾಕ್ಯ ಅನುಸರಿಸಿ ಬರೆದ ಅರ್ಥ ಮತ್ತು ಪ್ರತಿಪದಕ್ಕೆ ಬರೆದ ಅರ್ಥಕ್ಕೆ ಸಂಬಂಧಿಸಿದ ಟೀಕೆಯ ಭಾಗವನ್ನು ಇಲ್ಲಿ ನೋಡಬಹುದು.

**ಉಡುವಿನ ನಾಲಗೆಯ ಕೊಯಿದು –** "ಜೀವನ ಭಿನ್ನಾಪೇಕ್ಷೆಯೆಂಬ ರಸನೆಯನು ಶಿವಾಪೇಕ್ಷೆಯೆಂಬ ಶಸ್ತ್ರದಿಂದ ಲವನಂಗೆಯ್ದು; ಕುಣಿದಾಡುವ ಕೋಡಗನ ಕಾಲ ಮುರಿದು – ಪ್ರಪಂಚಿನಲ್ಲಿ ವರ್ತಿಸುವ ಮನೋಮರ್ಕಟನ ದುಶ್ಚರಿತ್ರವೆಂಬ ಚರಣವನು ಸಚ್ಚಾರಿತ್ರದಿಂದೆ ನಿವೃತ್ತಿಯ ಮಾಡಿ; ಅಜಪಶುವ ಕೊಂದು – ಅಜ್ಞಾನರೂಪವಾದ ಜೀವನೆಂಬ ಮೇಕೆಯ ಜೀವಭಾವದ ವರ್ತನೆಯನು ನಷ್ಟವಮಾಡಿ;

ಅಗ್ನಿಯಲ್ಲಿ – ಶಿವಜ್ಞಾನಾಗ್ನಿಯಲ್ಲಿ, ಸುಟ್ಟು – ಸಂಸ್ಕರಿಸಿ, ಭಸ್ಮವ ಮಾಡಬಲ್ಲಾತನ – ಪಾಪಾನಾಂ ಭರ್ಜನಾದ್ಯಸ್ಮ' ಎಂದು ಸಕಲ ದೋಷಂಗಳನು ನಿವೃತ್ತಿ ಮಾಡಿ ಚಿದ್ಭಸ್ಮವನೆಯ್ದಿಸಿದಂಥಾತನ, ಜನನಮರಣ ವಿರಹಿತನೆಂಬೆ – ಹುಟ್ಟುಹೊಂದುಗಳಿಗೆ ರಹಿತನೆಂದು ಹೇಳುವೆನು; ತ್ರಿಜಗದಾಧಿಪತಿಗಳಿಗೆ ಒಡೆಯನೆಂಬೆ – ತ್ರಿಲೋಕಕ್ಕಧಿಪತಿಗಳಾದ ಬ್ರಹ್ಮ ವಿಷ್ಣು ರುದ್ರರುಗಳಿಗೆ ಅಧಿಷ್ಠಾನ ಕರ್ತೃವಾದಾತನು ಶಿವಶರಣನೆಂದು ಹೇಳುವೆನು".

ಹೀಗೆ, ೧೫೪ನೆಯ ವಚನದ ಅರ್ಧಭಾಗಕ್ಕೆ ಟೀಕು ಬರೆಯದೇ ಉಳಿದರ್ಧ ಭಾಗಕ್ಕೆ ಸಮ್ಮಿಶ್ರಣ ಮಾದರಿಯ ಟೀಕು ಬರೆದು ವಚನಗಳ ಬೆಡಗನ್ನು ಒಡೆದು ಓದುಗರಿಗೆ ಸರಳವಾಗಿ ಅರ್ಥೈಸಲು ಮಾಡಿದ ಟೀಕಾಕಾರನ ಪ್ರಯತ್ನ ನಿಜಕ್ಕೂ ಗಮನಾರ್ಹವಾದುದು.

**೪. ಇಡೀ ವಚನಕ್ಕೆ ಬರೆದ ಪ್ರತಿಪದಾರ್ಥ ಟೀಕೆ**

**ವಚನ** – ನೋಟವಾಗದ ಮುನ್ನ ಬೇಟವಾಯಿತ್ತು; ಬೇಟವಾಗದ ಮುನ್ನ ಕೂಟವಾಯಿತ್ತು. ಕೂಟವಾಗದ ಮುನ್ನ ಬಸುರಾಯಿತ್ತಯ್ಯಾ; ಬೇನೆ ತೋರದ ಮುನ್ನ ಬೆಸಲಾಯಿತ್ತಯ್ಯ. ಬೆಸಲಾದ ಶಿಶುವೆದ್ದು ತಂದೆಯನಪ್ಪಲು, ಪಶುಪತಿ ಐಕ್ಯವಾದುದು ಸೋಜಿಗವಯ್ಯ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ (ವ ೫೬೪)

**ಟೀಕು**: "ನೋಟವಾಗದ ಮುನ್ನ – ಶರಣಲಿಂಗಕ್ಕೆ ಸಮರಸ ನಿರೀಕ್ಷಣೆಯುಂಟಾಗದಾ ಕ್ಷಣದಲ್ಲಿಯೇ, **ಬೇಟವಾಯಿತ್ತು** – ಶರಣಲಿಂಗಕ್ಕೆ ಸಮರಸ ಸ್ನೇಹದೊರಕೊಂಡಿತ್ತು. **ಬೇಟವಾಗದ ಮುನ್ನ** – ಆ ಶರಣಲಿಂಗಕ್ಕೆ ಸಮರಸ ಸಂಯೋಗವಾದಾಕ್ಷಣವೆ, **ಕೂಟವಾಯಿತ್ತು** – ಶರಣಲಿಂಗಕ್ಕೆ ಸಮರಸ ಸಂಯೋಗವು ದೊರಕೊಂಡಿತ್ತು. **ಕೂಟವಾಗದ ಮುನ್ನ** – ಶರಣಲಿಂಗಕ್ಕೆ ಸಮರಸ ಸಂಯೋಗವಾದಾಕ್ಷಣವೆ, **ಬಸುರಾಯಿತ್ತಯ್ಯ** – ಶರಣಂಗೆ – ಚಿದ್ಗರ್ಭದೋರಿತ್ತಯ್ಯ. **ಬೇನೆ ತೋರದ** ಮುನ್ನ – ಶರಣನಲ್ಲಿ ಲಿಂಗವಿಕಳಾವಸ್ಥೆಯುಂಟಾದಾಕ್ಷಣವೆ, **ಬೆಸಲಾಯಿತ್ತಯ್ಯಾ** – ಜ್ಞಾನಲಿಂಗವೆಂಬ ಚಿತ್ಪುತ್ರನುದಯವಾದನು. **ಬೆಸಲಾದ ಶಿಶುವೆದ್ದು** – ಉದಯವಾದ ಚಿತ್ಪುತ್ರನಿಗೆ ಅರಿವಧಿಕವಾಗಿ ಕ್ರಿಯಾಚಾರವನತಿಕ್ರಮಿಸಿ, **ತಂದೆಯನಪ್ಪಲು** – ಆದಿ ಕಾರಣವಾದ ಮಹಾಲಿಂಗದಲ್ಲಿ ಕೂಡಲು, ಪಶುಪತಿ ಐಕ್ಯವಾದುದು ಸೋಜಿಗವಯ್ಯ ಬ್ರಹ್ಮಾದಿ ಪಶುಗಳಿಗೊಡೆಯನಾದ ಪರಶಿವಲಿಂಗದಲ್ಲಿ ಏಕಾರ್ಥವಾದುದತ್ಯಾಶ್ಚರ್ಯವೆಂಬ ಶಬ್ದಕ್ಕರ್ಥ".

**೫. ಇಡೀ ವಚನಕ್ಕೆ ಬರೆದ ಸಾರರೂಪದ ತಾತ್ಪರ್ಯಾರ್ಥಕ್ಕೆ**

**ವಚನ:** ಬೋಜನಸಾಲೆಯ ಆಧಾರದ ರತ್ನಪೀಠದಲ್ಲಿ
ವಿರಾಜಿಸುವ ರಾಜಮೂರ್ತಿ ಇವನಾರಯ್ಯ
ಮೂಜಗದೊಡೆಯ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭು ತಾನೆ
ಕಾಣಿರೊ (ವ – ೩೭೮)

**ಟೀಕೆ:** "ಸಕಲ ಕರಣೇಂದ್ರಿಯ ವ್ಯಾಪಾರಕಾಶ್ರಯವಾದ ಶರಣನ ಸ್ಥೂಲತನುವಿನ ಮೂಲಾಧಾರದ ಚತುರ್ದಳ ಕಮಲಕರ್ಣಿಕಾಗ್ರದಲ್ಲಿ ಬೆಳಗಲ್ಪಟ್ಟ ಪ್ರಾಣಲಿಂಗವೆ ತನುತ್ರಯಸಂಬಂಧವಾದ ಜೀವತ್ರಯಂಗಳಿಗಧಿಷ್ಠಾನ ಕರ್ತೃವಾದಿಪ್ಪ ಪ್ರಾಣ ಭಾವಲಿಂಗಸ್ವರೂಪವಾಗಿ ಬೆಳಗುತ್ತಿಹನೆಂಬುದೀಗ ವಚನದ ತಾತ್ಪರ್ಯಾರ್ಥ".

ಹೀಗೆ ಸೋಮಶೇಖರ ಶಿವಯೋಗಿಯು ವಾಚ್ಯಾರ್ಥಕ್ಕೆ ಎಲ್ಲಿಯು ಅವಕಾಶ ನೀಡದೆ ತಾತ್ವಿಕಾರ್ಥದಲ್ಲಿಯೇ ಟೀಕೆ ಬರೆದಿರುವುದು ಸ್ಪಷ್ಟವಾಗಿದೆ. ಅಷ್ಟೇ ಅಲ್ಲದೇ, ಸಂಸ್ಕೃತ ಶ್ಲೋಕಗಳನ್ನು ಟೀಕೆಗಳಲ್ಲಿ ಉದಾಹರಣೆಗೆ ೧೨೫, ೪೪೯ರಲ್ಲಿ ಅರ್ಥಸಮರ್ಥನೆಗೆ ಬಳಸಿಕೊಂಡಿದ್ದಾನೆ. ವಚನ ೧೨೯ ಈ ಒಂದೇ ವಚನಕ್ಕೆ ಅರ್ಥ ಟೀಕೆ ಬರೆದು ನಿಲ್ಲಿಸಲಾಗಿದೆ.

ಡಾ. ವೀರಣ್ಣ ರಾಜೂರ ಅವರು ಹೇಳುವಂತೆ – "ಮೂರನೆಯ ಟೀಕೆಯಂತೆಯೇ (ಮೂರನೇಯ ಟೀಕೆ ಎಂದರೆ ಇಲ್ಲಿ ಸಾಶಿಮ ಸಂಪಾದಿತ ಟೀಕಾಕೃತಿ ಎಂದರ್ಥ.) ಇಲ್ಲಿಯು ಆರಂಭದಲ್ಲಿ ವಚನಗಳ ಪೂರ್ಣಪಾಠವನ್ನು ಕೊಡದೆ ಒಮ್ಮೆಲೆ ಅದರಲ್ಲಿನ ವಾಕ್ಯಗಳನ್ನು ಎತ್ತಿಕೊಂಡು ಟೀಕೆಯನ್ನು ಬರೆಯುತ್ತ ಸಾಗಲಾಗಿದೆ. **ಇದು ಮುಖ್ಯವಾಗಿ ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ಟೀಕೆಯಾಗಿದೆ.** ಕ್ವಚಿತ್ತಾಗಿ ಒಂದೆರಡು ವಚನಗಳಲ್ಲಿ ಮಾತ್ರ ಕೆಲವು ಪದಗಳಿಗೆ ಪ್ರತಿಪದಾರ್ಥ ಟೀಕೆಯನ್ನು ಬರೆಯಲಾಗಿದೆ – (೧೫೪, ೫೬೪). ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ಟೀಕೆಯಲ್ಲಿ ಕೆಲವು ವಾಕ್ಯಗಳಿಗೆ ಎರಡು ಅರ್ಥವನ್ನು ಬರೆದುದುಂಟು (೧೨೫, ೧೪೩, ೩೨೨, ೩೨೫, ೩೭೬, ೪೩೪). ಎರಡನೆಯ ಅರ್ಥ ಬರೆಯುವುದಕ್ಕಿಂತ ಮೊದಲು 'ಮತ್ತಂ' ಎಂಬ ಪದ ಬಳಸಲಾಗಿದೆ. ಇನ್ನು ಕೆಲವು ವಚನಗಳಿಗೆ ಕೇವಲ ತಾತ್ಪರ್ಯಾರ್ಥ ಬರೆಯಲಾಗಿದೆ. (೨೨೮, ೩೯೧, ೬೦೧). ಇಲ್ಲಿ ತಾತ್ಪರ್ಯಾರ್ಥ ಎಂದರೆ ಇಡೀ ವಚನಕ್ಕೆ ಬರೆದ ಸಾರರೂಪದ ಟೀಕೆ ಎಂಬುದಾಗಿದೆ. ಇದರ ಕೊನೆಯಲ್ಲಿ 'ಎಂಬುದೀ ವಚನದ ತಾತ್ಪರ್ಯಾರ್ಥ' ಎಂದು ಬರೆಯಲಾಗಿದೆ. ವಚನ ೨೨೮ರ ಟೀಕೆಯ ಆರಂಭದಲ್ಲಿಯೂ 'ಇದಕ್ಕೆ ತಾತ್ಪರ್ಯಾರ್ಥವೆಂತೆಂದಡೆ' ಎಂದು ಬರೆಯಲಾಗಿದೆ.

ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ಟೀಕೆಯಲ್ಲಿ ಮೊದಲಿಗೆ ವಾಕ್ಯದ ಅರ್ಥವನ್ನು ಒಟ್ಟಾಗಿ ಹೇಳಿ, ಅದರ ಕೊನೆಗೆ ಎಂಬುದೀಗ ಎಂದು ಸೂಚಿಸಿ, ನಂತರ ವಚನದ ಮೂಲವಾಕ್ಯ ಅಥವಾ ಖಂಡವಾಕ್ಯದ ಪಾಠವನ್ನು ಕೊಟ್ಟು, ಅದರ ಕೊನೆಗೆ 'ಎಂಬ ಶಬ್ದಕ್ಕರ್ಥ' ಎಂದು ಮುಕ್ತಾಯಗೊಳಿಸಲಾಗಿದೆ. ಹೆಚ್ಚಾಗಿ ಮೊದಲ ವಾಕ್ಯದ ಟೀಕೆ ಮುಗಿದ ನಂತರ ಮುಂದಿನ ವಾಕ್ಯಗಳ ಅರ್ಥ ಬರೆಯುವಾಗ ಹಿಂದಿನ ವಾಕ್ಯಾರ್ಥಕ್ಕೆ ಸಂಬಂಧ ಕಲ್ಪಿಸಲು 'ಆ' ಅಥವಾ 'ಅಂತಪ್ಪ' ಎಂಬ ಪದವನ್ನು ಸೇರಿಸಲಾಗಿದೆ. ಕ್ವಚಿತ್ತಾಗಿ ಟೀಕೆಗಳ ಮಧ್ಯದಲ್ಲಿ ಸಂಸ್ಕೃತ ಉದ್ದರಣೆಗಳನ್ನು ಬಳಸಲಾಗಿದೆ (೧೨೫, ೪೪೯).[೧೦೦]

ಹೀಗೆ ತೋಂಟದ ಸಿದ್ಧಲಿಂಗರ ೧೫೨ ಬೆಡಗಿನ ವಚನಗಳಿಗೆ ಮಾತ್ರ ಟೀಕೆ ಬರೆದ ಸೋಮಶೇಖರ ಶಿವಯೋಗಿ ವಚನಗಳಿಗೆ ಟೀಕು ಬರೆಯುವಲ್ಲಿ ವಿಶೇಷ ಪಾಂಡಿತ್ಯ ಹಾಗೂ ಪರಿಣತಿಯನ್ನು

ಹೊಂದಿದ್ದ. ಟೀಕು ರಚನೆಯಲ್ಲಿ ಸ್ವಪ್ರತಿಭೆಯನ್ನು ತೋರಿಸಿರುವನಾದರೂ ಸಾಂಪ್ರದಾಯಿಕ ಟೀಕಾಮಾದರಿಯನ್ನು ಅನುಸರಿಸಿದ ಪರಿಣಾಮವಾಗಿ ತತ್ವಾರ್ಥಕ್ಕೆ ಮಾತ್ರ ಸೀಮಿತವಾಗಿದ್ದರಿಂದ ಆತನ ಸಮಕಾಲೀನ ಸಮಾಜದ ಸಂಸ್ಕೃತಿ, ಇತಿಹಾಸ, ರಾಜಕೀಯ ಮತ್ತಿತರ ಜೀವನ ದರ್ಶನಕ್ಕೆ ಅವಕಾಶವಿಲ್ಲದಂತಾಗಿದೆ.[೧೧೧]

**ಆ. ಅಜ್ಞಾತ ಟೀಕಾಕಾರ:** "ತೋಂಟದ ಸಿದ್ದೇಶ್ವರದೇವರು ನಿರೂಪಿಸಿದ ಷಟ್‌ಸ್ಥಲಜ್ಞಾನಾಮೃತ ವಚನಗಳು" ಎಂಬ ವಚನ ಟೀಕಾಗ್ರಂಥದ ಕರ್ತೃ ಅಜ್ಞಾತ. ಹಸ್ತಪ್ರತಿಯ ಆದಿ ಅಂತ್ಯದಲ್ಲಿ ಕೃತಿಕಾರನ, ಲಿಪಿಕಾರನ ಮತ್ತು ಕೃತಿರಚನೆ ಕಾಲದ ಬಗ್ಗೆ ಯಾವುದೇ ವಿವರಗಳಿಲ್ಲ. ಹೀಗಾಗಿ, ಕರ್ತೃ ಕಾಲದ ಬಗೆಗೆ ಖಚಿತವಾಗಿ ಹೇಳಲು ಆಧಾರಗಳಿಲ್ಲ. ಆದರೆ, ಡಾ. ವೀರಣ್ಣ ರಾಜೂರ ಅವರು "ದೊರೆತ ಹಸ್ತಪ್ರತಿ ಕೋರಿಕಾಗದದಲ್ಲಿ ಬರೆದುದಾಗಿರುವುದರಿಂದ, ಟೀಕೆಯ ಶೈಲಿ ಶಿಷ್ಟದೇಶಿ ಮಿಶ್ರಣದಿಂದ ಕೂಡಿರುವುದರಿಂದ ೧೮ನೆಯ ಶತಮಾನದ ಸುಮಾರಿಗೆ ರಚಿಸಿದುದಾಗಿರಬೇಕೆಂದು ಊಹಿಸಬಹುದು"[೧೧೨] ಎಂಬ ಅಭಿಪ್ರಾಯವನ್ನು ಸದ್ಯಕ್ಕೆ ಸ್ವೀಕರಿಸಬಹುದಾಗಿದೆ. ಈ ಟೀಕಾ ಕೃತಿಯನ್ನು ಡಾ. ಸಾ.ಶಿ. ಮರುಳಯ್ಯನವರು ಸಂಪಾದಿಸಿ ಪ್ರಕಟಿಸಿದ್ದು "**ತೋಂಟದಾರ್ಯ ವಚನ ವ್ಯಾಖ್ಯೆ**" ಎಂದು ಹೆಸರಿಸಿದ್ದಾರೆ.

**ಕೃತಿ ಸ್ವರೂಪ:** "ತೋಂಟದಾರ್ಯ ವಚನ ವ್ಯಾಖ್ಯೆ" ಇದನ್ನು ೧೯೯೦ರಲ್ಲಿ ಡಾ.ಸಾ.ಶಿ. ಮರುಳಯ್ಯ ಅವರು ಸಂಪಾದಿಸಿ, ಎಡೆಯೂರಿನ ಶ್ರೀತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ ದಾಸೋಹ ಸೇವಾ ಸಂಘದಿಂದ ಪ್ರಕಟಿಸಿದ್ದಾರೆ. ಗ್ರಂಥದ ಪರಿಷ್ಕರಣಕ್ಕೆ ನ್ಯಾಯಮೂರ್ತಿಗಳಾಗಿದ್ದ ಶ್ರೀ ಮಹಾಂತಯ್ಯನವರಿಂದ ಲಭಿಸಿದ ಹಸ್ತಪ್ರತಿಯನ್ನು ಬಳಸಿಕೊಂಡಿದ್ದಾರೆ. ಇದರ ಸ್ವರೂಪ ಕುರಿತು ಸಂಪಾದಕರು "ಮೂಲ ಪ್ರತಿಯು ದಪ್ಪನಾದ ಕಾಗದದ ಮೇಲೆ, ರಾಗಿಯಿಂದ ತಯಾರಿಸಿದ ಇಂಕ್‌ನಲ್ಲಿ ಬರೆಯಲ್ಪಟ್ಟಿತ್ತು. ಅದರ ಆಧಾರದ ಮೇಲೆ ವ್ಯಾಖ್ಯೆ ಬಹಳ ಪ್ರಾಚೀನಕ್ಕೆ ಸೇರುವಂಥಾದ್ದೇನೂ (ಅಲ್ಲ) ಎಂಬುದು ನಿರ್ಧಾರವಾಯಿತು. ಹೆಚ್ಚೆಂದರೆ ಒಂದು ನೂರು ವರ್ಷಗಳ ಒಳಗಿನ ಬರೆಹ ಇದ್ದಿರಬಹುದು ಎಂದು ಊಹಿಸಬಹುದು. ಆದರೆ, ವ್ಯಾಖ್ಯಾನಕಾರನ ಹೆಸರು ಎಲ್ಲಿಯೂ ಇಲ್ಲ. ಸಿಕ್ಕಿದ್ದು ಒಂದೇ ಒಂದು ಪ್ರತಿಯಾದ್ದರಿಂದ ಸೂಕ್ತ ಪಾಠಾಂತರಗಳನ್ನು ಆರಿಸಿಕೊಳ್ಳಲೂ ಅವಕಾಶವಾಗಲಿಲ್ಲ. ಇದರಿಂದಾಗಿ ಇದ್ದದ್ದನ್ನು ಇದ್ದಂತೆಯೇ ಪ್ರತಿಮಾಡಿ ಪ್ರಕಟಿಸಬಯಸಿದೆ. ಅದು ಬಿಟ್ಟು ಬೇರೆ ದಾರಿಯೇ ನನಗಿರಲಿಲ್ಲ..... ಆದರೆ ಎಡೆಯೂರು ಶ್ರೀ ಸಿದ್ಧಲಿಂಗ ಶಿವಯೋಗಿಗಳ ಎಲ್ಲ ವಚನಗಳಿಗೂ ಅಂದರೆ ೭೦೨ ವಚನಗಳಿಗೂ ಸವಿಸ್ತಾರವಾಗಿ, ಸಮಗ್ರವಾಗಿ ವ್ಯಾಖ್ಯಾನಿಸಿ, ಅವುಗಳು ಸ್ಫುರಿಸಬಹುದಾದ ಅರ್ಥದ ಎಲ್ಲ ಮೈ ಮಗ್ಗಲುಗಳನ್ನೂ ಎಳೆಎಳೆಯಾಗಿ ಬಿಡಿಸಿ ಪರಿಚಯಿಸಿದ ಕೀರ್ತಿ ಈ ಕೃತಿಯ ವ್ಯಾಖ್ಯಾನಕಾರರಿಗೆ ಸಲ್ಲುತ್ತದೆ. ಕಡೆಕಡೆಯಲ್ಲಿ ಆಲಸ್ಯದಿಂದಲೋ ಅವಜ್ಞತೆಯಿಂದಲೋ ಆತುರಾತುರವಾಗಿ ಹೇಳಿಕೊಂಡು ಗುರಿ ಮುಟ್ಟಲು ಧಾವಿಸಿದ್ದರೂ ವ್ಯಾಖ್ಯಾನಕಾರ ಎಲ್ಲೂ ಎಡವಿಲ್ಲ, ಮುಗ್ಗರಿಸಿಲ್ಲ. ಆರಂಭದ ವಚನಗಳಿಗಂತೂ ಸಾವಧಾನದ ಹಾಗೂ ತೃಪ್ತಿಕರವಾದ ವ್ಯಾಖ್ಯೆ ನೀಡಿದ್ದಾನೆ".[೧೧೩]

ಈ ಹಸ್ತಪ್ರತಿಯ ಆರಂಭದಲ್ಲಿ "ಶ್ರೀ ಗುರು ಬಸವಲಿಂಗಾಯನಮಃ ಶ್ರೀ ಶಾಂತಲಿಂಗ ಸ್ವಾಮಿಗಳ ಪಾದವೇ ಗತಿ; ಶಿವಲಿಂಗಾಯ ನಮಃ; ತೋಂಟದ ಸಿದ್ದೇಶ್ವರದೇವರು ನಿರೂಪಿಸಿದ ಷಟ್‌ಸ್ಥಲ ಜ್ಞಾನಸಾರಾಮೃತ ವಚನಂಗಳ ಬರೆವುದಕ್ಕೆ ಶುಭಮಸ್ತು, ಶೋಭನಮಸ್ತು, ಆಯುರಾರೋಗ್ಯ ಐಶ್ವರ್ಯಮಸ್ತು, ನಿರ್ವಿಘ್ನಮಸ್ತು ಶ್ರೀರಸ್ತು ಕಲ್ಯಾಣಮಸ್ತು" ಎಂದಿದೆ. ಅಂತ್ಯದಲ್ಲಿ "ನಿರವಯಸ್ಥಲ ಸಮಾಪ್ತಂ. ನಿರವಯಸ್ಥಲ–ನಿಷ್ಕಲಬ್ರಹ್ಮಸ್ಥಲವು ಸಮಾಪ್ತ – ಎಲ್ಲಾ ಭಕ್ತ ಮಾಹೇಶ್ವರರ ಶ್ರೋತ್ರ ಮುಖದಲ್ಲಿ ಮುಕ್ತಾಯವಾಯಿತು. ಮಂಗಲ – ಶಿವೇತಿ ಮಂಗಲಂ. ನಾಮ 'ಯಸ್ಯವಾಚ ಪ್ರವರ್ತತೇ ಭಸ್ಮೀಭವತಿ ತಸ್ಮಾತ್ ಮಹಾಪಾತಕ ಕೋಟಿಯಃ' ಎಂದು ಮಂಗಲವೆಂದರು, ಶುಭವೆಂದರು, ಶೋಭನವೆಂದರು, ಭದ್ರವೆಂದರು, ಕಲ್ಯಾಣವೆಂದರು ಒಂದೇ ಪರ್ಯಾಯವು. ಮಹತ್–ಅಧಿಕವಾದ, ಶ್ರೀ ಎಂದರೆ ಜ್ಞಾನ ಮತ್ತು ಶ್ರೀ ಎಂದರೆ ದಾನ ಮತ್ತು ಶ್ರೀ ಎಂದರೆ ಐಶ್ವರ್ಯ. ಇಂತಪ್ಪ ಜ್ಞಾನ, ದಾನ, ಐಶ್ವರ್ಯವನುಳ್ಳ ಶಾಸ್ತ್ರವನು ಬರೆದೋದಿ ಪಾಠವ ಮಾಡಿಕೊಂಡು ಜ್ಞಾನಗುರುಮೂರ್ತಿಗಳಿದ್ದೆಡೆಗೆ ಹೋಗಿ ದೀರ್ಘದಂಡ ನಮಸ್ಕಾರ ಮೊದಲಾದ ಭಕ್ತಿಯಿಂದ ಇದರರ್ಥ ಅನ್ವಯ ಭಾವ ತಾತ್ಪರ್ಯ ವರ್ಣಂಗಳ ಸ್ವರೂಪವೆಲ್ಲವನು ಶ್ರೋತ್ರ ಮುಖದಲ್ಲಿ ಕೇಳಿ, ಮನೋ ಮುಖದಲ್ಲಿ ಹಾರೈಸಿ, ಹೃದಯಮುಖದಲ್ಲಿ ಲಿಂಗವ ಮಾಡಿಕೊಂಡು ತಮ್ಮ ಆದಿ ಮಧ್ಯಾವಸಾನ ನಿತ್ಯಾನಿತ್ಯ ವಿವೇಕವನು ತಿಳಿದುಕೊಂಡು ಆಚರಿಸುವಂಥ ಶಿವಶರಣಗಣಂಗಳು ನಿರತಿಶಯ ಜ್ಞಾನದ ನಿಜೈಶ್ವರ್ಯವನು ಪಡೆದು ಬಾಳುವರು. ಅಂತೂ ಸ್ಥಲ ೨೩ಕ್ಕಂ ಸೇರಿದ ವಚನಂಗಳು ೭೦೧ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ" ಎಂದು ಹಸ್ತಪ್ರತಿಯಲ್ಲಿ ಬರೆಯಲಾಗಿದೆ. ಅಲ್ಲದೇ, ಟೀಕಾಕಾರ, ಲಿಪಿಕಾರ ಮತ್ತು ಪ್ರತಿಮಾಡಿದ ಕಾಲದ ಬಗ್ಗೆ ಹಸ್ತಪ್ರತಿಯಲ್ಲಿ ಯಾವುದೇ ಮಾಹಿತಿ ಇಲ್ಲದಿರುವಂತೆಯೇ 'ತೋಂಟದಾರ್ಯ ವಚನವ್ಯಾಖ್ಯೆ' ಎನ್ನುವ ಹೆಸರಿಗೂ ಹಸ್ತಪ್ರತಿಯಲ್ಲಿ ಆಧಾರಗಳಿಲ್ಲ. "ಹೀಗಾಗಿ ಈ ಹೆಸರು ಸಂಪಾದಕರು ಕಲ್ಪಿಸಿದ್ದಾಗಿರುವಂತಿದೆ. ಹಸ್ತಪ್ರತಿಯ ಕಟ್ಟಿನ ಮೇಲೆನಾದರೂ ಹೀಗೆ ಬರೆಯಲಾಗಿತ್ತೋ ಏನೋ ತಿಳಿಯದು. ಈ ಪ್ರತಿಯನ್ನು ಹೋಲುವ ಬೇರೆ ಹಸ್ತಪ್ರತಿಗಳು ಇದುವರೆಗೆ ಲಭ್ಯವಾಗಿಲ್ಲ"[೧೧೪] ಎಂದು ಡಾ. ವೀರಣ್ಣ ರಾಜೂರ ಅಭಿಪ್ರಾಯಪಡುತ್ತಾರೆ. ಒಟ್ಟಾರೆ, ಕೃತಿಯಲ್ಲಿ 'ತೋಂಟದ ಸಿದ್ಧೇಶ್ವರದೇವರು' ಮತ್ತು 'ಷಟ್‌ಸ್ಥಲಜ್ಞಾನಾಮೃತ ವಚನಂಗಳು' ಎಂಬ ಹೆಸರುಗಳಿಗೆ ಕೂಡ ಟೀಕೆ ಬರೆಯುವದರೊಂದಿಗೆ ಆರಂಭವಾಗುತ್ತದೆ. ಕ್ರಮವಾಗಿ ಆಯಾ ಸ್ಥಲದ ಹೆಸರು, ಅದಕ್ಕೆ ಬರೆದ ಸೂತ್ರ ಮತ್ತು ಟೀಕೆ, ಆಮೇಲೆ ವಚನದ ಪೂರ್ಣಪಾಠ, ಅದಕ್ಕೆ ಟೀಕೆ ಹೀಗೆ ರಚನೆಗೊಂಡಿದೆ.

**ಟೀಕಾ ಸ್ವರೂಪ:** ಇಲ್ಲಿ ಟೀಕಾಕಾರನು ಪ್ರತಿಪದಾರ್ಥ ಟೀಕೆ ಬರೆದಿದ್ದಾನೆ. ಅಂದರೆ ಒಂದೊಂದು ವಚನದೊಳಗಿನ ಬಿಡಿಬಿಡಿಯಾದ ಪದಗಳಿಗೆ ಅರ್ಥವನ್ನು ಬರೆಯಲಾಗಿದೆ. ಇದೇ ಮಾದರಿಯ ಟೀಕೆಯಲ್ಲಿ ವೈವಿಧ್ಯತೆಯೂ ಇದೆ.

**೧. ಬಿಡಿ ಪದಗಳಿಗೆ ಬರೆದ ಸಂಕ್ಷಿಪ್ತ ಅರ್ಥ**

**ಉದಾ:** "ಪಂಚವಕ್ತ್ರ – ಐದು ಮುಖವನುಳ್ಳಂಥ, ದಶಭುಜಂ – ಹತ್ತು ತೋಳುಗಳುಳ್ಳಂಥ, ದಶಪಂಚನೇತ್ರಂ – ಹದಿನೈದು ಲೋಚನಗಳುಳ್ಳಂಥ, ದ್ವಿಪಾದಂ – ಎರಡು ಚರಣಗಳುಳ್ಳಂಥ, ತನುವೇಕಂ– ಒಂದು ದೇಹವನುಳ್ಳಂಥ" (ವಚನ–೦೫)

**೨. ಬಿಡಿ ಪದಗಳಿಗೆ ವಿಸ್ತರಿಸಿ ಬರೆದ ಅರ್ಥ:**

**ಉದಾ:** ಕನಕಗಿರಿ ನಿವಾಸಂ–ಹದಿನಾರು ಸಾವಿರ ಯೋಜನ ಭೂಮಿಯೊಳಗೆ ನೆಟ್ಟು, ಎಂಬತ್ತು ನಾಲ್ಕು ಸಾವಿರ ಯೋಜನ ಭೂಮಿಯು ಮೇಲಕ್ಕೆ ಬೆಳೆದು, ಅಂತು ಲಕ್ಷ ಯೋಜನ ವಿಶಾಲ ಉನ್ನತವಾದ ಮಹಾಮೇರು ಪರ್ವತವೆ ಮಂದಿರವಾಗುಳ್ಳಂಥ ಎಲೆ ಪರಶಿವಲಿಂಗವೆ (ವಚನ–೩ ಮತ್ತು ವಚನ–೬ನ್ನು ನೋಡಬಹುದು).

**೩. ವಾಕ್ಯದೊಳಗಿನ ಬಿಡಿಪದಗಳಿಗೆ ಬರೆದ ಸಂಕ್ಷೇಪಾರ್ಥ:**

ಇಲ್ಲಿ ಮೊದಲು ಒಂದು ವಾಕ್ಯವನ್ನು ಕೊಟ್ಟು ಅನಂತರ ಅದರೊಳಗಿನ ಬಿಡಿಬಿಡಿ ಪದಗಳನ್ನು ಮತ್ತೆ ಪ್ರತ್ಯೇಕಿಸಿ ಅರ್ಥ ಬರೆಯಲಾಗಿದೆ. ಉದಾ: ಅನಾದಿ ಸಂಸಿದ್ಧನಾಗಿ ಶರಣಂಗೆ ವೀರಶೈವವೆ ಅಧಿಕವೆಂದು ಪ್ರತಿಷ್ಠಿಸಿದ ಶರಣನು (೨ನೇ ಸ್ಥಲ ಸೂತ್ರ)

ಅನಾದಿ–ಎಂದೆಂದೂ ಸಂಸಿದ್ದವಾಗಿ–ಮಿಗೆ ಪ್ರಸಿದ್ದವಾಗಿ, ಶರಣಂಗೆ–ಶಿವಶರಣಂಗೆ, ವೀರಶೈವವೇ ಪರಮವೀರಶೈವವೇ, ಅಧಿಕವೆಂದು–ಶ್ರೇಷ್ಠವೆಂದು, ಪ್ರತಿಷ್ಠಿಸಿದ–ಸ್ಥಾಪಿಸಿದ, ಶರಣನು–ಶಿವಶರಣನು.

**೪. ಇಡೀ ವಾಕ್ಯಕ್ಕೆ ವಿಸ್ತರಿಸಿ ಬರೆದ ಅರ್ಥ:**

**ಉದಾ:** ಮಲದೊಡನೆ ಕೈದಂಡೆಯನಿಕ್ಕಿದರೆ ಮಾನಸಿಕ ಕೆಡದೆ ಮಾಣ್ಬುದೆ (೧೧೩) **ಟೀಕು**– ಸಾಧನೆಯ ಮಾಡಬೇಕಾದರೆ ಪವಿತ್ರಸ್ಥಾನ ಗಚ್ಚುಗಾರಿಕೆಯ ಮಾಡಿದಂಥ ಜಗುಲಿ ಪಟ್ಟಸಾಲೆಗಳಲ್ಲಿ ಪುಷ್ಪದ ವಾಟಿಕೆಗಳಲ್ಲಿ ಗರುಡಿಮನೆಗಳಲ್ಲಿ ಸಾಧನೆಯ ಮಾಡಬೇಕಲ್ಲದೆ, ಎಲ್ಲರೂ ಮಲಮೂತ್ರಂಗಳನು ಬಿಡುವಂಥ ಅಪವಿತ್ರ ಸ್ಥಾನದಲ್ಲಿ ಕೈಯನು ನೆಲಕ್ಕೆ ಊರಿ ಸಾಧನೆಯನು ಮಾಡಿದರೆ ನೋಡಿದಂಥ ಆತ್ಮರುಗಳನು ನೀ ನೋಡು, ನಿನ್ನ ಹೊಟ್ಟೆಯ ನೋಡು, ನಿನ್ನ ಗಡ್ಡವ ನೋಡೆಂದು ಛೀ ಹಾ, ಎಂದಲ್ಲಿ ಹಿರಿತನ ಹೋಗದೆ ಬಿಟ್ಟೀತೆ? ಬಿಡದು" ಎಂದು ಲೋಕಾರೂಢಿಯ ಮಾತುಗಳಲ್ಲಿ ಸರಳವಾಗಿ ಅರ್ಥ ಬರೆದಿರುವುದನ್ನು ಇಲ್ಲಿ ಕಾಣುತ್ತೇವೆ.

**೫. ಬಿಡಿ ಪದಕ್ಕೆ ಬರೆದ ಎರಡು ಮೂರು ಅರ್ಥ:**

**ಉದಾ:** ನೀನೊಬ್ಬನೆ ಇರ್ದೆಯಲ್ಲ (೧೦) ನೀನೊಬ್ಬನೆ ಆಗಿ, ಓರ್ವನೆ ಆಗಿ – ಏಕದೇಶಮಾತ್ರಿಕವಾಗಿ – ಬಯಲಿಗನಾಗಿ ಒಪ್ಪುತ್ತಿರ್ದೆಯಲ್ಲ.

**೬. ವಾಕ್ಯದೊಳಗಿನ ಬಿಡಿಪದಗಳಿಗೆ ಒಂದರಿಂದ ಐದರವರೆಗೆ ಅರ್ಥಬರೆದುದು**

**ಉದಾ:** ಶುದ್ಧ ವಿಶೇಷ ನಿರ್ವಾಣವೆಂದು ವೀರಶೈವ ಮೂರು ತೆರನಾಗಿರ್ಪುದು

**ಟೀಕು:** ೧. ಶುದ್ಧ – ಶುದ್ಧಶೈವವು, ವಿಶೇಷ – ವೀರಶೈವವು, ನಿರ್ವಾಣ–ನಿರಾಭಾರ ವೀರಶೈವವು.

೨. ಶುದ್ಧಶೈವ–ವೀರಣ್ಣ ಬಸವಣ್ಣ ಮೊದಲಾದ ಸ್ಥಾವರಲಿಂಗದ ಭಜನೆಯ ಮಾಡಲ್ಪಡುವಂಥವರುಗಳೇ ಶುದ್ಧಶೈವರು; ವಿಶೇಷ–ಗುರುಲಿಂಗ ಜಂಗಮದ ಭಕ್ತಿಯನ್ನು ಮಾಡುತ್ತ ಅವರ ಪಾದೋದಕ ಪ್ರಸಾದಸೇವನೆಯ ಮಾಡಲ್ಪಟ್ಟಂಥವರುಗಳೇ ವಿಶೇಷ ವೀರಶೈವರು; ನಿರ್ವಾಣ–ಬೋದಡೆ ಬೋಳಮಸ್ತಕವನು ಮಾಡಿಕೊಂಡು ಕಂಥೆ ಬೊಂತೆಯನ್ನು ಹೊದ್ದುಕೊಂಡು ಮಲತ್ರಯಂಗಳಿಗೆ ವಿದೂರವಾಗಿ, ಭಕ್ತಿ, ಜ್ಞಾನ, ವೈರಾಗ್ಯ ಸಂಪನ್ನರಾಗಿ, ಐವತ್ತಾರು ದೇಶದಲ್ಲಿ ದಿಗ್ದೇಶಾಂತರೆಯನ್ನು ಮಾಡಲ್ಪಟ್ಟಂಥವರುಗಳೇ ನಿರಾಭಾರ ವೀರಶೈವರು.

೩. ಅಂತುಮಲ್ಲದೆ – ಶುದ್ಧ – ತ್ಯಾಗಾಂಗವು, ವಿಶೇಷ – ಭೋಗಾಂಗವು, ನಿರ್ವಾಣ – ಯೋಗಾಂಗವು.

೪. ಅಂತುಮಲ್ಲದೆ – ಶುದ್ಧ – ಇಷ್ಟಲಿಂಗವು, ವಿಶೇಷ – ಪ್ರಾಣಲಿಂಗವು, ನಿರ್ವಾಣ – ಭಾವಲಿಂಗವು.

೫. ಮತ್ತಂ – ಶುದ್ಧ – ಕ್ರಿಯಾ ಭಕ್ತಿಯು, ತ್ರಿವಿಧ ಪ್ರಕಾರವಾಗಿರ್ಪುದು. ಹೀಗೆ ಪ್ರತಿ ಪದಕ್ಕಿರುವ ವಾಚ್ಯಾರ್ಥ ಮೊದಲು ಹೇಳಿ ನಂತರ ತಾತ್ವಿಕಾರ್ಥ ಹೇಳಲಾಗಿದೆ.

**೭. ಸರಳವಚನಗಳಿಗೆ ಕೇವಲ ವಾಚ್ಯಾರ್ಥ ಕೆಲವೊಮ್ಮೆ ವಾಚ್ಯಾರ್ಥದೊಂದಿಗೆ ತಾತ್ವಿಕಾರ್ಥ ಎರಡನ್ನೂ ಸೇರಿಸಿ ಬರೆದ ಟೀಕೆಗಳಿವೆ. ಇಲ್ಲಿ ವಾಚ್ಯಾರ್ಥಕ್ಕೆ ಬರೆದ ಉದಾಹರಣೆ**

**ವಚನ:** ಮನಸಿನ ಸಂಶಯ ಕನಸಿನ ಭೂತವಾಗಿ ಕಾಡುವುದು ನೋಡಾ
ಮನಸಿನ ಸಂಶಯವಳಿದಡೆ ಕನಸಿನ ಕಾಟ ಬಿಟ್ಟು ಓಡಿತ್ತು ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ (ವಚನ – ೩೮೮)

**ಟೀಕೆ:** "ಮನಸಿನ ಸಂಶಯ: ಮನಸಿನ–ಮನದ, ಸಂಶಯ–ಸಂಕಲ್ಪವು, ಕನಸಿನ–ಸ್ವಪ್ನದ ಭೂತವಾಗಿ–ಪಿಶಾಚಿಯಾಗಿ, ಕಾಡುವುದು–ಪೀಡಿಸುವುದು ನೋಡಾ–ಕಂಡಾ......... ಇತ್ಯಾದಿ.

ವಾಚ್ಯಾರ್ಥ ಮತ್ತು ತಾತ್ವಿಕಾರ್ಥಕ್ಕೆ ಬರೆದ ಉದಾಹರಣೆ

**ವಚನ:** ಭಾವಮನಕ್ಕೆ ಲಿಂಗವಧರಿಸಿ ಕಾಯಕ್ಕೆ ಲಿಂಗವಿಲ್ಲದಿರಬಹುದೆ?
ಎರಡಂಗ ಭಕ್ತರಾಗಿ ಒಂದಂಗ ಭವಿಯಾಗಿರ್ಪ ಭ್ರಾಂತರ
ಮುಖವ ನೋಡಲಾಗದು. ತನುಮನಭಾವದಲ್ಲಿ ಲಿಂಗವಧರಿಸಿ
ಲಿಂಗತ್ರಯಕ್ಕೆ ಅಂಗತ್ರಯಕ್ಕೆ ಅಗಲಿಕೆಯಿಲ್ಲದೆ ಅಚಲಿತನಾಗಿರ್ದೆನಯ್ಯ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ (ವಚನ – ೧೮೨)

**ಟೀಕೆ:** ಭಾವ ಮನಕ್ಕೆ–ಹೃದಯ ಮನಕ್ಕೆ, ಲಿಂಗವ ಧರಿಸಿ–ಪ್ರಾಣ ಭಾವ ಲಿಂಗವನು ಧಾರಣವ ಮಾಡಿಕೊಂಡು, ಕಾಯಕ್ಕೆ ಲಿಂಗವಿಲ್ಲದಿರಬಹುದೆ–ಅಂಗದಲ್ಲಿ ಇಷ್ಟಲಿಂಗವು ಇಲ್ಲದಿರಬಹುದೆ?.

ಎರಡಂಗಭಕ್ತರಾಗಿ–ಮನದಲ್ಲಿ ಪ್ರಾಣಲಿಂಗ, ಭಾವದಲ್ಲಿ ಭಾವಲಿಂಗವು ಸಂಬಂಧವಾಗಿ, ಒಂದಂಗ ಭವಿಯಾಗಿರ್ಪ–ಅಂಗದಲ್ಲಿ ಇಷ್ಟಲಿಂಗವು ಸಂಬಂಧವಿಲ್ಲದಿರುವ, ಭ್ರಾಂತರ–ಜೀವಭಾವದ ಭ್ರಮಣೆಯುಳ್ಳವರ, ಮುಖವ–ವದನವನು, ನೋಡಲಾಗದು– ನಿರೀಕ್ಷಣೆಯ ಮಾಡಲಾಗದು; ತನುಮನ ಭಾವದಲ್ಲಿ–ತನುಮನ ಪ್ರಾಣಂಗಳಲ್ಲಿ, ಲಿಂಗವ ಧರಿಸಿ– ಇಷ್ಟ ಪ್ರಾಣ ಭಾವಲಿಂಗವನು ಧಾರಣಮಾಡಿಕೊಂಡು, ಲಿಂಗತ್ರಯಕ್ಕೆ–ಲಿಂಗಮೂರಕ್ಕೆ, ಅಂಗತ್ರಯಕ್ಕೆ–ಅಂಗಮೂರಕ್ಕೆ, ಅಗಲಿಕೆಯಿಲ್ಲದೆ– ವಿಯೋಗವಿಲ್ಲದೆ, ಅಚಲಿತನಾಗಿರ್ದನಯ್ಯಾ–ಚಲನೆಯಿಲ್ಲದಾತನಾಗಿರ್ದನಯ್ಯ, ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೆ".[೧೧೫] ಇದೇ ರೀತಿ ವಚನ ೨೬೭ನೇ ಟೀಕನ್ನು ಗಮನಿಸಬಹುದು.

**೮. ಬೆಡಗಿನ ವಚನಗಳಿಗೆ ಹೆಚ್ಚಾಗಿ ತಾತ್ವಿಕ ಅರ್ಥ, ಕ್ವಚಿತ್ತಾಗಿ ವಾಚ್ಯಾರ್ಥ, ತಾತ್ವಿಕಾರ್ಥ ಎರಡನ್ನೂ ಒಂದರ ನಂತರ ಒಂದರಂತೆ ಬರೆಯಲಾಗಿದೆ.**

ಕೇವಲ ತಾತ್ವಿಕಾರ್ಥಕ್ಕೆ ಉದಾಹರಣೆ –

**ವಚನ :** ಕತ್ತಲೆಯ ಪುರವ ಕಳ್ಳರು ಮುತ್ತಲು
ಪುರಪತಿ ಮುತ್ತಿಗೆಗೊಳಗಾದನು ನೋಡಾ ಅಯ್ಯಾ
ಅತ್ತಳ ಊರಿಂದ ಬೆಳಗು ಪಸರಿಸಲು ಮುತ್ತಿಗೆ ತೆಗೆದೋಡಿತ್ತು ನೋಡಾ
ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೆ (ವ – ೧೪೩)

**ಟೀಕೆ :** ಕತ್ತಲೆಯ ಪುರವ – ಅಜ್ಞಾನಕ್ಕಾಶ್ರಯವಾದ ದೇಹವೆಂಬ ನಗರವನು, ಕಳ್ಳರು – ಕಾಯಾದಿಳೆಂಬ ತಸ್ಕರರು, ಮುತ್ತಲು–ಅವಗ್ರಹಿಸಲು, ಅರಿಷಡ್ವರ್ಗಂಗಳಿಗೆಪುರಪತಿ–ತನುತ್ರಯಂಗಳಿಗೆ ಕರ್ತೃವಾದ ಆತ್ಮನು, ಮುತ್ತಿಗೆಗೆ–ಕಾಮಾದಿ ಅರಿಷಡ್ವರ್ಗಂಗಳ ಬಾಧ್ಯತ್ವಕ್ಕೆ, ಒಳಗಾದನು–ವಶಗತವಾದನು, ನೋಡಾ–ಕಂಡಾ, ಅಯ್ಯಾ–ಎಲೆ ಲಿಂಗವೆ, ಅತ್ತಳ ಊರಿಂದ – ಬ್ರಹ್ಮರಂಧ್ರದಿಂದ, ಬೆಳಗು – ನಿಷ್ಕಲಬ್ರಹ್ಮದ ಪ್ರಕಾಶತ್ವವು, ಪಸರಿಸಲು–ಗುರೂಪದೇಶದಿಂದ ಇಷ್ಟಲಿಂಗವಾಗಿ ಬಂದು ಅಂಗದಲ್ಲಿ ಸಂಬಂಧವಾಗಲು, ಆ ಮುತ್ತಿಗೆ–ಕಾಮಾದಿ ಅರಿಷಡ್ವರ್ಗಂಗಳ ಬಾಧ್ಯತ್ವವು, ತೆಗೆದು–ಕಡೆಗಾಗಿ, ಓಡಿತ್ತು–ಓಡು, ಪಲಾಯನೆ ಎಂದು ಪಲಾಯನವಾಯಿತ್ತು, ಕಾಣಾ–ಕಂಡಾ ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೆ".[೧೧೬]

**೯. ಒಂದು ವಾಚ್ಯಾರ್ಥ, ಒಂದು ತಾತ್ವಿಕಾರ್ಥಕ್ಕೆ ಉದಾಹರಣೆ**

ಅಡವಿಯ ಹುಲ್ಲ ಮೇದ ಪಶು ಮಡುವಿನಗ್ಗವಣಿಯ ಕುಡಿದು,
ನಡುಬೀದಿಯಲ್ಲಿ ಬರುತ್ತಿರಲು, ಕಡೆಯಲ್ಲಿರ್ದ ಹುಲಿ ಹಿಡಿಯಲು
ನಿನ್ನೊಡವೆಯನೇನ ಬಳಸಿಕೊಂಡೆನೋ ಎಂದು ತನ್ನೊಡೆಯನ
ಕರೆಯಲು ಹಿಡಿದ ಹುಲಿ ಬಿಟ್ಟೋಡಿತ್ತು
ನೋಡಾ ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೆ(೧೩೬)

**ಟೀಕೆ:** "ಅಡವಿಯ ಹುಲ್ಲ ಮೇದ ಪಶು: ಅಡವಿಯ–ಅರಣ್ಯದ, ಹುಲ್ಲ–ತೃಣವನು, ಮೇದ–ಭಕ್ಷಿಸಿದ, ಪಶು – ಆಕಳು, ಮಡುವಿನ–ಕಾಡಗಟ್ಟೆಯ, ಅಗ್ಗವಣಿಯ–ಉದಕವನು, ಕುಡಿದು–ಪಾನವಮಾಡಿ, ನಡುಬೀದಿಯಲ್ಲಿ– ನಡುಬಾಜಾರದಲ್ಲಿ, ಬರುತ್ತಿರಲು–ಐತರುತ್ತಿರಲು, ಕಡೆಯಲ್ಲಿದ್ದ ಹುಲಿಬಂದು ಹಿಡಿಯಲು: ಕಡೆಯಲ್ಲಿರ್ದ– ಎಡಬಡದಲ್ಲಿರುತ್ತಿರ್ದ, ಹುಲಿ–ವ್ಯಾಘ್ರನು, ಬಂದು–ಎಯ್ದು ಬಂದು, ಹಿಡಿಯಲು – ಪಿಡಿಯಲು, ನಿನ್ನೊಡವೆಯ – ನಿನ್ನ ದ್ರವ್ಯವನು, ಏನಬಳಸಿಕೊಂಡಿನೊ – ಏನ ತೆಗೆದುಕೊಂಡನೊ, ಎಂದು–ಹೀಗೆಂದು, ತನ್ನೊಡೆಯನ–ಹುಲ್ಲನ್ನು ಹಾಕಿ, ನಿನ್ನನ್ನು ತೋರಿ ಸಂರಕ್ಷಣೆ ಮಾಡುವಂಥ ಒಡೆಯನ, ಕರೆಯಲು – ಆಹ್ವಾನಿಸಲು, ಹಿಡಿದ–ಪಿಡಿದಂಥ, ಹುಲಿ–ವ್ಯಾಘ್ರನು, ಬಿಟ್ಟು–ಬಿಟ್ಟುಕೊಟ್ಟು, ಓಡಿತ್ತು – ಓಡು, ಪಲಾಯನೆ ಎಂದು ಪಲಾಯನವಾಯಿತ್ತೆಂಬ ದೃಷ್ಟೋಪಮಾನದ ಹಾಂಗೆ.

ಅಡವಿಯ–ಭವಾರಣ್ಯದ, ಹುಲ್ಲ–ವಿಷಯಂಗಳೆಂಬ ತೃಣವನು, ಮೇದ–ಭಕ್ಷಿಸಿದ, ಪಶು–ಜೀವನೆಂಬ ಪಶು, ಮಡುವಿನಗ್ಗವಣಿಯ–ದೇಹದಂತರಂಗದಲ್ಲಿರುವ ಸಂಸಾರ ವಿಷಯ ಜಲವನು, ಕುಡಿದು–ಪಾನವ ಮಾಡಿ, ಕಡೆಯಲ್ಲಿದ್ದ ಶಿವತತ್ವಕ್ಕೆ ವಿಲಕ್ಷಣವಾಗಿದ್ದ, ಹುಲಿ–ಕಾಲವ್ಯಾಘ್ರನು, ಬಂದು–ಎಯ್ದುಬಂದು, ಹಿಡಿಯಲು– ದೃಢವಿಡಿಯಲು, ನಿನ್ನೊಡವೆಯ–ನಿನ್ನೊಡವೆಯಾದಂಥ ಪ್ರಾರಬ್ದ ಭೋಗವನು, ಏನು ಬಳಸಿಕೊಂಡೆನೊ–ಏನ ತೆಗೆದುಕೊಂಡೆನೊ, ಎಂದು–ಹೀಗೆಂದು, ತನ್ನೊಡೆಯನ–ತನ್ನ ಕರ್ತೃಸ್ವರೂಪವಾದ ಶ್ರೀಗುರುನಾಥನ, ಕರೆಯಲು–ಉಪಾವಸ್ತೆಯ ಮಾಡಲು, ಹುಲಿ–ಕಾಲವ್ಯಾಘ್ರನು, ಬಿಟ್ಟು–ವಿಸರ್ಜಿಸಿ, ಓಡಿತ್ತು–ನಷ್ಟವಾಗಿ ಹೋಯಿತ್ತು, ನೋಡಾ–ಕಂಡಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ".[೧೧೭]

ಇದೇ ರೀತಿ ವಿಸ್ತೃತವಾಗಿ ಬರೆದ ಟೀಕೆಯನ್ನು ೨೧೯ನೆಯ ವಚನಟೀಕೆಯಲ್ಲಿ ಕಾಣಬಹುದು. ಒಂದು ವಾಚ್ಯಾರ್ಥ, ಎರಡು ತಾತ್ವಿಕಾರ್ಥಕ್ಕೆ ೯೫ನೆಯ ವಚನಟೀಕೆ, ಒಂದು ವಾಚ್ಯಾರ್ಥ, ನಾಲ್ಕು ತಾತ್ವಿಕಾರ್ಥಗಳಿಗೆ ೭೨ನೆಯ ವಚನಟೀಕೆ ನೋಡಬಹುದು.

**೧೦. ವಚನದ ಕೆಲವು ಪದಗಳಿಗೆ ಲೋಕಾನುಭವ ಬೆರೆತ ವಿಸ್ತೃತ ಅರ್ಥಕ್ಕೆ:**

**ಉದಾ:** ದೇವಸ್ತ್ರೀಯರ–ಮರ್ತ್ಯಲೋಕದ ಸ್ತ್ರೀಯರುಗಳ, ದುರ್ಗಂಧಿಯರು–ಅಪವಿತ್ರೆಯರು, ಸ್ವಲ್ಪಾಯುಷ್ಯ– ಸ್ವಲ್ಪ ಭವಿಷ್ಯವನುಳ್ಳಂಥವರು, ಇವರ ಸಂಗವ ಮಾಡಿದರೆ ಪಾಪ ಸಂಭವಿಸುವುದು; ದೇವಲೋಕದ ಸ್ತ್ರೀಯರುಗಳೆ ಸದ್ಗಂಧಿಯರು– ಪವಿತ್ರೆಯರು, ದೀರ್ಘಾಯುಷ್ಯ, ದೀರ್ಘ ಭವಿಷ್ಯನುಳ್ಳಂಥವರು, ಅವರ ಸಂಗವ ಮಾಡಿದರೆ ಸ್ವರ್ಗಲೋಕದ ಪದವಿಯಾಗುವುದೆಂದು ಮರ್ತ್ಯಲೋಕದ ಸ್ತ್ರೀಯರ ಜಿಗುಪ್ಸಿಸಿ ದೇವತಾ ಸ್ತ್ರೀಯರುಗಳ, ಸಂಗಕ್ಕೆ–ಸಂಪರ್ಕಕ್ಕೆ, ಎಳಸುವದೆಲ್ಲಾ ಇಚ್ಛೈಸುವುದೆಲ್ಲಾ, ಕಾಯದಗುಣ ಕಾಣಿರಣ್ಣಾ ಕಾಯದ ಗುಣ–ತನುವಿನ ಮನ್ಮಥವಿಕಾರದ ವರ್ತನೆಯು, ಕಾಣಿರಣ್ಣಾ–ಕಂಡಿರಣ್ಣಾ (ವ–೧೦೮)

ಊರ ಹೊಲನ ಪಯಿರನು ಮೇದ ಬಸವ-ನಾಡಿಗ, ದೇಸಾಯಿ, ಶೆಟ್ಟಿ, ಸಾದರಿ, ದೊರದಾತರುಗಳು ಸತ್ತಿದ್ದಲ್ಲಿ ಅವರ ಹೆಸರ ಹೇಳಿ ಒಂದು ಶುದ್ಧ ಮುದ್ರೆಯನುಳ್ಳಂಥ ಒಂದು ಹೋರಿಯನು ತೆಗೆದುಕೊಂಡು ಬಂದು ಮಠಪತಿ ಗಣಾಚಾರಿ ಸ್ಥಾವರಿಕರು ಮೊದಲಾದವರು ಕೂಡಿ ಲಿಂಗಮುದ್ರೆಯನು ಒತ್ತಿಬಿಟ್ಟಲ್ಲಿ, ಅದಕ್ಕೆ ಹುಲ್ಲನು ಹಾಕಿ ನೀರನ್ನು ತೋರಿ, ಸಂರಕ್ಷಣವ ಮಾಡುವವರಾರಿದ್ದಾರು? (ವ-೧೧೪)

ವಿಸ್ಮಯ- ಮರ್ತ್ಯಲೋಕದಲ್ಲಿ ಸ್ತ್ರೀಯರುಗಳೇನಾದರು ಕುಟ್ಟುತ್ತಿದ್ದಲ್ಲಿ ಒನಕೆ ತಗುಲಿ ಕಠೋರ ಹರಿದು ತೂತು ಬಿದ್ದು ಆನೆ ಸೊಂಡಿಲ ಗಾತ್ರ ನೀರು ಸುರಿತಾವೆಂದು ಹೇಳುವಂತಾದ್ದು; ಅಂತುಮಲ್ಲದೆ, ಆ ಒನಕೆಯನು ದಬ್ಬಣವ ಮಾಡಿಕೊಂಡು ಗುಂಗರ ಚರ್ಮದಿಂದ ತ್ಯಾಪೆ ಹಾಕಿ ಹೊಲಿದಲ್ಲಿ ನಿಂತಿತೆಂದು ಹೇಳುವಂಥಾದ್ದು; ಅಂತುಮಲ್ಲದೆ, ಮರ್ತ್ಯಲೋಕದಲ್ಲಿ ಬಾವಿಯ ನುರಿಗುಳಿಸುತ್ತಿರ್ದಲ್ಲಿ ಪಾತಾಳ ಲೋಕದ ಪರಿಯಂತರ ಕಂಡಿಬಿದ್ದು ಪಾತಾಳಲೋಕದ ತೊಟ್ಟಿಲಲ್ಲಿ ಮಲಗಿರುವ ಶಿಶುವಿನ ಕಣ್ಣಿನಲ್ಲಿ ಮಣ್ಣು ಬಿದ್ದಲ್ಲಿ, ಆ ಶಿಶುವಿನ ತಾಯಿ ಕೋಪಿಸಿದಲ್ಲಿ, ಬಾಯೊಳಗೆ ರಕ್ತವನು ಕಾರಿ ಸತ್ತು ಹೋದರೆಂದು ಹೇಳುವಂಥಾ ರೀತಿ ಆಶ್ಚರ್ಯವಾದ ಸುದ್ದಿಯು (ವ-೩೩೩)

ಹೀಗೆ, ವಾಚ್ಯಾರ್ಥ ಮತ್ತು ತಾತ್ವಿಕಾರ್ಥ ಎರಡನ್ನೂ ವಿಸ್ತೃತವಾಗಿ ನಿರೂಪಿಸಿದ ಮಾದರಿಗೆ ೨೧೯ನೆಯ ವಚನ ಟೀಕೆ ಗಮನಿಸಬಹುದು.

**೧೧. ಪದಗಳ ಅರ್ಥಸಮರ್ಥನೆಗೆ ಟೀಕೆಯ ಮಧ್ಯ ಸಂಸ್ಕೃತ ಉದ್ದರಣೆ ಬಳಸಲಾಗಿದೆ:**

**ಉದಾ:** ಸದಾಶಿವನ ಈಶಾನ್ಯ ಮುಖದಲ್ಲಿ- 'ಈಶಾನ್ಯದ್ಗಗನಾಕಾರಂ' ಎಂದು ಈಶಾನ್ಯ ಮುಖದಲ್ಲಿ, ಆಕಾಶ- ಅಂಬರವು, ಪುಟ್ಟಿತ್ತು - ಜನನವಾಯಿತ್ತು; ತತ್ಪುರುಷಮುಖದಲ್ಲಿ- 'ತತ್ಪುರುಷದ್ವಾಯುರುಚ್ಚತೇ' ಎಂದು ಸದಾಶಿವನ ತತ್ಪುರುಷ ಮುಖದಲ್ಲಿ, ವಾಯು- ಮಾರುತನು, ಪುಟ್ಟಿತ್ತು- ಜನನವಾಯಿತ್ತು;........(ವಚನ-೬೭) ಹೀಗೆ ವಚನ-೧೦, ವಚನ-೧೮ ಬಳಸಿದ ಮಾದರಿಗಳನ್ನು ನೋಡಬಹುದು.

ಹೀಗೆ, ಸಾ.ಶಿ.ಮರುಳಯ್ಯನವರು ಸಂಪಾದಿಸಿದ ತೋಂಟದಾರ್ಯ ವಚನ ವ್ಯಾಖ್ಯೆ ವಚನ ಟೀಕಾ ಕೃತಿಯು ಹುಮನಾಬಾದ್ ನಿರಂಜನಸ್ವಾಮಿಯು ಬರೆದಿರಬಹುದೆಂದು ಗುರುತಿಸಲಾದ ಟೀಕಿನ ಹಸ್ತಪ್ರತಿಗೆ ಸಾಮಿಪ್ಯ ಹೊಂದಿರುವ ಕೆಲವು ಅಂಶಗಳು ಕಂಡುಬರುತ್ತವೆ. ಏಕೆಂದರೆ, ಇವೆರಡು ಹಸ್ತಪ್ರತಿಗಳಲ್ಲಿ ಟೀಕಾಕಾರ, ಲಿಪಿಕಾರರ ಉಲ್ಲೇಖವಿಲ್ಲ. ಇಲ್ಲಿ ಬಳಸಿದ ಉರ್ದುಭಾಷೆ, ಸಂಸ್ಕೃತ ಉದ್ದರಣೆಗಳು, ಭಾಷಾಶೈಲಿ, ಲೋಕಾನುಭವದ ವ್ಯಾಖ್ಯಾನ ಮಾದರಿಗಳಿಂದ ಹೆಚ್ಚು ಸಮೀಪವಾಗುತ್ತವೆ. ಅಲ್ಲದೇ, ಎರಡರಲ್ಲೂ ಎಲ್ಲಾ ೭೦೧ ವಚನಗಳಿಗೆ ವ್ಯಾಖ್ಯಾನವಿದೆ. ಪ್ರತಿಪದಾರ್ಥ ಟೀಕೆ ಬಳಸಲಾಗಿದೆ. ಆದರೂ, ಅರ್ಥಹೇಳುವಲ್ಲಿ, ದೃಷ್ಟಾಂತ ನೀಡುವಲ್ಲಿ ವ್ಯತ್ಯಾಸಗಳಿವೆ. "...... ಇವು ಒಂದರಿಂದ ಮತ್ತೊಂದಾಗಿ ಬೆಳೆದ ಟೀಕೆಗಳಾಗಿರದೇ, ಭಿನ್ನ ಕರ್ತೃಗಳ ಪ್ರತ್ಯೇಕ ಕೃತಿಗಳಾಗಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿವೆ"[೧೧೮] ಎಂದು ಅಭಿಪ್ರಾಯಪಡುತ್ತಾರೆ ಡಾ. ವೀರಣ್ಣ ರಾಜೂರ ಅವರು.

ಈ ಹಿನ್ನಲೆಯಲ್ಲಿ ಹೆಚ್ಚಿನ ಪರಾಮರ್ಶೆ ಮಾಡಬೇಕಾದ ಅಗತ್ಯವಿದೆ. ಇವರೇ ಹೇಳುವಂತೆ "ಈ ಟೀಕೆಯು ಶ್ರೀಗುರುಬಸವರಾಜದೇವರು ನಿರೂಪಿಸಿದ ಷಟ್ಸ್ಥಲ ವಚನ ವ್ಯಾಖ್ಯಾನವನ್ನು ಬಹುಮಟ್ಟಿಗೆ ಹೋಲುತ್ತದೆ. ಅಲ್ಲಿಯಂತೆ, ಇದರಲ್ಲಿಯ ದುಕಾನ, ಬಜಾರ ಮೊದಲಾದ ಉರ್ದುಪದಗಳ ಬಳಕೆ ಹಾಗೂ ಇನ್ನೂ ಅನೇಕ ಸಾಮ್ಯ ಅಂಶಗಳು ತೋರುವುದರಿಂದ ಅದೇ ಟೀಕಾಕಾರ ಇದನ್ನೂ ರಚಿಸಿರಬೇಕೆನಿಸುತ್ತದೆ. ಈಚೆಗೆ ಬಸವಣ್ಣನವರ ಷಟ್‌ಸ್ಥಲ ವಚನ ವ್ಯಾಖ್ಯಾನವನ್ನು ಹುಮನಾಬಾದಿನ ನಿರಂಜನಸ್ವಾಮಿ ಬರೆದಿರುವನೆಂದು ಹೇಳಲಾಗುತ್ತದೆ. ಅದು ನಿಜವಾದರೆ ತೋಂಟದಾರ್ಯರ ವಚನಗಳ ಈ ಟೀಕೆಯ ಕರ್ತೃವೂ ಆತನೇ ಆಗಿರಬೇಕೆಂದು ಹೇಳಬೇಕಾಗುತ್ತದೆ"[೧೯೯] ಎಂದು ಊಹೆ ಮಾಡಿರುವುದರಿಂದ ಸೂಕ್ತ ನಿರ್ಧಾರಕ್ಕೆ ಅವಕಾಶವಿದೆ. ಅಂದರೆ ಇವೆರಡು ಹಸ್ತಪ್ರತಿಗಳ ಬರಹ, ಶೈಲಿ, ಅರ್ಥ, ವ್ಯಾಖ್ಯಾನ ಮಾದರಿ ಇತ್ಯಾದಿಗಳನ್ನು ಪುನಃ ಪರಾಮರ್ಶಿಸಿ, ಹಲವು ಗೊಂದಲಗಳಿಗೆ ಪೂರ್ಣವಿರಾಮ ಇಡಬೇಕಾಗಿದೆ.[೨೦೦]

ಹೀಗೆ, ಈ ಟೀಕಿನ ಕೃತಿ ಹಲವು ವಿಶೇಷತೆಗಳಿಂದ ಕೂಡಿದೆಯಲ್ಲದೇ ಟೀಕಾಸ್ವರೂಪದಲ್ಲಿ ವೈವಿಧ್ಯತೆಯನ್ನು ಮೈಗೂಡಿಸಿಕೊಂಡಿದೆ.

**ಇ. ಅಜ್ಞಾತ ಕರ್ತೃವಿನ ಷಟ್‌ಸ್ಥಲಜ್ಞಾನಸಾರಾಮೃತ ಟೀಕೆ:**

ಮೂಲ ಹಸ್ತಪ್ರತಿಯಲ್ಲಿ 'ಷಟ್‌ಸ್ಥಲಜ್ಞಾನಸಾರಾಮೃತ' ಎಂದಿದೆ. ಇದನ್ನು ಸಂಪಾದಿಸಿದ **ಡಾ.ಎಸ್. ವಿದ್ಯಾಶಂಕರ** ಅವರು 'ಟೀಕೆ' ಸೇರಿಸಿ 'ಷಟ್‌ಸ್ಥಲ ಜ್ಞಾನಸಾರಾಮೃತ ಟೀಕೆ' ಹೆಸರಿನಲ್ಲಿ ೧೯೮೭ರಲ್ಲಿ ಬೆಂಗಳೂರಿನ ಪ್ರಿಯದರ್ಶಿನಿ ಪ್ರಕಾಶನದ ಮೂಲಕ ಪ್ರಕಟಿಸಿದ್ದಾರೆ. ತೋಂಟದ ಸಿದ್ದಲಿಂಗೇಶ್ವರರ ೨೬೬ ಬೆಡಗಿನ ವಚನಗಳಿಗೆ ಟೀಕೆ ಬರೆದ ಟೀಕಾಕಾರನ ಹೆಸರು, ಕಾಲ ಮತ್ತು ಲಿಪಿಕಾರನ ಬಗೆಗೂ ಇಲ್ಲಿ ಯಾವುದೇ ವಿವರಗಳಿಲ್ಲದೇ ಅಸ್ಪಷ್ಟವಾಗಿದೆ.

**ಕೃತಿಸ್ವರೂಪ:** ಧಾರವಾಡದ ಕನ್ನಡ ಅಧ್ಯಯನ ಪೀಠದಲ್ಲಿರುವ ತಾಳೆಗರಿಯಲ್ಲಿರುವ ೬೧೫ನೇ ಪ್ರತಿ ಮತ್ತು ಡಾ.ಎಸ್. ವಿದ್ಯಾಶಂಕರ ಸಂಪಾದನೆಗೆ ಬಳಸಿಕೊಂಡ ಬೆಂಗಳೂರು ವಿಶ್ವವಿದ್ಯಾಲಯದ ಕೋರೆಕಾಗದದ ಪ್ರತಿಗಳನ್ನು ಆಧಾರವಾಗಿಟ್ಟುಕೊಂಡು "೧೮ನೆಯ ಶತಮಾನದ ಆದಿಯಲ್ಲಿ ರಚನೆಯಾಗಿರಬೇಕೆಂದು"[೨೦೧] ಡಾ.ವೀರಣ್ಣ ರಾಜೂರ ಊಹಿಸುತ್ತಾರೆ. ಇಲ್ಲಿ ಬರೆದ ಟೀಕೆ ಸಂಕ್ಷಿಪ್ತ ಮತ್ತು ಸೂತ್ರಪ್ರಾಯವಾಗಿದೆ ಎನ್ನುವ ಇವರು "ಇದು ಬಸವಣ್ಣನವರ ವಚನಗಳಿಗೆ ಬರೆದ ಎರಡನೆಯ ಟೀಕೆ ಹೋಲುವುದರಿಂದ ಇವೆರಡೂ ಕೃತಿಗಳ ಟೀಕಾಕಾರ ಒಬ್ಬನೇ ಆಗಿರುವ ಸಾಧ್ಯತೆ ಇದೆ. ಕನ್ನಡ ಅಧ್ಯಯನ ಪೀಠದಲ್ಲಿರುವ ತಾಳೆಗರಿ ಪ್ರತಿ ೬೧೫ರಲ್ಲಿ ಈ ಎರಡೂ ಕೃತಿಗಳನ್ನು ಒಟ್ಟಾಗಿ ಸೇರಿಸಿರುವುದು ಈ ಊಹೆಯನ್ನು ಇನ್ನಷ್ಟು ಗಟ್ಟಿಗೊಳಿಸುತ್ತದೆ"[೨೦೨] ಎಂಬ ಅಭಿಪ್ರಾಯ ಚಿಂತನಾರ್ಹವಾಗಿದೆ.

ಪ್ರಸ್ತುತ ಕೋರೆಕಾಗದದಲ್ಲಿ ಲಭಿಸಿರುವ 'ಷಟ್‌ಸ್ಥಲ ಜ್ಞಾನಸಾರಾಮೃತ ಟೀಕಾ' ಗ್ರಂಥದಲ್ಲಿ ತೋಂಟದ ಸಿದ್ಧಲಿಂಗರ ೨೬೬ ವಚನಗಳಿಗೆ ಮಾತ್ರ ಟೀಕೆ ಬರೆಯಲಾಗಿದೆ. 'ಷಟ್‌ಸ್ಥಲ ಜ್ಞಾನಸಾರಾಮೃತದ' ೧೯ ಸ್ಥಲಗಳಿಂದ ಆಯ್ಕೆಮಾಡಿಕೊಂಡಿರುವ ಟೀಕಾಕಾರ ಮುಖ್ಯವಾಗಿ ಬೆಡಗಿನ ವಚನಗಳನ್ನು ಕೆಲವು ಮಾತ್ರ ಕ್ಲಿಷ್ಟಕರವಾದ ವಚನಗಳನ್ನು ಟೀಕೆಗೆ ಬಳಸಿದ್ದು ವಿವರ ಇಂತಿದೆ.

ಸ್ತೋತ್ರದ ವಚನ ೨; ಸರ್ವಶೂನ್ಯ ನಿರಾಲಂಬಸ್ಥಲ ೧, ನಿಃಕಲಲಿಂಗಸ್ಥಲ ೩, ಮಹಾಲಿಂಗಸ್ಥಲ ೧, ಅಂಗಲಿಂಗೋದ್ಭವಸ್ಥಲ ೪ ಒಟ್ಟು ೧೧ ವಚನಗಳಿಗೆ ವಿಭಾಗ ಮಾಡದೇ ಟೀಕು ಬರೆಯಲಾಗಿದೆ. ನಂತರ, ಪಿಂಡಸ್ಥಲ–೧, ಪಿಂಡಜ್ಞಾನಸ್ಥಲ–೧೬, ಸಂಸಾರ ಹೇಯಸ್ಥಲ–೧೯, ಗುರುಕರುಣ ಸ್ಥಲ–೧, ಲಿಂಗಧಾರಣ ಸ್ಥಲ–೧, ವಿಭೂತಿಸ್ಥಲ–೨, ಪಂಚಾಕ್ಷರಿ ಸ್ಥಲ–೧, ಭಕ್ತಸ್ಥಲ–೭, ಮಾಹೇಶ್ವರ ಸ್ಥಲ–೬, ಪ್ರಸಾದಿಸ್ಥಲ–೭, ಪ್ರಾಣಿಲಿಂಗಿಯಸ್ಥಲ–೬೫, ಶರಣಸ್ಥಲ–೬೫, ಐಕ್ಯಸ್ಥಲ–೫೫, ನಿರವಯ ಸ್ಥಲ–೯. ಒಟ್ಟು ೨೬೬ ವಚನಗಳಿಗೆ ಟೀಕೆ ಬರೆಯಲಾಗಿದೆ.

ಈಗಾಗಲೇ ಹೇಳಿದಂತೆ ೨೬೬ ಬೆಡಗಿನ ವಚನಗಳಿಗೆ ಮಾತ್ರ ಟೀಕೆ ಬರೆಯಲಾದ ಹಸ್ತಪ್ರತಿಯ ಆದಿ ಅಂತ್ಯದಲ್ಲಿ ಟೀಕಾಕಾರನ ಬಗ್ಗೆ, ರಚನಾ ಕಾಲದ ಬಗ್ಗೆ ಯಾವುದೇ ವಿವರಗಳು ಲಭಿಸುವುದಿಲ್ಲ. "ಈ ಟೀಕೆಯ ಮೊದಲನೆಯ ವಚನವು ನಿರಂಜನ ಬ್ರಹ್ಮ–ಶೂನ್ಯಬ್ರಹ್ಮ–ನಿಷ್ಕಲಬ್ರಹ್ಮ–ಮಹಾಲಿಂಗಶಿವತತ್ವ–ಸದಾಶಿವತತ್ವ– ಈಶ್ವರತತ್ವ– ಮಹೇಶ್ವರತತ್ವ– ರುದ್ರತತ್ವಗಳೇ ಆಗಿರುವ, ಆಚಾರಲಿಂಗ– ಗುರುಲಿಂಗ– ಶಿವಲಿಂಗ– ಜಂಗಮಲಿಂಗ– ಪ್ರಸಾದಲಿಂಗ– ಮಹಾಲಿಂಗಗಳೆಂಬ ಷಡ್ವಿದ ಲಿಂಗಗಳಿಗೆ ಕರ್ತೃವಾದ ನಿಷ್ಕಲಲಿಂಗವೇ ಆಗಿರುವ ಪರಶಿವನನ್ನು ತೋಂಟದ ಸಿದ್ಧೇಶ್ವರರೊಡನೆ ಅಭೇದವಾಗಿ ಸ್ತುತಿಸಿರುವನು. ಅನಂತರ ಎರಡನೆಯ ವಚನದಲ್ಲಿ ತೋಂಟದ ಸಿದ್ದೇಶ್ವರರ ಆದಿಗುರು ಪರಂಪರೆಯಲ್ಲಿ ಬರುವ ಮೊದಲ ಎಂಟುಮಂದಿ ಮನುಷ್ಯ ಮಾತ್ರರಾಗಿರದೆ ಶೂನ್ಯಬ್ರಹ್ಮ, ನಿಷ್ಕಲಬ್ರಹ್ಮ, ಶಿವತತ್ವ, ಸದಾಶಿವತತ್ವ, ಈಶ್ವರತತ್ವ, ಮಹೇಶ್ವರತತ್ವ ಈಶತತ್ವ, ರುದ್ರತತ್ವಗಳೆಂದು ಹೇಳಿರುವುದು ಮುಖ್ಯ ಸಂಗತಿಯಾಗಿದೆ. ಇದರಿಂದಾಗಿ ತೋಂಟದ ಸಿದ್ದೇಶ್ವರರ ಗುರುಪರಂಪರೆಯಲ್ಲಿ ಬರುವ ಮೊದಲ ಎಂಟು ಮಂದಿಯನ್ನು ಅಂದರೆ, ಆದಿಗಣೇಶ್ವರ, ನಿರ್ಮಾಯ ಗಣೇಶ್ವರ, ನಿರಂಜನ ಗಣೇಶ್ವರ, ಜ್ಞಾನಾನಂದ ಗಣೇಶ್ವರ, ಆತ್ಮಗಣೇಶ್ವರ, ಆದ್ಯಾತ್ಮ ಗಣೇಶ್ವರ ಹಾಗೂ ರುದ್ರಗಣೇಶ್ವರ ಇವರುಗಳನ್ನು ಬಿಟ್ಟು ಉಳಿದ ಬಸವಪ್ರಭುದೇವ, ಆದಿಲಿಂಗದೇವ, ಚೆನ್ನವೀರೇಶ್ವರದೇವ, ಹರದನಹಳ್ಳಿಯ ಗೋಸಲದೇವ, ಶಂಕರದೇವ, ದಿವ್ಯಲಿಂಗದೇವ, ಚೆನ್ನಬಸವೇಶ್ವರದೇವ – ಇವರುಗಳನ್ನು ಮಾತ್ರ ತೋಂಟದ ಸಿದ್ದೇಶ್ವರರ ಗುರು ಪರಂಪರೆಯೆಂದು ಸ್ವೀಕರಿಸಬೇಕಾಗಿದೆ. ಈ ಹೊಸಸಂಗತಿಯನ್ನು ೭೦೨ ವಚನಗಳ ಹಾಗೂ ೨೬೬ ವಚನಗಳ ಟೀಕಾಕರ್ತೃಗಳೀರ್ವರೂ ಹೇಳಿರುವುದು ವಿಚಾರಾರ್ಹವಾಗಿದೆ; ಗುರುಪರಂಪರೆಯ ಇತಿಹಾಸದ ಮೇಲೆ ಹೊಸಬೆಳಕು ಚೆಲ್ಲುವಂತಿದೆ."[೧೨]

**ಟೀಕಾಸ್ವರೂಪ:** ಇಲ್ಲಿ ವಚನದ ಪೂರ್ಣಪಾಠವನ್ನು ಕೊಟ್ಟು ಅನಂತರ ಟೀಕೆ ಬರೆಯದೇ ಒಮ್ಮೆಲೆ ವಚನದೊಳಗಿನ ಪದ ಇಲ್ಲವೇ ವಾಕ್ಯವನ್ನು ಎತ್ತಿಕೊಂಡು ಅವುಗಳಿಗೆ ಟೀಕೆ ಬರೆಯಲಾಗಿದೆ. ಹೆಚ್ಚಾಗಿ

ಇಡೀ ವಾಕ್ಯವನ್ನು ಆಧರಿಸಿ ಅರ್ಥ ಬರೆದಿರುವ ಟೀಕಾಕಾರನು ಕೆಲವು ವಚನಗಳಿಗೆ ಮತ್ತು ಸಂಸ್ಕೃತ ಶ್ಲೋಕಗಳಿಗೆ ಪ್ರತಿಪದಾರ್ಥ ಟೀಕೆ ಬರೆದಿರುವುದು ವಿಶೇಷವಾಗಿದೆ. "ಇಡೀ ವಚನ ಬೆಡಗಿನದಾಗಿದ್ದರೆ ಪೂರ್ಣಪಾಠ ಬರೆಯುವುದು; ಒಂದು ವಚನದಲ್ಲಿ ಕೆಲವು ವಾಕ್ಯಗಳು ಇಲ್ಲವೆ ಕೆಲವು ಪದಗಳು ಮಾತ್ರ ಬೆಡಗಿನವೆನಿಸಿದ್ದರೆ ಅಥವಾ ತಾತ್ವಿಕವೆನಿಸಿದ್ದರೆ ಅಷ್ಟಕ್ಕೆ ಮಾತ್ರ ಟೀಕೆ ಬರೆದು ಉಳಿದ ಭಾಗಕ್ಕೆ 'ಕಾಣಬಂದರ್ಥ' ಎಂದು ಹೇಳಿ ಬಿಡುವುದು; ವಚನದ ಮೊದಲಭಾಗಕ್ಕೆ ಅರ್ಥದ ಅಗತ್ಯವಿಲ್ಲದಿದ್ದರೆ 'ಹಿಂದಕ್ಕೆ ಕಾಣಬಂದರ್ಥ' ಎಂದು, ಕೊನೆಯ ಭಾಗಕ್ಕೆ ಅರ್ಥದ ಅಗತ್ಯವಿಲ್ಲದಿದ್ದರೆ 'ಮುಂದಕ್ಕೆ ಕಾಣಬಂದರ್ಥ' 'ಮುಂದಕ್ಕೆ ಇದ್ದ ಹಾಗೆ' ಎಂದು, ಟೀಕೆಯ ಮುಕ್ತಾಯಕ್ಕೆ 'ಎಂಬುದರ್ಥ' ಎಂದು ಹೇಳುವುದು; ಕೆಲವು ಸಲ ವಚನದ ಮಧ್ಯ ಬಳಕೆಯಾದ ಸಂಸ್ಕೃತ ಶ್ಲೋಕಕ್ಕೆ ಮಾತ್ರ ಅರ್ಥ ಬರೆಯುವುದು; ಕೆಲವು ವಚನಗಳಿಗೆ-ಪದಗಳಿಗೆ ಒಂದಕ್ಕಿಂತ ಹೆಚ್ಚು ಅರ್ಥಬರೆಯುವುದು; ವಚನಕ್ಕೆ ಎರಡರ್ಥ ಹೇಳಿದ ಸಂದರ್ಭದಲ್ಲಿ ಮೊದಲ ಅರ್ಥ ವಾಕ್ಯವನ್ನು ಅನುಸರಿಸಿದುದಾಗಿದ್ದರೆ, ಎರಡನೆಯದು ಇಡೀ ವಚನದ ಸಾರರೂಪದ್ದಾಗಿರುವುದು; ಹಾಗೆ ಹೇಳುವಾಗ ಮಧ್ಯಂ 'ಮತ್ತಂ' ಎಂದು ಬಳಸುವುದು; ಎಲ್ಲ ಅರ್ಥಗಳೂ ತಾತ್ವಿಕವಾಗಿರುವುದು; ಹೆಚ್ಚು ವಿವರಣೆಗೆ ಹೋಗದೇ ಸಂಗ್ರಹ ರೂಪದಲ್ಲಿ ಸಂಕ್ಷಿಪ್ತವಾಗಿ ಹೇಳಿ ಮುಗಿಸುವುದು – ಈ ಟೀಕೆಯ ಪ್ರಮುಖ ಲಕ್ಷಣಗಳೆನಿಸಿವೆ"[೧೨] ಎಂದು ಡಾ. ವೀರಣ್ಣ ರಾಜೂರ ಅಭಿಪ್ರಾಯಪಟ್ಟಿದ್ದಾರೆ.

ಟೀಕಾ ಸ್ವರೂಪದ ನಿದರ್ಶನಕ್ಕಾಗಿ ಕೆಲವು ಉದಾಹರಣೆ ಗಮನಿಸೋಣ.

**೧. ಪ್ರತಿಪದಾರ್ಥ ಟೀಕೆ.**

**ವಚನ :** ನಿರವಯ ನಿರಾಮಯಂ ನಿರಾಕುಳಂ;
ನಿರ್ದ್ವಂದ್ವಂ ನಿರ್ಮಳಂ ನಿಜಸ್ವರೂಪಂ;
ನಿರ್ಭಾವಂ ನಿಸ್ಪುರುಷಂ ನಿರಂಜನ ನಿರಾಕಾರಂ;
ನಿರಾವರಣ ನಿರೂಪಮ ನಿರ್ಗುಣ ನಿರಾಧಾರ ನಿರಾಲಂಬಂ;
ಸರ್ವಾಧಾರ ಸದಾಶಿವಂ ಅತ್ಯತಿಷ್ಠದ್ದಶಾಂಗುಲಂ ನಿತ್ಯನಿಶ್ಚಿಂತಂ;
ನಿರ್ಮಲ ನಿರ್ಮಾಯ ನಿರಾಕುಳಂ;
ಹರ ಹರಾ ಶಿವ ಶಿವಾ ಜಯ ಜಯ ಜಯತು
ಶರಣು ಕರುಣಾಕರ ತ್ರಾಹಿಮಾಂ ಭಕ್ತಿವತ್ಸಲ ಮತ್ಪ್ರಾಣನಾಥ
ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೆ. (ವಚನ-೦೧)

**ಟೀಕು:** ನಿರವಯ-ನಿರವಯ ಬ್ರಹ್ಮಸ್ಥಲವು, ನಿರಾಮಯಂ-ನಿರಂಜನ ಬ್ರಹ್ಮಸ್ಥಲವು, ನಿರಾಕುಳಂ-ಶೂನ್ಯಲಿಂಗಸ್ಥಲವು, ನಿರ್ದ್ವಂದ್ವಂ-ನಿಃಕಲಲಿಂಗಸ್ಥಲವು, ನಿರ್ಮಳಂ ನಿಜಸ್ವರೂಪಂ-ಮಹಾಲಿಂಗಸ್ಥಲವು, ನಿರ್ಭಾವಂ-ಶಿವತತ್ವವು, ನಿಸ್ಪುರುಷಂ-ಸದಾಶಿವತತ್ವವು....."[೧೩] ಎಂದು ಪ್ರತಿಪದಾರ್ಥ ಟೀಕೆ ಬರೆಯಲಾಗಿದೆ.

ಟೀಕಾಕಾರನು ವಚನದ ಪೂರ್ಣಪಾಠ ಬರೆಯದಿದ್ದರೂ "ಓದುಗರ ಅನುಕೂಲಕ್ಕಾಗಿ ಡಾ.ಆರ್.ಸಿ. ಹಿರೇಮಠರು ಸಂಪಾದಿಸಿರುವ 'ಷಟ್‌ಸ್ಥಲದ ಜ್ಞಾನಸಾರಾಮೃತ'ದ ಪಾಠವನ್ನು ಬಳಸಿಕೊಳ್ಳಲಾಗಿದೆ"[೧೨೬] ಎನ್ನುವ ಡಾ. ಎಸ್.ವಿದ್ಯಾಶಂಕರ ಅವರಂತೆಯೇ ಇಲ್ಲಿ ಕೂಡಾ ಮೇಲಿನ ವಚನದ ಪೂರ್ಣಪಾಠ ಸ್ವೀಕರಿಸಲಾಗಿದೆ.

**ವಚನ:** ಕಂಗಳ ನೋಟ, ಕರಸ್ಥಲದಲಿಂಗ, ಹೃದಯದ ಜ್ಞಾನಲಿಂಗ
ಲಿಂಗವೆಂಬ ಲಿಂಗಮುಖದಲ್ಲಿ ಮಾತಾಡುತ್ತಿರಲಾಗಿ ನಡೆವ ಕಾಲಕೆಟ್ಟು,
ಹಿಡಿವ ಕೈಯ ಕತ್ತಲೆ ಹಜೆದು ಬೆಳಗಾಯಿತ್ತಯ್ಯ
ನೆನೆವ ಮನದ ಕತ್ತಲೆ ಹಜೆದು ಬೆಳಗಾಯಿತ್ತಯ್ಯ
ನೋಡುವ ಕಂಗಳ ಕತ್ತಲೆ ಹಜೆದು ಬೆಳಗಾಯಿತ್ತಯ್ಯ
ಬೆಳಗಿನೊಳು ಬೆಳಗಾಗಿ, ಬೆಳಗು ಸಮರಸವಾಗಿ
ಇಂದು ಇಂದುವ ಕೂಡಿದಂತೆ, ರವಿ ರವಿಯ ಬೆಜೆಸಿದಂತೆ
ಮಿಂಚು ಮಿಂಚನು ಕೂಡಿದಂತೆ ಉಭಯದ ಸಂಚವಳಿದು
ಸ್ವಯಂಜ್ಯೋತಿಯಾದೆನು ಕಾಣಾ...... (ವಚನ-೫೬೬)

**ಟೀಕು:** "ಕಂಗಳ ನೋಟ-ಚರ್ಮ ಚಕ್ಷುವಿನ ನಿರೀಕ್ಷಣೆಯುಳ್ಳ, ಕರಸ್ಥಲಲಿಂಗ-ಪಾಣಿಯ ತಾಣದಲ್ಲಿರ್ದ ಇಷ್ಟಲಿಂಗವು, ಹೃದಯದ ಜ್ಞಾನಲಿಂಗ-ಅಂತರಂಗದಲ್ಲಿರ್ದ ಚಿಲ್ಲಿಂಗವು, ಲಿಂಗವೆಂಬ-ಆತ್ಮಾಂಗದಲ್ಲಿರ್ದ ತೃಪ್ತಿಲಿಂಗವೆಂಬ, ಲಿಂಗಮುಖದಲ್ಲಿ ಮಾತಾಡುತ್ತಿರಲಾಗಿ – ಆ ತ್ರಿವಿಧ ಲಿಂಗಾನುಭಾವ ವಕ್ತ್ರದಿಂದ ಶಿವಾನುಭಾವ ಪ್ರಸಂಗವನು ವಚಿಸುತ್ತಿರಲಾಗಿ, ನಡೆವ ಕಾಲಗೆಟ್ಟು – ಗಮಿಸುವ ಭಿನ್ನಕ್ರಿಯಾಚರಣೆಯು ನಷ್ಟವಾಗಿ, ಹಿಡಿವ ಕೈಯ-ಲಿಂಗವನು ಭಿನ್ನವಿಟ್ಟು ಗ್ರಹಿಸುವ, ಅದಲ್ಲದೆ, ಅನ್ಯಸ್ತ್ರೀ ಅನ್ಯದ್ರವ್ಯವನು ಪರಿಗ್ರಹಿಸುವ ಕುಚಿತ್ತವೆಂಬ ಹಸ್ತದ, ಕತ್ತಲೆ ಹಜೆದು ಬೆಳಗಾಯಿತ್ತಯ್ಯಾ-ಅಜ್ಞಾನಮಾಯಾತಮಸ್ಸು ನಷ್ಟವಾಗಿ ಮಹಾಜ್ಞಾನ ಪ್ರಕಾಶವಾಯಿತ್ತಯ್ಯಾ....."[೧೨೭] ಎಂದು ಅರ್ಥಪೂರ್ಣ ಟೀಕು ಬರೆಯಲಾಗಿದೆ.

**೨. ಸಂಸ್ಕೃತ ಶ್ಲೋಕಗಳಿಗೆ ಪ್ರತಿಪದಾರ್ಥ ಟೀಕು**

**ಶ್ಲೋಕ:** ಆಗಮೋಕ್ತ ವಿಧಾನೇನ ರೇಚಪೂರಕಕುಂಬಕೈಃ।
ಯದಿ ಪ್ರಾಣ ನಿರೋಧಃ ಸ್ಯಾದ್ ವೈಕೃತಃ ಸ ಉದಾಹೃತಃ॥

**ಟೀಕು:** "ಆಗಮೋಕ್ತ ವಿಧಾನೇನ – ಶಿವಾಗಮನಂಗಳಲ್ಲಿ ಹೇಳಲ್ಪಟ್ಟ ವಿಧಾನದಿಂದೆ, ರೇಚಪೂರಕ ಕುಂಭಕೈಃ – ರೇಚಕ ಪೂರಕ ಕುಂಭಕಂಗಳಿಂದೆ, ಯದಿ – ಎತ್ತಲಾನು, ನಿರೋದಃಸ್ಯಾತ್ – ಪ್ರಾಣವಾಯುವಿನ ನಿರೋಧವಹುದು, ಸಃ – ಅದು, ವೈಕೃತಃ – ವೈಕೃತ ಪ್ರಾಣಾಯಾಮವೆಂದು, ಉದಾಹೃತಃ – ಹೇಳಲ್ಪಟ್ಟಿತ್ತು".[೧೨೮] ಹೀಗೆ ಪ್ರತಿಪದಾರ್ಥ ಟೀಕೆಯನ್ನು ಇಲ್ಲಿ ವ್ಯಾಪಕವಾಗಿ ಬಳಸಿರುವುದನ್ನು ಕಾಣುತ್ತೇವೆ.

೩. ವಾಕ್ಯವನ್ನು ಅನುಸರಿಸಿ ಬರೆದ ಟೀಕೆಗೆ ಉದಾಹರಣೆ

ವಚನ: ತಾಳಮರನ ಹಿಡಿದು ತನಿರಸವನುಂಬನ್ನಕ್ಕರ (ವಚನ ೩೮೬)

ಟೀಕು: "ಅಷ್ಟಮದಯುಕ್ತವಾದ ಅಂಗವೆಂಬ ಅಧೋಮುಖ ವೃಕ್ಷವನು ಗ್ರಹಿಸಿ ತನುತ್ರಯ ಸಂಬಂಧವಾದ ಕರಣೇಂದ್ರಿಯ ವಿಷಯಂಗಳ ಸಾರವನನುಭವಿಸುವ ಪರಿಯಂತರವು, ಬಾರದ ಭವದಲ್ಲಿ ಬಪ್ಪದು ತಪ್ಪದು ನೋಡಾ – ಸದ್ಭಕ್ತ ಶರಣಜನಂಗಳು ದೇಹವೆತ್ತಿ ಹುಟ್ಟಬಾರದ ಕುರಿಕುಕ್ಕಟ ಶುನಿ ಮಾರ್ಜಾಲ ಖಗ ವಿಹಂಗಾದಿ ನಿಕೃಷ್ಟವಾದ ಯೋನಿಮಾರ್ಗದಲ್ಲಿ ಬರುವುದು ವಾರಿಯಾಗದು ಕಂಡಾ, ಅಷ್ಟರಲ್ಲಿಯೆ ಜ್ಞಾನೋದಯವಾಗಿ,...."[೧೯] ಇತ್ಯಾದಿ. ಹೀಗೆ ವಚನ ಟೀಕು–೮,೨೩, ೧೨೦, ೧೪೯ ಇತ್ಯಾದಿ ಗಮನಿಸಬಹುದು.

೪. ಪೂರ್ಣವಚನಕ್ಕೆ ಬರೆದ ಒಂದು ರೀತಿಯ ಅರ್ಥಕ್ಕೆ:

ವಚನ : ಕರು ಸತ್ತು ಮೂರು ದಿನ ಹಸು ಸತ್ತು ಆರು ದಿನ
ಅಂದು ಬಿತ್ತಿದ ಬೆಳಸು ಇಂದು ಫಲವಾದುದ ಕಂಡೆನಯ್ಯಾ,
ಫಲರಸವನುಂಡುಂಡು ಪರವಶ ಪರಿಣಾಮಿಯಾದೆನಯ್ಯಾ,
ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ. (೫೯೬)

ಟೀಕೆ: "ಹಸು ಸತ್ತು ಆಱುದಿನ – ಷಟ್‌ಚಕ್ರಂಗಳಲ್ಲಿ ಷಟ್‌ಸೋಪಾನವಿಟ್ಟು ಷಟ್‌ಸಾದಾಖ್ಯಮೂರ್ತಿಗಳನು ಕಂಡು ಕೂಡಿಹೆನೆಂಬ ಷಡಂಗಯೋಗಿಗಳ ಜೀವನೆಂಬ ಹಸುವು ಹತವಾಗಿ ಸತ್ತೋಪಬ್ರಹ್ಮವಾಗಿಪ್ಪುದು. ಕಱುಸತ್ತು ಮೂಱುದಿನ –ತ್ರಿಪುಟಿಜ್ಞಾನಂಗಳ ಮನೋಪ್ರಕೃತಿಯು ನಷ್ಟವಾಗಿ ಉನ್ಮಾನಸವಾಗಿಪ್ಪುದು, ಅದಲ್ಲದೆ, ಷಟ್‌ಸ್ಥಲಜ್ಞಾನಕ್ರೀವಿಡಿದಾಚರಿಸಲಾಗಿ ಮನೋಪ್ರಪಂಚೆಲ್ಲವು ನಷ್ಟವಾಗಿ ಮನಸ್ಸು ಸತ್ತೋಪಬ್ರಹ್ಮವಾಗಿಪ್ಪುದು, ಅಂದು ಬಿತ್ತಿದ ಬೆಳಸು – ಆದಿಯಲ್ಲಿ ಷಟ್‌ಸ್ಥಲ ಜ್ಞಾನಕ್ರೀ ಉದಯವಾದ ಕಾಲದಲ್ಲಿ ಅಂತರಂಗದ ಚಿತ್ಕಲೆಯನೆ ಬಹಿಷ್ಕರಿಸಿ ಗುರುಮುಖದಿಂದಂಗದ ಮೇಲೆ ಸ್ಥಾಪಿಸಿದ ಇಷ್ಟಬ್ರಹ್ಮವೆಂಬ ಪೈರು, ಇಂದು ಫಲವಾದುದ ಕಂಡೆನಯ್ಯಾ – ಜ್ಞಾನಕ್ರೀವಿಡಿದಾಚರಿಸಿದ ಕಾಲದಲ್ಲಿ ತ್ರಿವಿಧವೆ ಷಡ್ವಿದಫಲ ಷಡ್ವಿಧವೆ ತ್ರಿವಿಧಫಲವಾದುದು ನೋಡಿದೆನಯ್ಯಾ, ಫಲರಸವನುಂಡು ಪರಮ ಪರಿಣಾಮಿಯಾದೆನಯ್ಯಾ –ತ್ರಿವಿಧ ಲಿಂಗಾನುಭಾವಸಾರವನು ಷಟ್‌ಸ್ಥಲ ಜ್ಞಾನಾನುಭಾವ ಪ್ರಸಾದವನು ಅನುಭವಿಸಿ ತನುವು ತರತರಂಬೋಗಿ ಮನವು ಲೀನವಾಗಿ ಭಾವಭರಿತವಾಗಿ ಕರಣಂಗಳು ಕರಗಿ ಲಿಂಗಾಂಗದಲ್ಲಿ ಪರಮಕಾಷ್ಠೆಯ ಸಂತೋಷವುಳ್ಳಾತನಾದೆನೆಂಬುದರ್ಥ".[೧೩೦]

೫. ಪೂರ್ಣವಚನಕ್ಕೆ ಬರೆದ ಎರಡು ರೀತಿಯ ಅರ್ಥಕ್ಕೆ

ವಚನ : ಸತ್ತಾತ ಗುರು, ಹೊತ್ತಾತ ಲಿಂಗವು
ಎತ್ತಿಕೊಂಡಾತ ಜಂಗಮವೆಂದೆಂಬೆನಯ್ಯಾ
ಸತ್ತವನೊಬ್ಬ, ಹೊತ್ತವನೊಬ್ಬ
ಎತ್ತಿಕೊಂಡವನೊಬ್ಬನೆಂಬನ್ನಕ್ಕರ ಕತ್ತಲೆ ಹಜೆಯದಯ್ಯಾ.

ಅತ್ತವರಮರರು, ನಿತ್ಯವಾದುದು ಪ್ರಸಾದ,

ಪರಿಪೂರ್ಣವಾದುದು ಪಾದಜಲ,

ಇದರರ್ಥವ ಬಲ್ಲರೆ ಸತ್ತ ಹಾಗಿರಬೇಕು ಕಾಣಾ.....

**ಟೀಕು:** "ಸತ್ತಾತ ಗುರು – ಆ ನಿಃಕಲಬ್ರಹ್ಮದ ಸದ್ರೂಪವಾದಾತನೆ ಆಚಾರ್ಯನು, ಹೊತ್ತಾತ ಲಿಂಗವು– ಗುರುಕರುಣದಿಂದ ಚಿತ್ಕಲೆಯನು ಧರಿಸಿದಾತನೆ ಇಷ್ಟಲಿಂಗವು, ಎತ್ತಿಕೊಂಡಾತ ಜಂಗಮವೆಂದೆಂಬೆನಯ್ಯಾ– ಆ ಇಷ್ಟಲಿಂಗವನೆ ಅಂತರಂಗದಲ್ಲಿ ಪ್ರಾಣಲಿಂಗವಾಗಿ ನೆಗಹಿ ಧರಿಸಿಕೊಂಡಾತನೆ ಆನಂದಸ್ವರೂಪವಾದ ಜ್ಞಾನಿ ಜಂಗಮವೆಂದೆಂಬೆನಯ್ಯಾ, ಸತ್ತವನೊಬ್ಬ ಆ ನಿಃಕಲಬ್ರಹ್ಮದ ಸದ್ರೂಪವಾದ ಗುರುವೋರ್ವನು, ಹೊತ್ತವನೊಬ್ಬ– ಗುರುಕರುಣದಿಂದ ಚಿತ್ಕಲೆಯನು ತಳೆದುಕೊಂಡಿದ್ದ ಲಿಂಗವೋರ್ವನು,............ಬ್ರಹ್ಮವಾಗಿರಬೇಕು ಕಂಡಾ, ಮತ್ತಂ, ಸದ್ರೂಪವಾದ ಗುರು, ಚಿದ್ರೂಪವಾದ ಲಿಂಗ, ಆನಂದ ಸ್ವರೂಪವಾದ ಜಂಗಮವೆಂದೆಂಬೆನಯ್ಯಾ, ಸದ್ರೂಪವಾದ ಗುರುವೋರ್ವನು ಚಿದ್ರೂಪವಾದ ಲಿಂಗವೋರ್ವನು ಆನಂದಸ್ವರೂಪವಾದ ಜಂಗಮವೋರ್ವನೆಂಬನ್ನಬರ ಮೂರಾದ ಭಾವನೆಯು ನಷ್ಟವಾಗದಯ್ಯ............ ಈ ಪಂಚಲಕ್ಷಣ ಸ್ವರೂಪವಾದ ವಸ್ತುವೊಂದೆ ಎಂಬ ಅಭಿಪ್ರಾಯವನು ತಿಳಿದುಬಲ್ಲರೆ ಶಬ್ಧಮುಗ್ಧವಾಗಿರಬೇಕೆಂಬುದರ್ಥ".[೧೩೧]

**೬. ವಚನಾರಂಭದ ಕೆಲವು ಸಾಲುಗಳಿಗೆ ಮಾತ್ರ ಬರೆದ ಟೀಕೆಗೆ:**

೧. **ಉದಾ:** ".....ಕಾಷ್ಟದಲ್ಲಿ ಅಗ್ನಿ ಹೇಂಗೆ ಹಾಂಗಿಪ್ಪುದು

................................" (ವಚನ–೭೭)

**ಟೀಕು:** "ಕಾಷ್ಟದಲ್ಲಿ ಅಗ್ನಿ ಹೇಂಗೆ ಹಾಂಗಿಪ್ಪುದು ಕಟ್ಟಗೆಯಲ್ಲಿ ಬೆಂಕಿಯೆಂತಡಗಿರ್ಪುದಂತೆ, ಅಸ್ಥಿ ಮಾಂಸ ನಾಡಿ ಚರ್ಮ ರೋಮ ಮುಕ್ತವಾದ ದೇಹದಲ್ಲಿ ಚಿದಾಗ್ನಿ ಸ್ವರೂಪವಾದ ವಸ್ತುವಡಗಿರ್ಪುದೆಂಬುದರ್ಥ".[೧೩೨]

೨. ಮಾರುತನ ಮುಖದ ಮಾನಿನಿ ಆರು ಮಂದಿಯ ಹಡೆದಳು ನೋಡು... (ವಚನ–೧೫೫)

**ಟೀಕು:** "ಪ್ರಾಣವಾಯುವೆ ವಕ್ತ್ರವಾಗುಳ್ಳ ಮಾಯಾಂಗನೆಯು ಅರಿಷಡ್ವರ್ಗಂಗಳ ಪಡೆದಳಲಾ, ಮುಂದಕ್ಕೆ ಕಾಣಬಂದರ್ಥ".[೧೩೩]

೩. .....ಸಂಚಿತ ಪಾರಬ್ದ ಆಗಾಮಿ...... (ವಚನ–೧೯೧)

**ಟೀಕು:** "ಇಹದಲ್ಲಿ ಮಾಡಿ ಮಾಡಿ ಕೊಡಲಿಕ್ಕುವುದೆ ಸಂಚಿತ, ಮರಳಿ ಬಂದುದನುಭವಿಸೂದೆ ಪ್ರಾರಬ್ಧ, ಜನನ ಮರಣಂಗಳಲ್ಲಿ ಎಡೆಯಾಡುವುದೆ ಆಗಾಮಿ ಎಂಬುದರ್ಥ".[೧೩೪] ಇದೇ ರೀತಿ ವಚನ ಟೀಕು ೮೫, ೩೮೮, ೪೮೫, ೫೫೮, ೫೯೬, ೬೦೫ ಇತ್ಯಾದಿ ವಚನ ಟೀಕುಗಳು ವಚನದ ಒಂದು, ಎರಡು ಇಲ್ಲವೇ ಮೂರು ವಾಕ್ಯಗಳನ್ನು ಆದರಿಸಿ ಟೀಕು ಬರೆದಿದ್ದು ಕೊನೆಯಲ್ಲಿ ಮುಂದಕ್ಕೆ ಕಾಣಬಂದರ್ಥ ಎಂದು ಹೇಳಲಾಗಿದೆ. ೧೫೭ನೇ ವಚನದ ಪದಗಳಿಗೆ ಟೀಕೆ ಬರೆದಿದೆ.

**೭. ವಚನಾದಿ – ವಚನಾಂತ್ಯದ ಕೆಲವು ಸಾಲುಗಳಿಗೆ :**

ವಚನಾಂತ್ಯದ ಕೆಲವು ಸಾಲುಗಳಿಗೆ ಮಾತ್ರ ಟೀಕೆ ಬರೆದಿರುವುದನ್ನು ಕ್ರಮವಾಗಿ ೩೬೯, ೪೬೬ನೇ ವಚನ ಟೀಕು ಗಮನಿಸಬೇಕು. ವಚನದ ಆದಿ – ಅಂತ್ಯ ಕೈಬಿಟ್ಟು ಮಧ್ಯದ ವಾಕ್ಯಗಳಿಗೆ ಟೀಕು ಬರೆದಿರುವ ೨೭೦ನೇ ವಚನ ಟೀಕು ನೋಡಬಹುದು.

**೮. ವಚನದೊಳಗಿನ ಬಿಡಿ ವಾಕ್ಯಕ್ಕೆ ಬರೆದ ಮೂರು ಅರ್ಥಕ್ಕೆ ೩೫೩ನೇ ವಚನ**

**ಉದಾ:** ಮುದಿಬಳ್ಳುವ ಮುಟ್ಟಿದಡೇನು ಸೋಜಿಗವೋ(೩೫೩)

**ಟೀಕೆ:** ೧. ಸತ್ತ್ವಣವ ಜ್ಞಾನವಮೌನಿಗಳಾದ ಪೂರ್ವಾಚಾರ್ಯರುಗಳ ಆಚರಣೆಗೆ ಸರಿಬಾರದಿದೇನಾಶ್ಚರ್ಯವೋ.

೨. ಮತ್ತಂ, ಮಹಾಲಿಂಗವು ಹೇಳಿದ ಸುರುಚಿರ ಪಿಂಡಾದಿ ಜ್ಞಾನ ಶೂನ್ಯಾಂತಮಾದ ಸರ್ವಾಚಾರ ಸಂಪತ್ತಿನಾಚಾರಣೆಯ ವಚನವನ್ನು ಶಿವಾನುಭಾವಿಗಳೆಲ್ಲಾ ಒರಲಿಟ್ಟು ಪಠಿಸುತ್ತಿರ್ಪರು ಕಂಡಾ, ಆ ಶಿವಾನುಭಾವಿಗಳು ಓದಿದ ಓದು ಮಹಾಲಿಂಗವನು ಸೋಂಕದಿದೇನಾಶ್ಚರ್ಯವೋ?

೩. ಮತ್ತಂ, ಪೂರ್ವಕವಿಗಳು ಹೇಳಿದ ಕವಿತ್ವವನು ನೂತನ ಕವಿಗಳು ಪಠಿಸಿದ ಪಠಣೆಯು ಪೂರ್ವಕವಿಗಳಿಗೆ ಸರಿಬಾರದಿದೇನಾಶ್ಚರ್ಯವೋ?"[೧೩೫] ಎಂದು ಮೂರು ರೀತಿ ಅರ್ಥಬರೆಯಲಾಗಿದೆ.

**೯. ವಚನದೊಳಗಿನ ಕೆಲವು ಪದಗಳಿಗೆ ಮಾತ್ರ ಬರೆದ ಟೀಕೆಗೆ**

**ವಚನ:** "......ಕುಲಸೂತಕ ಛಲಸೂತಕ ತನುಸೂತಕ

ನೆನಹುಸೂತಕ ಭಾವಸೂತಕ....."

**ಟೀಕು:** "ಕುಲಸೂತಕವಿಲ್ಲ ಅಯೋನಿಸಂಭವನಾದಕಾರಣ, ಛಲಸೂತಕವಿಲ್ಲ ವಸ್ತು ತನ್ನಿಂದ ಪ್ರತಿದೋರದಾಗಿ, ತನುಸೂತಕವಿಲ್ಲ ದೇಹವಳಿದು ಆಚಾರಾಂಗವಾಯಿತ್ತಾಗಿ, ಮನಸೂತಕವಿಲ್ಲ ಮನವಳಿದು ಉನ್ಮನಿತತ್ವಸ್ವರೂಪಾಯಿತ್ತಾಗಿ, ನೆನಹುಸೂತಕವಿಲ್ಲ ಅನ್ಯಚಿಂತನೆಯಳಿದು ಶಿವಚಿಂತನೆಯಾಯಿತ್ತಾಗಿ, ಭಾವಸೂತಕವಿಲ್ಲ ಆತ್ಮನಳಿದು ಚಿದಾತ್ಮನಾದ ಕಾರಣ, ಹೀಂಗೆ ಲಿಂಗಭ್ರಾಂತನ ಮಾಡಿ ರಕ್ಷಿಸಿರಿ ಎಂಬುದರ್ಥ".[೧೩೬]

ಹೀಗೆ, ತೋಂಟದ ಸಿದ್ಧಲಿಂಗೇಶ್ವರರ ೨೬೬ ಬೆಡಗಿನ ವಚನಗಳಿಗೆ ಬರೆದ 'ಷಟ್‌ಸ್ಥಲಜ್ಞಾನಸಾರಾಮೃತ ಟೀಕೆ' ಹೆಸರಿನ ಕೃತಿ ಸಂಪಾದನೆಗೆ ಬೆಂಗಳೂರು ವಿ.ವಿ.ದ ಬಿ. ೭೮೧/೨ ಸಂಖ್ಯೆಯ ಹಸ್ತಪ್ರತಿಯನ್ನು (೧–೪೧) ಬಳಸಿಕೊಂಡ ಡಾ. ಎಸ್. ವಿದ್ಯಾಶಂಕರ ಅವರ ಟೀಕಾಕೃತಿಯ ಸ್ವರೂಪವು ತಾತ್ವಿಕಾರ್ಥದೊಂದಿಗೆ ಮತ್ತು ಸಂಕ್ಷಿಪ್ತ ವಿವರಣೆಯೊಂದಿಗೆ ಓದುಗರ ಗಮನ ಸೆಳೆಯುತ್ತದೆನ್ನಬಹುದು.

**ಈ. ತೋಂಟದ ಸಿದ್ಧೇಶ್ವರದೇವರು ನಿರೂಪಿಸಿದ ಷಟ್‌ಸ್ಥಲಜ್ಞಾನಸಾರಾಮೃತ ವಚನಂಗಳು:**

ತೋಂಟದ ಸಿದ್ಧಲಿಂಗೇಶ್ವರ ಷಟ್‌ಸ್ಥಲಜ್ಞಾನಸಾರಾಮೃತದ ಎಲ್ಲ ೭೦೧ ವಚನಗಳಿಗೆ ಟೀಕೆ ಬರೆಯಲಾಗಿದೆ. ಅಂದರೆ, ಮೇಲ್ಕಂಡ ಹೆಸರಿನ ಹಸ್ತಪ್ರತಿಯನ್ನು ಆಧಾರವಾಗಿಟ್ಟುಕೊಂಡು ತೋಂಟದಾರ್ಯರ

ವಚನ ವ್ಯಾಖ್ಯೆ ಹೆಸರಿನಲ್ಲಿ ಡಾ. ಸಾ.ಶಿ. ಮರುಳಯ್ಯನವರು ಸಂಪಾದಿಸಿರುವ ಕೃತಿಯಲ್ಲೂ ತೋಂಟದಾರ್ಯರ ಎಲ್ಲ ೭೦೧ ವಚನಗಳಿಗೂ ಟೀಕೆ ಬರೆಯಲಾಗಿದೆ. ಅದರಂತೆ ಟೀಕಾಕಾರನ ಹೆಸರು, ಕಾಲ ಮತ್ತಾವುದೇ ವಿವರಗಳು ಲಭ್ಯವಿಲ್ಲ. ಈತನ ಕಾಲ ಅಂದಾಜು ೧೮ನೆಯ ಶತಮಾನವೆಂದು ಇಟ್ಟುಕೊಳ್ಳಬಹುದಾಗಿದೆ. ಅಪ್ರಕಟಿತವಾಗಿದ್ದ ಕಾಗದ ಪ್ರತಿಗಳಾದ ೭೩, ಮತ್ತು ೫೭೨ನ್ನು ಆಧಾರವಾಗಿಟ್ಟುಕೊಂಡು ಡಾ. ವೀರಣ್ಣ ರಾಜೂರ ಸಂಪಾದಿಸಿ, ಪ್ರಕಟಿಸಿದ್ದಾರೆ.

**ಕೃತಿಸ್ವರೂಪ:** ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಬಂಡಾರದಲ್ಲಿರುವ ಕೋರಿ ಕಾಗದದ ಪ್ರತಿ ಸಂಖ್ಯೆ ೭೩ ಮತ್ತು ಹುಮನಾಬಾದಿನ ಮುರುಘಾಮಠದಿಂದ ಲಭಿಸಿ, ಪ್ರಸ್ತುತ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರದಲ್ಲಿರುವ ಕೋರಿಕಾಗದದ ಪ್ರತಿ ಸಂಖ್ಯೆ ೫೭೨ ಇವನ್ನು ಆಧಾರವಾಗಿಟ್ಟುಕೊಂಡು ಡಾ. ವೀರಣ್ಣ ರಾಜೂರ ಅವರು ಎಡೆಯೂರು ಸಿದ್ಧಲಿಂಗೇಶ್ವರ ಕ್ಷೇತ್ರ ಮತ್ತು ಧಾರ್ಮಿಕ ದತ್ತಿ ಇಲಾಖೆ ಪ್ರಕಾಶನದಲ್ಲಿ "ತೋಂಟದ ಸಿದ್ಧಲಿಂಗೇಶ್ವರ ಸಮಗ್ರ ಸಾಹಿತ್ಯ" ಸಂಪುಟ-೧ರಲ್ಲಿ ಸಂಪಾದಿಸಿ ಮೊದಲಬಾರಿಗೆ ಪ್ರಕಟಿಸಿದ್ದಾರೆ.

೭೩ ಸಂಖ್ಯೆಯ ಕೋರಿಕಾಗದ ಪ್ರತಿಯ ಉದ್ದ ೧೨.೮" x ಅಗಲ ೪". ಪುಟ ೧-೨೧೪. ಪ್ರತಿಪುಟದಲ್ಲಿ ೧೩ ರಿಂದ ೧೪ ಸಾಲುಗಳಿದ್ದು ಉತ್ತಮ ಸ್ಥಿತಿಯಲ್ಲಿದೆ. ಅಕ್ಷರ ಸಾಧಾರಣ ಇವೆ. ಆದಿಯಲ್ಲಿ "ಶ್ರೀಗುರುಬಸವಲಿಂಗಾಯನಮಃ, ತೋಂಟದ ಸಿದ್ಧೇಶ್ವರಸ್ವಾಮಿಗಳು ನಿರೂಪಿಸಿದ ಷಟ್‌ಸ್ಥಲಜ್ಞಾನ ಸಾರಾಮೃತದ ವಚನಂಗಳು. ಪ್ರಥಮದಲ್ಲಿ ಸ್ತೋತ್ರದ ವಚನಂಗಳು.

ಅಂತ್ಯದಲ್ಲಿ "...ಅಂತು ಸ್ಥಲ ೨೧ಕ್ಕೆ ಸೇರಿದ ವಚನ ೭೦೧ಕ್ಕೆ ಮಂಗಳ ಮಹಾ ಶ್ರೀಶ್ರೀಶ್ರೀ. ಇದು -ಇಂತಪ್ಪಾಚರಣೆಯು, ಷಟ್‌ಸ್ಥಲ ಜ್ಞಾನಾಸಾರಾಮೃತದ ವಚನ - ಷಡ್ವಿದಂಗ ಲಿಂಗಭಕ್ತಿಗಳ ಆಚರಣೆಯು, ಈ ಪ್ರಕಾರದಲ್ಲಿ ಇಪ್ಪುದೆಂದು ಹೇಳುವಂತಾ ವಾಕ್ಯಾನುಭಾವವು ೭೦೧ ಶ್ರೀಶ್ರೀಶ್ರೀ. ತೋಂಟದ ಸಿದ್ಧಲಿಂಗೇಶ್ವರಾಯು ನಮಃ - ತೋಂಟದ ಸಿದ್ಧಲಿಂಗೇಶ್ವರನೆಂಬ ಶ್ರೀ ಗುರುಮೂರ್ತಿಗೋಸ್ಕರವಾಗಿ, ನಮಃ - ನಮಸ್ಕಾರವು, ಬಸವೇಶ್ವರದೇವರು - ಬಸವೇಶ್ವರಸ್ವಾಮಿಗಳು, ಚೆನ್ನಬಸವೇಶ್ವರದೇವರು - ಚೆನ್ನಬಸವೇಶ್ವರಸ್ವಾಮಿಗಳು, ಅಲ್ಲಮಪ್ರಭುದೇವರು - ಅಲ್ಲಮ ಪ್ರಭುಸ್ವಾಮಿಗಳು, ಮುಖ್ಯವಾದ - ಮೊದಲಾದ, ಏಳುನೂರೆಪ್ಪತ್ತು ಅಮರಗಣಂಗಳ - ಏಳುನೂರೆಪ್ಪತ್ತು ಪ್ರಮಥಗಣಂಗಳ, ಪಾದಪದ್ಮಗಳಿಗೆ - ಕಾಂತಿವೆತ್ತ ಚರಣಕಮಲಕ್ಕೆ, ಶರಣು ಶರಣಾರ್ಥಿ - ನಮಸ್ಕಾರ, ಶುಭಮಸ್ತು ಶ್ರೀಶ್ರೀಶ್ರೀಶ್ರೀ ಗುರುಬಸವಲಿಂಗಾಯನಮಃ".

ಅದೇ ರೀತಿ ೫೭೨ನೇ ಕೋರೆಕಾಗದ ಪ್ರತಿಯ ಉದ್ದ ೧೨.೫" x ಅಗಲ ೪". ಪುಟ - ೧ ರಿಂದ ೪೨೪. ಪುಟಕ್ಕೆ ೧೦ ಸಾಲುಗಳಿವೆ. ಸಮಗ್ರ; ಉತ್ತಮ; ಅಕ್ಷರ ಸಾಧಾರಣವಾಗಿವೆ. ಆದಿಯಲ್ಲಿ "ಶ್ರೀಗುರು ಬಸವಲಿಂಗಾಯನಮಃ. ಶ್ರೀ ಐಶ್ವರ್ಯೋಪಲಕ್ಷಿತವಾದಂಥ, ಗುರು-ಮುಕ್ತಿ ಪ್ರದಾಯಕನಾದಂಥ, ಬಸವಲಿಂಗಾಯನಮಃ-ಬಸವಲಿಂಗೇಶ್ವರನೆಂಬ ಶ್ರೀಗುರುಮೂರ್ತಿಗೋಸ್ಕರವಾಗಿ, ಆಯ - ನಾನು,

ನಮಃ –ನಮಸ್ಕಾರವು. ತೋಂಟದ ಸಿದ್ದೇಶ್ವರಸ್ವಾಮಿಗಳು ನಿರೂಪಿಸಿದ ಷಟ್‌ಸ್ಥಲಜ್ಞಾನಸಾರಾಮೃತದ ವಚನಂಗಳು".

ಅಂತ್ಯದಲ್ಲಿ "ಇದು–ಇಂತಪ್ಪ ಆಚರಣೆಯು, ಷಟ್‌ಸ್ಥಲಜ್ಞಾನಸಾರಾಮೃತ ವಚನ – ಷಡ್ವಿಧ ಅಂಗಲಿಂಗ ಭಕ್ತಿ ಆಚರಣೆಯು ಈ ಪ್ರಕಾರದಲ್ಲಿ ಇಪ್ಪದೆಂದು ಹೇಳುವಂಥಾ ವಾಕ್ಯಾನುಭಾವವು .....ಇಂತು ಷಟ್‌ಸ್ಥಲಚಕ್ರವರ್ತಿ ವಿರಕ್ತ ಶಿಖಾಮಣಿ ತೋಂಟದ ಸಿದ್ಧಲಿಂಗಸ್ವಾಮಿಗಳು ಕೃಪಾಕಟಾಕ್ಷದಿಂದ ಮರ್ತ್ಯಲೋಕದ ಮಹಾಗಣಂಗಳು ನಿತ್ಯ ಶಿವಸುಖಿಗಳಾಗಲೆಂದು ಅನ್ಯೋಪದೇಶವಾಗಿ ನಿರೂಪಿಸಿದ ಷಟ್‌ಸ್ಥಲಜ್ಞಾನ ಸಾರಾಮೃತದೊಳಗೆ ಪ್ರಥಮದಲ್ಲಿ ಸ್ತೋತ್ರವಚನ. ೨...... ಅಂತು ಕೂಡಲಾಗಿ ೭೦೧ಕ್ಕೆ ಮಂಗಳ ಮಹಾ ಶ್ರೀಶ್ರೀಶ್ರೀ" – ಎಂದು ಎರಡು ಹಸ್ತಪ್ರತಿಗಳಲ್ಲಿರುವ ವಿವರಣೆಯಿಂದ ಟೀಕಾಕಾರನ ಹೆಸರು, ಕಾಲದ ಬಗ್ಗೆ ಯಾವುದೇ ಮಾಹಿತಿ ಲಭಿಸುವದಿಲ್ಲ. ಡಾ. ವೀರಣ್ಣ ರಾಜೂರ ಅವರು "ಇದು ಮೇಲಿನ ಪ್ರತಿಯ ಟೀಕೆಯನ್ನೇ ಅಳವಡಿಸಿಕೊಂಡ ಮತ್ತೊಂದು ಪ್ರತಿ. ಇದನ್ನು ಅದಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ"[೧೩೭] ಎಂದು ಸ್ಪಷ್ಟಪಡಿಸಿದ್ದಾರೆ. ಜೊತೆಗೆ ೫೭೨ನೇ ಕಾಪ್ರ "ಹುಮನಾಬಾದಿನ ಮುರುಘಾಮಠದಲ್ಲಿ ದೊರೆತುದರಿಂದ 'ಹುಮನಾಬಾದಿನ ನಿರಂಜನಸ್ವಾಮಿ' ಬರೆದುದೆಂದು ಊಹಿಸಿರುವ ಚಿತ್ರದುರ್ಗಮಠದಲ್ಲಿರುವ ಆ ಕೃತಿ ಇದೇ ಆಗಿರುವ ಸಂಭವವಿದೆ"[೧೩೮] ಎಂದು ಅಭಿಪ್ರಾಯಪಟ್ಟಿದ್ದಾರೆ. ಒಟ್ಟಾರೆ, ಡಾ.ಸಾ.ಶಿ.ಮರುಳಯ್ಯ ಅವರು ಸಂಪಾದನೆಗೆ ಬಳಸಿದ ಟೀಕಾಹಸ್ತಪ್ರತಿಗೂ ಪ್ರಸ್ತುತ ಹಸ್ತಪ್ರತಿಗಳ ವಚನಾರ್ಥದಲ್ಲಿ ಸಾಕಷ್ಟು ಸಾಮ್ಯತೆಗಳಿವೆಯೆನ್ನಬಹುದು.

**ಟೀಕಾ ಸ್ವರೂಪ:** ತೋಂಟದ ಸಿದ್ಧಲಿಂಗರ ಎಲ್ಲ ೭೦೧ ವಚನಗಳಿಗೂ ಇಲ್ಲಿ 'ಪ್ರತಿಪದಾರ್ಥ ಟೀಕೆ ಬರೆಯಲಾಗಿದೆ. ಡಾ.ವೀರಣ್ಣ ರಾಜೂರ ಅವರು ಟೀಕಾಸ್ವರೂಪ ಕುರಿತು "ಮೊದಲು ವಚನದ ಪೂರ್ಣಪಾಠಕೊಟ್ಟು, ಅನಂತರ ಒಂದೊಂದು ಪದಗಳಿಗೆ ಅರ್ಥಬರೆಯುತ್ತ ಸಾಗಲಾಗಿದೆ. ಅದರಂತೆಯೇ ಇಲ್ಲಿಯೂ ಬಿಡಿಪದಗಳಿಗೆ ಬರೆದ ಸಂಕ್ಷಿಪ್ತ ಅರ್ಥ, ಬಿಡಿಪದಗಳಿಗೆ ಬರೆದ ವಿಸ್ತೃತ ಅರ್ಥ, ವಾಕ್ಯದೊಳಗಿನ ಬಿಡಿಪದಗಳಿಗೆ ಬರೆದ ಸಂಕ್ಷಿಪ್ತ ಅರ್ಥ, ಇಡೀ ವಾಕ್ಯಕ್ಕೆ ವಿಸ್ತರಿಸಿ ಬರೆದ ಅರ್ಥ, ಬಿಡಿಪದಕ್ಕೆ ಬರೆದ ಎರಡು ಮೂರು ಅರ್ಥ, ವಾಕ್ಯದೊಳಗಿನ ಬಿಡಿಪದಗಳಿಗೆ ಬರೆದ ಒಂದಕ್ಕಿಂತ ಹೆಚ್ಚು ಅರ್ಥ, ಸರಳ ವಚನಗಳಿಗೆ ಬರೆದ ಕೇವಲ ವಾಚ್ಯಾರ್ಥ, ಸರಳವಚನಗಳಿಗೆ ಸೇರಿಸಿ ಬರೆದ ವಾಚ್ಯಾರ್ಥ, ತಾತ್ವಿಕಾರ್ಥ; ಬೆಡಗಿನ ವಚನಗಳಿಗೆ ಪ್ರತ್ಯೇಕವಾಗಿ ಬರೆದ ವಾಚ್ಯಾರ್ಥ, ತಾತ್ವಿಕಾರ್ಥ, ಲೋಕಾನುಭವದಿಂದ ದೃಷ್ಟಾಂತಗಳ ಮೂಲಕ ವಿಸ್ತರಿಸಿ ಬರೆದ ಅರ್ಥ, ಅರ್ಥಸಮರ್ಥನೆಗಾಗಿ ಸಂಸ್ಕೃತ ಉದ್ಧರಣೆಗಳನ್ನು ಬಳಸಿಕೊಂಡು ಬರೆದ ಅರ್ಥ ಈ ಎಲ್ಲ ವೈವಿಧ್ಯತೆಗಳೂ ಕಂಡುಬರುತ್ತವೆ. ಆದರೆ, ಅರ್ಥ ಹೇಳುವ ರೀತಿಯಲ್ಲಿ, ದೃಷ್ಟಾಂತಗಳನ್ನು ಕೊಡುವ ಸಂದರ್ಭದಲ್ಲಿ ಹಲವು ವ್ಯಾತ್ಯಾಸಗಳು ತೋರುತ್ತವೆ. ಹೀಗಾಗಿ ಇವು ಒಂದರಿಂದ ಮತ್ತೊಂದಾಗಿ ಬೆಳೆದ ಟೀಕೆಗಳಾಗಿರದೇ, ಭಿನ್ನ ಕರ್ತೃಗಳ ಪ್ರತ್ಯೇಕ ಕೃತಿಗಳಾಗಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿವೆ".[೧೩೯] ಎಂದು ಅಭಿಪ್ರಾಯಪಡುತ್ತಾರೆ. ಈ ಹಿನ್ನಲೆಯಲ್ಲಿ ಇವೆರಡೂ ಬೇರೆ ಬೇರೆ ಟೀಕಾಕೃತಿಗಳೆಂದು ತಿಳಿದುಕೊಂಡು

ಅಧ್ಯಯನ ಮಾಡಬೇಕಾಗುತ್ತದೆ. ಜೊತೆಯಲ್ಲಿ ಎರಡೂ ಟೀಕೆಗಳಲ್ಲಿಯ ಸ್ವರೂಪದಲ್ಲಿಯ ವ್ಯತ್ಯಾಸವನ್ನು ಗಮನಿಸಬೇಕಾಗುತ್ತದೆ.

ಈ ಟೀಕೆಯ ಸ್ವರೂಪ ಮತ್ತು ಸಾ.ಶಿ. ಮರುಳಯ್ಯ ಸಂಪಾದಿತ ಟೀಕೆಯ ಜೊತೆ ಹೋಲಿಸಿದಾಗ ತೋರುವ ವ್ಯತ್ಯಾಸವನ್ನು ಇಲ್ಲಿ ನೋಡೋಣ.

**೧. ಬಿಡಿಪದಗಳಿಗೆ ಬರೆದ ಸಂಕ್ಷಿಪ್ತ ಅರ್ಥ:**

**ಉದಾ:** "ದನುಜಲೋಕ – ರಾಕ್ಷಸರಿರುವಂಥ ನಾಗಲೋಕವು, ಮನುಜಲೋಕ – ಮಾನವರಿರುವಂಥ ಮರ್ತ್ಯಲೋಕವು, ದಿವಿಜಲೋಕ – ದೇವತೆಗಳಿರುವಂಥ ಸ್ವರ್ಗವು, ಭರಿತಂ – ಮೂರು ಲೋಕಂಗಳಲ್ಲಿ ತುಂಬಲ್ಪಟ್ಟಂಥ ಪರಶಿವಲಿಂಗವೆ (೭)"[೧೪೦]

**೨. ಬಿಡಿ ಪದಗಳಿಗೆ ಬರೆದ ವಿಸ್ತೃತ ಅರ್ಥ:**

**ಉದಾ:** "ಯೋಗಿಯಲ್ಲ – ಭಿನ್ನಯೋಗಿ ಸ್ವಸ್ತ ಪದ್ಮಾಸನದಲ್ಲಿ ಕುಳಿತುಕೊಂಡು, ಅಂತ್ಯೋಜವಂ ಬಲಿದು. ಗುದ ಗುಹ್ಯದ್ವಾರವನು ಒಲಿದು ಬಂಧಿಸಿದಲ್ಲಿ ಅಧೋಮುಖವಾಗಿ ಚರಿಸಲ್ಪಟ್ಟಂಥ ವಾಯು ಊರ್ಧ್ವಮುಖವಾಗಿ ಚರಿಸಲು, ಆ ವಾಯು ಚರಿಸುವುದಕ್ಕೆ ಠಾವಿಲ್ಲದೆ ಬ್ರಹ್ಮರಂಧ್ರದಲ್ಲಿ ಗಿಮಿಗಿಮಿ ಚಕ್ರತಿಯಾಗಿ ಸುತ್ತಲು, ಅಂತಪ್ಪ ಮೂಲಾಧಾರದಲ್ಲಿ ಅಗ್ನಿಜ್ವಾಲೆಯು ಒಂದಾನೊಂದು ದೀಪದ ಹಾಂಗೆ ಥಳಥಳಯೆಂದು ಪಟುತರವಾಗಲು, ಪಟುತರವಾದಲ್ಲಿ ಬ್ರಹ್ಮರಂಧ್ರದ ಕಠೋರದ ಹಂಚಿನಲ್ಲಿಯಲ್ಲಣದೋಪಾದಿಯಲ್ಲಿ ಹತ್ತಿಕೊಂಡಂಥ ಶ್ಲೇಷ್ಮಾಮೃತವು ಕರಗಿ ನಾಲಿಗೆಯ ಮೇಲೆ ತೊಟ್ಟಿಡಲು, ಅದನು ಮನೋಮುಖದಿಂದ ಆಗುಮಾಡಿಕೊಂಡು ಬಂದು ಚಿತ್ತಿನ ಚಿತ್ಕೂಪದಲ್ಲಿ ತುಂಬಿದಂಥ ಚಿತ್ಕಲಾಮೃತವನ್ನು ಸೇವಿಸಿ ಆತ್ಮನೆ ಬ್ರಹ್ಮವಾಯಿತ್ತೆಂದು ನುಡಿಯಲ್ಪಟ್ಟಂಥ ಭಿನ್ನಯೋಗಿಯಲ್ಲವು.(೯)"[೧೪೧]

**೩. ವಾಕ್ಯದೊಳಗಿನ ಬಿಡಿ ಪದಗಳಿಗೆ ಬರೆದ ಸಂಕ್ಷಿಪ್ತ ಅರ್ಥ:**

**ಉದಾ:** "ಪೃಥ್ವಿ ಅಪ್ಪು ತೇಜ ವಾಯು ಆಕಾಶ ಚಂದ್ರ ಸೂರ್ಯ ಆತ್ಮನೆಂಬ – ಆತ್ಮನೆನಿಸುವ (೧೧); ಸೂರ್ಯನಿಂದ ತೋರಿದ ಕಿರಣಂಗಳಿಗೂ – ಸೂರ್ಯನಿಂದ–ಭಾಸ್ಕರನಿಂದ, ತೋರಿದ – ಕಾಣಿಸಿದಂಥ, ಕಿರಣಂಗಳಿಗೂ ಸಹಸ್ರ ಕಿರಣಂಗಳಿಗೂ ಇತ್ಯಾದಿ (೪೨)"[೧೪೨]

**೪. ಇಡೀ ವಾಕ್ಯಕ್ಕೆ ವಿಸ್ತರಿಸಿ ಬರೆದ ಅರ್ಥ:**

**ಉದಾ:** ಭಗವಧ್ಯಾನವೆಂಬ ಷಟ್ಪ್ರಕಾರವಾದಂಥ ಸ್ತ್ರೀಯರನು ಸರಸ ಸಲ್ಲಾಪನಗಳಿಂದ, ಹದಿರು ಚದುರಿನಿಂದ ಗನ್ನಗದುಕದಿಂದ ಅರವತ್ತು ನಾಲ್ಕು ಬಂಧನಗಳಿಂದ ಕೂಡಬೇಕೆಂದು ನೆನೆವಂಥಾದ್ದೆ ಭಗವಧ್ಯಾನವೆನಿಸಿಕೊಂಬುತ್ತ ಇಹುದು.(೧೦೭)"[೧೪೩]

**೫. ಬಿಡಿಪದಕ್ಕೆ ಬರೆದ ಎರಡೂ ಮೂರು ಅರ್ಥ:**

**ಉದಾ:** ಕಾರ್ಯನಲ್ಲ ಕಾರಣನಲ್ಲ (೨೫)

೧. ಕುಂಬಾರನಿಂದ ಮಾಡಲ್ಪಟ್ಟಂಥ ಸಮಸ್ತ ಭಾಂಡಗಳೆ ಕಾರ್ಯವೆನಿಸಿಕೊಂಬುತ್ತಂ ಇಹವು. ಅಂತಪ್ಪ ಸಮಸ್ತ ಭಾಂಡಗಳ ಸ್ವರೂಪಲ್ಲವು. ಕಾರಣನಲ್ಲ – ಸಮಸ್ತ ಭಾಂಡಂಗಳಿಗೆ ಮುಖ್ಯ ಕಾರಣವಾದಂಥ ಕುಂಬಾರನಲ್ಲವು.

೨. ಕಾರ್ಯನಲ್ಲ – ಅಕ್ಕಸಾಲಿಗನಿಂದ ಮಾಡಲ್ಪಟ್ಟಂಥ ಸಮಸ್ತ ಆಭರಣಂಗಳೆ ಕಾರ್ಯವೆನಿಸಿಕೊಂಬುತ್ತಂ ಇಹವು; ಕಾರಣನಲ್ಲ ಸಮಸ್ತ – ಆಭರಣಂಗಳಿಗೆ ಮುಖ್ಯ ಕಾರಣವಾದಂಥ ಅಕ್ಕಸಾಲಿಗನಲ್ಲವು.

೩. ಕಾರ್ಯನಲ್ಲ – ಸದಾಶಿವನಿಂದ ಮಾಡಲ್ಪಟ್ಟಂಥ ಸಮಸ್ತ ಲೋಕಾದಿ ಲೋಕಂಗಳು ಕಾರ್ಯವೆನಿಸಿಕೊಂಬುತ್ತಂ ಇಹವು; ಅಂತಪ್ಪ ಸಮಸ್ತ ಲೋಕಾದಿ ಲೋಕಂಗಳ ಸ್ವರೂಪಲ್ಲವು. ಕಾರಣನಲ್ಲ – ಸಮಸ್ತ ಲೋಕಾದಿಲೋಕಂಗಳಿಗೆ ಮುಖ್ಯ ಕಾರಣವಾದಂಥ ಸದಾಶಿವಮೂರ್ತಿಯಲ್ಲವು; ಅಂತಪ್ಪ ಕಾರ್ಯಕಾರಣ ಸ್ವರೂಪನಲ್ಲವು".[೧೪೪]

**೬. ವಾಕ್ಯದೊಳಗಿನ ಬಿಡಿ ಪದಗಳಿಗೆ ಬರೆದ ಒಂದಕ್ಕಿಂತ ಹೆಚ್ಚು ಅರ್ಥ**

**ಉದಾ:** ಸಾಧ್ಯ ಸಾಧಕರಿಲ್ಲದಂದು (೨೯)

೧. ಸಾಧ್ಯ – "ಬ್ರಹ್ಮದೇವೇಂದ್ರ ಮುಖ್ಯವಾದ ಮನುಮುನಿದೇವದಾನವ ಮಾನವರಿಂದ ನಮಸ್ಕರಿಸಲ್ಪಟ್ಟಂಥ ಸದಾಶಿವನ ಪಂಚಮುಖಂಗಳು;

೨. ಸಾಧ್ಯ – ಸಮಸ್ತ ಗಣಾಧೀಶ್ವರರುಗಳಿಂದ ಸಾಧಿಸಲ್ಪಟ್ಟಂಥ ಸದಾಶಿವಮೂರ್ತಿಯು.

೩. ಸಾಧ್ಯ – ಶ್ರೀಗುರುಮೂರ್ತಿಯನು ಸಾಧಿಸಲ್ಪಟ್ಟಂಥ ಶಿಷ್ಯರು".[೧೪೫] ಇದೇ ರೀತಿ ಸಾಧಕರು ಬಿಡಿಪದಕ್ಕೂ ಕೂಡಾ ಮೂರು ಅರ್ಥವನ್ನು ಕೊಡಲಾಗಿದೆ. ಟೀಕಾಕಾರರ ಈ ಪ್ರಯತ್ನ ವಿಶಿಷ್ಟವೆನ್ನಬಹುದು.

**೭. ಸರಳ ವಚನಗಳಿಗೆ ಬರೆದ ಕೇವಲ ವಾಚ್ಯಾರ್ಥ:**

**ವಚನ:** ಅಂಗಕ್ಕೆ ಆಚಾರವೇ ಆಶ್ರಯವಾಗಿ, ಆ ಆಚಾರಕ್ಕೆ ಪ್ರಾಣವೆ ಆಶ್ರಯವಾಗಿ, ಆ ಪ್ರಾಣಕ್ಕೆ ಜ್ಞಾನವೇ ಆಶ್ರಯವಾಗಿ, ಆ ಜ್ಞಾನಕ್ಕೆ ಲಿಂಗವೇ ಆಶ್ರಯವಾಗಿ, ಆ ಲಿಂಗಕ್ಕೆ ಜಂಗಮವೇ ಆಶ್ರಯವಾಗಿ, ಇಂತೀ ಪಂಚಲಕ್ಷಣ ಪರಿಪೂರ್ಣವಾಗಿರಬಲ್ಲಡೆ ಸದ್ಭಕ್ತನೆಂಬೆನಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ (೨೧೪)

**ಟೀಕೆ:** "ಅಂಗಕ್ಕೆ – ತನುವಿಂಗೆ, ಆಚಾರವೆ – ಸದಾಚಾರವೆ, ಆಶ್ರಯವಾಗಿ– ಆಲಯವಾಗಿರ್ಪುದು; ಆ ಆಚಾರಕ್ಕೆ – ಅಂತಪ್ಪ ಆಚಾರಕ್ಕೆ, ಪ್ರಾಣವೆ – ಹರಣವೆ,... ಜ್ಞಾನವೆ – ಅರಿವೆ,... ಜಂಗಮವೇ ಆಶ್ರಯವಾಗಿ – ಚರಮೂರ್ತಿಯೇ ಆಲಯವಾಗಿಪ್ಪನು, ಇರಬಲ್ಲಡೆ ಸದ್ಭಕ್ತನೆಂಬೆನಯ್ಯಾ – ಸದ್ಭಕ್ತಿಸ್ಥಲವಾದಚರಣೆವುಳ್ಳಾತನೆಂದು ನುಡಿವೆನಯ್ಯಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ".[೧೪೬]

**೮. ಸರಳ ವಚನಗಳಿಗೆ ಬರೆದ ವಾಚ್ಯಾರ್ಥ, ತಾತ್ವಿಕಾರ್ಥ.**

**ವಚನ:** ಸುಧೆಯೊಳಗೆ ವಿಷವುಂಟೆ? ಮಧುವಿನೊಳಗೆ ಕಹಿಯುಂಟೆ?
ದಿನಮಣಿಯೊಳಗೆ ಕಪ್ಪುಂಟೆ? ಬೆಳದಿಂಗಳೊಳಗೆ ಕಿಚ್ಚುಂಟೆ?
ಅಮೃತ ಸಾಗರದೊಳಗೆ ಬೇವಿನ ಬಿಂದುವುಂಟೆ?
ಮಹಾಜ್ಞಾನ ಸ್ವರೂಪವಪ್ಪ ಶರಣರೆ ಲಿಂಗವೆಂದರಿದ ಮಹಾತ್ಮರಿಗೆ
ಸಂಕಲ್ಪ ಭ್ರಮೆಯುಂಟೆ? ಅದೇತರ ವಿಶ್ವಾಸ ಸುಡು ಸುಡು;
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ (ವ-೫೮)

**ಟೀಕೆ:** "ಸುಧೆಯೊಳಗೆ-ಅಮೃತದಲ್ಲಿ, ವಿಷವುಂಟೆ-ವಿಷ ಉಂಟಾಗಿದ್ದೀತೆ? ಇಲ್ಲವು ಎಂಬ ಹಾಂಗೆ, ನಿತ್ಯಸ್ವರೂಪವಾದಂಥ ಶಿವಶರಣರಲ್ಲಿ ವಿಷಯ ಪ್ರಪಂಚು ಉಂಟಾಗಿದ್ದೀತೇ? ಇಲ್ಲವು. ದಿನಮಣಿಯೊಳಗೆ -ಸೂರ್ಯನಲ್ಲಿ, ಕಪ್ಪುಂಟೆ - ಕಳಂಕವುಂಟಾಗಿದ್ದೀತೆ? ಇಲ್ಲವು ಎಂಬ ಹಾಂಗೆ ಚಿತ್ಪ್ರಕಾಶಸ್ವರೂಪರಾದಂಥ ಶಿವಶರಣರಲ್ಲಿ ಅಜ್ಞಾನವುಂಟಾಗಿದ್ದೀತೆ? ಇಲ್ಲವು. ಬೆಳದಿಂಗಳೊಳಗೆ-ಜೊನ್ನದಲ್ಲಿ, ಕಿಚ್ಚುಂಟೆ - ಉಷ್ಣವುಂಟಾಗಿದ್ದೀತೆ? ಇಲ್ಲವು ಎಂಬ ಹಾಂಗೆ ಚಿತ್ಕಲಾ ಸ್ವರೂಪವಾದಂಥ ಶಿವರಣರಲ್ಲಿ ತಾಪತ್ರಯಾಗ್ನಿ ಉಂಟಾಗಿದ್ದೀತೆ? ಇಲ್ಲವು. ಅಮೃತಸಾಗರದೊಳಗೆ - ಕ್ಷೀರಸಮುದ್ರದಲ್ಲಿ, ಬೇವಿನ ಬಿಂದುಂಟೆ - ಬೇವಿನ ಹನಿಯು ಉಂಟಾಗಿದ್ದೀತೇ? ಇಲ್ಲವು ಎಂಬ ಹಾಂಗೆ ಅಖಂಡ ಆನಂದ ಚಿದಾಬ್ಧಿಮಯಮಪ್ಪಂಥ ಶಿವಶರಣರಲ್ಲಿ ತನುಪ್ರಪಂಚುಂಟಾಗಿದ್ದೀತೆ? ಇಲ್ಲವು. ಮಹಾಜ್ಞಾನಸ್ವರೂಪಮಪ್ಪ ಶರಣರೆ - ಅಖಂಡ ಮಹಾಜ್ಞಾನಸ್ವರೂಪರಪ್ಪ ಶಿವಶರಣರೆ, ಲಿಂಗವೆಂದರಿದ - ಶಿವನೆಂದು ತಿಳಿದಂಥ, ಮಹಾತ್ಮಂಗೆ - ಮಹಿಮಾಪದವನುಳ್ಳಂಥ ಶಿವಶರಣರಿಗೆ, ಸಂಕಲ್ಪಬ್ರಮೆಯುಂಟೆ - ಶರಣನು ಲಿಂಗಸ್ವರೂಪಹುದೊ ಅಲ್ಲವೊ ಎಂದು ನುಡಿವಂಥ ಸಂಕಲ್ಪ ಭ್ರಾಂತು ಉಂಟಾಗಿದ್ದೀತೇ? ಇಲ್ಲವು. ಅದು-ಅಂತಪ್ಪ ಶರಣನು ಲಿಂಗಸ್ವರೂಪಹುದೊ ಅಲ್ಲವೊಯೆಂಬಂಥಾ ಸಂಕಲ್ಪ ಭ್ರಾಂತಿಯು, ಏತರ ವಿಶ್ವಾಸ - ಅದಾವಕಡೆ ನಂಬುಗೆ? ನಂಬುಗೆಯಲ್ಲವು. ಸುಡು - ಅಂತಪ್ಪ ಅಪನಂಬುಗೆಯನು, ಸುಟ್ಟು - ದಗ್ಧವಮಾಡಿ, ಧಿಕ್ಕರಿಸಿ ಬಿಡುಯೆಂಬುದರ್ಥ. ಅಂತಪ್ಪ ಮಹಾಜ್ಞಾನಾಗ್ನಿಯಿಂದ ಸುಟ್ಟು ದಗ್ಧವ ಮಾಡಿಬಿಡು, ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ".[೧೯೭]

**೯. ಬೆಡಗಿನ ವಚನಗಳಿಗೆ ಪ್ರತ್ಯೇಕವಾಗಿ ಬರೆದ ವಾಚ್ಯಾರ್ಥ, ತಾತ್ವಿಕಾರ್ಥ:**

ಪ್ರಸ್ತುತ ಟೀಕೆಯ ಟೀಕಾಕಾರನು ಬೆಡಗಿನ ವಚನಗಳಿಗೆ ಒಂದಕ್ಕಿಂತ ಹೆಚ್ಚು ಅರ್ಥ ಬರೆದಿದ್ದಾನೆ. ಒಂದೇ ಅರ್ಥವಿದ್ದರೆ ಅದು ತಾತ್ವಿಕಾರ್ಥವಾಗಿರುತ್ತದೆ. ಎರಡಿದ್ದರೆ ಒಂದು ವಾಚ್ಯಾರ್ಥ, ಇನ್ನೊಂದು ತಾತ್ವಿಕಾರ್ಥವಾಗಿರುತ್ತದೆ. ಎರಡಕ್ಕಿಂತ ಹೆಚ್ಚಿದ್ದರೆ ಮೊದಲು ವಾಚ್ಯಾರ್ಥ, ಅನಂತರದಲ್ಲಿ ತಾತ್ವಿಕಾರ್ಥಗಳಿರುತ್ತವೆ. ವಾಚ್ಯಾರ್ಥ ಮುಗಿದೊಡನೆ ಟೀಕಾಕಾರ 'ಎಂಬುದೆ ದೃಷ್ಟವದರ್ಥವು' ಎಂದು ಹೇಳಲಾಗಿರುತ್ತದೆ. ಒಂದಕ್ಕಿಂತ ಹೆಚ್ಚಿಗಿದ್ದ ಮುಂದಿನ ತಾತ್ವಿಕಾರ್ಥಗಳ ಕೊನೆಗೆ 'ದ್ವಿತೀಯಾರ್ಥ' 'ತೃತೀಯಾರ್ಥ' ಎಂದು ಬರೆಯಲಾಗಿರುತ್ತದೆ. ಕೆಲವೊಮ್ಮೆ ಇದು ಕಡ್ಡಾಯವಾಗಿರುವುದಿಲ್ಲ. **ಉದಾಹರಣೆಗೆ:**

ವಚನ: ಚಿತ್ತಿನ ಮನೆಯಲ್ಲಿ ಸತ್ತಿಪ್ಪನಿವನಾರೋ?
ಸತ್ತವನ ನೋಡಿ ಎತ್ತಹೋದರೆ,
ಎತ್ತಹೋದವ ಸತ್ತು, ಸತ್ತವನೆದ್ದು ಕೂಗುತ್ತಿದ್ದಾನೆ
ಈ ಚಿತ್ರವನೇನೆಂಬೆನೋ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ (ವ – ೯೩)

**ಟೀಕೆ:** "ಚಿತ್ತಿನ ಮನೆಯಲ್ಲಿ – ಚಿತ್ತಿನ ಗೃಹದಲ್ಲಿ, ಸತ್ತಪ್ಪವನಿವನಾರೊ – ಮೃತವಾಗಿರುವಂಥಾತನು ಈತನಾರೊ? ಸತ್ತವನ ನೋಡಿ ಮೃತವಾಗಿದ್ದಂಥಾತನ ನಿರೀಕ್ಷಿಸಿ, ಎತ್ತನೋಡಿದರೆ – ನೆಗಹಬೇಕೆಂದು ಎಯ್ದೆರೆ, ಎತ್ತಹೋದವ ನೆಗಹಿ ಕೊಂಡಿದ್ದಂಥಾತನು, ಸತ್ತು – ಮೃತವಾಗಿ, ಸತ್ತವನೆದ್ದು – ಮೃತವಾಗಿದ್ದವನು ಎಚ್ಚತ್ತು, ಕೂಗುತ್ತಿದ್ದಾನೆ – ಧ್ವನಿಗೈಯುತ್ತಿದ್ದಾನೆ. ಈ ಚಿತ್ರವನೇನೆಂಬೆನು – ಈ ಅದ್ಭುತವನೇನೆಂದು ಹೇಳುವೆನು ಎಂಬುದೇ ದೃಷ್ಟದರ್ಥವು.

ಚಿತ್ತಿನ ಮನೆಯಲ್ಲಿ – ಚಿತ್ತಿಗೆ ಸ್ಥಾನವಾಗಿದ್ದಂಥ ಬ್ರಹ್ಮರಂಧ್ರದಲ್ಲಿ ಸತ್ತಿಪ್ಪವನಿವನಾರೋ – ಸದ್ರೂಪಿನಿಂದ ಸಂಬಂಧವಾಗಿದ್ದಂಥ ನಿಃಕಲಲಿಂಗವು ಈತನಾರೋ? ಸತ್ತವನ– ಸದ್ರೂಪಿನಿಂದ ಸಂಬಂಧವಾಗಿದ್ದಂಥ ನಿಃಕಲಲಿಂಗವು, ನೋಡಿ – ಪರಾಮರಿಸಿ ನೋಡಿ, ಎತ್ತಹೋದರೆ – ಆ ನಿಃಕಲಲಿಂಗವನೆ ಗುರುಮುಖದಿಂದ ಎಯ್ತಂದು ಅಂಗದಲ್ಲಿ ಇಷ್ಟಲಿಂಗಸ್ವರೂಪಿನಿಂದ ಸಂಬಂಧವ ಮಾಡಿಕೊಂಡ ಆ ಲಿಂಗದಲ್ಲಿ ಸತ್ಕ್ರಿಯಾಚಾರವನು ಮುಂದುಗೊಂಡಾಚರಿಸಿದರೆ, ಎತ್ತಹೋದವ – ಆ ನಿಃಕಲಲಿಂಗವನೆ ಗುರುಮುಖದಿಂದ ಎಯ್ತಂದು ಅಂಗದಲ್ಲಿ ಇಷ್ಟಲಿಂಗಸ್ವರೂಪಿನಿಂದ ಸಂಬಂಧವ ಮಾಡಿಕೊಂಡು ಆ ಲಿಂಗದಲ್ಲಿ ಸತ್ಕ್ರಿಯಾಚಾರವನೆ ಮುಂದುಗೊಂಡಾಚರಿಸುವಂಥ ಶರಣನು, ಸತ್ತು – ಸದ್ರೂಪವಾದ ವಸ್ತುವಿನಲ್ಲಿ ಕೂಡಿ ವಸ್ತುವೆ ತಾನಾಗಿ, ಸತ್ತವ – ಸದ್ರೂಪವಾದಂಥ ವಸ್ತುವಿನಲ್ಲಿ ಕೂಡಿ ವಸ್ತುವೆ ತಾನಾದಂಥ ಶಿವಶರಣನು, ಎದ್ದು – ಅಂತರಂಗದಲ್ಲಿ ಜ್ಞಾನೋದಯವಾಗಿ, ಕೂಗುತ್ತಿದ್ದಾನೆ– ಶಿವೋಹಂ ಪ್ರಣಮೋಹಂ ಬ್ರಹ್ಮೋಹಂ ಎಂದು ಧ್ವನಿಗೆಯ್ಯುತ್ತಿದ್ದಾನೆ. ಈ ಚಿತ್ರವನೇನೆಂಬೆನೊ– ಈ ಆಶ್ಚರ್ಯವನೇನೆಂದು ಹೇಳುವೆನೋ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ."[೧೪೮]

**೧೦. ಕೇವಲ ತಾತ್ವಿಕಾರ್ಥಕ್ಕೆ ಉದಾಹರಣೆ:**

ಕತ್ತಲೆಯ ಮನೆಯಲ್ಲಿ ಕಾಮಿನಿ ಮುತ್ತ ಸರಗೈಯ್ವುದ ಕಂಡೆನಯ್ಯ
ಕತ್ತಲೆ ಹರಿದು, ಮನಬತ್ತಲೆಯಾಗಿ ತತ್ತ್ವಮಸಿ ವಾಕ್ಯದಿಂದತ್ತತ್ತ ತಾನಾಗಿ.....
ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ(ವ–೪೯೯)

**ಟೀಕೆ:** "ಕತ್ತಲೆಯ ಮನೆಯಲ್ಲಿ – ಅಜ್ಞಾನ ಸ್ವರೂಪವಾದ ದೇಹದಂತರಂಗದಲ್ಲಿ, ಕಾಮಿನಿ – ಜ್ಞಾನಶಕ್ತಿಯು, ಮುತ್ತಸರಗೈಯ್ವುದ ಕಂಡೆನಯ್ಯ – ಮೋಕ್ಷಫಳ ಸ್ವರೂಪವಾದ ಪ್ರಾಣಲಿಂಗವನು

ಸ್ವಾನುಭಾವಸೂತ್ರದಿಂದ ಪೋಣಿಸಿ ಕೃತ ನಿಶ್ಚಯವೆಂಬ ಹಸ್ತದಿಂದ ದೃಢವಿಡಿದುಕೊಂಡಿರುವಂತಾದ ನರಿದೆನಯ್ಯ, ಕತ್ತಲೆ ಹರಿದು – ಅಜ್ಞಾನಂಧಾಕಾರವು ನಷ್ಟವಾಗಿ, ಮನ ಬತ್ತಲೆಯಾಗಿ ಮನವಳಿದು ಉನ್ಮನಿಯ ಮನಸ್ಸಾಗಿ–"[೧೯೯] ಹೀಗೆ ತಾತ್ವಿಕಾರ್ಥವನ್ನು ಟೀಕಾಕಾರ ನೀಡಿದ್ದಾನೆ.

**೧೧. ಎರಡಕ್ಕಿಂತ ಹೆಚ್ಚು ಅರ್ಥ ಬರೆದುದಕ್ಕೆ:**

**ವಚನ:** ತಂದೆಯ ವಧುವ ತಂದು ಮಗನಿಗೆ ಮದುವೆಯ ಮಾಡಿದೆ;
ಮಗನ ಹೆಂಡತಿಯ ತಂದು ಅವರಪ್ಪಗೆ ಮದುವೆಯ ಮಾಡಿದೆ;
ಅತ್ತೆ ಸೊಸೆಯ ನೆರೆದಳು;
ತಂದೆಮಕ್ಕಳಿಬ್ಬರು ಪರಾಂಗನೆಯ ನೆರೆದು,
ಪರಾಪರವಸ್ತುವಾದುದನೇನೆಂಬೆನಯ್ಯ,
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ (ವ – ೯೫)

**ಟೀಕು:** "ತಂದೆಯ ವಧುವ – ಪಿತನಸತಿಯನ್ನು, ತಂದು – ಕರೆದುಕೊಂಡು ಬಂದು, ಮಗನಿಗೆ – ಸುತನಿಗೆ, ಮದುವೆಯ ಮಾಡಿದೆ – ವಿವಾಹವ ಮಾಡಿದೆನು... ಇತ್ಯಾದಿ.

ತಂದೆಯ ವಧುವ – ಶ್ರೀ ಗುರುಮೂರ್ತಿಗೆ ಅಂಗವಾದಂಥ ಜ್ಞಾನಶಕ್ತಿಯನು, ತಂದು – ಅರಿವಿನಮುಖದಿಂದ ಆಗುಮಾಡಿಕೊಂಡು ಬಂದು, ಮಗನಿಗೆ–ಶಿಷ್ಯನಿಗೆ, ಮದುವೆಯ ಮಾಡಿದೆ– ಕ್ರಿಯಾಶಕ್ತಿಯ ಸ್ವರೂಪಿನಿಂದ ಅಂಗವ ಮಾಡಿದೆನು... ಇತ್ಯಾದಿ.

ತಂದೆಯ ವಧುವ – ಇಷ್ಟಲಿಂಗಕ್ಕೆ ಅಂಗವಾದ ಕ್ರಿಯಾಚಾರವ, ತಂದು ಅರಿವಿನ ಮುಖದಿಂದ ಆಗುಮಾಡಿಕೊಂಡು ಬಂದು, ಮಗನಿಗೆ – ಇಷ್ಟಲಿಂಗಕ್ಕೆ ಸುತನಾಗಿದ್ದಂಥ ಪ್ರಾಣಲಿಂಗಕ್ಕೆ, ಮದುವೆಯ ಮಾಡಿದೆ – ಜ್ಞಾನಾಚಾರಸ್ವರೂಪಿನಿಂದ ಅಂಗವ ಮಾಡಿದೆನು,...... ಇತ್ಯಾದಿ

ತಂದೆಯ ವಧುವ – ನಿಃಕಲಲಿಂಗಕ್ಕೆ ಅಂಗವಾದ ಮೂಲಜ್ಞಾನ ಚಿಚ್ಛಕ್ತಿಯನು, ತಂದು – ಅರಿವಿನ ಮುಖದಿಂದ ಆಗುಮಾಡಿಕೊಂಡು ಬಂದು, ಮಗನಿಗೆ ನಿಃಕಲಲಿಂಗಕ್ಕೆ ಸುತನಾದ ಮಹಾಲಿಂಗಕ್ಕೆ, ಮದುವೆಯ ಮಾಡಿದೆ–ಚಿಚ್ಛಕ್ತಿಯ ಸ್ವರೂಪಿನಿಂದ ಅಂಗವ ಮಾಡಿದೆನು"[೨೫೦] ಇತ್ಯಾದಿ

**೧೨. ಸಂಸ್ಕೃತ ಶ್ಲೋಕಗಳನ್ನು ಬಳಸಿಕೊಂಡು ಬರೆದ ಅರ್ಥ:**

**ಉದಾ:** "ಆಯತಲಿಂಗದಲ್ಲಿ 'ಆಯತಂ ಇಷ್ಟಲಿಂಗಂಚ' ಎಂದೆಂಬ ಇಷ್ಟಲಿಂಗದ ಸತ್ಕ್ರಿಯಾಚಾರದಲ್ಲಿ; ಸ್ವಾಯತಲಿಂಗದಲ್ಲಿ – ಸ್ವಾಯತಂ ಪ್ರಾಣಲಿಂಗಂಚ' ಎಂದು ಪ್ರಾಣಲಿಂಗದ ಸುಜ್ಞಾನಾಚಾರದಲ್ಲಿ; ಸನ್ನಹಿತ ಲಿಂಗದಲ್ಲಿ 'ಸನ್ನಹಿತಂ ಭಾವಲಿಂಗಂಚ' ಎಂದು ಭಾವಲಿಂಗದ ಮಹಾಜ್ಞಾನದಲ್ಲಿ (ವ – ೨೨೧)"[೨೫೧]

**೧೩. ಇಬ್ಬರೂ ಟೀಕಾಕಾರರು ಕೆಲವು ಪದಗಳ ದಾತುರೂಪಗಳನ್ನು ಮೊದಲು ಹೇಳಿ ಅದಕ್ಕೆ ಅರ್ಥ ಬರೆಯುತ್ತಾರೆ:**

**ಉದಾ:** "ಓಡಿತ್ತು – 'ಓಡು' ಪಲಾಯನೇ ಎಂದು, ಪಲಾಯನವಾಯಿತ್ತು (I.೧೪೩) ಒತ್ತಿದರೆ – 'ಒತ್ತು' ಅತಿಕ್ರಮವೆಂದು ಅತಿಕ್ರಮಿಸಿದರೆ (I೧೧೬)

ಬಿಡಬೇಕಯ್ಯ – 'ಬಿಡು' ವಿಸರ್ಜನೆಯೆಂದು ವಿಸರ್ಜಿಸಬೇಕಯ್ಯ (I೧೧೬)

ನೆಟ್ಟ – 'ನೆಡು' ಸ್ಥಾಪನೆಯೆಂದು ಸ್ಥಾಪನಂಗೈದ (II೧೨೧)

ಇಳಿಯಲರಿಯದೆ – 'ಇಳಿ' ನಿಮ್ನಾವತರಣೆಯೆಂಬ ಧಾತು ನಿಮ್ನಾವತಾರಣಂಗೈಯದೆ (II೧೨೧)

**೧೪. ಇಬ್ಬರೂ ಟೀಕಾಕಾರರು ಅನೇಕ ಸರಳ ಕನ್ನಡ ಪದಗಳಿಗೆ ಸಂಸ್ಕೃತ ಅರ್ಥವನ್ನು ಬರೆದಿದ್ದಾರೆ**

**ಉದಾ:** ವಿಷ–ಕ್ಷ್ವೇಡ, ಬೆಳದಿಂಗಳು–ಜೋತ್ಸ್ನೆ, ಕಿಚ್ಚು–ಶಿಖಿ, ಕತ್ತಲೆ–ಕಾವಳ, ಅಗ್ನಿ–ಪಾವಕ, ಮುತ್ತು–ಮೌಕ್ತಿಕ, ಚಿಪ್ಪು–ಸೂಕ್ತಿಕ, ಕಳ್ಳರು–ತಸ್ಕರರು, ಶಿಶು–ಅರ್ಭಕ, ಕಲ್ಲು–ಪಾಷಾಣ, ಹುಲ್ಲು–ತೃಣ, ಮೇದ–ಭಕ್ಷಿಸಿದ, ಹುಲಿ–ವ್ಯಾಘ್ರ, ಹೊಲನ–ತಕ್ಕಲಿನ, ಹೊರಳು–ಲುಠನಂಗೈ, ಹಂದಿ–ಶೂಕರ, ಹಸಿವು–ದೀಪನ, ಕಹಿ–ತಿಕ್ತ, ಬತ್ತಿ– ರಜ್ಜ, ನೆಲ್ಲು–ವ್ರೀಹಿ, ನೂಲೆಳೆ–ಕಾರ್ಪಾಸತಂತು, ಚೇಳು–ವೃಶ್ಚಿಕ, ಅಸತ್ಯ–ಶಠಕ, ಹುತ್ತ–ವಾಲ್ಮೀಕ, ಕಾಗೆ–ವಾಯಸ, ಸಂಸಾರ–ಸಂಸೃತಿ, ಹೆಸರು–ಅಭಿದಾನ, ಮಳೆ–ವೃಷ್ಟಿ, ಹೊಯ್ಯು–ಸ್ರವಿಸು, ತುಚ್ಛ–ಕ್ಷೀಣಾತ್ಮ, ಹದ್ದು–ಗೃದ್ಧ".[೧೫]

**೧೫. ಮೊದಲ ಟೀಕಾಕಾರ ಹಾಗೂ ಎರಡನೆಯ ಟೀಕಾಕಾರರಲ್ಲಿ ತೋರುವ ವ್ಯತ್ಯಾಸ:**

ಪ್ರಸ್ತುತ ಅಧ್ಯಾಯದಲ್ಲಿ ಎರಡನೇ ಟೀಕೆ ಎಂದು ಬಳಸಿರುವಲ್ಲಿ ನಾಲ್ಕನೆಯ 'ಈ' ಟೀಕೆಯ ಸ್ವರೂಪವೆಂದು ತಿಳಿಯಬೇಕು.

**ಉದಾ:** ಅಂಡಜ, ಪಿಂಡಜ, ಬಿಂದುಜ, ಸ್ವೇದಜ ಉದಯವಾಗದಂದು (ವ–೨೦).

**ಟೀಕು:** I – ಅಂಡಜ – ತತ್ತಿ ಒಡೆದು ಹುಟ್ಟುವಂಥ ಸರ್ಪ ಮೊದಲಾದ ಪ್ರಾಣಿಗಳು ಇಪ್ಪತ್ತೊಂದು ಲಕ್ಷ; ಪಿಂಡಜ – ಆತ್ಮರ ಮಾಂಸಬಿಂದು ಪ್ರತಿಷ್ಠಿತವಾಗಿ ಹುಟ್ಟಲ್ಪಟ್ಟ ನರಪಶು ಮೊದಲಾದ ಪ್ರಾಣಿಗಳು ಇಪ್ಪತ್ತೊಂದು ಲಕ್ಷ; ಸ್ವೇದಜ – ನೀರಿನಲ್ಲಿ ಹುಟ್ಟಲ್ಪಟ್ಟಂಥ ಮೀನು, ಮೊಸಳೆ, ಏಡಿ, ಕಪ್ಪೆ, ಆಮೆ ಮೊದಲಾದ ಪ್ರಾಣಿಗಳು ಇಪ್ಪತ್ತೊಂದು ಲಕ್ಷ; ಉದಯವಾಗದಂದು ಈ ಚೌಶೀತಿ ಪ್ರಾಣಿಗಳು ಉತ್ಪನ್ನವಾಗದಕ್ಕಿಂತ ಮೊದಲೇ.

**ಟೀಕು:** II – ಅಂಡಜ – ಸ್ಥೂಲ ತನುವು, ಪಿಂಡಜ–ಸೂಕ್ಷ್ಮತನುವು, ಬಿಂದುಜ–ಕಾರಣತನುವು, ಉದಯವಾಗದಂದು – ಈ ಮೂರು ತನುತ್ರಯಂಗಳು ಉತ್ಪತ್ಯವಾಗದಕ್ಕಿಂತ ಮೊದಲೇ. ಹೀಗೆ ಮೊದಲ ಟೀಕಾಕರ ವಿಸ್ತೃತ ಅರ್ಥ ಬರೆದರೆ, ಎರಡನೆಯ ಟೀಕಾಕಾರ ಸಂಕ್ಷೇಪ ಅರ್ಥಬರೆಯುತ್ತಾನೆ. ಇದೇ ರೀತಿಯ ಇನ್ನೊಂದು ಉದಾಹರಣೆ –

**ವಚನ:** ಶೈವರು ಕಟ್ಟಿದ ಗುಡಿಯ ಹೊಗಲೇಕೆ (೨೬೭)

**ಟೀಕು:** – I – ಶೈವರು – ನವಚೋಳರು, ನವಬಲ್ಲಾಳರು, ಷಟ್ಚಕ್ರವರ್ತಿಗಳು, ಷೋಡಶಮಹಾರಾಜರು, ಕಟ್ಟಿದ – ರಂಗಮಂಟಪವೆಂದು ಗರ್ಭಗೃಹವೆಂದು, ಮೌಳಿಯೆಂದು, ಗೌಳಿಯೆಂದು, ಕಲಶವೆಂದು ನಿರ್ಮಿತ ಮಾಡಿದ;

ಗುಡಿಯ – ದೇಗುಲವನು, ಹೊಗಲೇಕೆ – ಹೊಕ್ಕು ಅರ್ಚನಾರ್ಪಣ ಕ್ರಿಯೆಗಳನು ಮಾಡುವುದೇನು ಕಾರಣಕ್ಕೆ.

**ಟೀಕು:** – II – ಶೈವರು–ಶೈವ ಸಿದ್ಧಾಂತಿಗಳು, ಕಟ್ಟಿದ ಗುಡಿಯ – ಕಟ್ಟಿಸಿದಂಥ ದೇವಾಲಯವನು, ಹೊಗಲೇಕೆ – ಪ್ರವೇಶ ಮಾಡುವಂತಾದು ಯಾತಕ್ಕೆ. ಇದೇ ಮಾದರಿಯ ಉದಾಹರಣೆಗೆ ೯, ೧೦, ೧೦೮, ೧೧೩, ೧೧೪, ೨೧೯, ೪೮೨ ವಚನ ಟೀಕುಗಳನ್ನು ಗಮನಿಸಬಹುದು.

**೧೬. ಇದೇ ಮಾದರಿಯಲ್ಲಿ ಮೊದಲನೆ ಟೀಕಾಕಾರ ಸಂಕ್ಷೇಪ ಅರ್ಥ ಬರೆದರೆ, ಎರಡನೆಯವ ವಿಸ್ತೃತ ಅರ್ಥ ಬರೆಯುತ್ತಾನೆ:**

**ವಚನ:** ಬ್ರಹ್ಮರಂಧ್ರವೆಂಬ ಉತ್ತರೋತ್ತರ ಕೇತಾರವಯ್ಯ (ವ–೩೧೬)

**ಟೀಕು:** I ಬ್ರಹ್ಮರಂಧ್ರವೆಂಬ ಅಜರಂದ್ರವೆಂದು ಹೇಳುವ, ಉತ್ತರೋತ್ತರ–ಶ್ರೇಷ್ಠ ಶ್ರೇಷ್ಠವಾಗಿ ತೋರುವ, ಕೇತಾರವಯ್ಯ – ಮಹತ್ಕೇತಾರವಯ್ಯಾ.

**ಟೀಕು:** II ಲೋಕದೊಳಗೆ ಒಪ್ಪಲ್ಪಟ್ಟ ಕೇತಾರವೆಂಬ ಪುಣ್ಯಕ್ಷೇತ್ರವುಂಟಾಗಿಪ್ಪುದು ಎಂಬ ಹಾಗೆ ಶರಣನಂಗದಲ್ಲಿ ಬ್ರಹ್ಮರಂಧ್ರವೆಂಬಂಥಾ ಶ್ರೇಷ್ಠಕ್ಕೆ ಅತಿ ಶ್ರೇಷ್ಠವಾದಂಥ ಹಿಮವತ್ಕೇತಾರವೆಂಬ ಪುಣ್ಯ ಕ್ಷೇತ್ರ ಉಂಟಾಗಿಪ್ಪುದಯ್ಯಾ. ಇದೇ ಮಾದರಿಗಾಗಿ ೨೫, ೮೫, ೨೧೮ರ ವಚನ ಟೀಕೆಗಳನ್ನು ಗಮನಿಸಬಹುದಾಗಿದೆ.

**೧೭. ಇಬ್ಬರೂ ಟೀಕಾಕಾರರು ಒಂದೇ ವಿಧವಾದ ಅರ್ಥ ಬರೆದುದಕ್ಕೆ ಉದಾಹರಣೆ:**

**ಟೀಕು:** I ತೋಂಟದ ಸಿದ್ದೇಶ್ವರ – ಲೋಕಾದಿಲೋಕ ಪರ್ವತಂಗಳೆ ಸುತ್ತುವಳಿ ಬೇಲಿಗಳಾಗಿ, ಸಪ್ತಸಮುದ್ರಂಗಳೇ ಕಾಲುವೆಗಳಾಗಿ, ಸ್ಥಾವರ ಸ್ಥಿರಚರ ಪ್ರಾಣಿಗಳೆ ಪಚ್ಚೆ ಪೈರುಗಳಾಗಿ, ನಕ್ಷತ್ರುಗಳೆ ಪುಷ್ಪದ ಗೊಂಚಲುಗಳಾಗಿ, ಚಂದ್ರ ಸೂರ್ಯಾದಿಗಳೆ ಹಣ್ಣು ಕಾಯಿಗಳಾಗಿ, ತ್ರಿಮೂರ್ತಿ ತತ್ವಂಗಳೆ ಹಣ್ಣು ತೊಟ್ಟುಗಳಾಗಿ, ಬ್ರಹ್ಮಾಂಡವೆಂಬ ತೋಟಕ್ಕೆ, ಸಿದ್ಧ – ಪ್ರಸಿದ್ಧವಾಗಿ, ಈಶ್ವರ – ಒಡೆಯನಾದಂಥ.

**ಟೀಕು:** II ತೋಂಟದ ಸಿದ್ಧೇಶ್ವರ ಸ್ವಾಮಿಗಳು – ಲೋಕೋಪಲೋಕ ಪರ್ವತಂಗಳೆ ಸುತ್ತಣ ಬೇಲಿಗಳಾಗಿ, ಸಪ್ತ ಸಮುದ್ರಂಗಳೆ ಕಾಲುವೆಗಳಾಗಿ, ಸ್ಥಾವರ ಸ್ಥಿರ ಚರ ಪ್ರಾಣಿಗಳೆ ಪಚ್ಚೆಪೈರುಗಳಾಗಿ, ನಕ್ಷತ್ರಂಗಳೆ ಪುಷ್ಪದ ಗೊಂಚಲುಗಳಾಗಿ, ಚಂದ್ರಸೂರ್ಯಾದಿಗಳೆ ಕಾಯಿಹಣ್ಣುಗಳಾಗಿ, ತ್ರೈಮೂರ್ತಿಗಳೇ ತೋಟಿಗರಾಗಿ ಒಪ್ಪಲ್ಪಟ್ಟ, ಅಂತಪ್ಪ ಬ್ರಹ್ಮಾಂಡವೆಂಬ ತೋಟಕ್ಕೆ ಕರ್ತೃವಾದಂಥ, ಸಿದ್ಧೇಶ್ವರ ಸ್ವಾಮಿಗಳು – ಸಿದ್ಧಲಿಂಗೇಶ್ವರ ಸ್ವಾಮಿಯವರು.

**೧೮. ಇಬ್ಬರೂ ಭಿನ್ನಾರ್ಥ ಬರೆದುದಕ್ಕೆ ಉದಾಹರಣೆ:**

**ಟೀಕು:** I ಷಟ್‌ಸ್ಥಲ ಜ್ಞಾನಾಮೃತ ವಚನಂಗಳು.

ಷಟ್‌ಸ್ಥಲ – ಆರು ಸ್ಥಲವು. ಜ್ಞಾನ–ಷಡ್ವಿದ ಲಿಂಗವು. ಅಮೃತ–ನಿತ್ಯವಾದ ಷಡ್ವಿಧ ಭಕ್ತಿಗಳು. ವಚನಂಗಳು–ಷಡ್ವಿದಾಂಗಲಿಂಗ ಭಕ್ತಿಗಳಾಚರಣೆಯನ್ನು ಹೇಳುವಂಥ ವಾಕ್ಯಾನುಭಾವವು.

**ಟೀಕು:** II ಷಟ್‌ಸ್ಥಲ ಜ್ಞಾನಸಾರಾಮೃತ ವಚನಂಗಳು:

ಷಟ್‌ಸ್ಥಲ – ಷಟ್‌ಸ್ಥಲವೆಂದಡೆ ಷಡ್ವಿಧಂಗವು, ಅಮೃತ–ಅಮೃತವೆಂದಡೆ ನಿತ್ಯವಾದಂಥ ಷಡ್ವಿಧ ಲಿಂಗವು, ಸಾರ–ಸಾರವೆಂದೆಡೆ ಶ್ರೇಷ್ಠವಾದಂಥ ಷಡ್ವಿಧ ಭಕ್ತಿಗಳು, ಜ್ಞಾನ–ಅಂತಪ್ಪ ಷಡ್ವಿಧಂಗ ಲಿಂಗ ಭಕ್ತಿಗಳ ನಿಲುಕಡೆಯನು ಅರಿವಂಥ, ವಚನಂಗಳು–ಏಳುನೂರು ವಚನಂಗಳು.

**ಟೀಕು:** I – ಆದಿ ಅನಾದಿ; ಸಾವಯವ ನಿರವಯವ (ವ–೧೦)

ಆದಿ ಎಂದರೆ ನಿಷ್ಕಲ ಬ್ರಹ್ಮವು, ಅನಾದಿ ಎಂದರೆ ಚಿತ್ತು.

**ಟೀಕು:** II ಆದಿ–ಆದಿಯೆಂದಡೆ ಅಂಗವು, ಅನಾದಿ–ಅನಾದಿಯೆಂದಡೆ ಆತ್ಮನು. ಈತನೆ ವಚನ ೧೧ಕ್ಕೆ – ಆದಿ–ಆದಿಯೆಂದಡೆ ಚಿತ್ತು, ಅನಾದಿ– ಅನಾದಿಯೆಂದಡೆ ಮಹಾಲಿಂಗವು ಎಂದು ಟೀಕು ಬರೆದಿದ್ದಾನೆ.

**ಟೀಕು:** I – ಸಾವಯ – ಪಂಚಭೂತಯುಕ್ತವಾದ ದೇಹವು, ನಿರವಯ – ಆ ದೇಹಕ್ಕೆ ಚೈತನ್ಯ ರೂಪವಾದಾತ್ಮನು.

**ಟೀಕು:** II – ಸಾವಯ ನಿರವಯವಿಲ್ಲದಂದು – ಸಾಕಾರ ನಿರಾಕಾರ ಇವಾವೂ ಇಲ್ಲದನ್ನಕ್ಕ ಮೊದಲೇ"[೧೫೩] ಈ ರೀತಿಯ ಉದಾಹರಣೆಗಳು ಇಲ್ಲಿ ಮೇಲಿಂದ ಮೇಲೆ ಲಭಿಸುತ್ತವೆ.

ಇನ್ನು ಕೆಲವು ಪದಗಳಿಗೆ ಭಿನ್ನಾರ್ಥವಿರುವುದನ್ನು ನೊಡಬಹುದು.

| | | |
|---|---|---|
| ನೇಮ | – | ಆವಾಗಲೂ ತಪ್ಪದೇ ಮಾಡುವ ಕಟ್ಟಿನ ಕ್ರಿಯೆಗಳು(I),<br>ತ್ರಿಕಾಲ ತಪ್ಪದೇ ಮಾಡುವಂಥಾ ಪೂಜಾನೇಮವು(II) |
| ಸರ್ವಾಂಗವನು | – | ಸಕಲತತ್ವ ಸನ್ನಿಹಿತವಾದ ಸ್ಥೂಲಾಂಗವನು(I)<br>ಸಮಸ್ತ ಶರೀರವನು(II) |
| ಶಿವತತ್ವದ | – | ಮಹಾಲಿಂಗತತ್ವದ(I); ಪರಶಿವತತ್ವದ(II) |
| ಒಡಲು | – | ಅಂಗವು(I); ಶರೀರವು (II) |

**೧೯. ಮೊದಲ ಟೀಕಾಕಾರ ಕೇವಲ ತಾತ್ವಿಕಾರ್ಥ, ಎರಡನೆಯ ಟೀಕಾಕಾರ ವಾಚ್ಯಾರ್ಥ–ತಾತ್ವಿಕಾರ್ಥ ಎರಡೂ ಬರೆದುದಕ್ಕೆ ನಿದರ್ಶನ:**

**ವಚನ:** ಊರಹೊರಗಣ ಮನೆಯೊಳಗೊಂದು ಉರಿಗಣ್ಣು ಹುಟ್ಟಿ,
ಈರೇಳು ಲೋಕವ ನುಂಗಿ, ಊರೆಲ್ಲವ ಸುಟ್ಟಿತ್ತು ನೋಡಾ.
ಊರ ಸುಟ್ಟ ಉರಿಗಣ್ಣು ಅದಾರಿಗೆಯು ಕಾಣಬಾರದು,
ಅದು ಮಾರಾರಿ ತಾನೆ ಕಾಣಾ,
ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ (ವ–೧೦೨)

ಟೀಕೆ: I "ಊರ ಹೊರಗಣ ಮನೆಯೊಳಗೆ – ದೇಹಭಾವ ಪ್ರಪಂಚಕ್ಕೆ ವಿಲಕ್ಷಣವಾದ ಚಿತ್ಪಿಂಡವೆಂಬ ಶಿವಾಲಯದಲ್ಲಿ, ಒಂದು ಉರಿಗಣ್ಣು – ಚಿದಾಗ್ನಿ ಜ್ಞಾನವು, ಹುಟ್ಟಿ–ಉತ್ಪನ್ನವಾಗಿ; ಈರೇಳು ಲೋಕವ ನುಂಗಿ: ಈರೇಳು–ಚತುರ್ದಶ ಕರಣೇಂದ್ರಿಯಗಳನು, ನುಂಗಿ–ಅವಗ್ರಹಿಸಿ, ಊರೆಲ್ಲವ ಸುಟ್ಟಿತ್ತು: ಊರೆಲ್ಲವ–ಪಂಚಭೂತಯುಕ್ತವಾದ ದೇಹವೆಂಬ ಗ್ರಾಮವನೆಲ್ಲವ; ಸುಟ್ಟಿತ್ತು–ದಹಿಸಿತ್ತು, ನೋಡಾ–ಕಂಡಾ, ಊರಸುಟ್ಟ ಉರಿಗಣ್ಣು ಅದಾರಿಗೆಯು ಕಾಣಬಾರದು; ಊರ–ದೇಹವೆಂಬ ಗ್ರಾಮವನ್ನು, ಸುಟ್ಟ–ದಹಿಸಿದ, ಉರಿಗಣ್ಣು–ಚಿದಾಗ್ನಿ ಜ್ಞಾನವು, ಅದಾರಿಗೆಯು–ಬ್ರಹ್ಮಾದಿಪದಸ್ಥರೋರ್ವರಿಗೆಯು, ಕಾಣಬಾರದು–ಅರಿಯಬಾರದು, ಅದು ಮಾರಾರಿ ತಾನೇ ನೋಡಾ – ಮನ್ಮಥಧ್ವಂಸಿಯಾದ ಪರಶಿವಲಿಂಗವು ತಾನೆ ಕಂಡಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

ಟೀಕೆ: II – ಊರ ಹೊರಗಣ – ಪಟ್ಟಣದ ಹೊರಗಣ, ಮನೆಯೊಳಗೆ–ಗೃಹದಲ್ಲಿ, ಒಂದು ಉರಿಗಣ್ಣು ಹುಟ್ಟಿ–ಒಂದಾನೊಂದು ಉರಿಗಣ್ಣು ಹುಟ್ಟಿ, ಒಂದಾನೊಂದು ಅಗ್ನಿನೇತ್ರವು ಉತ್ಪತ್ಯವಾಗಿ, ಈರೇಳು ಲೋಕವ ನುಂಗಿ–ಹದಿನಾಲ್ಕು ಲೋಕವನು ಗೀಳನವ ಮಾಡಿ, ಉರೆಲ್ಲವ ಸುಟ್ಟಿತ್ತು ನೋಡಾ – ಪಟ್ಟಣವೆಲ್ಲವನು ದಹನವ ಮಾಡಿತ್ತು ಕಂಡಾ. ಊರಸುಟ್ಟ ಉರಿಗಣ್ಣು–ಪಟ್ಟಣವೆಲ್ಲವನು ದಹನವ ಮಾಡಿದಂಥಾ ಅಗ್ನಿನೇತ್ರವು, ಅದು ಆರಿಗೂ ಕಾಣಬಾರದು – ಅದು ಒಬ್ಬರಿಗೆಯೂ ಅರಿಯಬಾರದು, ಅದು ಮಾರಾರಿ ತಾನೇ ಕಾಣಾ – ಅದು ಮನ್ಮಥ ಸಂಹಾರಿಯಾದಂಥ ಶಿವನು ತಾನೇ ಕಂಡಾ ಎಂಬುದೇ ದೃಷ್ಟದರ್ಥವು. ಊರಹೊರಗಣ–ಕಾಯಪುರಿ ಪಟ್ಟಣದ ಬಹಿರಂಗದಲ್ಲಿ ಒಪ್ಪಲ್ಪಟ್ಟಂಥ, ಮನೆಯೊಳಗೆ ಸ್ಥೂಲತನುವೆಂಬ ಗೃಹದಲ್ಲಿ, ಒಂದು ಉರಿಗಣ್ಣು ಹುಟ್ಟಿ – ಚಿದಗ್ನಿ ಸ್ವರೂಪವಾದಂಥ ಇಷ್ಟಲಿಂಗವು ಉತ್ಪತ್ಯವಾಗಿ, ಈರೇಳು ಲೋಕವ ನುಂಗಿ–ಚದುರ್ದಶೇಂದ್ರಿಯಂಗಳನೊಳಗೊಂಡು, ಉರೆಲ್ಲವನು ಸುಟ್ಟಿತ್ತು ನೋಡಾ – ಕಾಯಪುರಿ ಪಟ್ಟಣದ ವರ್ತನೆಯೆಲ್ಲವ ನಷ್ಟವಮಾಡಿಬಿಟ್ಟು ಚಿತ್ಕಾಯವಾಗಿ ಅಳವಡಿಸಿಕೊಟ್ಟಿತ್ತು ಕಂಡಾ. ಊರಸುಟ್ಟು ಉರಿಗಣ್ಣು – ಕಾಯಪುರಿ ಪಟ್ಟಣದ ವರ್ತನೆಯಲ್ಲವ ದಹನವ ಮಾಡಿದಂಥಾ ಚಿದಗ್ನಿ ಸ್ವರೂಪವಾದಂಥ ಇಷ್ಟಲಿಂಗವು, ಅದು ಆರಿಗೂ ಕಾಣಬಾರದು–ಯೋಗಮಾರ್ಗ ಲಕ್ಷಾನುಸಂಧಾನಿಗಳೊಬ್ಬರಿಗೂ ಅರಿಯಬಾರದು, ಅದು–ಅಂತಪ್ಪ ಇಷ್ಟಲಿಂಗವು, ಮಾರಾರಿ ತಾನೇ ಕಾಣಾ–ಮನ್ಮಥ ವಿಕಾರಕ್ಕೆ ಕರ್ತೃವಾದಂಥ ಪ್ರಾಣಲಿಂಗವು ತಾನೇ ಕಂಡಾ, ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ".[೧೫೪]

"ಮೊದಲ ಟೀಕಾಕಾರ ವಾಚ್ಯಾರ್ಥ ತಾತ್ವಿಕಾರ್ಥ, ಎರಡನೆಯ ಟೀಕಾಕಾರ ಕೇವಲ ವಾಚ್ಯಾರ್ಥ ಬರೆದುದಕ್ಕೆ ೨೧೯ನೆಯ ವಚನ ನೋಡಿರಿ. ಇಬ್ಬರೂ ಟೀಕಾಕಾರರು ಒಂದು ವಚನಕ್ಕೆ ಎರಡಕ್ಕಿಂತ ಹೆಚ್ಚು ಅರ್ಥಗಳನ್ನು ಬರೆದುದಕ್ಕೆ ೯೨ ಮತ್ತು ೯೫ನೆಯ ವಚನ ನೋಡಿರಿ. ೯೨ನೆಯ ವಚನಕ್ಕೆ ಮೊದಲ ಟೀಕಾಕಾರ ಐದು ಅರ್ಥ ಬರೆದರೆ, ಎರಡನೆಯ ಟೀಕಾಕಾರ ಎರಡು ಅರ್ಥಗಳನ್ನು ಬರೆದಿದ್ದಾನೆ. ೯೫ನೆಯ ವಚನಕ್ಕೆ ಮೊದಲ ಟೀಕಾಕಾರ ಮೂರು ಅರ್ಥ ಬರೆದರೆ, ಎರಡನೆಯ ಟೀಕಾಕಾರ ಐದು ಅರ್ಥಗಳನ್ನು ಬರೆದಿದ್ದಾನೆ"[೧೫೫] ಎಂದು ವಿದ್ವಾಂಸರಾದ ಡಾ. ವೀರಣ್ಣ ರಾಜೂರ

ಅವರು ಹೇಳುವುದನ್ನು ಗಮನಿಸಿದಾಗ ಇವೆರಡೂ ಟೀಕಾಕೃತಿ ಒಂದರಿಂದ ಒಂದು ಭಿನ್ನವೆಂಬುದಕ್ಕೆ ನಿದರ್ಶನಗಳಾಗಿವೆ ಎನ್ನಬಹುದು.

**೨೦. ಪಾರಿಭಾಷಿಕ ಪದಗಳಿಗೆ ಅರ್ಥ ಬರೆಯುವಲ್ಲಿ ಮೊದಲ ಟೀಕಾಕಾರ ವಿಸ್ತರಿಸಿ ಹೇಳಿದರೆ, ಎರಡನೇ ಟೀಕಾಕಾರ ಸಂಕ್ಷೇಪ್ತಗೊಳಿಸಿದ್ದಾನೆ. ಹಾಗೆಯೇ ಎರಡನೇ ಟೀಕಾಕಾರ ವಿಸ್ತರಿಸಿ ಬರೆದಲ್ಲಿ ಮೊದಲ ಟೀಕಾಕಾರ ಸಂಕ್ಷೇಪ್ತವಾಗಿ ಬರೆದಿದ್ದಾನೆ.**

**(ಅ) ಉದಾ:** ೧. "ಆಣವ ಮಲ, ಮಾಯಾಮಲ, ಕಾರ್ಮಿಕಮಲವೆಂಬ ಈ ಮೂರು ಮಲತ್ರಯಂಗಳು. ಒಂದು ಕೆಂಪಿನಮಲ, ಒಂದು ಬಿಳ್ಪಿನ ಮಲ, ಒಂದು ಕಪ್ಪಿನ ಮಲ (೧೧೭):

**ಟೀಕೆ:** I, ಆಣವ ಮಲ – ಗರ್ಭಸಂಬಂಧವಾದ ಮಲವು,

ಮಾಯಾಮಲ – ಅವಿದ್ಯಾ ಸಂಬಂಧವಾದ ಮಲವು, ಕಾರ್ಮಿಕ ಮಲ – ದ್ರವ್ಯ ಸಂಬಂಧವಾದ ಮಲವು, ಎಂಬ – ಹೀಗೆಂಬ, ಈ ಮೂರು ಮಲತ್ರಯಂಗಳು – ಆಣವಾದಿ ಮಲತ್ರಯಂಗಳು. ಒಂದು ಕೆಂಪಿನ ಮಲ – ಹೊನ್ನೆಕೆಂಪಿನ ಮಲವು, ಒಂದು ಬಿಳ್ಪಿನ ಮಲ – ಹೆಣ್ಣೆ ಬಿಳ್ಪಿನ ಮಲವು, ಒಂದು ಕಪ್ಪಿನ ಮಲ – ಮಣ್ಣೇ ಕಪ್ಪಿನ ಮಲವು.

**ಟೀಕೆ:** II ಆಣವಮಲ, ಮಾಯಾಮಲ, ಕಾರ್ಮಿಕಮಲವೆಂಬ: ಈ ಮೂರು – ಈ ತ್ರಿವಿಧವು, ಮಲತ್ರಯಂಗಳು – ಮಲಮೂರುಗಳು, ಒಂದು ಕಾರ್ಮಿಕಮಲವೊಂದೆ, ಕಪ್ಪಿನ ಮಲ–ಕಪ್ಪು ವರ್ಣದ ಮಲವೆನಿಸಿಕೊಂಬುತ್ತಂ ಇಹುದು. ಒಂದು ಮಾಯಾಮಲವೊಂದೆ, ಬೆಳ್ಪಿನಮಲ ಬಿಳಿಯವರ್ಣದ ಮಲವೆನಿಸಿಕೊಂಬುತ್ತ ಇಹುದು. ಒಂದು ಅಣವಮಲವೊಂದೆ, ಕೆಂಪಿನ ಮಲ–ಕೆಂಪುವರ್ಣದ ಮಲವೆನಿಸಿಕೊಂಬುತ್ತಂ ಇಹುದು".[೧೫೬]

**(ಆ) ಉದಾ:** ೧. "ಪಂಚಶಕ್ತಿಯನು – ಪಂಚಸಾದಾಖ್ಯವನು, ಪಂಚಕಲೆಗಳನು, ಪಂಚಾಕ್ಷರಂಗಳನು(೩೬):

**ಟೀಕೆ:** I. ಪಂಚಶಕ್ತಿಯನು – ಐದು ಶಕ್ತಿಯನು, ಪಂಚಸಾದಾಖ್ಯವನು – ಐದು ಸಾದಾಖ್ಯವನು, ಪಂಚಕಲೆಗಳನು – ಐದು ಕಲೆಗಳನು, ಪಂಚಾಕ್ಷರಗಳನು – ಐದಕ್ಷರಂಗಳನು.

ಟೀಕೆ: II. ಪಂಚಶಕ್ತಿಯನು – ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಶಕ್ತಿಯೆಂಬ ಐದು ಶಕ್ತಿಯನು, ಪಂಚಸಾದಾಖ್ಯವನು – ಕರ್ಮಸಾದಾಖ್ಯ, ಕರ್ತೃಸಾದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ, ಶಿವಸಾದಾಖ್ಯವೆಂಬ ಐದು ಸಾದಾಖ್ಯಂಗಳನು; ಪಂಚಕಲೆಗಳನು – ನಿವೃತ್ತಕಲೆ, ಪ್ರತಿಷ್ಠಾಕಲೆ, ವಿದ್ಯಾಕಲೆ, ಶಾಂತಿಕಲೆ, ಶಾಂತ್ಯಾತೀತ್ತೋತ್ತರೆಯೆಂಬ ಐದು ಕಲೆಗಳನು; ಪಂಚಾಕ್ಷರಗಳನು – ನಕಾರ, ಮಕಾರ, ಶಿಕಾರ, ವಕಾರ, ಯ ಕಾರವೆಂಬ ಐದು ಅಕ್ಷರಂಗಳನು".[೧೫೭]

**೨೧. ಮೊದಲ ಟೀಕಾಕಾರ ವಚನದಲ್ಲಿದ್ದ ಕ್ರಮದಲ್ಲಿಯೇ ಪದಗಳಿಗೆ ಅರ್ಥವನ್ನು ಬರೆಯುತ್ತ ಸಾಗಿದರೆ, ಎರಡನೆಯ ಟೀಕಾಕಾರ ಕೆಲವು ಸಂದರ್ಭಗಳಲ್ಲಿ ಪದಗಳನ್ನು ಹಿಂದೆ ಮುಂದೆ ತಂದು ಅನ್ವಯಮಾಡಿಕೊಂಡು ಅರ್ಥಬರೆದಿದ್ದಾನೆ.**

**ಉದಾ:** ೧. "ಜಂಗಮಕ್ಕೊಂದನಿಕ್ಕಿ ತಾನೊಂದನುಂಬನೆ ಪ್ರಸಾದಿ? (೩೦೨):

ಟೀಕೆ: I ಜಂಗಮಕ್ಕೊಂದನಿಕ್ಕಿ–ಭಿಕ್ಷಕ್ಕೆ ಬಂದಂಥಾ ಜಂಗಮಮೂರ್ತಿಗಳಿಗೆ ನಚ್ಚುಕಚ್ಚು ಮೊದಲಾದ ಶುಷ್ಕಾನ್ನ ಪಾನಂಗಳನು ಎಡೆಮಾಡಿ, ತಾನೊಂದನುಂಬನೆ–ಮನೆಯಲ್ಲಿ ಮಾಡಿದ ಪಾಯಸ ಪಂಚಾಮೃತವನು ತಾನನುಭವಿಸಿ ಕಲಗಚ್ಚಿನ ಬಾನಿಯೋಪಾದಿಯಲ್ಲಿ ಒಡಲಬೆಳೆಯಿಸಿಕೊಂಡು ಇದ್ದಾನೆ? ಪ್ರಸಾದಿ–ಶಿವ ಪ್ರಸಾದಿಯು.

ಟೀಕೆ: II. ಪ್ರಸಾದಿ–ಶಿವಪ್ರಸಾದಿಯಾದಂಥಾ ಶಿವಶರಣನು, ಜಂಗಮಕ್ಕೊಂದನಿಕ್ಕಿ ತಾನೊಂದನುಂಬನೆ–ಚರಮೂರ್ತಿಗಳು ಮನೆಗೆ ಬಂದಲ್ಲಿ ತಮ್ಮ ಮನೆಯೊಳಗಿದ್ದಂಥಾ ಸಕಲ ಪದಾರ್ಥವನು ಸಲಿಸುವುದಕ್ಕೆ ನೀಡಿ ಅವರ ಪ್ರಸಾದವನು ಕೈಕೊಂಡು ಸ್ವೀಕರಿಸುವನಲ್ಲದೆ, ಅವರಿಗೊಂದು ಬಗೆಯನು ಮಾಡಿ, ತಾನೊಂದು ಬಗೆಯ ಮಾಡಿಸಿಕೊಂಡು ಭುಂಜಿಸುವನೆ? ಬುಂಜಿಸನು.

**ಉದಾ:** ೨. ಚಿಲುಮೆಯ ಅಗ್ಘಣಿಯ ಕುಡಿದರೇನೋ ಜನ್ಮದ ಮೈಲಿಗೆಯ ತೊಳೆಯದನ್ನಕ್ಕರ? (೩೧೧)

**ಟೀಕೆ:** I. ಚಿಲುಮೆಯ ಅಗ್ಘಣಿಯ ಕುಡಿದರೇನೋ–ನಮಗೆ ಕೆರೆ ಬಾವಿಗಳ ನೀರು ಆಗವೆಂದು ತೊರೆಗಳಿದ್ದ ಸ್ಥಾನಕ್ಕೆ ಹೋಗಿ ಚಿಲುಮೆಯನು ತೋಡಿ ಉದಕವನ್ನು ತೆಗೆದುಕೊಂಡು ಬಂದು ಪಾನವ ಮಾಡಿದರೆನೋ, ಜನ್ಮದ–ಉತ್ಪತ್ಯದ, ಮೈಲಿಗೆಯ ಮಲಿನವನು, ತೊಳೆಯದನ್ನಕ್ಕರ–ಪ್ರಕ್ಷಾಲಿಸದೆ ಇರುವ ಪರಿಯಂತರ.

ಟೀಕೆ: II. ಜನ್ಮದ ಮೈಲಿಗೆಯ – ನಾನಾ ಯೋನಿ ಸಹಸ್ರಾಣಿ ಉತ್ಪತ್ಯವಾಗುವಂತಾ ಮಲಿನವನು, ತೊಳೆಯದನ್ನಕ್ಕರ – ಶ್ರೀ ಗುರುಮೂರ್ತಿಯ ಸ್ವಜ್ಞಾನಂದ ಜಲದಿಂದ ಪ್ರಕ್ಷಾಲನಂಗೈಯದ ಪರಿಯಂತರವು, ಚಿಲುಮೆಯಗ್ಗವಣೆಯ ಕುಡಿದರೇನೋ – ಕೆರೆ ಬಾವಿ ಕುಂಟೆಗಳಲ್ಲಿ ಹದಿನೆಂಟು ಜಾತಿ ನೂರೊಂದು ಕುಲದವರು ಅಗ್ಗಣೆಯ ಬಳಸುವಂತಾದುಂಟುಯೆಂದು ಹಳ್ಳ ಹೊಳೆಗಳಲ್ಲಿ ಬೇರೆ, ಕುಂಟೆಗಳಲ್ಲಿ ಬೇರೆ ಚಿಲುಮೆಯನು ತೆಗೆದು ಉದಕವನು ಪಾನವ ಮಾಡಿದರೇನೋ? ಅದರಿಂದ ಪ್ರಯೋಜನವಿಲ್ಲವು.

**ಉದಾ:** ೩. ಕಾಯ ಬತ್ತಲೆಯಿದ್ದರೇನೋ ಮಾಯವಳಿಯದನ್ನಕ್ಕರ? (೪೭೪)

ಟೀಕೆ: I ಕಾಯಬತ್ತಲೆ ಇದ್ದರೇನೋ – ದೇಹವು ದಿಗಂಬರವಾದರೇನೋ, ಮಾಯವಳಿಯದನ್ನಕ್ಕರ ಮಾಯಾ ಪ್ರಪಂಚ ನಷ್ಟವಾಗಬೇಕು, ನಷ್ಟವ ಮಾಡದಿರುವ ಪರಿಯಂತರ.

ಟೀಕೆ: II ಮಾಯವಳಿಯದನ್ನಕ್ಕರ – ಮನೋಪ್ರಪಂಚ ನಷ್ಟವಾಗಬೇಕು, ನಷ್ಟವಾಗದ ಪರಿಯಂತರ, ಕಾಯ ಬತ್ತಲೆಯಿರ್ದಡೇನೋ–ಸರ್ವಾಂಗದಲ್ಲಿ ಅರುವಿಯ ಹೊದೆಯದೆ ದಿಗಂಬರದಲ್ಲಿರ್ದರೇನೋ?"[೧೫೮]

**೨೨. ಸರಳ ವಚನಗಳಿಗೆ ಮೊದಲ ಟೀಕಾಕಾರ ಕೇವಲ ವಾಚ್ಯಾರ್ಥವನ್ನು ಬರೆದರೆ, ಎರಡನೆಯ ಟೀಕಾಕಾರ ವಾಚ್ಯಾರ್ಥದೊಡನೆ ತಾತ್ವಿಕಾರ್ಥವನ್ನು ಸೇರಿಸಿ ಬರೆದುದುಂಟು.**

**ಉದಾಹರಣೆ:** ಸುಧೆಯೊಳಗೆ ವಿಷವುಂಟೆ?

ಮಧುವಿನೊಳಗೆ ಕಹಿಯುಂಟೆ?..." (ವ-೫೮)

**ಟೀಕೆ:** I ಸುಧೆಯೊಳಗೆ ವಿಷವುಂಟೆ; ಸುಧೆಯೊಳಗೆ – ಅಮೃತದಲ್ಲಿ, ವಿಷವುಂಟೆ–ಕ್ಷ್ವೇಡವುಂಟೆ; ಮಧುವಿನೊಳಗೆ ಕಹಿಯುಂಟೆ: ಮಧುವಿನೊಳಗೆ–ಜೇನುತುಪ್ಪದಲ್ಲಿ, ಕಹಿಯುಂಟೆ–ವಿಷವುಂಟೆ? ದಿನಮಣಿಯೊಳಗೆ–ಸೂರ್ಯನಲ್ಲಿ, ಕಪ್ಪುಂಟೆ–ಕಳಂಕವುಂಟೆ? ಬೆಳದಿಂಗಳೊಳಗೆ ಕಿಚ್ಚುಂಟೆ: ಬೆಳದಿಂಗಳೊಳಗೆ – ಜೋತ್ಸ್ನೆಯಲ್ಲಿ, ಕಿಚ್ಚುಂಟೆ – ಶಿಖಿಮಯವುಂಟೆ? ಅಮೃತಸಾಗರದೊಳಗೆ – ಕ್ಷೀರಸಮುದ್ರದಲ್ಲಿ, ಬೇವಿನ ಬಿಂದುವುಂಟೆ–ನಿಂಬಾಫಲದ ಹನಿಯುಂಟೆ? ಮಹಾಜ್ಞಾನಸ್ವರೂಪವಪ್ಪ – ಸಮ್ಯ(ಕ್) ಜ್ಞಾನಸ್ವರೂಪವಾದ, ಶರಣರೆ–ಶಿವಶರಣರೆ, ಲಿಂಗವೆಂದರಿದ – ಇವರೇಸಾಕ್ಷಾತ್ ಶಿವಸ್ವರೂಪವೆಂದು ತಿಳಿದ, ಮಹಾತ್ಮರಿಗೆ – ಮಹಿಮಾಪದವನುಳ್ಳ ಶರಣರಿಗೆ, ಸಂಕಲ್ಪ ಭ್ರಮೆಯುಂಟೆ – ನಾವು ವಸ್ತುಸ್ವರೂಪರಹುದೊ ಅಲ್ಲವೊ ಎಂಬ ಮನೋಸಂಕಲ್ಪದ ಭ್ರಾಂತುಂಟೆ? ಅದೇತರ ವಿಶ್ವಾಸ – ಅದೇತರದ ಶ್ರದ್ಧೆಯು, ಸುಡು ಸುಡು – ದಹಿಸು ದಹಿಸು, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

**ಟೀಕೆ: II** ಸುಧೆಯೊಳಗೆ – ಅಮೃತದಲ್ಲಿ, ವಿಷವುಂಟೆ – ವಿಷ ಉಂಟಾಗಿದ್ದೀತೆ? ಇಲ್ಲವು ಎಂಬ ಹಾಗೆ, ನಿತ್ಯ ಸ್ವರೂಪವಾದಂಥ ಶಿವಶರಣರಲ್ಲಿ ವಿಷಯ ಪ್ರಪಂಚು ಉಂಟಾಗಿದ್ದೀತೆ? ಇಲ್ಲವು. ಮಧುರದೊಳಗೆ–ಸಿಹಿಯಲ್ಲಿ, ಕಹಿಯುಂಟೆ–ತಿಕ್ತವುಂಟಾಗಿದ್ದೀತೇ? ಇಲ್ಲವುಯೆಂಬ ಹಾಂಗೆ, ಅಖಂಡ ಚಿದ್ರೂಪಿ ಸ್ವರೂಪವಾದಂಥ ಶಿವಶರಣರಲ್ಲಿ ಇಂದ್ರಿಯ ಪ್ರಪಂಚು ಉಂಟಾಗಿದ್ದೀತೆ? ಇಲ್ಲವು. ದಿನಮಣಿಯೊಳಗೆ – ಸೂರ್ಯನಲ್ಲಿ, ಕಪ್ಪುಂಟೆ– ಕಳಂಕವುಂಟಾಗಿದ್ದೀತೇ? ಇಲ್ಲವು ಎಂಬ ಹಾಂಗೆ ಚಿತ್ತಾಕಾಶಸ್ವರೂಪರಾದಂಥ ಶಿವಶರಣರಲ್ಲಿ ಅಜ್ಞಾನವುಂಟಾದ್ದೀತೇ? ಇಲ್ಲವು. ಬೆಳದಿಂಗಳೊಳಗೆ–ಜೊನ್ನದಲ್ಲಿ, ಕಿಚ್ಚುಂಟೆ–ಉಷ್ಣವುಂಟಾಗಿದ್ದೀತೇ? ಇಲ್ಲವು ಎಂಬ ಹಾಂಗೆ ಚಿತ್ಕಲಾ ಸ್ವರೂಪರಾದಂಥ ಶಿವಶರಣರಲ್ಲಿ ತಾಪತ್ರಯಾಗ್ನಿ ಉಂಟಾಗಿದ್ದೀತೇ? ಇಲ್ಲವು. ಅಮೃತಸಾಗರದೊಳಗೆ–ಕ್ಷೀರಸಮುದ್ರದಲ್ಲಿ, ಬೇವಿನ ಬಿಂದುಂಟೆ–ಬೇವಿನ ಹನಿಯು ಉಂಟಾಗಿದ್ದೀತೇ? ಇಲ್ಲವು ಎಂಬ ಹಾಂಗೆ ಅಖಂಡ ಆನಂದ ಚಿದಾಬ್ಧಿಮಯಮಪ್ಪಂಥ ಶಿವಶರಣರಲ್ಲಿ ತನುಪ್ರಪಂಚುಂಟಾಗಿದೀತೇ? ಇಲ್ಲವು. ಮಹಾಜ್ಞಾನಸ್ವರೂಪಮಪ್ಪ ಶರಣರೆ–ಅಖಂಡ ಮಹಾಜ್ಞಾನ ಸ್ವರೂಪರಪ್ಪ ಶಿವಶರಣರೆ, ಲಿಂಗವೆಂದರಿದ– ಶಿವನೆಂದು ತಿಳಿದಂಥ, ಮಹಾತ್ಮಂಗೆ – ಮಹಿಮಾಪದವನುಳ್ಳಂಥ ಶಿವಶರಣರಿಗೆ, ಸಂಕಲ್ಪಭ್ರಮೆಯುಂಟೆ–ಶರಣನು ಲಿಂಗಸ್ವರೂಪಹುದೊ ಅಲ್ಲವೊ ಎಂದು ನುಡಿವಂಥ ಸಂಕಲ್ಪ ಭ್ರಾಂತು ಉಂಟಾಗಿದ್ದೀತೇ? ಇಲ್ಲವು. ಅದು ಅಂತಪ್ಪಶರಣನು ಲಿಂಗಸ್ವರೂಪಹುದೊ ಅಲ್ಲವೊಯೆಂಬಂಥಾ ಸಂಕಲ್ಪ ಭ್ರಾಂತಿಯು, ಏತರ ವಿಶ್ವಾಸ – ಅದಾವಕಡೆ ನಂಬುಗೆ? ನಂಬುಗೆಯಲ್ಲವು. ಸುಡು–ಅಂತಪ್ಪ ಅಪನಂಬುಗೆಯನು, ಸುಟ್ಟು–ದಗ್ಧವಮಾಡಿ, ಧಿಕ್ಕರಿಸಿ ಬಿಡುಯೆಂಬುದರ್ಥ. ಅಂತಪ್ಪ ಮಹಾಜ್ಞಾನಾಗ್ನಿಯಿಂದ ಸುಟ್ಟು ದಗ್ಧವ ಮಾಡಿಬಿಡು, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ".[೧೫೯]

**೨೩. ಕೆಲವು ವಚನಗಳಲ್ಲಿ ಮೊದಲ ಟೀಕಾಕಾರ ತನ್ನ ಪ್ರದೇಶದ ಮಹಾತ್ಮರ ಹೆಸರನ್ನು ದೃಷ್ಟಾಂತವಾಗಿ ಸೇರಿಸಿ ಟೀಕು ಬರೆದರೆ, ಎರಡನೆಯ ಟೀಕಾಕಾರ ಅದಾವುದೂ ಇಲ್ಲದೆ ನೇರವಾಗಿ ಟೀಕು ಬರೆಯುತ್ತಾನೆ.**

**ವಚನ:** ಸತ್ಯದಲ್ಲಿ ನಡೆವುದು ಶೀಲ, ಸತ್ಯದಲ್ಲಿ ನುಡಿವುದು ಶೀಲ,
ಸಜ್ಜನ ಸದಾಚಾರದಲ್ಲಿ ವರ್ತಿಸಿ ನಿತ್ಯವನರಿವುದೇ ಶೀಲ ಕಾಣಿಬೋ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ (೩೦೮)

**ಟೀಕೆ: I** ಸತ್ಯದಲ್ಲಿ ನಡೆವುದು – ಶ್ರೀರಂಗಪಟ್ಟಣದ ಚನ್ನಬಸಪ್ಪನವರ ಹಾಂಗೆ ಪಾರಮಾರ್ಥದಿಂದಾಚರಿಸುವಂಥಾದೆ, ಶೀಲ–ಅದೇ ಸುಶೀಲವು; ಸತ್ಯದಲ್ಲಿ ನುಡಿವುದು ಶೀಲ–ಅಂಬಲಿ ಬೋಳಶೆಟ್ಟಿಗಳ ಹಾಂಗೆ ಏಕವಾಕ್ಯ ಕಲ್ಲಪ್ಪಯ್ಯಂಗಳ ಹಾಂಗೆ ಪರಮಾರ್ಥದಿಂದ ಪ್ರಸಂಗವನಾಡುವಂಥಾದೆ, ಶೀಲ–ಅದೇ ಸುಶೀಲವು, ಸಜ್ಜನ ಸದಾಚಾರದಲ್ಲಿ–ಸಜ್ಜನ ಸತ್ವಥಾಚಾರದಲ್ಲಿ, ವರ್ತಿಸಿ–ಪ್ರವರ್ತಿಸಿ, ನಿತ್ಯವ–ಶಾಶ್ವತವನು, ಅರಿವುದೆ–ತಿಳಿವುದೆ, ಶೀಲ–ಅದೇ ಸುಶೀಲವು, ಕಾಣಿಭೋ–ಕಂಡಿಭೋ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

ಟೀಕೆ: II ಸತ್ಯದಲಿ – ಯಥಾರ್ಥ ಪರಮಾರ್ಥದಲ್ಲಿ, ನಡೆವುದು–ಇಷ್ಟಲಿಂಗದ ಸತ್ಕ್ರಿಯಾಚಾರವನು ಮುಂದುಗೊಂಡು ಆಚರಿಸುವಂಥಾದ್ದು, ಶೀಲ–ಅದೇ ಮಹಾಜ್ಞಾನ ಶೀಲವು; ಸತ್ಯದಲ್ಲಿ–ಯಥಾರ್ಥ ಪರಮಾರ್ಥದಲ್ಲಿ, ನುಡಿವುದು–ಪ್ರಸಂಗಿಸುವಂಥಾದು, ಪ್ರಾಣಲಿಂಗದ ಸುಜ್ಞಾನಾಚಾರವ ಮುಂದುಗೊಂಡಾಚರಿಸುವಂಥಾದ್ದು, ಶೀಲ–ಅದೇ ಮಹಾಜ್ಞಾನ ಶೀಲವು; ಸಜ್ಜನ–ನಿರ್ಜನತ್ವದೊಡನೆ ಕೂಡಿದಂಥಾ, ಸದಾಚಾರದಲ್ಲಿ ವರ್ತಿಸಿ–ಗುರು ಮಾರ್ಗಾಚಾರದಲ್ಲಿ ಮುಂದುಗೊಂಡಾಚರಿಸಿ, ಭಾವಲಿಂಗದ ಮಹಾಜ್ಞಾನಾಚಾರದಲ್ಲಿ ಮುಂದುಗೊಂಡಾಚರಿಸಿ, ನಿತ್ಯವನರಿವುದೆ–ಕೇಡಿಲ್ಲದಿದ್ದಂಥಾ ವಸ್ತುವೇ ತಾನು ತಾನೆ ವಸ್ತುವೆಂದು ತಿಳಿವಂತಾದೆ, ಶೀಲ ಕಾಣಿಭೋ – ಅದೇ ಮಹಾಜ್ಞಾನ ಶೀಲ ಕಂಡಿರೊ, ಮಹಾಲಿಂಗಗುರು ಶಿವಸಿದ್ದೇಶ್ವರಪ್ರಭುಲಿಂಗದಲ್ಲಿ – ಪರಶಿವಲಿಂಗದಲ್ಲಿ".[೮೦] ಹೀಗೆ, ಮೊದಲ ಟೀಕಾಕಾರ ಮಹಾತ್ಮರ ಹೆಸರನ್ನು ದೃಷ್ಟಾಂತವಾಗಿ ಸೇರಿಸಿ ಟೀಕೆ ಬರೆದರೆ, ಎರಡನೇ ಟೀಕಾಕಾರನು ಯಾರ ಹೆಸರು ಇಲ್ಲದೇ ತಾತ್ವಿಕಾರ್ಥದಲ್ಲಿ ಟೀಕು ಬರೆದಿರುವುದನ್ನು ಕಾಣುತ್ತೇವೆ.

ಹೀಗೆ, ತೋಂಟದ ಸಿದ್ಧಲಿಂಗೇಶ್ವರರ ಎಲ್ಲ ವಚನಗಳಿಗೂ ಅತ್ಯಂತ ಪರಿಶ್ರಮದಿಂದ ಪ್ರತಿಪದಾರ್ಥ ಟೀಕೆಯನ್ನು ಬರೆದ ಇಬ್ಬರೂ ಟೀಕಾಕಾರರಲ್ಲಿ ಸಾಮ್ಯತೆಗಿಂತ ಭಿನ್ನತೆಯನ್ನು ಕಾಣುತ್ತೇವೆ. ಡಾ. ವೀರಣ್ಣ ರಾಜೂರ ಅವರು – "ಇಲ್ಲಿ ಎಲ್ಲ ಪದಗಳಿಗೂ ಅರ್ಥವನ್ನು ಹೇಳಲೇಬೇಕು ಎಂಬ ಹಠಕ್ಕೆ ಬಿದ್ದು ಕಠಿಣ ಪದಕ್ಕೆ ಸರಳಾರ್ಥ, ಸರಳ ಪದಗಳಿಗೆ ಸಂಸ್ಕೃತದ ಕಠಿಣ ಅರ್ಥವನ್ನು ನೀಡಿದ್ದಾರೆ. ಇದರಿಂದ ಟೀಕಾಕಾರರ ಉಭಯ ಭಾಷಾ ಪಾಂಡಿತ್ಯದ ಅರಿವು ನಮಗಾಗುತ್ತದೆಯಾದರೂ ವಚನಗಳನ್ನು ಅರ್ಥೈಸಿಕೊಳ್ಳಲು ವಿಶೇಷ ಪ್ರಯೋಜನವೇನೂ ಆಗುವುದಿಲ್ಲ. ಕೆಲವು ಟೀಕೆಗಳ ಒಳಗೆ ಸೇರಿದ ದೃಷ್ಟಾಂತಗಳು, ಪ್ರಾದೇಶಿಕ ಹೆಸರುಗಳು ದೇಶೀ ಭಾಷೆಯ ಪದಪ್ರಯೋಗಗಳು ಟೀಕಾಕಾರರ

ಲೋಕಾನುಭವದ ಜೊತೆಗೆ, ಸಮಕಾಲೀನ ಜನಜೀವನದ ರೀತಿ – ನೀತಿಗಳನ್ನು ಪ್ರಕಟಿಸುತ್ತವೆ. ಇದರಿಂದ ಆ ಕಾಲದ ಸಂಸ್ಕೃತಿ ಅಧ್ಯಯನಕ್ಕೆ ಇವು ಮಹತ್ವದ ಆಕರವಾಗಿ ನಿಂತಿವೆ"[೧೬೦] ಎಂದು ಅಭಿಪ್ರಾಯಪಟ್ಟಿರುವುದರಲ್ಲಿ ಅತಿಶಯೋಕ್ತಿಯಿಲ್ಲವೆನ್ನಬಹುದು.

**ಉ. ಕೇವಲ ಘಟ್ಟಿ ಘಟ್ಟಿ ಪದಗಳಿಗೆ ಮಾತ್ರ ಟೀಕುಬರೆದ ಅಪ್ರಕಟಿತ ಹಸ್ತಪ್ರತಿ**

ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರದ ೬೬೩ನೇ ತಾಳೆಗರಿ ಪ್ರತಿಯು ಇತ್ತೀಚೆಗೆ ಬೆಳಕಿಗೆ ಬಂದಿದೆ. ತೋಂಟದ ಸಿದ್ಧಲಿಂಗೇಶ್ವರರ ವಚನಗಳಿಗೆ ಬರೆಯಲಾದ ಈ ಟೀಕಾಹಸ್ತಪ್ರತಿಯ ಆದಿ ಅಂತ್ಯದಲ್ಲಿ ಟೀಕಾಕಾರನ, ಲಿಪಿಕಾರನ ಹೆಸರಾಗಲಿ ಇಲ್ಲವೇ ರಚಿಸಿದ ಕಾಲದ ಬಗೆಗೆ ಯಾವುದೇ ಮಾಹಿತಿ ಲಭ್ಯವಾಗುವದಿಲ್ಲ.

ಈ ಹಸ್ತಪ್ರತಿಯ ಕುರಿತು ಡಾ. ವೀರಣ್ಣ ರಾಜೂರ ಅವರು "ಇದರಲ್ಲಿ ಇಡೀ ವಚನಕ್ಕೆ ಟೀಕೆ ಬರೆಯದೇ ಕೇವಲ ಒಂದು ವಚನದಲ್ಲಿರುವ ತಾತ್ವಿಕ ಮತ್ತು ಬೆಡಗಿನ ಪದಗಳಿಗೆ ಮಾತ್ರ ಅರ್ಥ ಬರೆಯುತ್ತ ಸಾಗಲಾಗಿದೆ. ಹೀಗಾಗಿ ಇದು ಒಂದು ಮತ್ತು ಎರಡನೆಯ ಟೀಕೆಗಳ ನಂತರ, ಇಲ್ಲವೇ ಅದೇ ಕಾಲಕ್ಕೆ ಹುಟ್ಟಿಕೊಂಡಿರುವ ಸಾಧ್ಯತೆ ಇದೆ. ತಾಳೆಗರಿಯಲ್ಲಿ ಬರೆದಿರುವುದರಿಂದ ಸುಮಾರು ೧೮ನೆಯ ಶತಮಾನದ್ದಾಗಿರಬಹುದೆನಿಸುತ್ತದೆ"[೧೬೨] ಎಂದು ಹೇಳಿದ್ದಾರೆ. ಸ್ತೋತ್ರದ ವಚನಗಳಿಂದ ಪ್ರಾರಂಭವಾಗಿ ನಿರವಯಸ್ಥಲದವರೆಗಿನ ೭೦೧ ವಚನಗಳಲ್ಲಿರುವ ತಾತ್ವಿಕ ಮತ್ತು ಬೆಡಗಿನ ಬಿಡಿಪದಗಳನ್ನು ಆಯ್ದುಕೊಂಡು ಪ್ರತಿಪದಾರ್ಥ ಟೀಕೆಯನ್ನು ಬರೆಯಲಾಗಿದೆ. ತಾಳೆಗರಿಯ ಅಂಚಿನಲ್ಲಿ ಸ್ಥಲದ ಹೆಸರು, ಟೀಕೆಯ ನಂತರ ವಚನದ ಸಂಖ್ಯೆ ಇದೆ. ಆಯಾಯ ಸ್ಥಲ ಮುಗಿದೊಡನೆ ನಕ್ಷತ್ರ ಚಿಹ್ನೆ(*)ಹಾಕಿ, ಮುಂದಿನ ಸ್ಥಲದ ಟೀಕೆ ಆರಂಭಿಸಲಾಗಿರುವುದು ಈ ಹಸ್ತಪ್ರತಿಯ ಸ್ವರೂಪವಾಗಿದೆ.

**ಟೀಕಾಸ್ವರೂಪ:** ವಚನದ ಕೆಲವು ತಾತ್ವಿಕ ಮತ್ತು ಬೆಡಗಿನ ಪದಗಳಿಗೆ ಮಾತ್ರ ಅರ್ಥ ಬರೆದಿರುವುದು ಇಲ್ಲಿಯ ವಿಶೇಷವಾಗಿದೆ. ಟೀಕಾರ್ಥವು ಪ್ರತಿಪದಾರ್ಥ ಸ್ವರೂಪದಲ್ಲಿದೆ. ಮೊದಲಿಗೆ ಕೆಲವು ಪದಗಳಿಗೆ ಟೀಕಾಕಾರನು ಕೊಟ್ಟಿರುವ ಅರ್ಥವನ್ನು ಇಲ್ಲಿ ಗಮನಿಸಬಹುದು:

**ವಚನ:** "ಷಟ್‌ಸ್ಥಲಜ್ಞಾನಸಾರಾಮೃತ :

**ಷಟಸ್ಥಲ** – ಭಕ್ತಾದ್ಯೈಕ್ಯಾ [ಂತ] ವಾದ ಆರುಸ್ಥಲದ,

**ಜ್ಞಾನ** – ಅದರರುವಿಂಗೆ,

**ಸಾರಾಮೃತ** – ಶ್ರೇಷ್ಠ ಸುಧೆಯಾದಂಥ.

**ಜ್ಞಾನಗಮ್ಯ** – ಅರುವಿನಾಚರಣೆಗೆ ಗಮಿಸಿ ತೋರುತ್ತಿದ್ದಂಥ,

**ದೃಢ ಪ್ರಾಜ್ಞ** – ಬಲಿಷ್ಠತ್ವದಲ್ಲಿ ಬಲ್ಲಾತನಾಗಿ (ವ – ೨)

**ವಿನುತ** – ಕೀರ್ತಿಸಿಕೊಳಲ್ತಕ್ಕ .....ಜನಿತ – ಹುಟ್ಟಿದಂಥ (ವ – ೩)

**ಧನುಜ** – ರಾಕ್ಷಸರ, **ಮನುಜ** – ನರರ, **ದಿವಿಜ** – ದೇವತೆಗಳ,

**ಲೋಕಭರಿತ** – ಮೂರುಲೋಕದಲ್ಲಿ ತುಂಬಲ್ಪಟ್ಟ,

**ವನದಿ ವಡಬ** – ಸಮುದ್ರದಲ್ಲಿ ವಡಬಾಗ್ನಿ ಹೇಗೆ ಪ್ರಭಾವಿಸುತ್ತಿಹುದೋ ಹಾಂಗೆ (ವ – ೭)

**ಅನಾದಿ** – ಎಲ್ಲಕ್ಕೂ ಮೊದಲಿಗನಾದ, ಸಂಸಿದ್ಧ ಚಿತ್ಸಂಸಿದ್ಧವಾದ,

**ವೀರಶೈವವೇ** – ಶಿವಶೈವವೆ, ಅಧಿಕವೆಂದು – ಶ್ರೇಷ್ಠವೆಂದು, ಆದ್ಯಂತ – ಆಮೂಲಾಂತ್ಯವನು(ಸೂತ್ರ)

**ಆದಿಮಧ್ಯಾವಸಾನ** – ಸೃಷ್ಟಿ ಸ್ಥಿತಿ ಲಯಂಗಳಿಲ್ಲದಂದು (ವ – ೧೦)"[೧೬೩]

ಇದೇ ರೀತಿ ವಚನ ೧೪ ಮುಂತಾದೆಡೆ ಬಿಡಿಬಿಡಿ ಪದಗಳಿಗೆ ಅರ್ಥ ಬರೆಯಲಾಗಿದೆ. ಒಟ್ಟಾರೆ ಈ ಕೃತಿ ಷಟ್‌ಸ್ಥಲಜ್ಞಾನಸಾರಾಮೃತದ ಘಟ್ಟಿ ಘಟ್ಟಿ ಪದಗಳಿಗೆ ಬರೆದ ತಾತ್ವಿಕ ಪದಾರ್ಥ ಕೋಶವಾಗಿದೆ ಎನ್ನಬಹುದು.

**ಟೀಕಾಕೃತಿಗಳ ಸಾಮ್ಯ – ವೈಸಾಮ್ಯತೆ** :

ತೋಂಟದ ಸಿದ್ಧಲಿಂಗೇಶ್ವರ ವಚನಗಳಿಗೆ ೫ ಜನರು ಬರೆದಿರುವ ವಚನ ಟೀಕಾ ಹಸ್ತಪ್ರತಿಗಳು ಲಭಿಸಿವೆ. ಡಾ. ವೀರಣ್ಣ ರಾಜೂರ ಅವರು "ತೋಂಟದ ಸಿದ್ಧಲಿಂಗೇಶ್ವರ 'ಷಟ್‌ಸ್ಥಲಜ್ಞಾನಸಾರಾಮೃತ' ಕೃತಿಗೆ ಬರೆದ ಆರು ಟೀಕೆಗಳು ದೊರೆಯುತ್ತವೆ ಎಂದು ತಿಳಿದು ಬಂದರೂ ಸದ್ಯ ಈಗ ಉಪಲಬ್ಧವಾದವು ಐದು ಮಾತ್ರ. ಅವುಗಳಲ್ಲಿ ನಾಲ್ಕನ್ನು ಈ ಸಂಪುಟದಲ್ಲಿ ಅಳವಡಿಸಿಕೊಳ್ಳಲಾಗಿದೆ"[೧೬೪] ಎಂದು ಸ್ಪಷ್ಟಪಡಿಸುವ ಮೊದಲು ಒಟ್ಟು ೬ ಟೀಕಾಕೃತಿಗಳ ಬಗ್ಗೆ ವಿವರ ನೀಡಿದ್ದಾರೆ. ಇದರಲ್ಲಿ ೫ನೆಯದೆಂದರೆ ಹುಮನಾಬಾದ ನಿರಂಜನಸ್ವಾಮಿಯ ಷಟ್‌ಸ್ಥಲಜ್ಞಾನಸಾರಾಮೃತ ಟೀಕೆ. ೬ನೆಯದೆಂದರೆ ಕೇವಲ ಘಟ್ಟಿ ಘಟ್ಟಿ ಪದಗಳಿಗೆ ಅಜ್ಞಾತ ಕರ್ತೃವಿನ ಷಟ್‌ಸ್ಥಲಜ್ಞಾನಸಾರಾಮೃತ ಟೀಕೆ ಎಂದು ಗುರುತಿಸಿದ ಡಾ. ವೀರಣ್ಣ ರಾಜೂರ ಅವರು "ಐದನೆಯ ಕೃತಿಯ ಹಸ್ತಪ್ರತಿ ಕಳೆದುಹೋಗಿದೆ. ಆರನೆಯ ಕೃತಿ ಈ ಸಂಪುಟ ಪರಿಷ್ಕರಣ ಕಾರ್ಯ ಮುಗಿದನಂತರ ದೊರೆತಿದೆ. ಹೀಗಾಗಿ ಇವೆರಡನ್ನು ಸಂಪುಟದಲ್ಲಿ ಅಳವಡಿಸಿಕೊಳ್ಳಲು ಸಾಧ್ಯವಾಗಿಲ್ಲ".[೧೬೫] ಎಂದು ಅಡಿಟಿಪ್ಪಣಿಯಲ್ಲಿ ಹೇಳಿದ್ದಾರೆ. ಆದರೆ, ಹಸ್ತಪ್ರತಿಗಳಿಗೆ ನೀಡಿದ ಸಂಕೇತಗಳು ಓದುಗರಲ್ಲಿ ಸಾಕಷ್ಟು ಗೊಂದಲಕ್ಕೆ ಕಾರಣವಾಗಿವೆ. ಅದಕ್ಕಾಗಿ ಪ್ರಸ್ತಾವನೆಯ ಅಡಿಟಿಪ್ಪಣಿಯಲ್ಲಿ ಈ ಸಂಕೇತಗಳನ್ನು ಈ ಹಿಂದೆ ಸೂಚಿಸಿದ ಕೃತಿಗಳ ಅನುಕ್ರಮದಂತೆ ಕೊಡಲಾಗಿಲ್ಲ. ಅವುಗಳನ್ನು ಹೀಗೆ ಜೋಡಿಸಲಾಗಿದೆ: ೧–IV, ೨.III, ೩–I, ೪–II'–[೧೬೬] ಎಂದು ಹೇಳಿ ಅದರಂತೆ ಜೋಡಿಸಿದ್ದರೂ ಗೊಂದಲ ನಿವಾರಣೆಯಾಗಿಲ್ಲ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಾಯದಲ್ಲಿ ಸಂಖ್ಯೆಗಳನ್ನು ಸಂಕೇತವಾಗಿ ನೀಡದೇ ಅವನ್ನು ಟೀಕಾಕಾರರ ಹೆಸರಿನಿಂದ, ಟೀಕಾಕೃತಿಯ ಸಂಪಾದಕರ ಹೆಸರಿನಿಂದ ಇಲ್ಲವೇ ಟೀಕಾಕೃತಿಯ ಹೆಸರು ಮತ್ತು ಅಲ್ಲಿಯ ಟೀಕಿನ ವಚನಗಳ ಸಂಖ್ಯೆಗಳನ್ನು ಆಧಾರವಾಗಿಟ್ಟುಕೊಂಡು ವಿಭಾಗಿಸಲಾಗಿದೆ. ಈ ರೀತಿಯ ವಿಭಾಗ ಮಾಡಿದಾಗಲೂ ಟೀಕಾಸ್ವರೂಪವನ್ನು ಗುರುತಿಸುವಾಗ ಡಾ. ವೀರಣ್ಣ ರಾಜೂರ ಅವರ ಸಂಕೇತಗಳನ್ನು ಬಳಸಿಕೊಳ್ಳಲಾಗಿದೆ.

ಮೇಲ್ಕಂಡ ಅಧ್ಯಾಯದಲ್ಲಿ ೫ ಟೀಕಾಕೃತಿಗಳ ಟೀಕಾಸ್ವರೂಪವನ್ನು ಗುರುತಿಸುವಾಗ ಈ ಕೆಳಗಿನಂತೆ ಅನುಕ್ರಮ ನೀಡಲಾಗಿದೆ.

**ಶ್ರೀ ತೋಂಟದ ಸಿದ್ಧಲಿಂಗೇಶ್ವರರ 'ಷಟ್‌ಸ್ಥಲಜ್ಞಾನಸಾರಾಮೃತ' ಟೀಕಾಕೃತಿಗಳು**

ಅ. ಸೋಮಶೇಖರ ಶಿವಯೋಗಿಕೃತ 'ಷಟ್‌ಸ್ಥಲ ಜ್ಞಾನಸಾರಾಮೃತ'ದ ಬೆಡಗಿನ ವಚನದ ಟೀಕೆ. ಬೆಡಗಿನಿಂದ ಕೂಡಿದ ೧೫೨ ವಚನಗಳಿಗೆ ಟೀಕೆ ರಚಿಸಿದ್ದಾನೆ. ಡಾ.ಬಿ.ವಿ. ಶಿರೂರ ಅವರು ಸಂಪಾದಿಸಿ ಗದಗಿನ ಶ್ರೀಮಠದಿಂದ ಪ್ರಕಟಿಸಿದ್ದಾರೆ.

ಆ. 'ತೋಂಟದಾರ್ಯ ವಚನ ವ್ಯಾಖ್ಯೆ – ಡಾ.ಸಾ.ಶಿ. ಮರುಳಯ್ಯನವರು ಸಂಪಾದಿಸಿದ ಟೀಕಾಕೃತಿ. ಇಲ್ಲಿ ೭೦೨ ಬೆಡಗಿನ ವಚನಗಳಿಗೆ ಟೀಕೆ ಇದೆ.

ಇ. ಅಜ್ಞಾತ ಕರ್ತೃವಿನ 'ಷಟ್‌ಸ್ಥಲಜ್ಞಾನಸಾರಾಮೃತ ಟೀಕೆ – ಡಾ.ಎಸ್.ವಿದ್ಯಾಶಂಕರ ಅವರು ಸಂಪಾದಿಸಿದ ಟೀಕಾಕೃತಿ. ಇಲ್ಲಿ ೨೬೬ ಬೆಡಗಿನ ವಚನಗಳಿಗೆ ಟೀಕೆ ಇದೆ.

ಈ. ತೋಂಟದ ಸಿದ್ದೇಶ್ವರದೇವರು ನಿರೂಪಿಸಿದ ಷಟ್‌ಸ್ಥಲಜ್ಞಾನಸಾರಾಮೃತ ವಚನಂಗಳು. ಅಪ್ರಕಟಿತ ಹಸ್ತಪ್ರತಿಯ ಆಧಾರ. ಇಲ್ಲಿ ೭೦೧ ವಚನಗಳಿಗೆ ಟೀಕೆ ಬರೆಯಲಾಗಿದೆ. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರದ ೭೩ ಮತ್ತು ೫೭೭ ಸಂಖ್ಯೆಯ ೨ ಕೋರೆಕಾಗದ ಪ್ರತಿಗಳು ಆಧಾರವಾಗಿವೆ.

ಉ. ಅಜ್ಞಾತ ಕರ್ತೃವಿನ ಅಪ್ರಕಟಿತ ಹಸ್ತಪ್ರತಿ ಆಧಾರ. ಇಲ್ಲಿಯು ೭೦೧ ವಚನಗಳಲ್ಲಿರುವ ಕೇವಲ ಘಟ್ಟಿಘಟ್ಟಿ ಪದಗಳಿಗೆ ಮಾತ್ರ ಟೀಕೆ ಬರೆಯಲಾಗಿದೆ. ಧಾರವಾಡ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿಭಂಡಾರದ ೬೬೩ನೇ ತಾಳೆಗರಿ ಪ್ರತಿ. ಪ್ರಸ್ತುತ ಅಧ್ಯಯನದ ಅ–IV, ಇ –III, ಆ–I, ಈ–II ಅಂದರೆ, ಇಲ್ಲಿಯ ರೋಮನ್ ಸಂಖ್ಯೆಗಳು ಡಾ. ವೀರಣ್ಣ ರಾಜೂರ ಅವರು ಬಳಸಿದ ಟೀಕೆಗಳೇ ಆಗಿವೆ. ಉ–Vನೇ ಟೀಕೆ ಎಂದರೆ ಘಟ್ಟಿ ಘಟ್ಟಿ ಪದಗಳಿಗೆ ಬರೆದ ಟೀಕಾಕೃತಿಯೆಂದು ತಿಳಿಯಬೇಕು.

ಈ ಹಿನ್ನಲೆಯಲ್ಲಿ ಮೇಲ್ಕಂಡ ಒಂದನೆಯ (ಅ) ಮತ್ತು ಮೂರನೆಯ (ಇ) ವಚನಟೀಕೆಗಳು ಒಂದು ಗುಂಪಿಗೆ ಸೇರಿದರೆ; ಎರಡನೆಯ (ಆ) ಮತ್ತು ನಾಲ್ಕನೆಯ (ಈ) ವಚನ ಟೀಕೆಗಳು ಮತ್ತೊಂದು ಗುಂಪಿಗೆ ಸೇರುತ್ತವೆ. ಘಟ್ಟಿ ಘಟ್ಟಿ ಬೆಡಗಿನ ಪದಗಳಿಗೆ ಬರೆದ (ಉ) ಟೀಕೆ ಯಾವುದೇ ಗುಂಪಿಗೆ ಸೇರುವದಿಲ್ಲವೆಂದರೂ ಒಂದನೆಯ ಡಾ. ಬಿ.ವಿ. ಶಿರೂರ ಸಂಪಾದಿತ ಟೀಕಾಕೃತಿ ಮತ್ತು ಮೂರನೆಯ ಡಾ.ಎಸ್. ವಿದ್ಯಾಶಂಕರ ಸಂಪಾದಿತ ಟೀಕಾಕೃತಿಯ ಸಮಕಾಲೀನ ಸಂದರ್ಭದಲ್ಲಿ ರಚನೆಯಾಗಿರುವ ಸಾಧ್ಯತೆಗಳಿದ್ದು ಇವುಗಳಲ್ಲಿ ಸಾಮ್ಯತೆಯನ್ನು ಕಾಣಬಹುದಾಗಿದೆ.

**ಟೀಕೆಗಳ ವೈಶಿಷ್ಟ ಸಾಧನೆ:**

೧. ಡಾ.ಬಿ.ವಿ. ಶಿರೂರ ಸಂಪಾದಿತ ಟೀಕಾಕೃತಿ (ಅ) ಮತ್ತು ಡಾ.ಎಸ್ ವಿದ್ಯಾಶಂಕರ ಟೀಕಾಕೃತಿ(ಇ)ಗಳು ಕೇವಲ ಬೆಡಗಿನ ವಚನಗಳಿಗೆ ಕ್ರಮವಾಗಿ ೧೫೨, ೨೬೬ ವಚನಗಳಿಗೆ

ಮಾತ್ರ ಅರ್ಥ ಹೇಳುತ್ತವೆ. ಆದರೆ, ಡಾ. ಸಾ.ಶಿ. ಮರುಳಯ್ಯ ಸಂಪಾದಿತ ಟೀಕಾಕೃತಿ (ಆ) ಮತ್ತು ಡಾ. ವೀರಣ್ಣ ರಾಜೂರ ಸಂಪಾದಿತ ಟೀಕಾಕೃತಿ (ಈ)ಗಳು ತೋಂಟದ ಸಿದ್ಧಲಿಂಗರ ಎಲ್ಲ ೭೦೧ ವಚನಗಳಿಗೂ ಅರ್ಥವನ್ನು ಹೇಳುತ್ತವೆ.

೨. 'ಅ' ಮತ್ತು 'ಇ' ಗಳು ಕೇವಲ ತಾತ್ವಿಕಾರ್ಥವನ್ನು ಹೇಳಿದರೆ, 'ಆ' ಮತ್ತು 'ಈ'ಗಳು ವಾಚ್ಯಾರ್ಥ, ತಾತ್ವಿಕಾರ್ಥ ಎರಡನ್ನು ಹೇಳುತ್ತವೆ.

೩. ಅ ಮತ್ತು ಇ ಗಳು ಒಂದು ವಾಕ್ಯವನ್ನು ಅನುಸರಿಸಿ ಮತ್ತು ವಾಕ್ಯವನ್ನು ಹಿಮ್ಮೆಟ್ಟಿಸಿ ಟೀಕೆ ಬರೆದರೆ, ಆ ಮತ್ತು ಈ ಗಳು ಹೆಚ್ಚಾಗಿ ಪ್ರತಿಪದದ ಅರ್ಥವನ್ನು ಹೇಳುತ್ತವೆ.

೪. ಅ ಮತ್ತು ಇ ಗಳಲ್ಲಿ ಟೀಕು ಸಂಕ್ಷೇಪ್ತವಾಗಿದ್ದರೆ, ಆ ಮತ್ತು ಈ ಯಲ್ಲಿ ಟೀಕೆ ವಿಸ್ತೃತವಾಗಿರುತ್ತದೆ.

೫. ಅ ಮತ್ತು ಇ ಗಳಲ್ಲಿ ಆ ಮತ್ತು ಈ ಗಳಲ್ಲಿರುವಂತೆ ದೃಷ್ಟಾಂತರೂಪದ ವಿವರಗಳಿಲ್ಲ. ಅ–ಇ ಗಳಲ್ಲಿಯ ಟೀಕೆ ತಿಳಿಯಲು ಶ್ರಮಪಡಬೇಕು. ಆ–ಈ ಗಳಲ್ಲಿಯ ಟೀಕೆಗಳನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು.

೬. ಅ–ಇ ಗಳಲ್ಲಿಯ ಭಾಷಾ ಶೈಲಿ ಶಿಷ್ಟವಾಗಿದ್ದರೆ, ಆ–ಈ ಗಳಲ್ಲಿಯ ಭಾಷಾ ಶೈಲಿ ಪ್ರಾದೇಶಿಕ, ದೇಶಿಮಿಶ್ರಿತವಾಗಿವೆ.

೭. ಅ–ಇ ಗಳಲ್ಲಿ ಕೇವಲ ತಾತ್ವಿಕ ದೃಷ್ಟಿಗೆ ಮಹತ್ವ ನೀಡಿದರೆ, ಆ–ಈ ಗಳ ಟೀಕೆಗಳಲ್ಲಿ ಟೀಕಾಕಾರನ ಆದ್ಯಾತ್ಮಿಕ ಅನುಭವ, ಲೋಕಾನುಭ, ಪ್ರಾದೇಶಿಕ ಜೀವನ ರೀತಿ–ನೀತಿ ಕಂಡುಬರುತ್ತದೆ.

೮. ತೋಂಟದ ಸಿದ್ಧಲಿಂಗರ ವಚನಗಳಲ್ಲಿ ಸರಳ, ತಾತ್ವಿಕ ಮತ್ತು ಬೆಡಗಿನ ಮೂರು ಪ್ರಕಾರದ ವಚನಗಳಿವೆ. ಇಲ್ಲಿ ಅ–ಇ ಗಳ ಟೀಕೆ ಕೇವಲ ಬೆಡಗಿನ ವಚನಗಳಿಗೆ ಮಾತ್ರ ಬರೆದವುಗಳಾಗಿವೆ. ಆ–ಈ ಟೀಕೆಗಳಲ್ಲಿ ಸರಳ ವಚನಗಳಿದ್ದರೆ ವಾಚ್ಯಾರ್ಥ, ತಾತ್ವಿಕವಾಗಿದ್ದರೆ ತಾತ್ವಿಕಾರ್ಥ; ಬೆಡಗಿನವಾಗಿದ್ದರೆ ವಾಚ್ಯಾರ್ಥ– ತಾತ್ವಿಕಾರ್ಥ ಎರಡನ್ನು ಕಾಣುತ್ತೇವೆ.

೯. ಅ–ಇ ಟೀಕೆಗಳಲ್ಲಿ ವಚನಗಳ ಒಳಮೈ ಭಾವಾರ್ಥವನ್ನು ಹೇಳಿದರೆ; ಆ–ಈ ಟೀಕೆಗಳಲ್ಲಿ ವಚನಗಳ ಹೊರಮೈ ಶಬ್ದಾರ್ಥ ಮತ್ತು ಒಳಮೈ ಭಾವಾರ್ಥಗಳೆರಡನ್ನು ಹೇಳಲಾಗಿದೆ.

೧೦. ಅ–ಇ ಟೀಕಾಕೃತಿಗಳು ಕೇವಲ ಬೆಡಗಿನ ವಚನಗಳಿಗೆ ಮಾತ್ರ ಅರ್ಥ ಹೇಳುವುದರಿಂದ ಹೆಚ್ಚಾಗಿ ಸಂಸ್ಕೃತಭೂಯಿಷ್ಠ ಅರ್ಥವನ್ನು ಹೇಳುತ್ತವೆ. ಆ–ಈ ಟೀಕಾಕೃತಿಗಳು ಪ್ರತಿ ಪದಕ್ಕೂ ಅರ್ಥ ಬರೆಯಬೇಕೆಂಬ ಉದ್ದೇಶವಿದೆ. ಹೀಗಾಗಿ, ಕಠಿಣ ಪದಗಳಿಗೆ ಸರಳಾರ್ಥ, ಸರಳಪದಗಳಿಗೆ ಸಂಸ್ಕೃತಬೂಯಿಷ್ಠ ಅರ್ಥಗಳನ್ನು ಹೇಳುತ್ತವೆ.

೧೧. ಆ–ಈ ಟೀಕೆಗಳಲ್ಲಿ ಕನ್ನಡ ದೇಶೀ ಸಂಸ್ಕೃತಪದಗಳನ್ನು, ಕೇಲವು ಪದಗಳ ಧಾತು ಮೂಲ, ಅವುಗಳಿಗಿರುವ ಅರ್ಥ ವಿವರಗಳನ್ನುಳ್ಳ ಶಬ್ಧಕೋಶಗಳಂತಿವೆ. ಅ–ಇ ಟೀಕೆಗಳಲ್ಲಿ ಈ ವಿಶೇಷತೆ ಇಲ್ಲ.

೧೨. ಅ–ಇ ಟೀಕೆಗಳಲ್ಲಿ ಟೀಕಾಕಾರನ ಶಾಸ್ತ್ರ ಪಾಂಡಿತ್ಯ ಮಾತ್ರ ಕಂಡುಬರುತ್ತದೆ. ಆ–ಈ ಟೀಕೆಗಳೆರಡರಲ್ಲಿ ವೇದಾಗಮ ಶಾಸ್ತ್ರ ಪುರಾಣ ಪಾಂಡಿತ್ಯದ ಜೊತೆಗೆ ವ್ಯಾವಹಾರಿಕಜ್ಞಾನವು ಇದೆ.

೧೩. ಆ–ಈ ಟೀಕೆಗಳಲ್ಲಿ ಪುನರುಕ್ತಿ, ವಾಕ್ಯದೋಷ, ಶಿಥಿಲಬಂಧ ಅಷ್ಟಾಗಿ ಕಾಣುವುದಿಲ್ಲ. ಆದರೆ, ಅ–ಇ ಟೀಕೆಗಳಲ್ಲಿ ಮೇಲ್ಕಂಡ ವಿಷಯಗಳ ಜೊತೆ ಹೇಳಿದ್ದನ್ನೇ ಹೇಳುವುದರಿಂದ ಓದುಗರಿಗೆ ಬೇಸರವಾಗುತ್ತದೆ.

ಡಾ. ವೀರಣ್ಣ ರಾಜೂರ ಅವರು ಅಭಿಪ್ರಾಯಪಡುವಂತೆ "ಈ ಟೀಕಾಕಾರರು ವೇದ ಉಪನಿಷತ್ತು ಆಗಮ ಪುರಾಣ ತರ್ಕ ಯೋಗ ಇತ್ಯಾದಿ ಗ್ರಂಥಗಳನ್ನು ಅಭ್ಯಸಿಸಿ ಅಪಾರ ಪಾಂಡಿತ್ಯ ಪಡೆದವರಾಗಿದ್ದರೆಂದು ಇವುಗಳ ಅಧ್ಯಯನದಿಂದ ವಿಧಿತವಾಗುತ್ತದೆ. ಆದರೆ ಎಲ್ಲ ವಚನಗಳನ್ನು ಅರ್ಥೈಸಿಕೊಡುವಲ್ಲಿ ಸಂಪೂರ್ಣ ಯಶಸ್ವಿಯಾಗಿದ್ದಾರೆಂದು ಹೇಳಲು ಬರುವುದಿಲ್ಲ. ಕೆಲವು ವಚನಗಳು ಸರಳವಾಗಿದ್ದು, ಅವುಗಳಿಗೆ ಬರೆದ ಅರ್ಥ ಕಠಿಣವೆನಿಸಿದೆ. ಮತ್ತೆ ಕೆಲವು ಪದಗಳಿಗೆ ಬರೆದ ಅರ್ಥ ಅಶುದ್ಧವೆನಿಸಿದೆ. ಇನ್ನೂ ಕೆಲವು ವಚನಗಳಿಗೆ ಬರೆದ ಟೀಕೆಗಳು ನೂತನ ಅರ್ಥಸ್ಫುರಣೆಯಿಂದ ಹೊಸಬೆಳಕು ಬೀರುವಂತೆ ಮಾಡುತ್ತವೆ. ಸಾಧಕರು ವಚನದ ಅಂತರಂಗವನ್ನು ಪ್ರವೇಶಿಸಿ ನಿಜಾರ್ಥದ ನಿಲುವನ್ನು ತಲುಪಲು ಕೈದೀವಿಗೆಗಳಂತೆ ಕೆಲಸ ಮಾಡುತ್ತವೆ".[೧೬]

ಒಟ್ಟಾರೆ, ಎಲ್ಲ ಟೀಕೆಗಳ ಧೋರಣೆ ಅಂದಿನ ಜನಜೀವನದ ಅಗತ್ಯಕ್ಕೆ ಅನುಗುಣವಾಗಿ ಸಿದ್ಧಲಿಂಗರ ವಚನಗಳ ತಾತ್ವಿಕ ಅರ್ಥವನ್ನು ಹೇಳುವುದೇ ಆಗಿದ್ದರೂ ಅವುಗಳಲ್ಲಿ ಆ ಮತ್ತು ಈ ಟೀಕೆಗಳಿಗೆ ಪೂರಕವಾಗಿ ಧಾರ್ಮಿಕ, ಸಾಮಾಜಿಕ, ಭಾಷಿಕ, ಸಾಹಿತ್ಯಿಕ ಸಾಂಸ್ಕೃತಿಕ ಅಂಶಗಳು ಸೇರಿಕೊಂಡಿರುವುದರಿಂದ ಈ ಟೀಕೆಗಳನ್ನು ವಿಭಿನ್ನ ನೆಲೆಗಳಲ್ಲಿ ಅಧ್ಯಯನ ಮಾಡಲು ಅವಕಾಶಗಳು ಕೈಬೀಸಿ ಕರೆಯುತ್ತವೆ. ಹಾಗೆಯೇ, ಅ–ಇ ಮತ್ತು 'ಉ' ಟೀಕೆಗಳಿಂದ ಕನ್ನಡ ಭಾಷೆಯ ಶಬ್ದಾರ್ಥ ಕೋಶವನ್ನು ವಿಸ್ತರಿಸಲು ತುಂಬಾ ಸಹಕಾರಿಯಾಗಿವೆ ಎನ್ನಬಹುದು.

**೪. ಕಾಡಸಿದ್ಧೇಶ್ವರರ ವಚನಗಳ ಟೀಕು**

ಬಸವಾದಿ ಶಿವಶರಣರು, ನೂರೊಂದು ವಿರಕ್ತರು, ಎಡೆಯೂರ ಸಿದ್ಧಲಿಂಗಯತಿಗಳು ರಚಿಸಿದ ವಚನಗಳು ಕನ್ನಡ ಸಾಹಿತ್ಯ ಕ್ಷಿತಿಜದಲ್ಲಿ ಪಡೆದ ಪ್ರಾಮುಖ್ಯತೆ ಅವರ್ಣನೀಯ. ಇಂತಹ ವಚನಕಾರರ ಸರಿಸಮಾನವಾಗಿ ನಿಲ್ಲಬಲ್ಲ ಸಾಮರ್ಥ್ಯ ಕಾಡಸಿದ್ಧೇಶ್ವರರ ವಚನಗಳಿಗಿದೆ ಎಂದರೆ ತಪ್ಪಾಗದು. ಪ್ರಸ್ತುತ ಕಾಡಸಿದ್ಧೇಶ್ವರರ ವಚನಗಳು ಹಾಗೂ ಟೀಕು ಗಮನಿಸಿದರೆ–ಕೊಲ್ಲಾಪುರ ಸಿದ್ಧಗಿರಿ (ಕನ್ನೇರಿ ಗ್ರಾಮ)

ಮಠದ ಅಧಿಪತಿಯಾಗಿ, ಶರಣರಾಗಿ, ಶಿವಯೋಗ ಸಾಧಕರಾಗಿ, ವೈಚಾರಿಕ ಚಿಂತಕರಾಗಿ, ಸಮಾಜ ಸುಧಾರಕರಾಗಿ ಕಾರ್ಯಮಾಡಿದರೆಂಬುದನ್ನು ತಿಳಿಯಲವಕಾಶವಿದೆ. ಅಲ್ಲಮಪ್ರಭುಗಳಂತೆ ಬೆಡಗಿನ ವಚನಗಳನ್ನು ಬರೆದ ಕಾಡಸಿದ್ದೇಶ್ವರರು ಬಹುಭಾಷಾ ಪಾಂಡಿತ್ಯದ ಜೊತೆಗೆ ವೀರಶೈವಧರ್ಮದ ಷಟಸ್ಥಲ ಸಿದ್ಧಾಂತ ಪ್ರತಿಪಾದನೆಗೆ ಪ್ರಯತ್ನಿಸಿರುವುದನ್ನು ಕಾಣಬಹುದು.

ಸುಮಾರು ೪೯೧ ವಚನಗಳನ್ನು ರಚಿಸಿದ ಕಾಡಸಿದ್ದೇಶ್ವರರು ಜೀವಿಸಿದ ಕಾಲಮಾನ ಯಾವುದು? ಇವರ ಸಮಕಾಲೀನರು ಯಾರು? ಬೆಡಗಿನ ವಚನಗಳ ಜೊತೆ ಜೊತೆಗೆ ಇವರೆ ಟೀಕು ಬರೆದರೆ? ಅಥವಾ ಬೇರೆಯವರು ಟೀಕು ಬರೆದರೆ? ಟೀಕುಗಳ ಸ್ವರೂಪವೇನು? ಪ್ರಸ್ತುತ ಅಧ್ಯಯನದಲ್ಲಿ ಸಮಗ್ರವಾದ ಸಮಾಲೋಚನೆಗೆ ಪ್ರಯತ್ನಿಸಲಾಗುವುದು.

**ಕಾಡಸಿದ್ದೇಶ್ವರರ ಜೀವಿತ ಕಾಲ**

ಕನ್ನಡ ನಾಡು ಕಂಡ ಅಪರೂಪದ ವಚನಕಾರರಲ್ಲಿ ಕಾಡಸಿದ್ದೇಶ್ವರರು ಒಬ್ಬರು. ಆದರೆ ಇವರು ಜೀವಿಸಿದ್ದ ಕಾಲದ ಬಗ್ಗೆ ಮಾತ್ರ ಖಚಿತತೆ ಇಲ್ಲ. ಕರ್ನಾಟಕ ಕವಿ ಚರಿತೆಯ ಎರಡನೇ ಭಾಗದಲ್ಲಿ ಆರ್.ನರಸಿಂಹಾಚಾರ್ಯರು "ಶ್ರೀ ಕಾಡದೇವರು ಕ್ರಿಸ್ತಶಕೆ ೧೭೨೫ರಲ್ಲಿದ್ದಿರಬೇಕೆಂದು" ಊಹಿಸುತ್ತಾರೆ. ಕಾಡಸಿದ್ದೇಶ್ವರರ ವಚನಗಳನ್ನು ಮೊದಲ ಬಾರಿಗೆ ಪ್ರಕಟಿಸಿದ ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳು ೧೨ನೇ ಶತಮಾನವೆನ್ನುತ್ತಾರೆ. ವಚನಶಾಸ್ತ್ರ ಪಿತಾಮಹ ಫ.ಗು. ಹಳಕಟ್ಟಿಯವರು ೧೩ನೇ ಶತಮಾನವೆನ್ನುತ್ತಾರೆ. ಇವರ ಹೇಳಿಕೆಗಳಿಗೆ ಯಾವುದೇ ಆಧಾರಗಳಿಲ್ಲ.

ಆದರೆ, ಶ್ರೀಮಂತ ಶಿರಸಂಗಿ ದೇಸಾಯರ ವಂಶಸ್ಥನಾದ ಜಾಯಪ್ಪ. ದೇಸಾಯಿ ಕನ್ನಡ ಕುವಲಯಾನಂದ ಗ್ರಂಥ ರಚಿಸಿದ ಬಗ್ಗೆ ಆಧಾರಗಳು ಲಭಿಸುತ್ತವೆ. ಸಾಹಿತಿ ಗೋವಿಂದ ಪೈಯವರು "ಕವಿ ಲಕ್ಷ್ಮೀಶ" ಗ್ರಂಥದಲ್ಲಿ ಕಾಲನಿರ್ಣಯ ಲೇಖನ ಬರೆದಿದ್ದಾರೆ. ಅದರಲ್ಲಿ 'ಕನ್ನಡ ಕುವಲಯಾನಂದ'ವು ಅಲಂಕಾರ ಶಾಸ್ತ್ರ. ಇವರ ಬರಹವು ಧಾರವಾಡ ಕಡೆಯದಿರುತ್ತದೆ. ಕೊನೆಯಲ್ಲಿ "ಇತಿಜಾಯಗೊಂಡ ದೇಸಾಯಿ ವಿರಚಿತ ಕವನವು ಸಂಪೂರ್ಣಮಸ್ತು" ಎಂದಿದೆ. ಎರಡನೆಯ "ಶೃಂಗಾರ ತಿಲಕ" ಎಂಬುದರ ಕೊನೆಯಲ್ಲಿ "ಇತಿಜಾಯೇಂದ್ರ ಭೂಪಾಲೇನ ವಿರಚಿತ ಶೃಂಗಾರ ತಿಲಕ ಸಮಾಪ್ತಿ" ಎಂದಿದೆ. ಇವೆರಡರಲ್ಲಿ ಅಪ್ಪಯ್ಯ ದಿಕ್ಷಿತ ರಚಿಸಿದ ಕುವಲಯಾನಂದ ಅಲಂಕಾರ ಗ್ರಂಥವು ತೊರಗಲ್ಲ ಸೀಮೆಯ ಅರಸನಾದ 'ಜಾಯೇಂದ್ರ ಭೂಪಾಲ' ಅಥವಾ 'ಜಾಯಗೊಂಡ ದೇಸಾಯಿ' ಎಂದು ಉಲ್ಲೇಖವಿರುವುದರಿಂದ ಕನ್ನಡಕ್ಕೆ ಪರಿವರ್ತಿಸಿದರೆಂಬ ಅಭಿಪ್ರಾಯವನ್ನು ಗೋವಿಂದ ಪೈ ವ್ಯಕ್ತಪಡಿಸುತ್ತಾರೆ.

ಜಾಯಗೊಂಡ ದೇಸಾಯಿ ಈ ಕಾವ್ಯದ ಆರಂಭದಲ್ಲಿ ತನ್ನ ಕುಲಗುರುವೂ, ಕುಲದೇವತೆಯೂ ಆದ ಸಿದ್ದಗಿರಿಯ ಕಾಡೇಶ, ಕಾಡಸಿದ್ದೇಶ್ವರರನ್ನು ಸ್ತುತಿಸುತ್ತಾನೆ. ಅಂತ್ಯದಲ್ಲಿ "ತೊರಗಲ್ಲ ಸೀಮೆಗರಸನಾದ ಲಿಂಗಭೂವರನ ಸತ್ಪುತ್ರ ಜಾಯೇಂದ್ರನಿಂ ನಿರ್ಮಿಸಿದ ಸರಸವರ್ಣದ ಕಾವ್ಯಮಿದನೊಲಿದು ಲಾಲಿಪುದು ಪಾಲಿಪುದು ಲೀಲೆಯಿಂದ" ಎಂದಿದೆ.

ಅಪ್ಪಯ್ಯ ದೀಕ್ಷಿತರು ರಚಿಸಿದ ಸಂಸ್ಕೃತ ಕುವಲಯಾನಂದ ಕ್ರಿ.ಶ.೧೫೮೫ ರಿಂದ ೧೬೧೫ರ ಕಾಲಘಟ್ಟದಲ್ಲಿ ರಚನೆಯಾಗಿರುವುದರಿಂದ ಇದರ ಕನ್ನಡ ಅನುವಾದವು ೧೬೧೪ ರಿಂದ ೧೬೭೪ರ ಕಾಲದಲ್ಲಿ ಜಾಯಗೊಂಡ ದೇಸಾಯಿ ರಚಿಸಿರಬೇಕೆಂಬುದು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಜಾಯಗೊಂಡ ದೇಸಾಯಿ ಕಾವ್ಯದ ಆರಂಭದಲ್ಲಿ ಕಾಡಸಿದ್ದೇಶ್ವರರನ್ನು ಸ್ತುತಿಸಿರುವುದರಿಂದ ಕಾಡದೇವರು ಇವರಿಗಿಂತ ಮೊದಲೇ ಇದ್ದರೆಂಬುದು ಖಚಿತವಾಗುತ್ತದೆ. ಹಾಗಾದರೆ, ಕಾಡಸಿದ್ದೇಶ್ವರರು ೧೬ನೇ ಶತಮಾನದ ಕೊನೆಯಭಾಗದಿಂದ ೧೭ನೇ ಶತಮಾನದ ಮಧ್ಯಭಾಗದ ಕಾಲಾವಧಿಯಲ್ಲಿ ಜೀವಿಸಿದ್ದರೆಂದು ಊಹಿಸಬಹುದೇ ಹೊರತು ಖಚಿತವಾಗಿ ಹೇಳಲಿಕ್ಕಾಗದು.

ಆದರೆ, ಶಿರಸಂಗಿಯ ದೇಸಾಯಿ ಮನೆತನಕ್ಕೂ ಶ್ರೀ ಕಾಡಸಿದ್ದೇಶ್ವರ ಮಠಕ್ಕು ಅವಿನಾಭಾವ ಸಂಬಂಧವಿದೆ. ಇವರ ಅರಮನೆಗಳು ಎಲ್ಲೆಲ್ಲಿವೆಯೋ ಅಲ್ಲಲ್ಲಿ ಶ್ರೀ ಸಿದ್ದೇಶ್ವರನ ಗುಡಿಗಳಿವೆ. "......... ಹೂಲಿಕಟ್ಟಿ ಎಂಬುವ ಗ್ರಾಮವು ಈ ಮಠಕ್ಕೆ ಇನಾಮು ಕೊಟ್ಟಿತ್ತೆಂದು ಮಠದಲ್ಲಿರುವ ಕೆಲವು ಕಾಗದಗಳಿಂದ ತಿಳಿದುಬಂದಿರುತ್ತದೆ. ಈಗಲೂ ದೇಸಾಯಿಯವರಿಂದ ಕೊಟ್ಟ ಇನಾಮು ಜಮೀನುಗಳು ಮಠದ ಸ್ವಾಧೀನದಲ್ಲಿರುತ್ತವೆ."[೧೬೮]

ಈಗಾಗಲೇ ಹೇಳಿರುವ ಕನ್ನಡ ಕುವಲಯಾನಂದ ರಚಿಸಿದ ಜಾಯಪ್ಪ ದೇಸಾಯರು ೧೭೩೯ರಿಂದ ೧೭೪೯ರ ವರೆಗೆ ಹುಬ್ಬಳ್ಳಿ ಸಮೀಪದ ಕುಸುಗಲ್ಲು ಹಾಗೂ ೧೭೪೩ರಿಂದ ೧೭೫೧ರವರೆಗೆ ಸವದತ್ತಿಯಲ್ಲಿ ಕಿಲ್ಲೆ, ನಂತರ ನವಲಗುಂದದಲ್ಲಿ ಕಿಲ್ಲೆ ಕಟ್ಟಿಸಿದರೆಂಬುದು ಇತಿಹಾಸದಿಂದ ತಿಳಿದುಬರುತ್ತದೆ. ಹೀಗಾಗಿ – "ಕ್ರಿ.ಶ.೧೭೧೬ರಲ್ಲಿ ಜನಿಸಿ, ೧೭೮೦ರಲ್ಲಿ ಬಹುಧಾನ್ಯ ಸಂವತ್ಸರ ಕಾರ್ತಿಕ ವದ್ಯ ೩ ಶುಕ್ರವಾರ ಸಾಯಂಕಾಲಕ್ಕೆ ನರಗುಂದದಲ್ಲಿ ಶಿವಾಧೀನರಾದರೆಂದು"[೧೬೯] ಹೇಳುವುದರಿಂದ ಕಾಡಸಿದ್ದೇಶ್ವರರನ್ನು ಇವರು ಸ್ಮರಿಸುವುದರಿಂದ ೧೮ನೇ ಶತಮಾನಕ್ಕೆ ಮೊದಲೇ ಕಾಡಸಿದ್ದೇಶ್ವರರು ಜೀವಿಸಿದ್ದರೆಂಬುದು ಖಚಿತವಾಗುತ್ತದೆ. ಹೀಗೆ ಶಿರಸಂಗಿ, ಕೊಣ್ಣೂರು, ಕೊಕಟನೂರು ದೇಸಾಯಿಯವರ ಕುಲ ಗುರುಗಳಾಗಿದ್ದ ಕಾಡಸಿದ್ದೇಶ್ವರರು ಶ್ರೀ ಸಿದ್ಧಗಿರಿಮಠದ ಸ್ವಾಮಿಗಳ ವಂಶಾವಳಿಯಲ್ಲಿ ಎಷ್ಟನೆಯವರು? ಎಂಬುದು ಖಚಿತವಾಗುವುದಿಲ್ಲ. ಏಕೆಂದರೆ, ಮೂಲ ಕಾಡಸಿದ್ದೇಶ್ವರ ಸ್ವಾಮಿಗಳಿಂದ ೨೬ ಸ್ವಾಮಿಗಳು ಇಲ್ಲಿ ಅಧಿಪತಿಗಳಾಗಿ ಹೋಗಿರುವುದರಿಂದ ಯಾವ ಕಾಲದ ಸ್ವಾಮಿಗಳು ವಚನಗಳನ್ನು ರಚಿಸಿದರು ಎಂಬುದು ಸ್ಪಷ್ಟವಾಗುವುದಿಲ್ಲ. ಹೀಗಾಗಿ ಇವರ ಕಾಲಾವಧಿ ನಿರ್ಣಯವು ಕಷ್ಟಕರವಾದುದು.

ವಚನಕಾರ ಕಾಡಸಿದ್ದೇಶ್ವರರು ಕರ್ನಾಟಕ, ಮಹಾರಾಷ್ಟ್ರ ರಾಜ್ಯದಲ್ಲಿ ಸಂಚರಿಸಿ ಅಪಾರ ಅನುಯಾಯಿಗಳನ್ನು ಹೊಂದಿರಬಹುದು. ಮಿರಜಿಯ ಮೀರಾಸಾಹೇಬನಂಥ ಮುಸ್ಲಿಂ ಸಂತರು ಕೂಡಾ ಇವರ ಅನುಯಾಯಿಗಳಾಗಿದ್ದರು. ಛತ್ರಪತಿ ಶಿವಾಜಿ, ಬಾದಶಹ ಔರಂಗಜೇಬ ಇವರ ಮಠಕ್ಕೆ ಸನದುಗಳನ್ನು ನೀಡಿ ಗೌರವಿಸಿದ್ದಾರೆ. ಆದರೆ ಈ ಸನದುಗಳ ಗೌರವ ಪಡೆದ ಕಾಡಸಿದ್ದೇಶ್ವರರು ಯಾರು ಎಂಬುದೇ ಖಚಿತವಾಗುವದಿಲ್ಲ. ಈ ಕುರಿತು ಸುದೀರ್ಘ ಪೀಠಿಕೆ ಬರೆದಿರುವ ಪಂ. ಚಂದ್ರಶೇಖರ ಶಾಸ್ತ್ರಿಗಳು ಅಂತಿಮವಾಗಿ "......... ಶ್ರೀ ಕಾಡಸಿದ್ದರು ೧೨ನೇ ಶತಮಾನದಲ್ಲಿದ್ದರೆಂದು

ಹೇಳಲು ಅಡ್ಡಿ ಇಲ್ಲವು .........”[೧೬೦] ಎಂದು ಅಭಿಪ್ರಾಯಪಟ್ಟಿರುವುದು ಮಾತ್ರ ಸತ್ಯಕ್ಕೆ ದೂರವೆನ್ನಬಹುದು.

ಏಕೆಂದರೆ, ಕಾಡಸಿದ್ದೇಶ್ವರರ ವಚನಗಳ ಹಸ್ತಪ್ರತಿಗಳನ್ನು ಸಂಗ್ರಹಿಸಿಕೊಟ್ಟು, ಸ್ಥಲ ಅಧ್ಯಯನ ಮಾಡಿ ಗ್ರಂಥ ಸಂಪಾದಿಸಲು ಪ್ರೋತ್ಸಾಹಿಸಿದ ಹುಬ್ಬಳ್ಳಿಯ ಶ್ರೀಮೂಜಗಂ ಅವರು ಮುನ್ನುಡಿಯಲ್ಲಿ “......... ಬಹುಶಃ ಮೂಲ ಕಾಡಸಿದ್ದೇಶ್ವರರ ಶಿಷ್ಯ ಪರಂಪರೆಯಲ್ಲಿ ಬಿಜಾಪೂರದ ಬಾದಶಹರ ಕಾಲಕ್ಕೆ ಇದ್ದವರೇ ಈ ವಚನಗಳನ್ನು ರಚಿಸಿರಬಹುದೆಂದು ತರ್ಕಮಾಡಬುಹುದು”[೧೬೧] ಎಂದು ಹೇಳಿರುವ ಅಭಿಪ್ರಾಯ ಸೂಕ್ತವೆನ್ನಬಹುದು.

ಸಂಕೀರ್ಣ ವಚನ ಸಂಪುಟ–ಐದರ ಪ್ರಸ್ತಾವನೆಯಲ್ಲಿ ಡಾ. ವೀರಣ್ಣ ರಾಜೂರ ಅವರು ಕಾಡಸಿದ್ದೇಶ್ವರರ ಕಾಲ ನಿರ್ಣಯ ಕುರಿತು ಸಾಕಷ್ಟು ಚರ್ಚಿಸಿದ್ದಾರೆ. ನೂರೊಂದು ವಿರಕ್ತರಲ್ಲಿ ಇವರು ಒಬ್ಬರಾಗಿರಬಹುದೆಂದು ವಾದಿಸುತ್ತಲೇ ಕವಿಚರಿತೆಕಾರರು ಹೇಳುವಂತೆ ಕ್ರಿ.ಶ.೧೭೨೫, ಕನ್ನಡ ಕುವಲಯಾನಂದದಲ್ಲಿ ಕಾಡಸಿದ್ದೇಶ್ವರರ ಉಲ್ಲೇಖ ಬರುವುದರಿಂದ (೧೭೩೪–ಜಾಯಪ್ಪ ದೇಸಾಯಿ ರಚಿತ), ಇದಕ್ಕೆ ಪೂರಕವಾಗಿ ಈತನ ವಚನಗಳಲ್ಲಿ ಬಳಕೆಗೊಂಡ ಉರ್ದು ಪದಗಳ ಬಳಕೆ ಈ ಅಭಿಪ್ರಾಯವನ್ನು ಪುರಸ್ಕರಿಸುತ್ತದೆ”[೧೬೨] ಎಂದು ಅಂತಿಮ ತೀರ್ಮಾನಕ್ಕೆ ಬಂದಿದ್ದಾರೆ.

“ಕಾಡಸಿದ್ದೇಶ್ವರರು ನೂರೊಂದು ವಿರಕ್ತರ ಯುಗದಲ್ಲಿ ಇದ್ದವನಲ್ಲ ........ ಮುಂದಿನ ಯುಗಕ್ಕೆ ಸೇರಲರ್ಹ.....”[೧೬೩] ವಚನಗಳ ಶೈಲಿ, ಭಾಷಾಸ್ವರೂಪ ಇದರಲ್ಲಿ ಉಲ್ಲೇಖಿಸಲಾಗಿರುವ ವ್ಯಕ್ತಿಗಳು, ವೃತ್ತಿಗಳು ಇತ್ಯಾದಿ ವಿಷಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಇವುಗಳ ಕರ್ತೃವಿನ ಕಾಲ ಕ್ರಿ.ಶ. ಸುಮಾರು ೧೬೫೦ ಎಂದು ಊಹಿಸಬಹುದೆಂದಿದ್ದಾರೆ”[೧೬೪] ಡಾ.ಗುರುಪಾದ ಮರೇಗುದ್ದಿ. ಕಾಡಸಿದ್ದೇಶ್ವರರ ಕೆಲವು ವಚನಗಳಿಗೆ ಬನಹಟ್ಟಿಯ ಸಾಹಿತಿ ಬ.ಗಿ. ಯಲ್ಲಟ್ಟಿಯವರು ೫೩ ಆಯ್ದ ವಚನಗಳಿಗೆ ವ್ಯಾಖ್ಯಾನ ಬರೆದಿದ್ದು ಅವರು “...... ವಿಜಾಪೂರದ ಆದಿಲ್‌ಶಾಹಿ ಕಾಲದಲ್ಲಿ ಈ ವಚನಕಾರರಿದ್ದರೆಂದು ಹೇಳಬಹುದು. ಇವರ ವಚನಗಳಲ್ಲಿ ಉರ್ದುಪದಗಳಿರುವುದೇ ಇದಕ್ಕೆ ಕಾರಣ”[೧೬೫] ಎಂದು ಅಭಿಪ್ರಾಯಪಟ್ಟಿದ್ದಾರೆ. ಅದೇ ರೀತಿ ಉರ್ದುಭಾಷೆಯ ಬಳಕೆ ವಚನಗಳಲ್ಲಿರುವುದರಿಂದ ೧೫ನೇಯ ಶತಮಾನಕ್ಕೆ ಪೂರ್ವದಲ್ಲಿ ಈ ವಚನಗಳು ರಚನೆಗೊಂಡಿರಲು ಸಾಧ್ಯವಿಲ್ಲ ಎಂದು ತೋರುತ್ತದೆ”[೧೬೬] ಎನ್ನುವ ಡಾ. ವಿ.ಎಸ್. ಕಟಗಿಹಳ್ಳಿಮಠರ ಅಭಿಪ್ರಾಯ ಸರಿಯಾಗಿದೆ.

ಕಾಡಸಿದ್ದೇಶ್ವರರ ವಚನಗಳಲ್ಲಿ ವಲ್ಲಿಯ ಪೀರಣ್ಣ, ಪಿಂಜಾರ ಮಹಮ್ಮದ ಖಾನಯ್ಯನಂತಹ ಮುಸ್ಲಿಂ ಶರಣರ ಹೆಸರುಗಳ ಜೊತೆಗೆ ೬೧ ಜನ ಶರಣರ ಹೆಸರುಗಳು, ಅವರ ಕಾಯಕದ ಪ್ರಸ್ತಾಪವಿದೆ. ಶರಣ ಐಕ್ಯಸ್ಥಳದ ವಚನ ಭಾಗದಲ್ಲಿ “ಪಿಂಜಾರ ಮಮದಖಾನಯ್ಯಗಳ ಕಾಯಕವು” ಎಂದು ಹೇಳಿ ಬರೆದಿರುವ ವಚನ ನೋಡಬಹುದು.

॥ವಚನ॥ ತೀ ಸಹಿದರು ಅಕರ ಬಾಚ್ಯಾಕು ಗರ್ಮೇ ಆಗಮೇ ಜಲ್ಕು ಸಾಹೇಬಕು ಗರ್ಮೇಕರಕರ ಸುಂತಿದಿಯಾತೋ ವೊಜ್ಜಾಕರ ಪಾಚ್ಛಾಮೇ ಮರಗಯಾ ಕಾಡನೊಳಗಾದ ಶಂಕರ ಪ್ರಿಯ ಚನ್ನಕದಂಬಲಿಂಗ ನಿರ್ಮಾಯ ಪ್ರಭುವೇ॥.

ಈ ವಚನಕ್ಕೆ ಟೀಕನ್ನು ಬರೆಯಲಾಗಿದೆ. ಇಲ್ಲಿಯ ವಚನ ಮತ್ತು ಟೀಕನ್ನು ಗಮನಿಸಿದರೆ ವಚನಕಾರ ಕಾಡಸಿದ್ದೇಶ್ವರರೇ ಸ್ವತಃ ಟೀಕನ್ನು ಬರೆದಿರುವಂತೆ ಕಾಣುತ್ತದೆ. ಏಕೆಂದರೆ, ಇಲ್ಲಿ ಬಳಿಸಿದ ಉರ್ದು ಪದಗಳಿಗೆ ಟೀಕಾಕಾರ ಯಾವ ಗೊಂದಲವಿಲ್ಲದೇ ಸುಲಭವಾಗಿ ವಿವರಣೆ ನೀಡಿದ್ದನ್ನು ಕಾಣಬಹುದಲ್ಲದೇ ಕನ್ನಡ, ಮರಾಠಿ ಜೊತೆಗೆ ಉರ್ದುಭಾಷೆಯ ಮೇಲಿನ ಪ್ರಭುತ್ವ ಎದ್ದು ತೋರುತ್ತದೆ.

ಹೀಗೆ ವಚನಕಾರ ಕಾಡಸಿದ್ದೇಶ್ವರರ ಜೀವಿತ ಕಾಲಾವಧಿಯ ಬಗ್ಗೆ ನಿಖರವಾದ ಆಕರಗಳು ಎಲ್ಲಿಯೂ ಲಭ್ಯವಾಗದ ಕಾರಣ ನಾಡಿನ ವಿದ್ವಾಂಸರು ಕೇವಲ ಊಹೆ, ತರ್ಕದ ಆಧಾರದಲ್ಲಿ ೧೭ನೇ ಶತಮಾನದಿಂದ ೧೮ನೇ ಶತಮಾನದ ಕಾಲಾವಧಿಯಲ್ಲಿದ್ದರೆಂದು ಹೇಳುವುದರಿಂದ ಸಮಸ್ಯೆಗೆ ಪರಿಹಾರ ಲಭಿಸಿಲ್ಲ. ಇತ್ತೀಚೆಗೆ ಪ್ರೊ. ಜ್ಯೋತಿ ಹೊಸೂರರು – "ಹದಿನೇಳು–ಹದಿನೆಂಟನೆಯ ಶತಮಾನದ ಮಧ್ಯಾವಧಿಯ ಆಸುಪಾಸಿನಲ್ಲಿ ಶ್ರೀ ಕಾಡಸಿದ್ದೇಶ್ವರರು ಬದುಕಿರುವ ಸಾಧ್ಯತೆ ಹೆಚ್ಚಾಗಿದೆ."[೧೭೭] ಎಂಬ ನಿರ್ಣಯವನ್ನು ಸಮಂಜಸವೆಂದು ಸ್ವೀಕರಿಸಬಹುದಾಗಿದೆ.

ವಚನಕಾರ ಶ್ರೀ ಕಾಡಸಿದ್ದೇಶ್ವರರ ಕೊಲ್ಲಾಪೂರ ಸಮೀಪದ ಸಿದ್ದಗಿರಿ (ಕನ್ನೇರಿ ಗ್ರಾಮದ ಹತ್ತಿರ) ಮಠದ ಅಧಿಪತಿಯಾಗಿ, ಸಿದ್ದ ಸಾಧಕರಾಗಿ, ಕರ್ನಾಟಕ ಮಹಾರಾಷ್ಟ್ರ ಪ್ರದೇಶದಲ್ಲಿ ವೀರಶೈವ ಧರ್ಮ ಜಾಗೃತಿಗಾಗಿ ಶ್ರಮಿಸಿದ ಶಿವಶರಣರೆನ್ನಬಹುದು. ಬಹುಭಾಷಾ ಪಂಡಿತರಾಗಿದ್ದ ಶ್ರೀ ಕಾಡಸಿದ್ದೇಶ್ವರರು ೧೨ನೇ ಶತಮಾನದ ಬಸವಾದಿ, ಅಲ್ಲಮರ ಪ್ರಭಾವಕ್ಕೊಳಗಾಗಿರುವುದು ಸ್ಪಷ್ಟವಾಗಿದೆ. ಅಲ್ಲಮಪ್ರಭುವಿನಂತೆ ಶಿವಯೋಗ ಸಾಧಕನಾಗಿ ಸಂಚರಿಸುತ್ತಾ, ಶರಣರ ಬೆಡಗಿನ ವಚನಗಳ ಪ್ರಭಾವದಿಂದ ತನ್ನ ಮೂಲವೆನ್ನಬಹುದಾದ 'ಸಿದ್ಧ' ಸಂಪ್ರದಾಯವನ್ನು ತ್ಯಜಿಸಿರುವ ಸಾಧ್ಯತೆಗಳಿವೆ.

ಹೆಸರೆ ಸೂಚಿಸುವಂತೆ 'ಸಿದ್ಧ' 'ಗಿರಿ' ಅಂದರೆ ಸಿದ್ದರು, ಸಾಧು–ಸಂತರ–ನೆಲೆ ಇದಾಗಿತ್ತು. ವಚನಕಾರ "ಕಾಡಸಿದ್ದೇಶ್ವರ"ರು "ಸಿದ್ಧ" ಸಂಪ್ರದಾಯದ ಸಂತನಾಗಿರಬಹುದು. ಕರ್ನಾಟಕದ ಉತ್ತರ ಗಡಿ ಭಾಗ ಹಾಗೂ ಮಹಾರಾಷ್ಟ್ರದ ದಕ್ಷಿಣ ಭಾಗದಲ್ಲಿ ಸಿದ್ಧಸಂಪ್ರದಾಯ, ನಾಥಸಂಪ್ರದಾಯ, ಲಾಕುಳ – ಪಾಶುಪತ ಸಂಪ್ರದಾಯಗಳ ಅನುಯಾಯಿಗಳು ೧೨ನೇ ಶತಮಾನದ ಹಾಗೂ ೧೩ನೇ ಶತಮಾನದ ವಚನಕಾರರ ಸಮಾನತೆಯ ಶರಣಸಿದ್ಧಾಂತದ ಪ್ರಭಾವಕ್ಕೆ ಒಳಗಾಗಿರಬಹುದು. ಈ ರೀತಿಯ ಪ್ರಭಾವ ಯಾವ ಕಾಲಘಟ್ಟದಲ್ಲಿ, ಯಾರಿಂದ ಹೇಗೆ ಪ್ರಭಾವ ಬೀರಿತು ಎಂಬುದು ಪ್ರತ್ಯೇಕ ಅಧ್ಯಯನದ ವಿಷಯವಾಗಬಹುದು. ಆದರೆ, ನಾಥ ಹಾಗೂ ಸಿದ್ಧಪಂಥಗಳ ಸಂಮಿಶ್ರಣವಾಗಿದ್ದ ಸಿದ್ಧಗಿರಿಮಠವು ವಚನಕಾರ ಶ್ರೀ ಕಾಡಸಿದ್ದೇಶ್ವರರಿಂದಾಗಿಯೇ ವೀರಶೈವ ಧರ್ಮದ ಕೇಂದ್ರವಾಗಿ ಮಾರ್ಪಾಡಾಗಿರಬಹುದು. "ಶ್ರೀ ಕಾಡಸಿದ್ದೇಶ್ವರರು ವಚನಗಳಲ್ಲಿ ಮತಗಳ ಸಮನ್ವಯ ಮತ್ತು ಷಟಸ್ಥಲ ಸಿದ್ಧಾಂತ ಎರಡರ ಬಗೆಗೆ ಒಲವು ವ್ಯಕ್ತಮಾಡಿರುವುದು ಗಮನಾರ್ಹ ವಿಶೇಷತೆ"[೧೭೮] ಎಂಬ ಅಭಿಪ್ರಾಯವಿದ್ದು ವಚನಗಳನ್ನು ಆದರಿಸಿ ಸ್ಪಷ್ಟ ನಿರ್ಧಾರಕ್ಕೆ ಬರಬೇಕಾಗುತ್ತದೆ. ಮೊದಲನೆಯ ಗುರುಸ್ತೋತ್ರದ ವಚನದಲ್ಲಿ ".....ಸಂಗಮೇಶ್ವರದೇವರ ಕರಕಮಲದಲ್ಲಿ ಉತ್ಪತ್ಯವಾದ ಶಿಶುವು ಕಾಡಸಿದ್ದ ನಾನಯ್ಯ" ಎಂದು

ವಚನಕಾರರು ಹೇಳಿಕೊಂಡಿದ್ದಾರೆ. ಸಿದ್ಧಗಿರಿಮಠದ ಸ್ವಾಮಿಗಳ ವಂಶಾವಳಿಯಲ್ಲಿ ೧೪ನೇ ಹೆಸರು "ಸಿದ್ಧ ಕಾಡದೇವರು" ಎಂದಿದೆ. "ವಚನಕಾರ ಕಾಡಸಿದ್ಧೇಶ್ವರರು ಈ ಸಿದ್ಧಕಾಡದೇವರು ಆಗಿರುವ ಸಾಧ್ಯತೆಯಿದೆಯೆಂದು ತರ್ಕಿಸಲು ಅವಕಾಶವಿದೆ. ಅವರ ಕಾಲಾವಧಿ ಸುಮಾರು ಕ್ರಿ.ಶ. ೧೬೫೦ ರಿಂದ ೧೭೨೫ರ ವರೆಗಿನ ಅವಧಿಯಾಗಿರುವ ಸಂಭವವಿದೆ"[೧೭೯] ಎಂಬ ಅಭಿಪ್ರಾಯಗಳು ಶ್ರೀ ಕಾಡಸಿದ್ದೇಶ್ವರರ ಜೀವಿತ ಕಾಲದ ನಿರ್ಧಾರಕ್ಕೆ ಸಹಾಯಕವಾಗಬಹುದಾಗಿದೆ.

ಮೇಲ್ಕಂಡ ವಚನದಲ್ಲಿ – "ಸಂಗಮೇಶ್ವರ ದೇವರ ಕರಕಮಲದಲ್ಲಿ ಉತ್ಪತ್ಯವಾದ ಶಿಶುವು..." ಎಂದು ಹೇಳಿರುವದರಿಂದ ಈ ಸಂಗಮೇಶ್ವರ ದೇವರು ಯಾರು? ಯಾವ ಕಾಲದಲ್ಲಿದ್ದವರು? ಇವರು ವ್ಯಕ್ತಿಯೇ? ದೈವತವೆ? ಎಂಬುದು ಚರ್ಚೆಯಾಗಬೇಕಿದೆ. ಬಸವಣ್ಣನವರ ಆರಾಧ್ಯದೈವ 'ಕೂಡಸಂಗಮನಾಥ'ನಿಗೂ ಕಾಡಸಿದ್ದೇಶ್ವರರ "ಸಂಗಮೇಶ್ವರ ದೇವರಿಗೂ" ಸಂಬಂಧವಿರಬಹುದೆ? ಹೀಗೆ, ಹಲವು ಪ್ರಶ್ನೆಗಳು ಹುಟ್ಟಿಕೊಂಡರು ಉತ್ತರ ಸಿಗುವುದು ಕಷ್ಟಸಾಧ್ಯವಾಗಿದ್ದು ಕ್ಷೇತ್ರಕಾರ್ಯದಿಂದ ಮಾತ್ರ ಸತ್ಯದ ಸಮೀಪಕ್ಕೆ ಹೋಗಬಹುದಾಗಿದೆ. ಏಕೆಂದರೆ, ಇಲ್ಲಿಯ ವಚನಕಾರರು ಕಾಡಸಿದ್ದೇಶ್ವರರೆಂಬುದು ಮಾತ್ರ ಸ್ಪಷ್ಟ. ಆದರೆ, ವಚನಗಳ ಟೀಕಾಕಾರರು ಯಾರು? ಕಾಡಸಿದ್ದೇಶ್ವರರೆ ಬೆಡಗಿನಿಂದ ಕೂಡಿದ, ಸರಳವಾಗಿ ಅರ್ಥೈಸಲಾಗದ ಕಾರಣದಿಂದ ತಾವೇ ಟೀಕನ್ನು ಬರೆದಿರುವ ಸಾಧ್ಯತೆಗಳಿವೆ. "ಒಂದೆಡೆ ಟೀಕಾಕಾರ ಬೋಳಬಸವೇಶ್ವರನ ಹೆಸರು ಬರುತ್ತದೆ. ಇವನೇ ಅವುಗಳಿಗೆ ಟೀಕೆ ಬರೆದವನೋ ಹೇಗೋ ತಿಳಿಯದು"[೧೮೦] ಎನ್ನುತ್ತಾರೆ ವಿದ್ವಾಂಸರಾದ ಡಾ. ವೀರಣ್ಣ ರಾಜೂರರು.

ಇಲ್ಲಿಯ ೪೯೧ ವಚನಗಳ ಪೈಕಿ ೩೫೫ ವಚನಗಳಿಗೆ ಮಾತ್ರ ಟೀಕನ್ನು ಬರೆಯಲಾಗಿದೆ. ಶ್ರೀ ಕಾಡಸಿದ್ದೇಶ್ವರರ ವಚನಗಳನ್ನು ಆಸಕ್ತಿಯಿಂದ ಪ್ರತಿ ಮಾಡಿಟ್ಟುಕೊಂಡು ರಕ್ಷಣೆ ಮಾಡಿ ಇಲ್ಲಿಯವರೆಗೆ ಅವು ಉಳಿದುಬರುವಂತೆ ವ್ಯವಸ್ಥೆ ಮಾಡಿರುವ ಎಲ್ಲ ಹಳೆಯ ಹಸ್ತಪ್ರತಿಗಳಲ್ಲಿಯೂ ಈ ಟೀಕೆಗಳು ಸಾಮಾನ್ಯವಾಗಿ ಎಕಪ್ರಕಾರದಿಂದ ಲಭ್ಯಗುತ್ತವೆ"[೧೮೧] ಎಂಬ ಪ್ರೊ.ಜ್ಯೋತಿ ಹೊಸೂರರ ಅಭಿಪ್ರಾಯದಿಂದಲೂ ಕೂಡಾ ಹಸ್ತಪ್ರತಿಗಳಲ್ಲಿಯ ವಚನ, ಟೀಕು. ಶೈಲಿ ಗಮನಿಸಿದಾಗ ಸಮಸ್ಯೆ ಪರಿಹಾರವಾಗದೇ ಸಂದೇಹಗಳು ಉಳಿದುಕೊಳ್ಳುತ್ತವೆ. "ಆದರೆ ಮೂಲವಚನಗಳ ಮತ್ತು ಟೀಕೆಗಳ ಶೈಲಿಯಲ್ಲಿಯ ಪ್ರಾಸಾದಿಕ ಗುಣ, ಪದ ಪ್ರಯೋಗಗಳ ರೀತಿ, ಅಭಿವ್ಯಕ್ತಿಯಲ್ಲಿಯ ಸ್ಫುಟುತ್ವ ಇತ್ಯಾದಿಗಳನ್ನು ತುಲನಾತ್ಮಕವಾಗಿ ಪರಿಭಾವಿಸಿದಾಗ ಅವೆರಡನ್ನೂ ಒಬ್ಬನೇ ವ್ಯಕ್ತಿ ಬರೆದಿರುವನೆಂದು ನಿರ್ಧರಿಸಲು ಸಾಧ್ಯವಿಲ್ಲವೆಂಬುದು ವಿದಿತವಾಗುತ್ತದೆ. ಟೀಕಾಕಾರರೊಬ್ಬರು ಬೇರೆಯವರು ಇರಲೇಬೇಕೆಂಬ ನಿರ್ಣಯಕ್ಕೆ ಬರುವುದು ಅನಿವಾರ್ಯವಾಗುತ್ತದೆ"[೧೮೨] ಎಂಬ ಅಭಿಪ್ರಾಯ ಒಪ್ಪುವುದು ಕಷ್ಟ.

ಕಾಡಸಿದ್ದೇಶ್ವರರ ವಚನ ಟೀಕಾ ಹಸ್ತಪ್ರತಿಗಳು ಒಂದೇ ರೀತಿಯಲ್ಲಿರುವುದನ್ನು ನೋಡಿದಾಗ, ಹಸ್ತಪ್ರತಿಯ ಆರಂಭದಲ್ಲಿ ಟೀಕಾಕಾರನ ಸ್ವಗತವಾದ ಅಭಿಪ್ರಾಯಗಳು ಬರದೇ ಇರುವುದರಿಂದ, ಕಾಡಸಿದ್ದೇಶ್ವರರ ವಚನಗಳು ಬೇರೆ, ಟೀಕೆಗಳು ಬೇರೆಯಾಗಿ ಹಸ್ತಪ್ರತಿ ರೂಪದಲ್ಲಿ ಲಭಿಸದೇ ಇರುವುದರಿಂದ ವಚನಕಾರರೇ ಟೀಕಾಕಾರರಾಗಿರುವ ಸಾಧ್ಯತೆಗಳು ಹೆಚ್ಚಿವೆ ಎನ್ನಬಹುದು.

**ಐಕ್ಯನ ಪ್ರಾಣಲಿಂಗ ಸ್ಥಲದ ವಚನ ಹೀಗಿದೆ:**

"ನಿನ್ನಿನವರೂ ಇಂದಿನವರೂ ನಾಳಿನವರೂ ಹೋದ ದಾರಿ ಒಂದಲ್ಲದೆ ಎರಡಿಲ್ಲ

ನೋಡೆಂದನಯ್ಯ ಕಾಡನೊಳಗಾದ ಶಂಕರಪ್ರಿಯ ಚನ್ನಕದಂಬಲಿಂಗ ನಿರ್ಮಾಯ ಪ್ರಭುವೆ"

**ಟೀಕು:** ನಿನ್ನಿನವರು ಎಂದಡೆ ಹಿಂದಕ್ಕೆ ಕಲ್ಯಾಣ ನಗರದಲ್ಲಿರ್ದ ಬಸವಾದಿ ಏಳುನೂರೆಪ್ಪತ್ತು ಪ್ರಮಥಗಣಂಗಳು, ಇಂದಿನವರೆಂದಡೆ ತುರ್ತ ಈ ಕಲಿಯುಗದೊಳಗೆ ಸಿದ್ದೇಶ್ವರ ಸ್ವಾಮಿಗಳು, ಶಿಂಗಳಾಪುರದ ಬಸವರಾಜ ದೇವರು, ಘನಲಿಂಗದೇವರು, ಬೋಳಬಸವೇಶ್ವರ ಸ್ವಾಮಿಗಳು, ಶೀಲವಂತ ಚನ್ನಮಲ್ಲಯ್ಯಗಳು, ಷಣ್ಮುಖಸ್ವಾಮಿಗಳು ಇಂತೀ ಶಿವಗಣಂಗಳು ಲಿಂಗೈಕ್ಯರಾಗಿ ಇರುವಲ್ಲಿ ಗುಪ್ತರಾಗಿರುವರು. ನಾಳಿನವರು ಎಂದಡೆ ಮರ್ತ್ಯಲೋಕದಲ್ಲಿ ಭಿನ್ನಭಕ್ತಿಯ ಮಾಡಿ ಸ್ವರ್ಗಲೋಕದಲ್ಲಿ ಫಲಪದವಿಯ ಪಡೆದು ಇರುವ ಪುಣ್ಯಪುರುಷರು..... ಶಿಷ್ಯಂಗೆ ಶ್ರೀಗುರು ಪೇಳುತ್ತಿರ್ದನೆಂಬುದೀಗ ಈ ವಚನದ ತಾತ್ಪರ್ಯಾರ್ಥ." [೧೮೩]

ಮೇಲಿನ ಟೀಕೆಯಲ್ಲಿ ಇಂದಿನವರೆಂದಡೆ ತುರ್ತ ಈ ಕಲಿಯುಗದೊಳಗೆ ಎಂದು ಪ್ರಸ್ತಾಪಿಸುವ ಟೀಕಾಕಾರ ತನ್ನ ಸಮಕಾಲೀನ ಹಿರಿಯ ವಚನಕಾರರು, ಸಂಕಲನಕಾರರು, ಟೀಕಾಕಾರರನ್ನು ಇಲ್ಲಿ ಸ್ಮರಿಸುತ್ತಿರುವುದರಿಂದ ಉದಾಹರಣೆಗೆ: ಸಿಂಗಳದ ಸಿದ್ಧಬಸವ (ಸು ೧೫೫೦), ಸಕಲಪುರಾತನರ ಬೆಡಗಿನ ವಚನಗಳು ವ್ಯಾಖ್ಯಾನ ಕೃತಿ ಬರೆದಿದ್ದಾನೆ. ಇದರಲ್ಲಿ ೪೭ ವಚನಕಾರರ ೫೩೬ ವಚನಗಳಿಗೆ ವ್ಯಾಖ್ಯಾನ ಬರೆದಿದ್ದಾನೆ. ಸಂಪಾದನೆ ಬೋಳಬಸವ(ಸು ೧೬೨೦), ಬಸವಸ್ತೋತ್ರದ ವಚನಗಳ ಬಗೆಗೆ ಎರಡು ಸಂಕಲನಗಳನ್ನು ಮಾಡಿದ್ದಾನೆ. ಘನಲಿಂಗದೇವ(ಸು ೧೬೧೬), ತೋಂಟದ ಸಿದ್ದಲಿಂಗರ ಪರಮಶಿಷ್ಯ, ಶ್ರೇಷ್ಠ ವಚನಕಾರ. ಷಣ್ಮುಖಸ್ವಾಮಿಗಳು (ಸು ೧೬೩೯ ರಿಂದ ೧೭೧೧), ಜೇವರಗಿಯಲ್ಲಿ ಗುರು ಅಖಂಡೇಶ್ವರರು ಸ್ಥಾಪಿಸಿದ ವಿರಕ್ತಮಠದ ಅಧಿಪತಿಯಾಗಿದ್ದ ಇವರು ಪ್ರಮುಖ ವಚನಕಾರರು. ಇವರೆಲ್ಲರೂ ಬಸವೋತ್ತರ ಯುಗದ ತೋಂಟದಾರ್ಯರ ಸಮಕಾಲೀನ ಜೀವಿತ ವಚನಕಾರರಾಗಿದ್ದಾರೆ.

ಕಾಡಸಿದ್ದೇಶ್ವರ ವಚನಗಳ ಟೀಕಾಕಾರ ಇವರೆಲ್ಲರನ್ನು ಇಂದಿನವರೆಂದು, ತುರ್ತ ಈ ಕಲಿಯುಗದೊಳಗೆ ಎಂದು ಸ್ಮರಿಸುತ್ತಾನೆ. ಕೊನೆಗೆ... 'ಇಂತೀ ಶಿವಗಣಂಗಳು ಲಿಂಗೈಕ್ಯರಾಗಿ ಇರುವಲ್ಲಿ ಗುಪ್ತರಾಗಿರುವರು' ಎಂದು ವ್ಯಾಖ್ಯಾನ ಮಾಡಿರುವುದರಿಂದ ವಚನಕಾರರ ಕಾಲಕ್ಕೂ, ಟೀಕಾಕಾರನ ಕಾಲಕ್ಕೂ ಯಾವುದೇ ಅಂತರ ಕಂಡುಬರುವುದಿಲ್ಲ. ಇದೇ ಕಾರಣದಿಂದ ಇಲ್ಲಿಯ ವಚನಕಾರನೇ ಟೀಕಾಕಾರನಾಗಿರಬಹುದು ಅಥವಾ ಕಾಡಸಿದ್ಧೇಶ್ವರರ ಒಡನಾಡಿಯಾಗಿದ್ದವರೆ ಟೀಕನ್ನು ರಚಿಸಿರುವ ಸಾಧ್ಯತೆಗಳು ಇವೆ.

ಮೈಸೂರಿನ ಪಿ.ಎಂ. ಗಿರಿರಾಜು ಅವರು ಸಂಪಾದಿಸಿದ – ಸಂಬಂಧಾಚರಣೆಯ ವಚನಗಳಲ್ಲಿ (೯೮೬) ೧೧೪ ವಚನಗಳಿವೆ. ಇದರಲ್ಲಿ ಕುಷ್ಟಗಿ ಕರಿಬಸವ ಹಾಗೂ ಕಾಡಸಿದ್ಧೇಶ್ವರ ವಚನಗಳಿರುವುದರಿಂದ" ಈ ಸಂಕಲನ ಕ್ರಿಶ. ೧೮ನೆಯ ಶತಮಾನದ ಉತ್ತರಾರ್ಧದಲ್ಲಿ ಆಗಿರಬಹುದು"[೧೮೪] ಎನ್ನುತ್ತಾರೆ ಎಸ್.ಶಿವಣ್ಣನವರು.

ಇವೆಲ್ಲಾ ವಿಚಾರಗಳನ್ನು ಪರಾಮರ್ಶಿಸಿ ನೋಡಿದಾಗ – ವಚನಕಾರ ಕಾಡಸಿದ್ದೇಶ್ವರರು ೧೭ನೇ ಶತಮಾನದ ಮಧ್ಯಭಾಗದಿಂದ ೧೮ನೇ ಶತಮಾನದ ಪೂರ್ವಭಾಗದವರೆಗೆ ಜೀವಿಸಿರಬೇಕು. ಅಂದಾಜು ೮೦ ರಿಂದ ೧೦೦ ವರ್ಷಗಳವರೆಗೆ ಅವರು ಜೀವಿಸಿರುವ ಸಾಧ್ಯತೆಗಳಿವೆ. ಇವರ ವಚನಗಳ ಜೊತೆಗೆ ಟೀಕೆಗಳಿರುವ ಹಸ್ತಪ್ರತಿಗಳು ಮಾತ್ರ ಲಭ್ಯವಿರುವುದರಿಂದ ಕಾಡಸಿದ್ದೇಶ್ವರರ ವಚನಗಳು ಮಾತ್ರ ಇರುವ ಹಸ್ತಪ್ರತಿಗಳು ಸಿಗುವವರೆಗೆ ಕಾಡಸಿದ್ದೇಶ್ವರರನ್ನೇ ವಚನ ಟೀಕಾಕಾರರೆಂದು ಟೀಕಾ ಸ್ವರೂಪದ ಅಧ್ಯಯನ ಮಾಡಲು ಪ್ರಯತ್ನಿಸಲಾಗುವುದು.

**ಕಾಡಸಿದ್ದೇಶ್ವರ ವಚನಗಳ ಟೀಕಾ ಸ್ವರೂಪ:**

ಶ್ರೀ ಕಾಡಸಿದ್ದೇಶ್ವರರು ರಚಿಸಿದ ವಚನಗಳು ೪೯೧. ಇವುಗಳಲ್ಲಿ ೩೫೫ ವಚನಗಳಿಗೆ ವ್ಯಾಖ್ಯಾನ ಮಾಡಿದ್ದಾರೆ. ಇವೆಲ್ಲವನ್ನು ಒಟ್ಟಾಗಿ ಲೆಕ್ಕ ಮಾಡಿದರೆ ೮೪೬ ಆಗುತ್ತವೆ. ಇಲ್ಲಿಯ ವಚನಗಳಲ್ಲಿ ಬೆಡಗಿನ ವಚನಗಳೇ ಸಿಂಹಪಾಲು ಪಡೆದಿವೆ. ಬೆಡಗಿನೊಳಗಿನ ನಿಗೂಢವಾದ ಅರ್ಥ ಅರಿಯಲು ವಚನ ಓದುಗರು ಪರದಾಡಬೇಕಾಗುತ್ತದೆ. ಆದರೆ ಅಂತಹ ಗೂಢಾರ್ಥದ ವಚನಗಳಿಗೆಲ್ಲಾ ವ್ಯಾಖ್ಯಾನವನ್ನು ಬರೆಯುವ ಮೂಲಕ ಸುಲಿದ ಬಾಳೆಯ ಹಣ್ಣಿನಂತೆ ಸುಲಭವಾಗಿ ಅರ್ಥೈಸಿಕೊಂಡು ಮುಂದೆ ಸಾಗಲು ಸಾಧ್ಯವಾಗಿದೆ ಎನ್ನಬಹುದು.

ಬೆಡಗಿನ ವಚನಗಳಲ್ಲದೇ ತುಂಬಾ ಸರಳವಾದ ವಚನಗಳು ಈ ಸಂಕಲನದಲ್ಲಿವೆ. ಇಂತಹ ಸರಳ ವಚನಗಳಿಗೂ ಇಲ್ಲಿ ವ್ಯಾಖ್ಯಾನ ಬರೆದಿರುವುದರಿಂದ ಕೇವಲ ಬೆಡಗಿನ ವಚನಗಳಿಗೆ ಮಾತ್ರ ವ್ಯಾಖ್ಯಾನ ಬರೆಯಲಾಗಿದೆ ಎಂದು ಹೇಳಲಾಗದು. ಉದಾಹರಣೆಗೆ – "ಭಕ್ತನಾದರೆ ಬಾಳೆಹಣ್ಣಿನಂತಿರಬೇಕು..." ಎಂಬ ಸರಳ ವಚನದ ವ್ಯಾಖ್ಯಾನದ ಅರ್ಥಪೂರ್ಣತೆಯನ್ನು ಮುಂದಿನ ವಿವರಣೆಯಲ್ಲಿ ಕಾಣಬಹುದು.

ಇಲ್ಲಿಯ ವಚನ ಟೀಕೆಗಳಲ್ಲಿ ಯೋಗಸಂಬಂಧದ ಪಾರಿಭಾಷಿಕ ಪದಗಳು, ಷಟಸ್ಥಲ ಸಾಧನೆಯ ಪಾರಿಭಾಷಿಕ ಪದಗಳು ವ್ಯಾಪಕವಾಗಿ ಬಳಕೆಯಾಗಿವೆ. ಅಲ್ಲದೆ, ಶಾಸ್ತ್ರ, ಪುರಾಣ, ಆಗಮ, ಉಪನಿಷತ್ತು ಇತ್ಯಾದಿಗಳ ಬಗ್ಗೆ ಟೀಕಾಕಾರನು ಅಪಾರ ಪಾಂಡಿತ್ಯ ಪಡೆದಿರುವ ರೀತಿಯಲ್ಲಿ ವ್ಯಾಖ್ಯಾನ ಮಾಡಿರುವುದು ಕಂಡುಬರುತ್ತದೆ. ಇದರಿಂದ – "ಟೀಕಾಕಾರರು ಘನವಿದ್ವಾಂಸರೆಂಬಂಥ ಭಾವನೆಯು ಟೀಕೆಗಳ ಓದಿನಿಂದ ಸಹಜವಾಗಿ ಉಂಟಾಗುವಂಥ ಸ್ಥಿತಿ ನಿರ್ಮಾಣವಾಗುವಂತೆ ಯೋಜಿಸಿರುವಂತೆ ಕಂಡುಬರುತ್ತದೆ"[೧೮೫] ಎಂಬ ಪ್ರೊ. ಜ್ಯೋತಿ ಹೊಸೂರರ ಅಭಿಪ್ರಾಯ ಸರಿಯಾಗಿದೆಯೆನ್ನಬಹುದು.

ಅಲ್ಲದೇ, ಪೂರ್ಣವಿರಾಮವಿಲ್ಲದ ಉದ್ದುದ್ದ ವಾಕ್ಯಗಳು, ಪ್ರವಚನದ ಶೈಲಿ, ಕೆಲವೆಡೆ ಬೇಸರವಿಲ್ಲದೇ ವ್ಯಾಖ್ಯಾನ ಬರೆಯುವುದು ಕಂಡುಬರುತ್ತದೆ. ತುಂಬಾ ಸಂಕ್ಷೇಪದಲ್ಲಿ ಹೇಳಬಹುದಾದ ವ್ಯಾಖ್ಯಾನವನ್ನು ಸುದೀರ್ಘವಾಗಿ ಹೇಳುವದರಿಂದ ಮೂಲ ವಚನವನ್ನು ಓದಿ ಗ್ರಹಿಸಿದ ಸ್ವಾರಸ್ಯವನ್ನು ವ್ಯಾಖ್ಯಾನ ವಿವರಣೆಯ ಪರಿಣಾಮ ಮತ್ತಷ್ಟು ಗೊಂದಲವಾಗುವಂತಾಗುತ್ತದೆ. ಹೀಗೆ ಕೆಲವು ನ್ಯೂನತೆಗಳಿದ್ದಾಗಲು ವಚನಗಳನ್ನು ಸುಲಭ ಗ್ರಾಹ್ಯವಾಗಿಸಿಕೊಳ್ಳಲು ಇಲ್ಲಿಯ ವಚನ ವ್ಯಾಖ್ಯಾನಗಳು ಸಹಾಯಕವಾಗಿವೆ.

**ಪ್ರಥಮದಲ್ಲಿ ಬರುವ ಗುರುಸ್ತೋತ್ರದ ನಂತರದ ಪಿಂಡಸ್ಥಲದಲ್ಲಿ ಬರುವ ವಚನ –** "ಜಲದೊಳಗಣ ಸೂರ್ಯನಂತೆ ಭೂಮಿಯೊಳಗಣ ದ್ರವ್ಯದಂತೆ। ಕಾಷ್ಟದೊಳಗಣ ಪಾವಕನಂತೆ ಪುಷ್ಪದೊಳಗಣ ಪರಿಮಳದಂತೆ ಕ್ಷೀರದೊಳಗಣ ಘೃತದಂತೆ। ಇರ್ದರಯ್ಯ ಕಾಡನೊಳಗಾದ ಶಂಕರಪ್ರಿಯ ಚನ್ನಕದಂಬ ಲಿಂಗ ನಿರ್ಮಾಯ ಪ್ರಭುವೆ।

**ಟೀಕು:** "ಉದಕದೊಳಗೆ ಸೂರ್ಯ ಇದ್ದು। ಆ ಉದಕದ ಗುಣಧರ್ಮ ಶೀತೋಷ್ಣವೆಂಬ ಕರ್ಮವನು ಹೊದ್ದದೆ ದೃಷ್ಟಿಗೆ ಕಾಣದು. ಹಿಡಿದರೆ ಸಿಕ್ಕದು ಹಾಂಗೆ ಜಲಬುದ್ಬುದವಾದ ಪಿಂಡದ ಮಧ್ಯದಲ್ಲಿ ಪರವಸ್ತು ಇದ್ದು ಆ ಪಿಂಡದ ಗುಣಧರ್ಮ ಪುಣ್ಯಪಾಪವೆಂಬ ಕರ್ಮವನು ಹೊದ್ದದೆ ಇರ್ಪಂತೆಯೆಂಬುದೀಗ ಜಲದೊಳಗಣ ಸೂರ್ಯನಂತೆ॥ ಭೂಮಿಯೊಳಗಣ ದ್ರವ್ಯವನು ಅಂಜನವಿಲ್ಲದೆ ಮುನ್ನವೇ ನಿಕ್ಷೇಪವಾಗಿರ್ದ ಹಾಗೆ ಪೃಥ್ವಿತತ್ವಾಂಶಿಕಮಪ್ಪ ಪಿಂಡದ ಮಧ್ಯದಲ್ಲಿಪ್ಪ ವಸ್ತುವೆಂಬ ದ್ರವ್ಯವೂ ಶಿವಜ್ಞಾನವೆಂಬ ಅಂಜನವಿಲ್ಲದ ಮುನ್ನವೇ ನಿಕ್ಷೇಪವಾಗಿಪ್ಪುದೆಂಬುದೀಗ। ಆವುದಾನೊಂದು ಕಟ್ಟಿಗೆಯೊಳಗೆ ಅಗ್ನಿ ಮಥನವಿಲ್ಲದ ಮುನ್ನವೇ। ನಿಕ್ಷೇಪವಾಗಿರ್ಪಂತೆ ಇರುವೆ ಮೊದಲು ಆನೆಕಡೆ ಎಂಬತ್ತು ನಾಲ್ಕುಲಕ್ಷ ಜೀವಪಿಂಡದೊಳಗೆ ಪರವಸ್ತು ಶಿವಾನುಭವವೆಂಬ ಮಥನವಿಲ್ಲದ ಮುನ್ನವೇ ನಿಕ್ಷೇಪವಾಗಿರ್ಪುದು॥"

ಆವುದಾನೊಂದು ಪುಷ್ಪದೊಳಗಣ ಪರಿಮಳವಾಯುವಿಲ್ಲದ ಮುನ್ನವೇ। ಆ ಪುಷ್ಪದೊಳಗೆ ನಿಕ್ಷೇಪವಾಗಿರ್ಪಂತೆ। ಅಜ್ಞಾನ ಸ್ವರೂಪಿಣಿಯಪ್ಪ ವಾಯುಪ್ರಾಣಿ ಹೃದಯದಲ್ಲಿ ಪರವಸ್ತು ಸ್ವಾನುಭವ ಸದ್ವಾಸನವೆಂಬ ವಾಯುವಿಲ್ಲದ ಮುನ್ನವೆ। ಆ ದೇಹದಲ್ಲಿ ನಿಕ್ಷೇಪವಾಗಿರ್ಪುದು ॥ ಹಾಲಿಗೆ ಹೆಪ್ಪನೆರೆದು ಮೊಸರು ಮಾಡಿ ಮಥಣದಿಂದ ಬೆಣ್ಣಿಯ ತೆಗೆದು ಕಾಸದ ಮುನ್ನವೇ ಆ ಹಾಲಿನಲ್ಲಿ ತುಪ್ಪ ನಿಕ್ಷೇಪವಾದಂತೆ ಸಂಸಾರ ವಿಷಯಮಪ್ಪ ಪಿಂಡಕ್ಕೆ ಶ್ರೀಗುರೂಪದೇಶದಿಂದ ಕರಸ್ಥಲಕ್ಕೆ ಲಿಂಗಬಾರದ ಮುನ್ನವೆ। ಆ ವಿಷಮಯ ಪಿಂಡದಲ್ಲಿ ಪರಮ ವಿವೇಕವೆಂಬ ಜ್ಞಾನವು ನಿಕ್ಷೇಪವಾಗಿರ್ಪುದು ॥ ಇಂತಪ್ಪ ಸಕಲಜೀವ, ಪಿಂಡದೊಳ, ಹೊರಗೆ ಹೊದ್ದಿಯೂ ಹೊದ್ದದೆ ಇರ್ಪಿರೆಲೊದೇವಾ ॥ ಎಂದು ಮೇಲಿನ ವಚನಕ್ಕೆ ಟೀಕು ಬರೆಯಲಾಗಿದೆ.

ಇದೇ ರೀತಿಯಲ್ಲಿ – ಸರಳವಚನಕ್ಕೆ ಉದಾಹರಣೆ:

ನೆಲದೊಳಗಣ ಮಧುರದಂತೆ। ಶಿಲೆಯೊಳಗಣ ಜ್ಯೋತಿಯಂತೆ।
ಶಬ್ದದೊಳಗಣ ನಿಶ್ಯಬ್ದದಂತೆ। ಕಪ್ಪಿನೊಳಗಣ ರೂಪಿನಂತೆ।
ಇರ್ದರಯ್ಯ। ಕಾಡನೊಳಗಾದ ಶಂಕರಪ್ರಿಯ ಚನ್ನಕದಂಬ
ಲಿಂಗನಿರ್ಮಾಯ ಪ್ರಭುವೆ॥ (ಪಿಂಡ ಸ್ಥಲ – ೨)

ಇಲ್ಲಿ ಸರಳವಾಗಿ ಅರ್ಥಮಾಡಿಕೊಳ್ಳಬಹುದಾದ ವಚನ ಇದಾಗಿದ್ದರೂ ಟೀಕಾಕಾರ ಸುದೀರ್ಘವಾದ ಟೀಕೆಯನ್ನು ಬರೆದು ಓದುಗರನ್ನು ಮತ್ತಷ್ಟೂ ಗೊಂದಲಕ್ಕೀಡು ಮಾಡುವಂತಿದೆ. ಮೇಲ್ಕಂಡ ವಚನಗಳು ಸ್ವಲ್ಪ ಕಠಿಣವೆನಿಸಿದ್ದರಿಂದ ಟೀಕು ಬರೆದಿರುವನೆಂದು ಭಾವಿಸಬಹುದು. ನಿದರ್ಶನಕ್ಕೆ ಇನ್ನೊಂದು ಮೂಲವಚನವೊಂದನ್ನು ಗಮನಿಸಬಹುದು:

"ಭಕ್ತನಾದರೆ ಬಾಳೆಹಣ್ಣಿನಂತಿರಬೇಕು
ಭಕ್ತನಾದರೆ ಬೆಲ್ಲದ ಕುಳ್ಳಿನಂತಿರಬೇಕು
ಭಕ್ತನಾದರೆ ಮಾವಿನ ಫಲದಂತೆ ಇರಬೇಕು
ಇಂತಪ್ಪಾತನೇ ಸದ್ಭಕ್ತ ಕಾಡನೊಳಗಾದ ಶಂಕರಪ್ರಿಯ
ಚನ್ನಕದಂಬಲಿಂಗ ನಿರ್ಮಾಯ ಪ್ರಭುವೇ॥ (ಪುಟ ೬೨)

ಹೀಗೆ ತುಂಬಾ ಸರಳವಾಗಿ, ಅರ್ಥಾಭಿವ್ಯಕ್ತಿಯಲ್ಲಿ ಪರಿಣಾಮಕಾರಿಯಾಗಿ, ಸಾಮಾನ್ಯ ಓದುಗ ಕೂಡಾ ವಚನದ ಆಶಯ ತಿಳಿದುಕೊಳ್ಳುವಂತಿದೆ. ಹೀಗಿದ್ದಾಗಲೂ ಈ ವಚನಕ್ಕೆ ಟೀಕೆ ಬರೆಯಲಾಗಿದೆ. ಈ ಟೀಕೆ ಓದುಗರಲ್ಲಿ ಗೊಂದಲವುಂಟುಮಾಡುವಂತಿದೆ ಎಂಬುದನ್ನು ಇಲ್ಲಿ ಗಮನಿಸಿ:

**ಟೀಕೆ:** "ಸುಜ್ಞಾನೋದಯವಾದ ವೀರಮಹೇಶ್ವರನು ಬಾಳೆಹಣ್ಣಿನ ತೊಗಟೆಯ ಸುಲಿದು ನೋಡಿದೊಡೆಯು ಮೃದುವಾಗಿ ತೋರುವುದು. ಅಲ್ಲದೇ ಕಠಿಣವಾಗಿ ತೋರದೆಂಬ ಹಾಗೆ ಶ್ರೀಗುರು ಬಂದು ತನು ಮನ ಧನವ ಮುಟ್ಟಿದೆಡೆಯು ಬಯಲು ರೂಪಾಗಿ ತೋರಬೇಕಲ್ಲದೆ। ಸಾಕಾರ ರೂಪಾಗಿ ತೋರಬಾರದೆಂಬುದೀಗ। ಭಕ್ತನಾದರೆ ಬಾಳೆಹಣ್ಣಿನಂತೆ ಇರಬೇಕು॥

ಅಂತಪ್ಪ ತ್ರಿವಿಧ ತನುವು ಬಯಲು ರೂಪಾಗಿ ತೋರಿದ ವೀರಮಹೇಶ್ವರನು ಬೆಲ್ಲದ ಪೆಂಡಿಯು ಆವಲ್ಲಿ ಕಚ್ಚಿ ನೋಡಿದಡೆಯು ರುಚಿಕರವಾಗಿ ತೋರುವುದಲ್ಲದೆ। ವಿಷವಾಗಿ ತೋರದೆಂಬ ಹಾಗೆ ಶ್ರೀ ಗುರು ಶಿಷ್ಯನ ಸಕಲ ಕರಣಂಗಳ ಆವಲ್ಲಿಯು ಮುಟ್ಟಿ ನೋಡಿದಡೆಯು। ಅಮೃತಕರವಾಗಿ ತೋರಬೇಕಲ್ಲದೆ ವಿಷವಾಗಿ ತೋರದೆಂಬುದೀಗ ಭಕ್ತನಾದರೆ ಬೆಲ್ಲದ ಕುಳ್ಳಿನಂತಿರಬೇಕು॥

ಸಕಲ ಕರಣಂಗಳು ಅಮೃತವಾಗಿ ತೋರುವ ಶಿವಶರಣನು ಸಕಲ ಫಲ ಪಕ್ವದೊಳಗೆ ಮೇಲಾಗಿ ತೋರುವುದು ಮಾವಿನ ಫಲವು ಆ ಮಾವಿನ ಫಲ ಸಕಲ ಜನರಿಗೆ ಅಮೃತಮಯವಾಗಿ ತೋರುವುದಲ್ಲದೆ ವಿಷವಾಗಿ ತೋರದೆಂಬ ಹಾಗೆ। ಸಕಲ ಭೂಜನಾತ್ಮರಿಗೆ ಮೇಲಾಗಿ ಪ್ರೀತಿಕರವಾಗಿ ಇರಬೇಕಲ್ಲದೆ। ಮದ ಮತ್ಸರದಿಂದ ಶತ್ರುವಾಗಿ ಇರಬಾರದೆಂಬುದೀಗ। ಭಕ್ತನಾದೊಡೆ ಮಾವಿನ ಫಲದಂತೆ ಇರಬೇಕು। ಇಂತಪ್ಪ ಗುಣವುಳ್ಳವನೇ ಸದ್ವೀರ ಮಾಹೇಶ್ವರನು ಎಂಬುದೀಗ ಇಂತಪ್ಪಾತನೇ ಸದ್ಭಕ್ತನಂ॥"[೧೮೭]

ಹೀಗೆ, ಟೀಕಾಕಾರನು ದ್ವಿರುಕ್ತಿಯ ಮೂಲಕ ಹೇಳಿದ್ದನ್ನೇ ಪುನಃ ಪುನಃ ಹೇಳಲು ಪ್ರಯತ್ನಿಸಿದ್ದಾನೆಯೇ ಹೊರತು ಮಹತ್ವದ ವಿವರಣೆ ನೀಡಿಲ್ಲ. ಮೂಲವಚನ ಓದಿದಾಗ ಸಿಗುವ ಆನಂದ, ಅರ್ಥದ ಹೊಳವು ಈ ಟೀಕೆಯನ್ನು ಓದುವದರಿಂದ ಸಿಗುವದಿಲ್ಲ. ಹೀಗಾಗಿ ಓದುಗರಲ್ಲಿ ಬೇಸರವನ್ನುಂಟು ಮಾಡುವ ಇಂತಹ ಟೀಕುಗಳನ್ನು ಬರೆಯುವ ಅಗತ್ಯ ಯಾರಿಗಿತ್ತು? ಎಂಬ ಪ್ರಶ್ನೆಗೆ ಟೀಕಾಕಾರನೇ ಉತ್ತರಿಸಬೇಕಾಗುತ್ತದೆ.

ಈಗಾಗಲೇ ಹೇಳಿದಂತೆ ಶ್ರೀ ಕಾಡಸಿದ್ದೇಶ್ವರರ ವಚನಗಳು ಹೆಚ್ಚಾಗಿ ಬೆಡಗಿನ ವಚನಗಳು ಆಗಿರುವುದರಿಂದ ಬೆಡಗಿನ ವಚನಗಳ ಇಂಗಿತಾರ್ಥ ಅರಿಯಲು ಟೀಕಾಕಾರನ ಟೀಕೆಗಳು ಓದುಗರಿಗೆ

ನೆರವಾಗುತ್ತವೆಂಬುದನ್ನು ಅಲ್ಲಗಳೆಯಲಾಗದು. ಇವರ ಬಹುತೇಕ ಬೆಡಗಿನ ವಚನಗಳನ್ನು ಅರ್ಥೈಸಲು, ಟೀಕಾಕಾರನ ಟೀಕೆಗಳು ಹೇಗೆ ನೆರವಾಗುತ್ತವೆ ಎಂಬುದನ್ನು ಕೂಡಾ ಒಂದೆರಡು ಉದಾಹರಣೆಗಳ ಮೂಲಕ ತಿಳಿಯಬಹುದಾಗಿದೆ.

ವಚನ: "ಒಂದು ಕೊಟ್ಟು ಎರಡು ಕೊಂಡು। ಎರಡು ಕೊಟ್ಟು ಮೂರು ಕೊಂಡು।
ಎರಡು ತಲೆಯುಳ್ಳ ಸ್ತ್ರೀ ಸಂಗದಲ್ಲಿ ಲೋಕಾದಿ ಲೋಕಂಗಳು ಸಂಸಾರ
ಮಾಡುತ್ತಿರ್ಪವು। ಇಂತಪ್ಪ ಸಂಸಾರ ಮಾಡುವವನಲ್ಲ ನಿಮ್ಮ ಶರಣ
ಕಾಡನೊಳಗಾದ ಶಂಕರ ಪ್ರಿಯ ಚನ್ನಕದಂಬ ಲಿಂಗನಿರ್ಮಾಯ ಪ್ರಭುವೆ॥

**ಟೀಕು:** ಶುಕ್ಲ ಶೋಣಿತಾತ್ಮ ಸಂಬಂಧವಾದ ಜೀವಾತ್ಮರು ಏಕಮೇವ ಪರಬ್ರಹ್ಮವೆಂಬ ಗುರುವಾಕ್ಯನ ಶ್ರೀ ಗುರುಕಾರಣ್ಯದಿಂದ ತಿಳಿಯದೆ, ದ್ವೈತ ಭಾವದಿಂ ಅಂಗಲಿಂಗವೆಂಬುಭಯವ ತಿಳಿದನೆಂಬುದೀಗ । ಒಂದು ಕೊಟ್ಟು ಎರಡು ಕೊಂಡು ॥ ಅಂಗ, ಲಿಂಗವೆಂಬುಭಯ ಭಿನ್ನಾಚಾರ ಹಿಡಿದಾಚರಿಸುವ, ಜೀವಾತ್ಮರು ಗುರು, ಲಿಂಗ, ಜಂಗಮವೆಂಬ ತ್ರಿಮೂರ್ತಿಗಳು । ಶಿವಸ್ವರೂಪರೆಂದು ತಿಳಿದರೆಂಬುದೀಗ । ಎರಡು ಕೊಟ್ಟು ಮೂರು ಕೊಂಡರು ॥ ಎರಡು ತಲೆಯಂದರೆ ಜ್ಞಾನಾಜ್ಞಾನವೆಂಬುಭಯ ಶಿರಸ್ಸು । ಆ ಉಭಯ ಶಿರಸ್ಸುಳ್ಳ ಮಾಯಾಶಕ್ತಿಯೆಂಬ ಸ್ತ್ರೀಯೊಡನೆ ಕೂಡಿ । ತ್ರಿಭುವನ ಮೊದಲಾದ ಚತುರ್ದಶ ಭುವನದಲ್ಲಿರುವ ದೇವ, ದಾನವ, ಮಾನವರು । ತಂಮಂಗ ಮನ, ಪ್ರಾಣಾದಿಗಳಿಂ । ಗುರು, ಲಿಂಗ, ಜಂಗಮ ಇಟ್ಟು । ಅರ್ಚಿಸಿ ಭಿನ್ನ ಫಲಪದವಿಯ ಪಡೆದು । ಅನುಭವಿಸಿ ಕಡೆಯಲ್ಲಿ ಎಂಬತ್ತುನಾಲ್ಕು ಲಕ್ಷ ಯೋನಿ ಚಕ್ರದಲ್ಲಿ ಎಡೆಯಾಡುತ್ತಿರ್ಪರೆಂಬುದೀಗ ಎರಡು ತಲೆಯುಳ್ಳ ಸ್ತ್ರೀಸಂಗದಲ್ಲಿ ಲೋಕಾದಿ ಲೋಕಂಗಳು ಸಂಸಾರ ಮಾಡುತ್ತಿರ್ಪವು ॥ ಇಂತೀಪರಿಯಲ್ಲಿ ಜಡ ಜೀವಾತ್ಮರು ಹಾಗೆ ಶಿವಕೃಪೆಯಿಂ ಸುಜ್ಞಾನೋದಯವಾಗಿ ಜ್ಞಾನ ಕಲಾತ್ಮರು। ತನು, ಮನ, ಪ್ರಾಣಾದಿಗಳಿಂ । ಗುರು, ಲಿಂಗ, ಜಂಗಮವ ಭಿನ್ನವಿಟ್ಟರ್ಚಿಸಿ ಖಂಡಿತ ಫಲಪದವಿಯ ಪಡಿಯದೆ । ಆ ಗುರು, ಲಿಂಗ, ಜಂಗಮವನ್ನು ಶ್ರೀ ಗುರುಕರುಣದಿಂ । ತನುತ್ರಯದಲ್ಲಿ ಸ್ವಾಯತವ ಮಾಡಿಕೊಂಡು । ಸಮರಸವಿಟ್ಟರ್ಚಿಸಿ । ಕರಕಮಲದಲ್ಲಿ ಬೆಳಗುವ । ಪರಂಜೋತಿ, ಪರಶಿವಲಿಂಗದಲ್ಲಿ । ಶಿಖಿಕರ್ಪೂರದಂತೆ ಲೀಯವಾದರೆಂಬುದೀಗ । ಇಂತಪ್ಪ ಸಂಸಾರವ ಮಾಡುವನಲ್ಲ ನಿಮ್ಮ ಶರಣ ॥"[೧೮]

ಇಷ್ಟೊಂದು ಸುದೀರ್ಘವಾದ ಟೀಕು ಬರೆಯದೇ ಈ ರೀತಿ ಸಂಕ್ಷೇಪಿಸಿ ಹೇಳಬಹುದಾಗಿತ್ತು. ಉದಾಹರಣೆಗೆ: ಜೀವಾತ್ಮರು ದ್ವೈತ ಭಾವದಿಂ ಅಂಗ – ಲಿಂಗವೆಂಬುಭಯ ತಿಳಿದನೆಂಬುದೀಗ "ಒಂದು ಕೊಟ್ಟು ಎರಡು ಕೊಂಡು"॥ ಎಂದರ್ಥ. ಜೀವಾತ್ಮರು ಗುರು ಲಿಂಗ ಜಂಗಮವೆಂಬ ತ್ರಿಮೂರ್ತಿಗಳು ಶಿವಸ್ವರೂಪರೆಂದು ತಿಳಿದರೆಂಬುದೀಗ "ಎರಡು ಕೊಟ್ಟು ಮೂರು ಕೊಂಡರು"॥ ಎಂದರ್ಥ.

ಜ್ಞಾನ--ಅಜ್ಞಾನವೆಂಬ ಶಿರಸ್ಸುಳ್ಳ ಭುವನದ ದೇವ, ದಾನವ, ಮಾನವರು ಮಾಯಾಶಕ್ತಿಯೆಂಬ

ಸ್ತ್ರೀಯೊಡನೆ ಕೂಡಿ ಎಂಬತ್ತುನಾಲ್ಕು ಲಕ್ಷ ಯೋನಿಚಕ್ರದಲ್ಲಿ ಎಡೆಯಾಡುತ್ತಿರ್ಪರೆಂಬುದೀಗ" ಎರಡು ತಲೆಯುಳ್ಳ ಸ್ತ್ರೀಸಂಗದಲ್ಲಿ ಲೋಕಾದಿ ಲೋಕಂಗಳು ಸಂಸಾರ ಮಾಡುತ್ತಿರ್ಪವು ॥ ಎಂಬುದಕ್ಕರ್ಥ. ಆದರೆ, ಜಡಜೀವಾತ್ಮರಾದ ನಿಮ್ಮ ಶರಣರು ಶ್ರೀಗುರುಕರುಣದಿಂ ಸಮರಸವಿಟ್ಟರ್ಚಿಸಿ ಕರಕಮಲದಲ್ಲಿ ಬೆಳಗುವ ಪರಂಜ್ಯೋತಿ ಪರಶಿವಲಿಂಗದಲ್ಲಿ ಶಿಖಿಕರ್ಪೂರದಂತೆ ಲೀಯವಾದರೆಂಬುದೀಗ "ಇಂತಪ್ಪ ಸಂಸಾರ ಮಾಡುವವನಲ್ಲ ನಿಮ್ಮ ಶರಣ" ಎಂದಾಗದೇ "ಇಂತಪ್ಪ ಸಂಸಾರ ಮಾಡುವವನು ನಿಮ್ಮ ಶರಣ" ಎಂದಾಗಿದ್ದರೆ ಇಲ್ಲಿಯ ವ್ಯಾಖ್ಯಾನ ಸರಿಯಾಗಬಹುದಿತ್ತು.

ಟೀಕಾಕಾರನು ವಚನದ ಪ್ರತಿ ಸಾಲಿಗೆ ಸುದೀರ್ಘ ವಿವರಣೆ ನೀಡಲು ಪ್ರಯತ್ನಿಸಿದ್ದಾನಲ್ಲದೇ ಮೇಲಿಂದ ಮೇಲೆ ಜೀವಾತ್ಮರು, ಗುರು ಲಿಂಗ ಜಂಗಮ, ಶಿವಸ್ವರೂಪ ಶಬ್ದಗಳನ್ನು ಬಳಸುವುದರಿಂದ ಓದುಗರಲ್ಲಿ ಗೊಂದಲವುಂಟಾಗುತ್ತದೆ. ಬೇಸರವನ್ನು ತರಿಸುತ್ತದೆ. ಅಲ್ಲದೆ, ವಚನದ ಕೊನೆಯ ಸಾಲಾದ "ಇಂತಪ್ಪ ಸಂಸಾರ ಮಾಡುವವನಲ್ಲ ನಿಮ್ಮ ಶರಣ ಕಾಡನೊಳಗಾದ ಶಂಕರ ಪ್ರಿಯ ಚನ್ನಕದಂಬ ಲಿಂಗನಿರ್ಮಾಯ ಪ್ರಭುವೆ" ಎಂಬುದಕ್ಕೆ ಪ್ರತ್ಯೇಕ ವ್ಯಾಖ್ಯಾನ ನೀಡುವುದರಿಂದ ಅರ್ಥ ಅನರ್ಥವಾಗಲು ಸಾಧ್ಯವಿದೆ. ವಚನದ ಮೂರನೇ ಸಾಲಿಗೆ ಪೂರಕವಾಗಿ "ಇಂತಪ್ಪ ಸಂಸಾರ ಮಾಡುವವನಲ್ಲ ನಿಮ್ಮ ಶರಣ..." ಎಂದಿರುವುದರಿಂದ ಟೀಕಾಕಾರ ಇದನ್ನೇ ಪುನರಾವರ್ತಿಸಿ ಹೇಳಿದ್ದರೆ ಸಾಕಾಗಿತ್ತು, ಆದರೆ, ನಿಮ್ಮ ಶರಣ ಹೇಗಿರಬೇಕೆಂಬುದನ್ನು ಹೇಳಲು ಪ್ರಯತ್ನಿಸಿ – "ಕೊನೆಯಲ್ಲಿ ಇಂತಪ್ಪ ಸಂಸಾರ ಮಾಡುವವನಲ್ಲ..." ಎಂಬುದರಿಂದ ಗೊಂದಲವಾಗುತ್ತದೆ. ಇಂತಹ ಕೆಲವು ಸಂದರ್ಭಗಳಲ್ಲಿ ವ್ಯಾಖ್ಯಾನಕಾರನ ಮನೋಧರ್ಮ ಅರಿತು ಓದುಗರೆ ಸರಿಯಾದ ಅರ್ಥವನ್ನು ಗ್ರಹಿಸಿಕೊಳ್ಳಬೇಕಾಗುತ್ತದೆ.

**ಸಂಕ್ಷೇಪ ಟೀಕಿಗೆ ಉದಾಹರಣೆ:**

**ವಚನ:** ಗಂಡಗೊಂದು ಲಿಂಗ ।
ಹೆಂಡತಿಗೊಂದು ಲಿಂಗ ।
ಮಕ್ಕಳಿಗೊಂದು ಲಿಂಗ ।
ಸ್ನೇಹಿತರು ಗೆಳೆಯರಿಗೊಂದು ಲಿಂಗ ।
ಇಂತೀ ನಾಲ್ವರಿಗೆ ನಾಲ್ಕು ಲಿಂಗವಾದರೆ ಭವಮಾಲೆ ಹರಿಯದು ।
ಇಂತೀ ನಾಲ್ವರಿಗೆ ಒಂದೇ ಲಿಂಗವಾದರೆ ಭವಮಾಲೆ ಹಿಂಗುವುದು ।
ಕಾಡನೊ..... ಪ್ರಭುವೇ॥

**ಟೀಕು:** "ಗುರುವಿಗೊಂದು ಜ್ಞಾನ, ಶಿಷ್ಯಗೊಂದು ಜ್ಞಾನ, ಇಷ್ಟಲಿಂಗಕ್ಕೊಂದು ಜ್ಞಾನ. ತೆತ್ತೀಸ ಗಣಂಗಳಿಗೊಂದು ಜ್ಞಾನ ಇಂತೀ ನಾಲ್ವರಿಗೆ ನಾಲ್ಕು ಜ್ಞಾನವಾದರೆ ಭವಮಾಲೆ ಎಂಬ ಜನನ ಮರಣ

ಹಿಂಗದು।ಇಂತೀ ನಾಲ್ವರಿಗೆ ಏಕಮೇವ ಪರಬ್ರಹ್ಮವೆಂಬ ಜ್ಞಾನ ಪುಟ್ಟಲು ಜನನ ಮರಣವೆಂಬ ಭವಮಾಲೆ ಹಿಂಗುವುದು ಕಾಣಾ ಎಂಬುದೀ ವಚನ ತಾತ್ಪರ್ಯಾರ್ಥ ॥ ಲಿಂಗಧಾರಣ ಸ್ಥಲದಲ್ಲಿ ಮಠಪತಿ ಮಡಿವಾಳಯ್ಯಗಳು ಕಾಯಕ ಮಾಡುತ್ತಿರ್ದ ವಚನ ಪೇಳ್ವೆ।"[೧೮೯] ಇನ್ನೊಂದು ಉದಾಹರಣೆ:

**ವಚನ:** ಶ್ರೀ ಪ್ರಸಾದಿಗೆ ಪರದ್ರವ್ಯದ ಪ್ರೇಮ ಉಂಟೆ?।
ಪರಸ್ತ್ರೀಯರ ಮೋಹವುಂಟೆ?
ಪ್ರಸಾದಿಗೆ ಮಾತಾಪಿತ ಪತಿಸುತರ ಮಮಕಾರವುಂಟೆ?
ಒಬ್ಬರಿಗೆ ಉಂಟು ಒಬ್ಬರಿಗೆ ಇಲ್ಲ।
ಈ ಭೇದವ ನಿಮ್ಮ ಶರಣರೇ ಬಲ್ಲರು।
ಕಾಡನೊಳಗಾದ ಶಂಕರಪ್ರಿಯ ಚನ್ನಕದಂಬ
ಲಿಂಗ ನಿರ್ಮಾಯ ಪ್ರಭುವೇ ॥

**ಟೀಕು:** "ಬಂದಿಯಾತ್ಮಕವಾದ। ಸಕಲ ಕರಣಂಗಳೇ। ಪರದ್ರವ್ಯ। ಮಾಯಾಶಕ್ತಿಯೇ ಪರಸ್ತ್ರೀ। ಪಾಪವೇ ತಾಯಿ, ಪುಣ್ಯವೇ ತಂದೆ। ಅಜ್ಞಾನ ಶಕ್ತಿಯೇ ಸ್ತ್ರೀಯಳು। ಪಂಚಕರಣಂಗಳೇ ಪುತ್ರರು। ಇಂತೀ ಕರಣಂಗಳೆಲ್ಲಾ ಅಜ್ಞಾನಿಗಳಾದ ಜೀವಾತ್ಮರಿಗೆ ಪ್ರೀತಿಕರವಾಗಿಹವು। ಇಂತೀ ಕರಣಂಗಳೆಲ್ಲಾ ಸುಜ್ಞಾನಿಗಳಾದ ಶಿವಶರಣರಿಗೆ ಪ್ರೇಮನಾಸ್ತಿ ಇಂತಿದರ ವಿಚಾರವನು ಶಿವಜ್ಞಾನಿಗಳಾದ ಜ್ಞಾನಕಲಾತ್ಮರು ತಿಳಿಯುವರು ಎಂಬುದೀಗ ವಚನತಾತ್ಪರ್ಯಂ"[೧೯೦]

**ವಚನ:** ಗುರುಪೂಜೆ ಮಾಡುವಾತ ಶಿಷ್ಯನಲ್ಲ,
ಲಿಂಗಪೂಜೆ ಮಾಡುವಾತ ಶರಣನಲ್ಲ,
ಜಂಗಮಪೂಜೆ ಮಾಡುವಾತ ಭಕ್ತನಲ್ಲ,
ಇಂತೀ ತ್ರಿಮೂರ್ತಿಗಳ ಪಾದೋದಕ,
ಪ್ರಸಾದವ ಕೊಂಬುವಾತ ಪ್ರಸಾದಿಯಲ್ಲ,
ಇಂತೀ ಚತುರ್ವಿಧದ,
ಹಂಗುಹಿಂಗದೆ ಭವಹಿಂಗದು,
ಮುಕ್ತಿದೋರದು ಎಂದನಯ್ಯಾ ನಿಮ್ಮ ಶರಣ ಕಾಡನೊಳಗಾದ...... ಪ್ರಭುವೆ॥

**ಟೀಕು:** "ಸುಜ್ಞಾನೋದಯವಾಗಿ ಶ್ರೀ ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಯಾದ ಜ್ಞಾನಕಲಾತ್ಮನು ತಮ್ಮಂಗದಿಂ ಭಿನ್ನವಿಟ್ಟು, ಗುರು, ಲಿಂಗ, ಜಂಗಮವನರ್ಚಿಸಿ ಪಾದೋದಕ, ಪ್ರಸಾದಕೊಂಬುವರಿಗೆ, ಭವಭಾರವೆಂಬ ಜನನ ಮರಣ ನಷ್ಟವಾಗದು, ನಿಜಲಿಂಗೈಕ್ಯದೋರದು. ಮತ್ತಂ॥ ಅಂತಪ್ಪ ಲಿಂಗಾಂಗ ಸಮರಸವನುಳ್ಳ ಸದ್ಭಕ್ತನು ಆ ಗುರು, ಲಿಂಗ, ಜಂಗಮವನ್ನು ತಮ್ಮಂಗದಿಂ ಭಿನ್ನವಿಡದೆ ತನ್ನ ತನು-ಮನ-ಧನದಲ್ಲಿ ಸ್ವಾಯತವ ಮಾಡಿ ಆ ತ್ರಿಮೂರ್ತಿಗಳ ತ್ರಿವಿಧ

ಪ್ರಸಾದವನನುಭವಿಸಿದವರಿಗೆ ಜನನ ಮರಣವೆಂಬ ಭವವಾಲಿ ಹಿಂಗದು, ಪರಶಿವ ಲಿಂಗೈಕ್ಯಪದದೊರಕೊಳ್ಳದು, ಎಂಬುದು.....''[೯೬೧]

**ಶರಣನ ಪ್ರಾಣಲಿಂಗಿಯ ಸ್ಥಲದ ವಚನ:** ಅರಸು ಪ್ರಧಾನಿ ಗೌಡಂಗೆ ಅಂಜದೆ ಬಂಟಂಗೆ ಅಳಕದೆ ಊರನಾಳಿ ದಾಳಿ ಹೋದರು ಚಿಲ್ಲಿಂಗ ಸಂಬಂಧಿಗಳು ಕಾಡನೊಳ... ಪ್ರಭುವೇ॥

**ಟೀಕು:** 'ಸುಜ್ಞಾನೋದಯವಾಗಿ ಶ್ರೀ ಗುರು ಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾದ ಜ್ಞಾನ ಕಲಾತ್ಮರು ಪಂಚಭೂತ ಮಿಶ್ರವಾದ ದೇಹವೆಂಬ ನಗರಕ್ಕೆ ಕರ್ತೃಗಳಾದ ಜೀವಾತ್ಮನೆಂಬ ರಾಜಮನವೆಂಬ ಮಂತ್ರಿ ಕುಬುದ್ದಿಯೆಂಬ ಗೌಡ ಅಷ್ಟಮದ ಅರಿಷಡ್ವರ್ಗಗಳೆಂಬ ಬಂಟರು ಇಂತೀ ದೇಹಕರಣಂಗಳ ಪ್ರಕೃತಿ ವಿಷಯಕ್ಕೆ ಹೆದರದೆ ನಷ್ಟವಮಾಡದೇ ಆ ದೇಹವನಾಶ್ರಯಿಸಿ ರಕ್ಷಿಸಿ ಪರಶಿವಲಿಂಗದಲ್ಲಿ ನಿಷ್ಪತ್ತಿಯಾದವರು ಪ್ರಾಣಲಿಂಗ ಸಂಬಂಧಿಗಳು ಎಂಬುದು॥''[೯೬೨]

**ಐಕ್ಯಸ್ಥಲದ ವಚನ :** ಶಶಿ ರವಿಕಿರಣ ಕೋಟಿ ಮಾಣಿಕದ ದೀಪ್ತಿಯಂತೆ
ಚಂದ್ರ ಪ್ರಕಾಶದಂತೆ ಮಿಂಚಿನಲತೆಯಂತೆ
ಲಿಂಗೈಕ್ಯನ ನಿಲವು ಕಾಡನೊಳಗಾದ
ಶಂಕರಪ್ರಿಯ ಚನ್ನಕದಂಬ....... ಪ್ರಭುವೇ॥

**ಟೀಕು:** "ಚಂದ್ರ ಸೂರ್ಯ ಪ್ರಕಾಶ ಒಂದು ಕೋಟಿನವರತ್ನಯುಕ್ತವಾದ ಮಹಾಮೇರು ಪರ್ವದ ಪ್ರಕಾಶದ ಹಾಂಗೆ ಕರ್ಪೂರಜ್ಯೋತಿ ಮಹಾಬೆಳಗಿನ ಹಾಂಗೆ ಆಕಾಶದ ಕರಿಮಿಗಿಲೊಳಗೆ ಥಳಥಳಿಸಿ ಹೊಳಿಯುವ ಮಿಂಚಿನ ಬಳ್ಳಿಯ ಹಾಂಗೆ ಸುಜ್ಞಾನೋದಯವಾಗಿ ಶ್ರೀ ಗುರುಕಾರುಣ್ಯದಿಂ ಲಿಂಗಾಂಗ ಸಂಬಂಧವಾದ ಘನಲಿಂಗ ಯೋಗಿಯ ನಿಜಸ್ವರೂಪವೆಂಬುವದು.''[೯೬೩] ಎಂದು ಟೀಕಾಕಾರನು ಸಾರರೂಪದಲ್ಲಿ ಸಂಕ್ಷೇಪವಾಗಿ ಟೀಕು ಬರೆದಿರುವುದನ್ನು ಕಾಣಬಹುದು.

**II. ದೀರ್ಘವಾದ ಟೀಕೆಗೆ ಉದಾಹರಣೆ:**

**ವಚನ:** ಕಾಲಿಲ್ಲದೆ ನೂರಾವಂದು ಯೋಜನ ನಡೆದು। ಕಣ್ಣಿಲ್ಲದೆ ಸಾವಿರದ್ಯೆವತ್ತೆರಡು
ಕೋಶವ ನೋಡಿ । ಕೈಯಿಲ್ಲದೆ ಇರುಳು ಬಿಟ್ಟು।
ಹಗಲು ಹಿಡಿದು । ನೀರು ಸುಟ್ಟು ಬೂದಿಯ
ಧರಿಸಬಲ್ಲಾತನೇ ಐಕ್ಯ ಕಾಡನೊಳಗಾದ ಶಂಕರಪ್ರಿಯ
ಚನ್ನಕದಂಬ ಲಿಂಗನಿರ್ಮಾಯ ಪ್ರಭುವೇ ॥

**ಟೀಕು:** "ಶಿವಜ್ಞಾನೋದಯವಾಗಿ ಶ್ರೀಗುರುಕಾರುಣ್ಯವ ಹಡೆದು । ಲಿಂಗಾಂಗ ಸಂಬಂಧಿಯಾದ ಶಿವಶರಣನು ದುಶ್ಚರಿತ್ರವೆಂಬ ಚರಣವು ನಷ್ಟವಾಗಿ । ಸಚ್ಚರಿತ್ರವೆಂಬ ಚರಣದಿಂದ । ಅಂಗಸ್ಥಲ ನಲ್ವತ್ತುನಾಲ್ಕು । ಲಿಂಗಸ್ಥಲ ಐವತ್ತೇಳು ಇಂತೀಕೂಡಲು ನೂರಾಒಂದು ಸ್ಥಲದ ಆಚರಣೆ । ಆಚರಿಸಿ ಎಂಬುದೀಗ । ಕಾಲಿಲ್ಲದ ನೂರಾವಂದು ಯೋಜನ ನಡೆದು ॥ ಅಂತಪ್ಪ ನೂರೊಂದು ಸ್ಥಲದಲ್ಲಿ

ಆ ಬಿನ್ನ ಕ್ರಿಯೆಯಿಂದ ಆಚರಿಸಿದ । ಶಿವಶರಣನು ಭಿನ್ನಜ್ಞಾನದೃಷ್ಟಿ ನಷ್ಟವಾಗಿ ಸುಜ್ಞಾನ ದೃಷ್ಟಿಯಿಂದ ೨, ೬, ೯, ೧೮, ೩೬, ೨೧೬, ೧೦೫೨, ಲಿಂಗದಾಚರಣೆ ಕಂಡು ಎಂಬುದೀಗ । ಕಣ್ಣಿಲ್ಲದೆ ಸಾವಿರದೈವತ್ತೆರಡು ಕೋಶವ ನೋಡಿ ॥ ಇಂತಪ್ಪ ಲಿಂಗಾಚಾರ ಅಳವಟ್ಟು । ಶಿವಶಣರನು । ಇರುಳೆಂದಡೆ । ಅಜ್ಞಾನ । ಅಂತಪ್ಪ ಅಜ್ಞಾನ ಸ್ವರೂಪವಾದ । ಶೈವಲಿಂಗವ ವರ್ಜಿಸಿ । ಸುಜ್ಞಾನ ಸ್ವರೂಪವಾದ । ವೀರಶೈವ ಲಿಂಗವ ಸುಚಿತ್ತ ಹಸ್ತವಿಲ್ಲದ । ಸುಚಿತ್ತ ಹಸ್ತದಿಂದ । ಪಿಡಿದು ಎಂಬುದೀಗ । ಕೈಯಿಲ್ಲದೆ ಇರುಳು ಬಿಟ್ಟು । ಹಗಲು ಹಿಡಿದು । ಅಂತಪ್ಪ ಚಿತ್‌ಸೂರ್ಯ ಸ್ವರೂಪವಾದ । ಇಷ್ಟಲಿಂಗ ಗ್ರಾಹಕನಾದ ಶಿವಶರಣನು । ನೀರೆಂದೊಡೆ ಮನಸ್ಸು । ಅಂತಪ್ಪ ಮನೋಪ್ರಕೃತಿಯ ದಹಿಸಿದ । ಚಿದ್ಭಸ್ಮವನು । ಸರ್ವಾಂಗದಲ್ಲಿ ಲೇಪನಮಾಡುವಾತನೇ । ಲಿಂಗೈಕ್ಯನೆಂಬುದೀಗ । ನೀರು ಸುಟ್ಟು ಬೂದಿ ಧರಿಸಬಲ್ಲಾತನೇ । ಐಕ್ಯನು ॥೪೬॥”[೧೯೪]

**ವಚನ:** ಮುದುಕಿ ಮುದಕನ ಸಂಗದಿಂದೊಂದು ಎಳೆಯ ಶಿಶು ಹುಟ್ಟಿತ್ತು.
ಆ ಶಿಶುವಿನ ಬೆನ್ನಿನಿಂದ ಒಬ್ಬ ಎಳೆಯ ಕುಮಾರಿ ಪುಟ್ಟಿದಳು.
ಆ ಕುಮಾರಿ ಅಣ್ಣನ ಮದುವೆಯಾಗಿ ಮುದುಕನ ಒಡಗೂಡಿ
ಮನೆಯ ಸುಟ್ಟು ಮನೆಯ ಒಡೆಯನ ಕೊಂದು ಒಡತಿಯನುಂಗಿ
ತಾಯಿಯ ಕೊಂದು ಹೊಲಗೇರಿ ಹೊಕ್ಕು ಕುಲಗೆಟ್ಟು ಹೊಲೆಯನ
ಸಂಗವ ಮಾಡಿ ಸತ್ತು ಹೋದ ಭೇದವನು ಕಾಡನೊಳಗಾದ ಶಂಕರಪ್ರಿಯ
ಚನ್ನಕದಂಬ ಲಿಂಗನಿರ್ಮಾಯ ಪ್ರಭುವಿನ ಶರಣರು ಬಲ್ಲರಲ್ಲದೆ ಮಿಕ್ಕಿನ
ಜಡಮತಿ ಜನರೆತ್ತ ಬಲ್ಲರಯ್ಯಾ ॥

**ಟೀಕು:** ಶಿವಶಕ್ತಿ ಸಮೇತವಾದ ಚಿದ್ಘನಲಿಂಗವೆಂಬ ಪುರುಷ ಚಿಚ್ಛಕ್ತಿ ಎಂಬ ಸ್ತ್ರೀ ಸಮರಸಭಾವದಿಂ ಏಕಮೇವ ಪರಬ್ರಹ್ಮವೆಂಬ ಸುಜ್ಞಾನ ಪ್ರಾಣಲಿಂಗವೆಂಬ ಮಗು ಉದ್ಭವಿಸಿತ್ತು ಎಂಬುದೀಗ ಮುದುಕೆ ಮುದುಕನ ಸಂಗದಿಂದ ಒಂದು ಎಳೆಯ ಶಿಶು ಪುಟ್ಟಿತ್ತು । ಅಂತಪ್ಪ ಪ್ರಾಣಲಿಂಗವೆಂಬ ಕುಮಾರನ ಪಶ್ಚಿಮ ದಿಶೆಯಿಂದ ಮೂಲಜ್ಞಾನಸ್ವರೂಪ ಓರ್ವಳಾದ ಶರಣ ಸತಿಯೆಂಬ ಸ್ತ್ರೀ ಉದ್ಭವಿಸಿದಳು ಎಂಬುದೀಗ ಆ ಶಿಶುವಿನ ಬೆನ್ನಿನಿಂದ ಒಬ್ಬ ಎಳೆಯ ಕುಮಾರಿ ಪುಟ್ಟಿದಳು. ಅಣ್ಣನೆಂದೊಡೆ ಇಷ್ಟಲಿಂಗ, ತಮ್ಮನೆಂದೊಡೆ ಪ್ರಾಣಲಿಂಗ ಅದೆಂತೆಂದೊಡೆ ಶ್ರೀಗುರುಕಾರುಣ್ಯದಿಂ ಪ್ರಥಮದಲ್ಲಿ ಇಷ್ಟಲಿಂಗವು ತನುವಿನಲ್ಲಿ ಸ್ವಾಯತವಾದ ಬಳಿಕ ಮನದಲ್ಲಿ ಪ್ರಾಣಲಿಂಗ ಸ್ವಾಯತವಾದ ಕಾರಣ ಆ ಇಷ್ಟಲಿಂಗಕ್ಕೆ ಅಣ್ಣ, ಪ್ರಾಣಲಿಂಗಕ್ಕೆ ತಮ್ಮನೆಂಬ ನಾಮವಾಯಿತ್ತು ಅಂತಪ್ಪ ಪ್ರಾಣಲಿಂಗ ಸಮೇತವಾದ ಚಿದ್ರೂಪ ಶರಣಸತಿಯೆಂಬ ಸ್ತ್ರೀ, ಶ್ರೀಗುರುಮುಖದಿಂದ ಇಷ್ಟಬ್ರಹ್ಮದಲ್ಲಿ ಸಮರಸವಾಗಿ ಎಂಬುದೀಗ ಆ ಕುಮಾರಿ ಅಣ್ಣನ ಮದುವೆಯಾಗಿ ॥ ಅಂತಪ್ಪ ಇಷ್ಟಲಿಂಗದಲ್ಲಿ ಅವಿರಳಸಂಬಂಧಿಯಾದ ಚಿದ್ರೂಪ ಶರಣನು ಚಿದ್ಘನಲಿಂಗದಲ್ಲಿ ಸಿಖಿಕರ್ಪುರ ಸಂಯೋಗದ ಹಾಗೆ ಬೆರೆದು ತನುತ್ರಯವೆಂಬ ಗ್ರಹವ ಜ್ಞಾನಾಗ್ನಿಯಲ್ಲಿ ದಹಿಸಿ ಎಂಬುದೀಗ ಮುದುಕನ ಒಡಗೂಡಿ ಮನೆಯ ಸುಟ್ಟು ॥ ಆ ತನುತ್ರಯವೆಂಬ ಗ್ರಹವ ದಹಿಸಿದ

ಶಿವಜ್ಞಾನಿ ಶರಣನು ಆ ತನುತ್ರಯ ಯುಕ್ತವಾದ ದೇಹಕ್ಕೆ ಕರ್ತೃವಾದ ಜೀವಾತ್ಮನ ಜೀವ, ಭಾವ ನಷ್ಟವ ಮಾಡಿ ತನಗೆ ಮಾತೃಸ್ಥಾನವಾದ ಚಿಚ್ಛಕ್ತಿಯನವಗ್ರಹಿಸಿ ಎಂಬುದೀಗ ಮನೆಯ ಒಡೆಯನ ಕೊಂದು ಒಡತಿಯ ನುಂಗಿ ॥ ಆ ಚಿಚ್ಛಕ್ತಿಯಲ್ಲಿ ಅವಿರಳ ಸಂಬಂಧಿಯಾದ ಶಿವಶರಣನು ದೇಹ ಸಂಬಂಧಿಯಾದ ಜೀವಾತ್ಮಂಗೆ ಮಾತೃಸ್ಥಾನವಾದ ಮಾಯಾಶಕ್ತಿಯೆಂಬ ಮಾಲೆಯ ಹೊಕ್ಕು ಎಂಬುದೀಗ ತಾಯಿಯ ಕೊಂದು ಹೊಲೆಗೇರಿಯ ಹೊಕ್ಕು ॥ ಅಂತಪ್ಪ ಚಿದ್ಗ್ರಾಮವೆಂಬ ಬ್ರಹ್ಮರಂಧ್ರದಲ್ಲಿ ಪ್ರವೇಶಿಸಿಯಾದ ಶರಣನು ಇರುವೆ ಮೊದಲು ಆನೆ ಕಡೆ ಎಂಭತ್ತುನಾಲ್ಕುಲಕ್ಷ ಜೀವರಾಶಿಯ । ಜಾತಿ ವಂಶದ ಉತ್ಪತ್ಯದ ಜನನ ಮರಣ ನಷ್ಟವಾಗಿ ಸರ್ವಸೂತಕ ರಹಿತವಾದ ನಿಷ್ಕಲಲಿಂಗದಲ್ಲಿ ನೀರು ನೀರು ಕೂಡಿದಂತೆ ಬೆರೆದು ಆ ಲಿಂಗದಲ್ಲಿ ಮನವಳಿದು ಆವಕಡಿಯು ಗಮನಿಯಾದನೆಂಬುದ ಪರಶಿವಯೋಗಿಗಳಾದ ಜ್ಞಾನಕಲಾತ್ಮರು ತಿಳಿವುದಲ್ಲದೆ ಉಳಿದ ಭವಭಾರಿಗಳಾದ ಭಿನ್ನ ಭಾವದ ಜೀವಾತ್ಮರು ಅರಿಯರು ಎಂಬುದೀಗ ಕುಲಗೆಟ್ಟು ಹೊಲೆಯನ ಸಂಗವ ಮಾಡಿ ಸತ್ತು ಹೋದ ಭೇದವನು ನಿರ್ಮಾಯ ಪ್ರಭುವಿನ ಶರಣರೇ ಬಲ್ಲರಲ್ಲದೆ ಮಿಕ್ಕಿನ ಜಡ ಮತಿಗಳೆತ್ತ ಬಲ್ಲರಯ್ಯಾ ॥೨೮॥೨೯॥"[೧೯೫]

**ಐಕ್ಯನ ಶರಣ ಸ್ಥಲದ ವಚನ:**

> ಒಕ್ಕಲಿಗನ ಸಂಗದಲ್ಲಿದ್ದವರಿಗೆ ಬಡತನವಿಲ್ಲ. ಕೂಲಿಮನುಜರ
> ಸಂಗದಲ್ಲಿದ್ದವರಿಗೆ ದ್ರವ್ಯತಾನಿಲ್ಲ. ಒಕ್ಕಲಿಗನ ಸಂಗದಲ್ಲಿದ್ದವರಿಗೆ
> ಸಾವಿಲ್ಲ. ಕೂಲಿಮನುಜರ ಸಂಗದಲ್ಲಿದ್ದವರಿಗೆ ಸಾವುಂಟು.
> ನೋಡೆಂದನಯ್ಯ ಕಾಡನೊಳಗಾದ ಶಂಕರಪ್ರಿಯ ಚನ್ನಕದಂಬ
> ಲಿಂಗನಿರ್ಮಾಯ ಪ್ರಭುವೇ॥ (ಪುಟ – ೩೭೮)

**ಟೀಕು:** "ಒಕ್ಕಲಿಗನೆಂದಡೆ ಭಿನ್ನ ಭಾವದ ಜೀವಾತ್ಮರು. ಅದೆಂತೆಂದಡೆ ಭೂಮಿಯ ಮಾಡುವ ಒಕ್ಕಲಿಗನಲ್ಲಿ ಜೋಳ, ಗೋದಿ, ಕಡ್ಲಿ ಮೊದಲಾದ ಹದಿನೆಂಟು ಜೀನಸ ಧಾನ್ಯಪದಾರ್ಥ ಉಂಟೆಂಬ ಹಾಗೆ ತನುಪ್ರಕೃತಿಯುಳ್ಳ ಜೀವಾತ್ಮರಲ್ಲಿ ರಾಜಸಹಂಕಾರ, ಸಾತ್ವಿಕಹಂಕಾರ, ತಾಮಸಹಂಕಾರ ಮೊದಲಾದ ಅರವತ್ತಾರುಕೋಟಿ ಕರಣಂಗಳ ಸಂಚಾರವುಂಟು. ಇಂತಪ್ಪ ಕರಣಂಗಳ ಪ್ರಕೃತಿಯುಳ್ಳ ಗುರುಮೂರ್ತಿಗಳ ಸಂಗ ಸಮರಸದಲ್ಲಿರ್ದ ಜೀವಾತ್ಮರಿಗೆ ಆತ್ಮದ್ರವ್ಯವೆಂಬ ಕರಣಂಗಳ ಸಂಚಾರ ನಷ್ಟವಾಗದೆ ಕರಣಪ್ರಕೃತಿಯುಳ್ಳ ಜೀವಾತ್ಮರಾಗಿರ್ಪರು ಎಂಬುದೀಗ ಒಕ್ಕಲಿಗನ ಸಂಗದಲ್ಲಿದ್ದವರಿಗೆ ಬಡತನವಿಲ್ಲ. ಕೂಲಿಮನುಜರೆಂದಡೆ ಶಿವಜ್ಞಾನ ಸಂಪನ್ನರಾದ ಸಜೀವಾತ್ಮರು ಅದೆಂತೆಂದಡೆ ಕೂಲಿ ಮಾಡುವ ಮನುಜರು ಉದಯಾಸ್ತಮಾನಪರಿಯಂತರವಾಗಿ ಆರ ದಂಥೆಯಾದಡೆಯು ಅವರು ಹೇಳಿದಹಾಗೆ ಅವರು ಮಾಡುವರು. ಅಸ್ತಮಾನವಾದ ಮೇಲೆ ಅವರ ಹೊಲಮನಿ ಬದುಕಿನ ಚಿಂತೆ. ತ್ರಿವಿಧಾವಸ್ಥೆಯಲ್ಲಿ ತಿಲಾಂಶ ಚಿಂತಿಸರು ಎಂಬ ಹಾಗೆ ಶಿವಜ್ಞಾನೋದಯವಾದ ಜೀವಾತ್ಮರುಗಳು ದೇಹದಲ್ಲಿರುವ ಪರಿಯಂತರದಲ್ಲಿ ಆ ದೇಹದ ಸಂರಕ್ಷಣ ನಿಮಿತ್ಯವಾಗಿ ಪ್ರಪಂಚದ ವ್ಯಾಪಾರ ಮಾಡುವದಲ್ಲದೆ ಸತಿ ಸುತರ ಮಮಕಾರವ ಪಿಡಿದು ಇಂದಿಗೆಂತು ನಾಳಿಗೆಂತು ಎಂಬ ಅಪೇಕ್ಷೆವಿಟ್ಟು ಪ್ರಪಂಚವ ಮಾಡಲಿಲ್ಲ.

ಇಂತಪ್ಪ ಶಿವಜ್ಞಾನಿಗಳ ಸಂಗಸಮರಸದಲ್ಲಿರ್ಧ ಸಜೀವಾತ್ಮರುಗಳಿಗೆ ಆತ್ಮದ್ರವ್ಯವೆಂಬ ಕರಣಂಗಳ ಪ್ರಕೃತಿ ನಷ್ಟವಾಗಿರ್ಪುದು ಎಂಬುದೀಗ ಕೂಲಿಯ ಮನುಜರ ಸಂಗದಲ್ಲಿದ್ದವರಿಗೆ ದ್ರವ್ಯತಾನಿಲ್ಲವು. ಅಂತಪ್ಪ ಭಿನ್ನಭಾವದ ತನುಮನಧನದ ಪ್ರಕೃತಿಯುಳ್ಳ ಗುರುಮೂರ್ತಿಗಳಿಂದ ದೀಕ್ಷೋಪದೇಶವ ಪಡಕೊಂಡ ಶಿಷ್ಯೋತ್ತಮರಿಗೆ ಜೀವಭಾವ ನಷ್ಟವಾಗದೆ ಇರ್ಪರು ಎಂಬುದೀಗ ಒಕ್ಕಲಿಗನ ಸಂಗದಲ್ಲಿದ್ದವರಿಗೆ ಸಾವಿಲ್ಲವು. ಅಂತಪ್ಪ ಶಿವಜ್ಞಾನೋದಯವಾದ ಗುರುಮೂರ್ತಿಗಳಾಗಲಿ, ಚರಮೂರ್ತಿಗಳಾಗಲಿ ಅಥವಾ ಭಕ್ತರಾಗಲಿ ಆರಾದಡೇನು ಅಂತಪ್ಪನವರ ಸಂಗಸಮರಸದಿಂ ದೀಕ್ಷೋಪದೇಶವ ಪಡಕೊಂಡವರು ಭಕ್ತಗಣಂಗಳು ಮೊದಲಾದ ವಿಪ್ರ ಮೊದಲು ಸ್ವಪಚ ಕಡೆಯಾಗಿ ಆವಕುಲಜಾತಿಯವರು ಆದಡೇನು ಜೀವಭಾವ ನಷ್ಟವಾಗಿ ಜೀವಸ್ವರೂಪಿಗಳಾರ್ಪರು ಕಾಣೆಂದು ಶಿಷ್ಯಂಗೆ ಶ್ರೀಗುರು ಪೇಳುವನು ಕೂಲಿಯ ಮನುಜರ ಸಂಗದಲ್ಲಿದ್ದವರಿಗೆ ಸಾವುಂಟು ನೋಡೆಂದನಯ್ಯಾ ಕಾಡನೊಳಗಾದ ಶಂಕರಪ್ರಿಯ ಚನ್ನಕದಂಬ ಲಿಂಗನಿರ್ಮಾಯ ಪ್ರಭುವೇ ॥೭೮॥ಕಾ॥ಶಿ॥ಟೀ॥೭೩॥"[೧೯೬]

**ಶಿವಶರಣರನ್ನು ಉಲ್ಲೇಖಿಸುವ ಟೀಕೆ:**

**ವಚನ:** ನಿನ್ನಿನವರು ಇಂದಿನವರು ನಾಳಿನವರು ಹೋದ ದಾರಿ
ಒಂದಲ್ಲದೇ ಎರಡಿಲ್ಲ ನೋಡೆಂದನಯ್ಯಾ
ಕಾಡನೊಳಗಾದ ಶಂಕರಪ್ರಿಯ ಚನ್ನಕದಂಬ
ಲಿಂಗ ನಿರ್ಮಾಯ ಪ್ರಭುವೇ॥

**ಟೀಕು:** "ನಿನ್ನಿನವರು ಎಂದಡೆ ಹಿಂದಕ್ಕೆ ಕಲ್ಯಾಣ ನಗರದಲ್ಲಿರ್ದ ಬಸವಾದಿ ಏಳುನೂರೆಪ್ಪತ್ತು ಪ್ರಮಥಗಣಂಗಳು ಇಂದಿನವರೆಂದಡೆ ತುರ್ತ ಈ ಕಲಿಯುಗದೊಳಗೆ ಸಿದ್ದೇಶ್ವರ ಸ್ವಾಮಿಗಳು ಶಿಂಗಳಾಪುರದ ಬಸವರಾಜ ದೇವರು, ಘನಲಿಂಗದೇವರು, ಬೋಳಬಸವೇಶ್ವರ ಸ್ವಾಮಿಗಳು, ಶೀಲವಂತ ಚನ್ನಮಲ್ಲಯ್ಯಗಳು, ಷಣ್ಮುಖ ಸ್ವಾಮಿಗಳು ಇಂತೀ ಶಿವಗಣಂಗಳು ಲಿಂಗೈಕ್ಯರಾಗಿ ಇರುವಲ್ಲಿ ಗುಪ್ತರಾಗಿರುವರು. ನಾಳಿನವರು ಎಂದಡೆ ಮರ್ತ್ಯಲೋಕದಲ್ಲಿ ಭಿನ್ನಭಕ್ತಿಯ ಮಾಡಿ ಸ್ವರ್ಗಲೋಕದಲ್ಲಿ ಫಲಪದವಿಯ ಪಡೆದು ಇರುವ ಪುಣ್ಯಪುರುಷರು ಇಂತಿವರು ಮೊದಲಾದ ಶಿವಜ್ಞಾನಿಗಳು ಆರಾದಡೇನು ಶ್ರೀಗುರುಕಾರುಣ್ಯವ ಪಡೆದು ಲಿಂಗಾಂಗಸಂಬಂಧಿಗಳಾಗಿ ಭಿನ್ನ ಭಾವವಳಿದು ಆ ಭಿನ್ನ ಭಾವದಿಂದಾಚರಿಸುವ ಮಾರ್ಗವೇ ಮೋಕ್ಷಮಾರ್ಗ ಇತರವಾಗಿ ಆಚರಿಸುವ ಮಾರ್ಗವೆಲ್ಲ ಎಂಭತ್ತುನಾಲ್ಕುಲಕ್ಷದ ಭವಬಂಧನದ ಮಾರ್ಗವೆಂದು ಶಿಷ್ಯಂಗೆ ಶ್ರೀಗುರು ಪೇಳುತ್ತಿರ್ದನೆಂಬುದೀಗ ಈ ವಚನದ ತಾತ್ಪರ್ಯಾರ್ಥ".[೧೯೭]

ವಚನಕಾರ ಶ್ರೀ ಕಾಡಸಿದ್ದೇಶ್ವರರು ಅಲ್ಲಮಪ್ರಭುದೇವರು ಮತ್ತು ತೋಂಟದ ಸಿದ್ಧಲಿಂಗರಂತೆ ಬೆಡಗಿನ ವಚನ ರಚನೆಯಲ್ಲಿ ಸಂಪೂರ್ಣ ಪಳಗಿದ್ದಾರೆ. ನಾನಾ ಕಾಯಕ ಮಾಡುವ ಶರಣರ ಪ್ರಸ್ತಾಪದೊಂದಿಗೆ ಕಾಯಕಜೀವಿ ಶರಣರನ್ನು ಜಾತಿ ಮತಗಳ ಅಡ್ಡಗೋಡಿಗೆ ಜೋತುಬೀಳಿಸದೇ ವಚನಕಾರರ ಸಮಾನತೆಯ ತತ್ವವನ್ನು ಇಲ್ಲಿ ಪ್ರತಿಪಾದಿಸಿದ್ದಾರೆ. ಸಂಪ್ರದಾಯವನ್ನು ಧಿಕ್ಕರಿಸಿದ ಬಸವಾದಿ ಶರಣರಂತೆ ಶ್ರೀ ಕಾಡಸಿದ್ದೇಶ್ವರರು ವೀರಶೈವ ಷಟಸ್ಥಲ ಸಿದ್ಧಾಂತವನ್ನು ಪ್ರತಿಪಾದಿಸುತ್ತಾ

ವೈಚಾರಿಕ ನೆಲೆಯಲ್ಲಿ ಧರ್ಮತತ್ವಗಳನ್ನು ಆಚರಣೆಗೆ ತರಲು ಕೆಲವೊಮ್ಮೆ ನಿಷ್ಠುರವಾದ ವಚನಗಳನ್ನು ರಚಿಸಿ ಸಂಪ್ರದಾಯ ಶರಣರಿಗೆ ಚಾಟಿ ಏಟು ನೀಡಿದ್ದಾರೆ. ಇದನ್ನು ಗಮನಿಸಿದ ವ್ಯಾಖ್ಯಾನಕಾರನು ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ಕಠೋರವಾದ ಶಬ್ದಗಳಲ್ಲಿ ಟೀಕನ್ನು ಬರೆದಿರುವದನ್ನು ಕಾಣಬಹುದಾಗಿದೆ.

**ಮಾಯಾವಿಲಾಸ ವಿಡಂಬನ ಸ್ಥಲದಲ್ಲಿಯ ವಚನದಲ್ಲಿ**

"ಹೇಸಕಿ ಹೊಲಿ ಸಂಸಾರದಲ್ಲಿ ಶಿಲ್ಕಿ ಮಲತ್ರಯದಾಶೆಗೆ ಹೊಡದಾಡಿ ಹೊತ್ತುಗಳೆದು

ಸತ್ತು ಹೋಗುವ ಕತ್ತೆಗಳಿಗಿನ್ನೆತ್ತಣ ಮುಕ್ತಿ ಹೇಳಾ॥"[೯೮] ಎಂದು ವಿಡಂಬಿಸಿದ್ದಾರೆ. ಇನ್ನೆರಡು ಟೀಕುಗಳ ಉದಾಹರಣೆ ನೋಡಬಹುದು.

**ಟೀಕು:** "ಶಿವಶಿವಾ ನಾವು ಗುರುಗಳು, ನಾವು ಜಂಗಮಲಿಂಗ ಪ್ರೇಮಿಗಳು ।ನಾವು ಪಟ್ಟದಯ್ಯಗಳು । ನಾವು ಚರಂತಿಯ ಹಿರಿಯರು, ನಾವು ಸದಾಚಾರ ಸತ್ಯ ಸದ್ಭಕ್ತರೆಂದು ಬೊಗಳುತ್ತಿಪ್ಪಿರಿ । ಅದೆಲ್ಲಿಯದೋ ಸದಾಚಾರ । ಮಂಣ ಹಿಡಿದವಂಗೆ ಗುರುವಿಲ್ಲ । ಹೆಂಣು ಹಿಡದವಂಗೆ ಲಿಂಗವಿಲ್ಲ । ಹೊನ್ನು ಹಿಡಿದವಂಗೆ ಜಂಗಮವಿಲ್ಲ । ಇಂತಿ ತ್ರಿವಿಧ ಮಲವ ಕಚ್ಚಿದ ಸೂಕರ ಶುನಿಗಳಿಗೆ ತೀರ್ಥ ಪ್ರಸಾದ ಅದೆಲ್ಲಿಯದೋ ಇಲ್ಲಾಗಿ ಅಷ್ಟಾವರಣವು ಇಲ್ಲಾ । ಇಂತಪ್ಪ ಪಂಚಮಾಹಾಪಾತಕರು ।...... ಎಂಬತ್ತುನಾಲ್ಕು ಲಕ್ಷದ ಭವಮಾಲೆಯಲ್ಲಿ ಬಪ್ಪದು ತಪ್ಪದು..."[೯೯] ಎಂದು ಹೇಳುತ್ತಾರೆ.

"ಹೊನ್ನು ನನ್ನದು, ಹೆಣ್ಣು ನನ್ನದು, ಮಣ್ಣು ನನ್ನದು ಎಂದು ನಚ್ಚಿ ಮೆಚ್ಚಿಕೊಂಡು ಕೊಟ್ಟು । ಎರಡು ಬಡ್ಡಿಯ ತೆಗೆದುಕೊಂಡು ಘಳಿಸಿ, ಘಳಿಸಿ ತುಂಡ ಅಧಮ ಸೂಳೇರಬಾಯ ತೊಂಬಲ ಉಚ್ಚಿ ಹೊಯುವ ಬಚ್ಚಲ ಹರಿಗೆ ಮೆಚ್ಚಿ ಮರಳಾಗಿ । ಘಳಿಸಿದಂಥ ದ್ರವ್ಯವನು । ಸತ್ಪಾತ್ರಕ್ಕಲ್ಲದೆ ಅಪಾತ್ರಕ್ಕೆ ಕೊಟ್ಟು ಕೆಟ್ಟು ನಷ್ಟವಾಗಿ ಹೋಗುವ ಮೂಳ ಹೊಲಿಯರಿಗೆ ಇನ್ನೆತ್ತಣ ಶಿವಜ್ಞಾನವೆಂದನಯ್ಯಾ ।....."[೧೦೦] ಎನ್ನುವಲ್ಲಿ ಕರ್ಣ ಕಠೋರವಾದ ಶಬ್ದಬಳಸಿ ಟೀಕಿಸಿರುವುದನ್ನು ಕಾಣಬಹುದಾಗಿದೆ.

ವಚನಕಾರ ಕಾಡಸಿದ್ದೇಶ್ವರರ ನೇರವಾದ ನುಡಿಗಳನ್ನು ಮೀರಿಸುವ ರೀತಿಯಲ್ಲಿ ಟೀಕಾಕಾರನು ಪ್ರಯತ್ನಿಸಿರುವುದನ್ನು ಕಾಣಬಹುದಾಗಿದೆ. ಸಂಸಾರ ಹೇಯ ಸ್ಥಲದ ವಚನ ಟೀಕೆಯಲ್ಲಿ – "ಚಿದ್ರೂಪನಾದ ಶರಣನು... ಮಾತಾಪಿತೃಗಳ ಸಂಯೋಗದಿಂದುದಯವಾಗಲಿಲ್ಲ । ಮತ್ತಂ ಇದಲ್ಲದೆ ಅಂಗ, ಲಿಂಗ, ಗುರು, ಶಿಷ್ಯ, ಭಕ್ತರೆಂಬ ಭಿನ್ನಭಾವದ ಶೈವ ಗುರುಗಳ ಕರಕಮಲದಲ್ಲಿ ಉತ್ಪತ್ತಿಯಾಗಲಿಲ್ಲ । ಎಂಬುದೀಗ ಇಬ್ಬರ ಸಂಗದಲ್ಲಿ ಹುಟ್ಟಲಿಲ್ಲ ॥ ಇಂತಪ್ಪ ಭಿನ್ನಭಾವದಾಚಾರ ಗುರುವರ್ಗವನಳಿದು ಲಿಂಗಾಂಗ ಸಮರಸ ಭಾವಮಾದ ಶ್ರೀಗುರು ಕಮಲದಲ್ಲಿ ಉತ್ಪತ್ತಿಯಾದ ಶಿವಶರಣನು....."[೧೦೧] ಎಂದು ವ್ಯಾಖ್ಯಾನಿಸುವ ಮೂಲಕ ಶಿವಶರಣನಾದವನು ದ್ವೈತಭಾವ ಅಳಿದು ಅದ್ವೈತಭಾವ ತಾಳಿರಬೇಕೆಂಬುದನ್ನು ಸ್ಪಷ್ಟಪಡಿಸುತ್ತಾನೆ. ಅಲ್ಲದೇ ಶೈವ ಗುರುಗಳು ಅಂಗ – ಲಿಂಗ, ಗುರು – ಶಿಷ್ಯರಲ್ಲಿ ಭಿನ್ನಭಾವ ತಾಳಿದವರಾಗಿರುತ್ತಾರೆಂಬುದನ್ನು ಅಂದರೆ, ದ್ವೈತತತ್ವದಲ್ಲಿ ವಿಶ್ವಾಸವುಳ್ಳವರೆಂಬುದನ್ನು ಟೀಕಾಕಾರನು ವಿಷದಪಡಿಸುತ್ತಾನೆ.

ಗುರುಕಾರುಣ್ಯ ಸ್ಥಲದ ವಚನ ಟೀಕಿನಲ್ಲಿ “ಈ ಲೋಕದೊಳಗೆ ಗುರುವೆಂಬಾತನು ಭಕ್ತರಿಗೆ ದೀಕ್ಷೆಯ ಮಾಡಿ ಪೂರ್ವ ಜನ್ಮವಳಿದು ಪುನರ್ಜಾತನ ಮಾಡಿದೆವೆಂಬರು । ಜಂಗಮ ಲಿಂಗಗಳಿಗೆ ಚರಂತಿ ಹಿರಿಯರು ಗುರುವೆಂಬಾತರು ಉಭಯತರು ಕೂಡಿ ಅಯ್ಯತನ ಮಾಡಿದೆವು ಎಂಬರು । ಅವರೇನು ಪೂರ್ವದಲ್ಲಿ ಕಪ್ಪಾಗಿದ್ದರೇ? ಈಗೇನು ಕೆಂಪಗಾದರೋ? ಪೂರ್ವದಲ್ಲಿ ಬಿಳುಪಾಗಿದ್ದರೇ? ಈಗೇನು ಕಪ್ಪಾದರೇ? ಎಲಾ ದಡ್ಡ ಪ್ರಾಣಿಗಳಿರಾ । ಇದೆನು ವೀರಶೈವ ಮಾರ್ಗದಲ್ಲಿ ಇದು ಶೈವ ಮಾರ್ಗ । ಇನ್ನು ವೀರಶೈವ ಮಾರ್ಗದಾಚಾರ ಬಲ್ಲರೆ ಹೇಳಿರಿ । ಅರಿಯದಿದ್ದರೆ ಕೇಳಿರಿ ।”[೨೦೨] ಎಂದು ವ್ಯಾಖ್ಯಾನಕಾರನು ಶಿಷ್ಯರಿಗೆ ದೀಕ್ಷೆ ನೀಡುವೆ, ಅಯ್ಯಾಚಾರ ಮಾಡುವೆವೆಂಬ ಗುರುಗಳ ಕಪಟತನವನ್ನು ಬಯಲು ಮಾಡುವಂತಿದೆ. ಅದ್ವೈತ ಭಾವದ ವೀರಶೈವವನ್ನು ಅನುಸರಿಸುವವರು ದ್ವೈತಭಾವದ ಶೈವವನ್ನು ಅನುಸರಿಸಿ ನಡೆಯುವುದು ಸರಿಯಲ್ಲವೆಂಬುದನ್ನು ನೇರವಾಗಿ ಹೇಳುತ್ತಾನೆ.

ಇದೇ ಗುರುಕಾರುಣ್ಯ ಸ್ಥಲದ “.....ಕಲ್ಲಕುಟಿಗನಿಂದ ಕಟಿಸಿ ಲಿಂಗವೆಂದು ಹೆಸರಿಟ್ಟು... ಜಡಪಾಷಾಣಲಿಂಗವ ಭಕ್ತನ ಅಂಗದ ಮೇಲೆ ಸ್ವಾಯತವ ಮಾಡುವಾತ ಗುರುವಲ್ಲ। ಆತ ಭಕ್ತನಲ್ಲ ।ಅದು ಲಿಂಗವಲ್ಲ ।ಅದೇನು ಕಾರಣವೆಂದಡೆ ಶಿಲಾಭಾವ ಕಳೆದು ಕಲಾಭೇದವ ತುಂಬಿ ಜೀವಭಾವವನಳಿದು ಶಿವಭಾವ ತುಂಬಿ ಅಂಗದಲ್ಲಿ ಲಿಂಗ ಕಳೆದೋರಿ । ಲಿಂಗದಲ್ಲಿ ಅಂಗಕಳೆದೋರಿ ಅಂಗಲಿಂಗೆಂಬುಭಯಭಾವನಳಿದು ಲಿಂಗವ ಕೊಡಬಲ್ಲಡೆ ಆತ ಗುರು ಎಂಬೆ । ಇಂತೀ ಭೇದವ ತಿಳಿದು ಲಿಂಗವ ಕೊಳಬಲ್ಲಡೆ ಶಿಷ್ಯನೆಂಬೆ । ....”[೨೦೩] ಎಂಬ ಅಭಿಪ್ರಾಯದ ಮೂಲಕ ಗುರು – ಶಿಷ್ಯರೆಂದರೆ ಯಾರೆಂಬ ಸತ್ಯವನ್ನು ಸ್ಪಷ್ಟಪಡಿಸುತ್ತಾನೆ.

ಐಕ್ಯಸ್ಥಲ ವಚನದ ಟೀಕಿನಲ್ಲಿ – “ಹೊಂನು ಹೆಣ್ಣು ಮಂಣೆಂಬ ತ್ರಿವಿಧ ಮಲವ ಪಿಡಿದು ಆಚರಿಸುವುದು ಲೌಕಿಕವಲ್ಲ, ಸತಿಸುತರ ಪಿಡಿದು ಪ್ರಪಂಚಿನ ವ್ಯವಹಾರದಲ್ಲಿರ್ದಡೆಯೂ ಲೌಕಿಕವಲ್ಲ. ಲೌಕಿಕವೆಂದಡೆ ತನ್ನ ಸ್ವರೂಪ ಪರಂಜ್ಯೋತಿ ಸ್ವರೂಪವೆಂಬುದು ಮರದು ಪಂಚಭೂತ ದೇಹಸ್ವರೂಪ ನಾನೆಂದು ಇರುವುದೇ ಲೌಕಿಕ. ಶ್ರೀ ಗುರುಕರುಣದಿಂ ಪಡಕೊಂಡ ಕರಕಮಲದ ಲಿಂಗಾಂಗದ ಸಮರಸವನರಿಯದೆ ಅಂಗಮುಖದಲ್ಲಿ ಸಂಚರಿಸುವುದು ಲೌಕಿಕ. ಈ ವಚನದ ತಾತ್ಪರ್ಯಾರ್ಥವನರಿಯದವರು ಲೌಕಿಕರು ನೋಡೆಂದನಯ್ಯಾ...... ಪ್ರಭುವೇ॥”[೨೦೪] ಎನ್ನುವ ಅಭಿಪ್ರಾಯಗಳಿಂದ ಲೌಕಿಕರೆಂಬುದಕ್ಕೆ ಅರ್ಥಪೂರ್ಣವಾದ ವಿವರಣೆ ನೀಡಿರುವುದನ್ನು ಕಾಣಬಹುದು.

**ಟೀಕಿನಲ್ಲಿ ಬಳಸಲಾದ ಗಾದೆಗಳು:**

* “ಹಗಲು ಹಸುವಿನ ಚಿಂತೆ ಇಲ್ಲ । ಇರುಳು ನಿದ್ರೆಯ ಚಿಂತೆ ಇಲ್ಲ” (ಪುಟ.೨೦)
* “ಹಿತ್ತಲಕ್ಕೆ ಹಳೆಯೆಮ್ಮಿ ಮನಸೋತ ಹಾಗೆ/ಹಾಳಕೇರಿಗೆ ಹಂದಿ ಜಪ ಇಟ್ಟಹಾಗೆ” (ಪುಟ.೧೯)
* “ಉದಕದೊಳಗಣ ತಾವರೆಯಂತೆ ನಿರ್ಲೇಪನಾಗಿರ್ಪನು ಜ್ಞಾನಕಲಾತ್ಮನು” (ಪುಟ.೨೩)
* “ಹಂದಿ ಬಾಯೊಳಗಿನ ತುತ್ತು ನಾಯಿ ಬಂದು ಕಚ್ಚಿದಂತೆ.....” (ಪುಟ.೩೦)

* "ಔಡಲ ಗಿಡಕ್ಕೆ ಔಡಲ ಗೊನಿ ಬಿಟ್ಟಂತೆ...' (ಪುಟ.೪೮)

* "ಹುಲಿಯ ಬಣ್ಣಕ್ಕೆ ನರಿಯು ತನ್ನ ಮೈ ಸುಟ್ಟುಕೊಂಡು ಸತ್ತಂತಾಯಿತ್ತು ನೋಡಾ..."(ಪುಟ.೫೦)

* "ಬೆಲ್ಲದ ಕುಳ್ಳಿಂಗೆ ಮೂಷಕನು ಮುತ್ತಿ ಕುಳ್ಳು ಬಯಲಾದ ಹಾಗೆ..." (ಪುಟ.೫೧)

* "ಉದಕದೊಳಗೆ ಇರ್ಪ ತಾವರೆಯಂತೆ ನಿರ್ಲೇಪನಾಗಿ ಪ್ರಪಂಚವನಾಚರಿಸುವನು..." (ಪುಟ.೫೫)

* ಕುರುಡರೊಳಗೆ ಮೆಳ್ಳನು ಚಲುವನೆಂಬ ಹಾಗೆ ಅಜ್ಞಾನಿಗಳೊಳಗಿನ ಜ್ಞಾನಿಗಳೂ ಊರ್ಧ್ವ ಮುಖವಾಗಿ ರುದ್ರಾಕ್ಷಿ ಜಪಿಸೆಂದು ಪೇಳುವರು॥ ... (ಪುಟ.೫೬,೫೭)

* "ಸಕಲ ಕ್ರಿಯೆಗಳ ಮುಟ್ಟದ ನಾಲಿಗೆಯಂತೆ ಲಿಖಿತ ಮುಟ್ಟದ ಲೇಖಣಿಯಂತೆ"... (ಪುಟ.೬೦)

* "ಹುತ್ತದ ಮೇಲೆ ಬಡಿದರೆ ಸರ್ಪನ ಕೊಂದಂತಾಯಿತೇ । (ಪುಟ.೮೭)

ಪ್ರಸ್ತುತ ಅಧ್ಯಯನದ ಹಿನ್ನಲೆಯಲ್ಲಿ ಹಲವು ಆಧಾರಗಳ ಮೂಲಕ ಅದರಲ್ಲೂ ಇವರದೇ ವಚನವೊಂದರ ವ್ಯಾಖ್ಯಾನದಲ್ಲಿ ಸ್ಮರಿಸಲಾದ ವಚನಕಾರರ ಜೀವಿತ ಕಾಲಾವಧಿ ಆದರಿಸಿ ೧೭ನೇ ಶತಮಾನದಿಂದ ೧೮ನೇ ಶತಮಾನದ ಪೂರ್ವಭಾಗದಲ್ಲಿ ಶ್ರೀಕಾಡಸಿದ್ದೇಶ್ವರರಿದ್ದರೆಂದು ಸ್ಪಷ್ಟಪಡಿಸಲಾಗಿದೆ. ಅಲ್ಲದೇ ಇಲ್ಲಿಯ ವಚನಗಳ ಟೀಕಾಕಾರ ಯಾರೆಂಬುದು ಕೂಡಾ ಹಸ್ತಪ್ರತಿ ಆರಂಭದಲ್ಲಾಗಲಿ, ಕೊನೆಯಲ್ಲಾಗಲಿ ಉಲ್ಲೇಖಿಸದೇ ಇರುವುದರಿಂದ ವಚನಕಾರರೇ ಟೀಕಾಕಾರರಾಗಿರಬಹುದೆಂಬ ಸಂದೇಹದೊಂದಿಗೆ ಇಲ್ಲಿಯ ಟೀಕಿನ ವಚನಗಳ ಸ್ವರೂಪವನ್ನು ವಿಶ್ಲೇಷಿಸಲಾಗಿದೆ.

ಸಿದ್ದಗಿರಿಮಠದ ಸಿದ್ಧಪರಂಪರೆಯ ಜೊತೆಗೆ ಸೂಫಿ ಪಂಥದ ಪ್ರಭಾವಕ್ಕೆ ಒಳಗಾಗಿದ್ದ ಶ್ರೀ ಕಾಡಸಿದ್ದೇಶ್ವರರು ವೀರಶೈವಧರ್ಮದ ಷಟಸ್ಥಲ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ. ಮುಸ್ಲಿಂ ಸೂಫಿಗಳ ಪ್ರಬಾವದಿಂದಾಗಿ ಉರ್ದುಭಾಷೆಯಲ್ಲಿ ವಚನ ರಚಿಸಿರುವುದು ಶ್ರೀ ಕಾಡಸಿದ್ದೇಶ್ವರರ ಬಹುಭಾಷಾ ಪಾಂಡಿತ್ಯಕ್ಕೆ, ಭಾಷಾ ಸಮನ್ವಯಕ್ಕೆ ಸಾಕ್ಷಿಯಾಗಿವೆ.

ಬೆಡಗಿನ ವಚನಗಳ ಗೂಢಾರ್ಥವನ್ನು ಬಿಡಿಸಿ ಹೇಳುವಲ್ಲಿ ಇಲ್ಲಿಯ ಟೀಕೆಗಳು ಉಪಯುಕ್ತವಾಗಿವೆ. ಓದುಗನಿಗೆ ಹಲವು ರೀತಿಯಲ್ಲಿ ಅಮೂಲ್ಯವಾದ ಹೊಸ ವಿಚಾರಗಳನ್ನು ನೀಡುತ್ತವೆ. ಜೊತೆಗೆ, ಪ್ರವಚನ ಶೈಲಿಯಲ್ಲಿ, ಕೆಲವೇ ಪಾರಿಭಾಷಿಕ ಪದಗಳನ್ನು ಪುನರುಚ್ಚರಿಸುವ ಟೀಕಾಕಾರನು ಪಾಂಡಿತ್ಯ ಪ್ರದರ್ಶಿಸಲು ಹೋಗಿ ಸೋಲುತ್ತಾನೆ. ಕೆಲವೊಮ್ಮೆ ಸರಳವಾದ ವಚನಗಳಿಗೆ ವ್ಯಾಖ್ಯಾನ ಬರೆಯುವ ಟೀಕಾಕಾರ ಮೂಲವಚನದ ಸ್ವಾರಸ್ಯವನ್ನು ತೊಡೆದುಹಾಕುವ ರೀತಿಯಲ್ಲಿ ಉದ್ದುದ್ದವಾಗಿ ಅರ್ಥಬರೆಯಲು ಹೋಗಿ ಸೋತಿದ್ದಾನೆ.

ವ್ಯಾವಹಾರಿಕ ಉರ್ದು ಭಾಷೆಯನ್ನು ವಚನಗಳಿಗೆ ಬಳಿಸಿರುವ ವಚನಕಾರರು ಅವುಗಳಿಗೆ ಬರೆದ ಟೀಕೆಗಳಲ್ಲಿ, ಕಾಯಕದ ನಾನಾ ಶರಣರ ಸ್ಮರಣೆಯ ವಚನಗಳಿಗೆ ಬರೆದ ಟೀಕೆಗಳಲ್ಲಿ ಟೀಕಾಕಾರರು ಸ್ವಹಿತಾಸಕ್ತಿಯ ರೀತಿಯಲ್ಲಿ ಟೀಕೆ ಬರೆದಂತಿದೆ. ಅಲ್ಲದೇ, ಸಿದ್ಧಪರಿಭಾಷೆಯ ಪದಪ್ರಯೋಗ, ಟೀಕೆಗಳ

ಆಂತರಿಕ ಸ್ವರೂಪ, ಸುದೀರ್ಘವಾದ ವಾಕ್ಯರಚನೆಗಳಿಂದ ಅರ್ಥಗ್ರಹಣೆಗೆ ಸುಲಭವಾಗಿಲ್ಲ. ಆದರೆ, ಟೀಕುಗಳಲ್ಲಿ ಸಮಕಾಲೀನ ಪರಂಪರೆ, ಆಚಾರ ವಿಚಾರ, ಭಾಷಾಶೈಲಿ, ಸಂಸ್ಕೃತಿ, ಕಾಯಕದ ಪ್ರಾಮುಖ್ಯತೆ, ವೀರಶೈವಧರ್ಮದ ಸಮಾನತೆ ತತ್ವ ಮತ್ತಿತರ ಅಂಶಗಳು ಕಂಡುಬರುವುದರಿಂದ ಸಾಂಸ್ಕೃತಿಕ ಅಧ್ಯಯನದ ಮೂಲಕ ಸಮಾಜದ ಬಹುಮುಖ ಚಿತ್ರಣ ಅರಿಯಲು ಸಾಧ್ಯವಿದೆ.

## II. ಅನೇಕ ವ್ಯಕ್ತಿ ವಚನಗಳಿಗೆ ಬರೆದ ಟೀಕಾಕೃತಿಗಳು

### ಲಿಂಗಲೀಲಾ ವಿಲಾಸ ಚಾರಿತ್ರ ಟೀಕೆ: ಚಾರಿತ್ರಿಕ ಸ್ಥಿತಿ

೧೨ನೆಯ ಶತಮಾನದ ಶಿವಶರಣರ ಚಳುವಳಿ ಅದು ಸಮಾಜೋಧಾರ್ಮಿಕವಾಗಿತ್ತು. ಶರಣರು ಜಾತಿ–ಮತ–ಸಂಪ್ರದಾಯಗಳನ್ನು ತೊಡೆದು ಸಮಾನತೆಯ ಸುಖೀ ಸಮಾಜದ ಕನಸು ಕಂಡರು. ಸಾಮಾಜಿಕ ಮೌಲ್ಯಗಳ ಸ್ಥಾಪನೆಗಾಗಿ ವಚನ ಸಾಹಿತ್ಯವನ್ನು ದುಡಿಸಿಕೊಂಡರು. ಪರಿಣಾಮವಾಗಿ ವಚನಗಳು ತಮ್ಮ ಕಾಲದ ಚಳುವಳಿಗೆ ಪೂರಕವಾಗಿ ಉತ್ಪಾದನೆಗೊಂಡುದರಿಂದ, ಚಳುವಳಿಯಲ್ಲಿ ನಾನಾ ಕಾಯಕ ಮಾಡುತ್ತಿದ್ದ ತಳವರ್ಗದ ಶರಣರು ಪಾಲ್ಗೊಂಡ ಪರಿಣಾಮ ತಾವು ಕಂಡ, ಅನುಭವಿಸಿದ ಘಟನೆಗಳನ್ನು ವಚನಗಳಲ್ಲಿ ದಾಖಲಿಸಿದರು. ಬಸವಣ್ಣನವರ 'ದಯವೇ ದರ್ಮದ ಮೂಲವಯ್ಯ' ಎಂಬ ತಾತ್ವಿಕ ಸಿದ್ಧಾಂತ ವಚನಕಾರರ ಸಮಾಜೋಧಾರ್ಮಿಕವಾದ ಸಂವಿಧಾನಕ್ಕೆ ಬದ್ಧವಾಗಿದ್ದವು. ಸಮಕಾಲೀನ ರಾಜಕೀಯ ವ್ಯವಸ್ಥೆ ಪ್ರಭಲವಾಗಿದ್ದರೂ ಅವರಾಶ್ರಯ ಪಡೆಯದೇ ಅವರ ಇತಿ–ಮಿತಿಗಳನ್ನು ಖಂಡಿಸುವ ಸಾಂಘಿಕ ಬಂಡಾಯ ಮನೋಭಾವ ವಚನಗಳಲ್ಲಿ ವ್ಯಕ್ತವಾಯಿತು. ಜೊತೆಗೆ, ಸಮಕಾಲೀನ ಸಮಾಜ ಮತ್ತು ಧಾರ್ಮಿಕ ಜೀವನದ ತುಡಿತಗಳಿಗೆ 'ವಚನ ಸಾಹಿತ್ಯ' ಪ್ರತಿಸ್ಪಂದಿಸಿದ ಪರಿಣಾಮ ಜನಮುಖಿಗೊಳ್ಳುತ್ತಲೇ ವಿಶ್ವಧರ್ಮದ ವಿಶಾಲತೆಗೆ ವೇದಿಕೆ ರೂಪಗೊಂಡಿತು. ಈ ವೇದಿಕೆ ಆಳವಾದ ಬೇರುಗಳನ್ನು ಬಿಡುವ ಮೊದಲೆ ಕೆಲವು ಪಟ್ಟಭದ್ರ ಜಾತಿವಾದಿಗಳಿಂದಾಗಿ ಬೇರುಗಳು ತುಂಡರಿಸಿದ ಕಾರಣ ಸಮಾನತೆಯ ಸಮಾಜದ ಕನಸು ನನಸಾಗಲಿಲ್ಲ. ಇದರಿಂದ ವಚನಕಾರರ ಚಳುವಳಿಯ ಉದ್ದೇಶ ವಿಫಲವಾಗುವಂತಾಯಿತು. ಅದಕ್ಕೆ ಪೂರಕವಾಗಿ ಕರ್ನಾಟಕದಲ್ಲಿ ನಡೆದ ರಾಜಕೀಯ ವಿಪ್ಲವತೆಗಳಿಂದಾಗಿ ಜನ ಜೀವನ ಅಧೋಗತಿಗಿಳಿಯಿತು. ಶಿವಶರಣರ ಸಮಾಜ, ಧರ್ಮ, ಸಂಸ್ಕೃತಿ ಉತ್ತರದಿಂದ ದಕ್ಷಿಣ ಕರ್ನಾಟಕದವರೆಗೂ ಹರಡಿದರೂ ಕೆಲವು ಮಠ ಮಾನ್ಯಗಳಿಗೆ ಸೀಮಿತವಾಯಿತು. ಕಾಲಕ್ರಮೇಣ ಶರಣ ಚಳುವಳಿ ಒಂದು ಮತವಾಗಿ ಸಂಕುಚಿತಗೊಳ್ಳಲು ಕಾರಣವಾಗಿರಬೇಕು.

ಡಾ.ಎಂ. ಚಿದಾನಂದಮೂರ್ತಿಯವರು ಹೇಳುವಂತೆ "ಹೆಂಗಸರಾಗಲಿ, ಅಸ್ಪೃಶ್ಯರಾಗಲಿ, ಕೆಳಜಾತಿಯ ಯಾವುದೇ ಲಿಂಗಾಯತ ಕವಿಗಳೂ ಸಾಹಿತ್ಯ ಕ್ಷೇತ್ರದಲ್ಲಿ ಕಾಣಿಸಲಿಲ್ಲ. ಹನ್ನೆರಡನೆಯ ಶತಮಾನದ ಲಿಂಗಾಯತ ಚಳುವಳಿ ಮುಂದೆ ಒಂದು ಲಿಂಗಾಯತ ಮತವಾಯಿತು; ಮತಕ್ಕೆ ಅಗತ್ಯವಾದ ಪುರೋಹಿತರು ಪ್ರಭಲವಾದರು." (ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಡಾ.ಎಂ.

ಚಿದಾನಂದಮೂರ್ತಿ, ಪುಟ-೧೧೦) ಹೀಗೆ ಲಿಂಗಾಯತ ಧರ್ಮ ಕಾಲಾಂತರದಲ್ಲಿ ಪ್ರಗತಿಪರವಾಗದೇ ಮತಪ್ರಧಾನವಾಗಲು ಅಗತ್ಯವಾದ ಸಿದ್ಧತೆಯನ್ನು ನಡೆಸಿತು.

ನಂತರದ ಕಾಲಘಟ್ಟಗಳಲ್ಲಿ ವಚನ ರಚನೆಗಳು ಒಂದು ಸಾಹಿತ್ಯ ಪ್ರಕಾರವಾಗಿ ರಚನೆಗೊಂಡವೇ ಹೊರತು ಚಳುವಳಿಯ ಉತ್ಪಾದನೆಗಳಾಗಿ ಅಲ್ಲ. ಕಾರಣ, ಚಳುವಳಿಯ ಮುಂದುವರಿಕೆ ಕೂಡಾ ಸಮಾಜೋಧಾರ್ಮಿಕವಾಗಿರದೇ ಮತಧರ್ಮಕ್ಕೆ ಸೀಮಿತಗೊಂಡಿತು. ಇದಕ್ಕೆ ಶರಣ ಚಳುವಳಿಯು ರಾಜಕೀಯ ಪ್ರಭುತ್ವಕ್ಕೆ ಒಳಗಾದದ್ದು ಕಾರಣವೆನ್ನಬಹುದು.

೧೫ನೇ ಶತಮಾನದ ಪ್ರೌಢದೇವರಾಯನ ಕಾಲದಲ್ಲಿ ಶಿವಶರಣರ ವಚನಗಳನ್ನು ಸಂಗ್ರಹಿಸುವ, ಸ್ಥಲಕಟ್ಟುಗಳಲ್ಲಿ ಸಂಕಲಿಸುವ, ಸಂಪಾದಿಸುವ, ವಚನಗಳಿಗೆ ಟೀಕು ಬರೆಯುವ ಸಮಾರೋಪಾದಿ ಕೆಲಸ ನಡೆಯಿತು. ವಚನಗಳ ಜೊತೆಗೆ ಸೂತ್ರ, ರಹಸ್ಯ, ಯೋಗಾಂಗ, ಅಷ್ಟವಿದಾರ್ಚನೆ, ದೀಕ್ಷಾವಿಧಾನ, ಮಂತ್ರೋತ್ಪತ್ತಿ, ಲಿಂಗಮಹಿಮೆಯಂತಹ ಧಾರ್ಮಿಕ ಪರವಾದ ಸಾಹಿತ್ಯ ರಚನೆಯಾಗುತ್ತಿರುವಂತೆಯೇ ಶರಣ ಚಳುವಳಿಯು ಮತಧರ್ಮದ ಸಾಂಸ್ಥಿಕ ಚೌಕಟ್ಟಿಗೆ ಸಿಲುಕುವಂತಾಯಿತು. ಟೀಕಾಕಾರರಂತು ವಚನಗಳನ್ನು ಮತ ಧರ್ಮಕ್ಕೆ ಸೀಮಿತಗೊಳಿಸಿ ಟೀಕು ಬರೆದ ಪರಿಣಾಮ ವಚನಕಾರರ ಬಹು ಉದ್ಧೇಶಿತ ಸಾಹಿತ್ಯ ವಿಸ್ತೃತಗೊಳ್ಳದೇ ಸಂಕುಚಿತವಾಯಿತು. ಕಲ್ಲುಮಠದ ಪ್ರಭುದೇವರಿಗೆ ವಚನಗಳು 'ವಚನಾಗಮ'ಗಳಾಗಿ ಕಂಡಪರಿಣಾಮ ಸಂಸ್ಕೃತ ಸೂತ್ರದೊಂದಿಗೆ ಟೀಕು ಬರೆಯಲು ಸಮಕಾಲೀನ ಧಾರ್ಮಿಕ ಸ್ಥಿತ್ಯಂತರವೇ ಒತ್ತಾಸೆಯಾಗಿರಬೇಕು.

ಬಸವಾದಿ ಶಿವಶರಣರ ವಚನಗಳು ಸಾಮಾಜಿಕ ಪ್ರಜ್ಞೆಯ ಅಭಿವ್ಯಕ್ತಿಯಾಗಿ, ಜನಪರದೇಶಿಭಾಷೆಯ ಪ್ರಭಲ ಸಾಧನವಾಗಿ ಬಳಕೆಯಾದುದರ ಬಗ್ಗೆ ೧೫ನೇ ಶತಮಾನದ ಟೀಕಾಕಾರರು ತಲೆ ಕೆಡಿಸಿಕೊಳ್ಳಲೇ ಇಲ್ಲ. ಹೀಗಾಗಿ ಬಸವಣ್ಣನಂತಹ ಸಮಾಜಮುಖಿ ವಚನಕಾರರ 'ಸಾಮಾಜಿಕ ಪ್ರಜ್ಞೆ'ಯುಳ್ಳ ವಚನಗಳಿಗೆ ಟೀಕು ಬರೆಯುವ ಗೋಜಿಗೆ ಹೋಗದೆ ಟೀಕಾಕಾರರು "ಸ್ಥಲಕಟ್ಟು" ಸಿದ್ಧಾಂತದ ಚೌಕಟ್ಟಿಗೆ ಒಳಪಡಿಸಿ ಅಂತಹ ವಚನಗಳಿಗೆ ಮಾತ್ರ ಧಾರ್ಮಿಕ ಪ್ರಜ್ಞೆಯ ನೆಲೆಯಲ್ಲಿ ಟೀಕು ಬರೆದಿರುವುದು ಸ್ಪಷ್ಟವಾಗಿದೆ. ಕಲ್ಲುಮಠದ ಪ್ರಭುದೇವನು 'ಲಿಂಗಲೀಲಾವಿಲಾಸ ಚಾರಿತ್ರ'ದಲ್ಲಿ ಹದಿನಾರು ಸ್ಥಲಕಟ್ಟುಗಳಲ್ಲಿ ವಚನಗಳನ್ನು ವಿಂಗಡಿಸಿ, ವ್ಯಾಖ್ಯಾನಿಸಿದಂತೆ ಈ ಕಾಲಘಟ್ಟದ ಮಹಾಲಿಂಗದೇವ, ಜಕ್ಕಣಾರ್ಯ, ಕುಮಾರ ಬಂಕನಾಥ, ಶ್ರೀಗಿರೀಂದ್ರ ಮುಂತಾದವರು ಕೂಡಾ ವಚನಗಳನ್ನು ಲಿಂಗಾಯತ ಮತಧರ್ಮದ ಭಾಗವಾಗಿಯೇ ಕಂಡರು. ಅದರಂತೆ ವ್ಯಾಖ್ಯಾನ ಮಾಡಿದರು. ಪರಿಣಾಮ ಶರಣಚಳುವಳಿಯ ಉದ್ಧೇಶಿತ ಫಲವಾದ ವಚನಸಾಹಿತ್ಯ ಸಾಮಾಜಿಕ ಆಕರವಾಗದೇ ಮತಧರ್ಮದ ಆಕರವಾದ ಪರಿಣಾಮ ಕಲ್ಲುಮಠದ ಪ್ರಭುದೇವನಿಗೆ 'ಲಿಂಗಲೀಲಾ ವಿಲಾಸ ಚಾರಿತ್ರ' ಪ್ರಧಾನವೆನಿಸಿತು. ಪ್ರತ್ಯೇಕ ಕೃತಿ ರಚನೆ ಇವರಿಗೆ ಮುಖ್ಯವಾಗಲಿಲ್ಲ. ಕಾಲವಿಪ್ಲವದಲ್ಲಿ ಅಳಿದುಳಿದು ಬಂದ ವಚನ ಸಾಹಿತ್ಯವನ್ನು ನಾಶವಾಗಲು ಬಿಡದೆ, ಅದನ್ನು ಧಾರ್ಮಿಕ ಸಾಹಿತ್ಯವಾಗಿ ಪುನರುಜ್ಜೀವನಗೊಳಿಸಬೇಕೆಂಬ ಮಹತ್ವಾಕಾಂಕ್ಷೆ ಪ್ರಭಲವಾಗಿತ್ತು. ಈ ಹಿನ್ನೆಲೆಯಲ್ಲಿ ಕಲ್ಲುಮಠದ ಪ್ರಭುದೇವನು ರಾಜಪ್ರಭುತ್ವದ ಆಶ್ರಯದಲ್ಲಿ ತನ್ನ

ಕಾರ್ಯ ಕೈಗೆತ್ತಿಕೊಂಡ ಪರಿಣಾಮ ರಾಜಾಶ್ರಿತ ಪಂಡಿತರು ಪ್ರಮುಖವಾಗಿ ಕಂಡರು. ಅದರಿಂದಾಗಿ, ನೆಲದ ಜೀವಸತ್ವ ಹೊಂದಿದ್ದ ವಚನಗಳಿಗೆ ಸಂಸ್ಕೃತದ ವೇದಾಗಮ ಪ್ರಣೀತ ಸೂತ್ರಗಳನ್ನು ಹೋಲಿಕೆ ಮಾಡಿ ವ್ಯಾಖ್ಯಾನ ಬರೆಯಲು ಕಾರಣವಾಗಿರಬೇಕು. ಹೀಗೆ ಶರಣರ ವಚನಗಳನ್ನು ಮತಧರ್ಮದ ಚೌಕಟ್ಟಿನಲ್ಲಿ ಬಂಧಿಸಿದ ಪರಿಣಾಮ ಶಿವಶರಣರ ಜನಪರವಾದ ಸಿದ್ಧಾಂತಗಳು ಮಣ್ಣುಪಾಲಾದವು.

ಬಸವಣ್ಣನವರು "ವೇದಂಗಳಿಗೆ ಅಭೇದ್ಯನಾದ ಶಿವನ ಭೇದಿಸಿ ಕಂಡರು ನೋಡಾ ಶರಣರು, ಶಾಸ್ತ್ರಂಗಳಿಗಸಾಧ್ಯವಾದ ಶಿವನ ಸಾಧಿಸಿ ಕಂಡರು ನೋಡಾ ಶರಣರು" ಎಂದು ಹೇಳಿದ ಮಾತು; ಅಕ್ಕಮಹಾದೇವಿಯವರ "ವೇದಶಾಸ್ತ್ರಾಗಮ ಪುರಾಣಂಗಳೆಂಬುವ ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣಿಭೋ" ಎಂಬ ಅಭಿಪ್ರಾಯಗಳಿಗೆ ತದ್ವಿರುದ್ಧವಾಗಿ ಕಲ್ಲುಮಠದ ಪ್ರಭುದೇವರು ಹೆಜ್ಜೆ ಹಾಕಿದರು. ಶಿವಶರಣರ ವೈಚಾರಿಕ ಧರ್ಮ ಇವರ ಕಾಲಘಟ್ಟದಲ್ಲಿಯೇ ಪುರೋಹಿತ ಪ್ರಣೀತ ಮತಧರ್ಮವಾಗಿ ಮಾರ್ಪಡಲು ಕಾರಣವಾಗಿರಬೇಕು. ಮೂವತ್ತಾರು ವಚನಕಾರರ ೭೭೨ ವಚನಗಳೊಂದಿಗೆ, ೧೩೫ ಸಂಸ್ಕೃತ ಶ್ಲೋಕ ಸೇರ್ಪಡಿಸಿ ವ್ಯಾಖ್ಯಾನ ಬರೆದ ಪ್ರಭುದೇವರು ಜಂಗಮಮುಖಿಯಾದ ವಚನಗಳನ್ನು ಸ್ಥಾವರಗೊಳಿಸಿದರು. "ಆಗಮದ ಮೂಗೂ ಕೊಯಿವೆ" ಎಂಬ ವಚನಕಾರರ ತತ್ವಕ್ಕೆ ತಿಲಾಂಜಲಿ ಹೇಳಿ "...ಷೋಡಶ ಸ್ಥಲ ಪರಿಕ್ರಮದಿಂದ ಸೇರಿಸಿ ಅರ್ಥೈಸಿದ ವಚನಾಗಮ" ಎಂದು ಹೇಳುವ ಮೂಲಕ ಶಿವಶರಣರ ಚಳುವಳಿಯ ಉದ್ದೇಶ ಮತ್ತು ವಚನ ಸಾಹಿತ್ಯ ಸೃಷ್ಟಿಯ ಮೌಲ್ಯಗಳನ್ನು ಗಾಳಿಗೆ ತೂರಲು ಈ ಯುಗದಲ್ಲಿಯೇ ವೇದಿಕೆಯೊಂದನ್ನು ರೂಪಿಸಿ, ನಾಡಿನ ಚಾರಿತ್ರಿಕ ಇತಿಹಾಸ ಮಂಕುಕವಿಯಲು ಕಾರಣವಾಯಿತೆನ್ನಬಹುದು.

ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆಯ ಮೊದಲ ಸಂಪುಟದಲ್ಲಿ "ಪ್ರಾಚೀನ ಕನ್ನಡ ಸಾಹಿತ್ಯ ಮತಪ್ರಧಾನವಾದುದರಿಂದ ಕನ್ನಡ ಸಾಹಿತ್ಯ ಚರಿತ್ರಕಾರನ ಸಮಸ್ಯೆ ಇನ್ನೂ ಬೆಳೆಯುತ್ತದೆ. ಪ್ರತಿಯೊಬ್ಬ ಲೇಖಕನು ಮತೀಯ ಚೌಕಟ್ಟಿನೊಳಗೇ ಕೆಲಸ ಮಾಡಬೇಕಾಗಿರುವುದರಿಂದ ಅವರ ದೃಷ್ಟಿಧೋರಣೆಗಳು ಎಷ್ಟರಮಟ್ಟಿಗೆ ಉತ್ಪೇಕ್ಷೆಯವಾಗಿಲ್ಲವೆಂಬುದನ್ನು ಪರೀಕ್ಷಿಸುವ ಹೆಚ್ಚಿನ ಹೊಣೆಗಾರಿಕೆಗೆ ಕನ್ನಡ ಸಾಹಿತ್ಯ ಚರಿತ್ರಕಾರ ಹೆಗಲು ಕೊಡಬೇಕಾಗುತ್ತದೆ. ಇಂದೂ ಮತ ಪ್ರಧಾನವಾಗಿರುವ ಈ ದೇಶದಲ್ಲಿ ಈ ಮತೀಯ ಅಂಶಗಳ ಬಳಕೆ ವ್ಯಾಖ್ಯಾನಗಳಲ್ಲಿ ಅವನು ಹೆಚ್ಚಿನ ಎಚ್ಚರವಹಿಸಬೇಕಾಗುತ್ತದೆ" ಎಂಬ ಅಭಿಪ್ರಾಯದ ನೆಲೆಯಲ್ಲಿ ಕಲ್ಲುಮಠದ ಪ್ರಭುದೇವ ಸೇರಿದಂತೆ ಅನೇಕರ ಟೀಕಿನ ವಚನಗಳನ್ನು ಐತಿಹಾಸಿಕ, ಧಾರ್ಮಿಕ ಪ್ರಜ್ಞೆಯ ಎಚ್ಚರದೊಂದಿಗೆ ಅಧ್ಯಯನ ಮಾಡಬೇಕಾದ ಅಗತ್ಯವಿದೆ.

### ೧. ಕಲ್ಲುಮಠದ ಪ್ರಭುದೇವರು(ಕ್ರಿ.ಶ.ಸು.೧೪೩೦)

ಸುಮಾರು ಎರಡು ಶತಮಾನಗಳವರೆಗೆ ನೆಲದ ಮರೆಯ ನಿಧಾನದಂತೆ ಅಳಿದುಳಿದು ಬಂದ ವಚನ ಸಾಹಿತ್ಯವನ್ನು ೧೫ನೇ ಶತಮಾನದ ಪೂರ್ವಭಾಗದಲ್ಲಿ (೧೪೧೯-೧೪೪೬) ವಿಜಯನಗರದ ಅರಸ ೨ನೇ ಪ್ರೌಢದೇವರಾಯನ ರಾಜಾಶ್ರಯದಲ್ಲಿದ್ದ ಪಂಡಿತರು ಪುನರುಜ್ಜೀವನಗೊಳಿಸಿರುವುದು

ಇತಿಹಾಸ. ರಾಜಾಶ್ರಯವನ್ನು ಪಡೆದು ಶಿವಶರಣರ ವಚನ ಕಟ್ಟುಗಳನ್ನು ಶೋಧಿಸಿ, ಸಂಗ್ರಹಿಸಿ, ಷಟ್‌ಸ್ಥಲಗಳಿಗೆ ಅನುಗುಣವಾಗಿ ಸಂಕಲಿಸಿ, ಸಂಪಾದಿಸಿ, ವ್ಯಾಖ್ಯಾನಿಸುವ ಕಾರ್ಯದಲ್ಲಿ ಮೊದಲು ನಿರತರಾದವರೆಂದರೆ ಪುಲಿಗೆರೆಯ ಮಹಾಲಿಂಗದೇವರು. ಇವರ ಸಮಕಾಲೀನರಾಗಿ ಸಂಸ್ಕೃತ-ಕನ್ನಡ ದ್ವಿಭಾಷಾ ಪಾಂಡಿತ್ಯ ಪಡೆದು, ಲಿಂಗಲೀಲಾವಿಲಾಸ ಚಾರಿತ್ರವೆಂಬ ೭೨೮ ವಚನಗಳಿಗೆ ಟೀಕೆಯನ್ನು ಬರೆದವನೆಂದರೆ ವಿಜಯನಗರದ ಕಲ್ಲುಮಠದ ನಿವಾಸಿ ಕಲ್ಲುಮಠದ ಪ್ರಭುದೇವರು.

೧೨ನೆಯ ಶತಮಾನದಲ್ಲಿದ್ದ ವಚನ ರಚನೆಯ ಮೊದಲ ಘಟ್ಟದ ಶಿವಶರಣರೆಲ್ಲಾ ಕಲ್ಯಾಣ ಕ್ರಾಂತಿಯ ಕಾರಣದಿಂದಾಗಿ ನಾಡಿನ ನಾನಾ ಪ್ರಾಂತ್ಯಗಳಿಗೆ ಚದುರಿದರು. ಸುರಕ್ಷಿತ ನೆಲೆಗಾಗಿ ತೊಳಲಾಡಿ, ಬಳಲಿ ಬಸವಳಿದ ಸಂದರ್ಭದಲ್ಲಿಯೇ ಮುಸಲ್ಮಾನರ ದಾಳಿಯನ್ನು ಎದುರಿಸಬೇಕಾಯಿತು. ಇಂತಹ ಆತಂಕ - ತಲ್ಲಣಗಳ ನಡುವೆಯೂ ಜೀವರಕ್ಷಣೆಗೆ ಕೈಯಲ್ಲಿ ಖಡ್ಗ ಹಿಡಿದರು. ಎಲ್ಲಕ್ಕೂ ಪ್ರಮುಖವಾಗಿ ಶರಣರು ವಚನಗಳ ಕಟ್ಟುಗಳನ್ನು ಹಸುಮಕ್ಕಳಂತೆ ಜತನದಿಂದ ಕಾಪಾಡಿಕೊಂಡು ಬಂದರು. ಅಂದಿನ ದಾಳಿಯ ಸಂದರ್ಭದಲ್ಲಿ - "ಕಂಪಿಲ ರಾಜ್ಯದ ಜನ ಹೇಗೆ ತಮ್ಮ ಅಗತ್ಯ ವಸ್ತುಗಳನ್ನು ಎತ್ತಿಕೊಂಡು ಗೂಳೆಯ ಹೋದ ಸಂಗತಿಯನ್ನು ಕ್ರಿ.ಶ. ೧೬೫೦ರ ಪಾಂಚಾಳ ಗಂಗನ ಕುಮಾರರಾಮನ ಸಾಂಗತ್ಯದ ಆಧಾರದಿಂದ ತಿಳಿಸುತ್ತಾ ಅಗತ್ಯ ವಸ್ತುಗಳಲ್ಲಿ ಹಸ್ತಪ್ರತಿಗಳೂ ಇದ್ದುದನ್ನು ಡಾ.ಎಂ. ಚಿದಾನಂದಮೂರ್ತಿ ಗುರುತಿಸಿದ್ದಾರೆ."[೨೦೫]

ಆ ಕಾಲದ ಹಲವು ವೈಪರಿತ್ಯಗಳ ಮಧ್ಯೆಯು ಹರಿಹರ, ರಾಘವಾಂಕ, ಕೆರೆಯ ಪದ್ಮರಸ, ಏಕಾಂತದ ರಾಮಯ್ಯ, ಆದಯ್ಯ ಮತ್ತಿತರ ವೀರಶೈವ ಕವಿಗಳು, ವಚನಕಾರರು ವಚನ ಸಾಹಿತ್ಯದ ಪ್ರಕಾಶಮಾನವಾದ ಭವ್ಯಬೆಳಗನ್ನು ಕುಂದದಂತೆ ಕಾಂತಿಯುಕ್ತವಾಗಿ ತಾವು ರಚಿಸಿದ ಕಾವ್ಯಗಳಲ್ಲಿ ಜೀವಂತವಾಗಿಟ್ಟರು. ಅದೇ ರೀತಿ ಭೀಮಕವಿ (೧೩೬೯), ಪಾಲ್ಕುರಿಕೆ ಸೋಮನಾಥರು ಪುರಾಣ ಕಾವ್ಯ ರಚಿಸಿ ಗಮನ ಸೆಳೆದರು. ದುರ್ದೈವವೆಂದರೆ, ವಚನಗಳ ಹಸ್ತಪ್ರತಿ ಕಟ್ಟುಗಳು ಮಾತ್ರ ನಾಡಿನೆಲ್ಲೆಡೆಯ ಮಠಮಂದಿರಗಳಲ್ಲಿ ಅನಾಥವಾಗಿಯೇ ಇದ್ದವು. ಅವನ್ನು ಗುರುತಿಸಿ, ವೀರಶೈವ ಧರ್ಮ ತತ್ವಗಳು ಪುನಃ ಪ್ರಕಾಶಮಾನವಾಗಲು ಪ್ರೌಢದೇವರಾಯರು ಪ್ರೋತ್ಸಾಹಿಸಿ, ವಚನ ಸಂಕಲನ, ವ್ಯಾಖ್ಯಾನಗಳಿಗೆ ವಿದ್ವಾಂಸರನ್ನು ನಿಯೋಜಿಸಿದರು. ಅವರಲ್ಲಿ ಕಲ್ಲುಮಠದ ಪ್ರಭುದೇವರು ಒಬ್ಬರು.

ವಿಜಯನಗರದ ಪ್ರಸಿದ್ಧ ಅರಸ ಪ್ರೌಢದೇವರಾಯನ (೧೪೧೯-೧೪೪೭) ಕಾಲದಲ್ಲಿದ್ದ ನೂರೊಂದು ವಿರಕ್ತರಲ್ಲಿ ಒಬ್ಬನಾಗಿದ್ದ ಕಲ್ಲುಮಠದ ಪ್ರಭುದೇವರು, ಮಹಾಲಿಂಗದೇವ, ಜಕ್ಕಣಾರ್ಯ, ಚಾಮರಸಾದಿಗಳ ಸಮಕಾಲೀನರು. ಈತನು ವಿದ್ಯಾನಗರದ (ವಿಜಯನಗರ) ಕಲ್ಲುಮಠದ ನಿವಾಸಿಯಾಗಿದ್ದನು. ಕಲ್ಲಿನಿಂದ ಕಟ್ಟಿದ ಮಠ ಇಲ್ಲವೇ ಕಲ್ಲಿನಿಂದಾದ ಗವಿಗಳಲ್ಲಿ ವಾಸವಾಗಿರುವ ಕಾರಣ ವಿಜಯನಗರದ ಕಲ್ಲುಮಠದ ಪ್ರಭುದೇವನೆಂಬ ಹೆಸರು ಜನಜನಿತವಾಗಿರಬಹುದು.

"ನೂರೊಂದು ಗಣಂಗಳಿಗೂ ನೂರೊಂದು ಗವಿಗಳಂ ತೆಗೆಸಿ ಆ ಗವಿಗಳಲ್ಲಿ ಒಬ್ಬೊಬ್ಬ ಶರಣರಿದ್ದರು. ನೂರೊಂದು ವಿರಕ್ತ ಮೂರ್ತಿಗಳು ಪಂಪಾಕ್ಷೇತ್ರದಲ್ಲಿ ಅವತರಿಸಿದರೆಂಬುದಕ್ಕೆ ಅವರಿದ್ದ

ಸ್ಥಳಗಳೇ ಸಾಕ್ಷಿಯು"[೨೦೬] ಎಂದು ನಿರಂಜನವಂಶ ರತ್ನಾಕರದಲ್ಲಿ ಹೇಳಲಾಗಿದೆ. ಆದರೆ, ಡಾ. ಆರ್.ಸಿ. ಹಿರೇಮಠರು "ನೂರೊಂದು ವಿರಕ್ತರಲ್ಲಿ ಸಮಾವಿಷ್ಟರಾಗಿರಲಿಕ್ಕಿಲ್ಲ"[೨೦೭] ಎಂದು, ಡಾ ಶಿವಾನಂದ ವಿರಕ್ತಮಠರು "........ಅಂದಿನ ನೂರೊಂದು ವಿರಕ್ತರಲ್ಲಿ ಸೇರ್ಪಡೆಯಾಗುವ ಸಂಗತಿ ಸಂದಿಗ್ಧತೆಯುಳ್ಳದ್ದಾಗಿದೆ"[೨೦೮] ಎಂದು ಅಭಿಪ್ರಾಯಪಡುವುದರಿಂದ ಈ ಬಗ್ಗೆ ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ. ಕವಿಚರಿತೆಕಾರರು ಈತನನ್ನು ನೂರೊಂದು ವಿರಕ್ತರಲ್ಲಿ ಒಬ್ಬನೆಂದು ಹೇಳಿದ್ದು ಪ್ರಸ್ತುತ ಅದನ್ನೇ ಆದರಿಸಬಹುದಾಗಿದೆ.

ಈತನು 'ಲಿಂಗಲೀಲಾವಿಲಾಸ ಚಾರಿತ್ರ' ಮತ್ತು 'ಪ್ರಭುದೇವರ ಮಂತ್ರಗೋಪ್ಯ ಟೀಕೆ' ಕೃತಿ ಬರೆದಿದ್ದಾನೆ. ನಿಷ್ಕಲ ಲಿಂಗಸ್ಥಲದಿಂದ ಸ್ವಲೀಲಾನಂದ ಭಕ್ತಿಸ್ಥಲದವರೆಗಿನ ೧೬ ಸ್ಥಲಗಳಿವೆ. ಅಲ್ಲದೆ, ೫೮ ಶಿವಶರಣರ ೩೨೮ ವಚನಗಳಿವೆ. ಪ್ರತಿಸ್ಥಲದ ಮೊದಲಿಗೆ ಶ್ಲೋಕಗಳಿವೆ. ಈ ಶ್ಲೋಕ ಹಾಗೂ ವಚನಗಳಿಗೆ ಕಲ್ಲುಮಠದ ಪ್ರಭುದೇವನು ಟೀಕೆ ಬರೆದಿದ್ದಾನೆ.

ಪೀಠಿಕಾ ಸ್ತೋತ್ರದಲ್ಲಿ – "ಆ ಷಟ್‌ಸ್ಥಲ ಮಾರ್ಗವೇ ಲಿಂಗಲೀಲಾ ವಿಲಾಸ ಚಾರಿತ್ರವೆಂದು ನಿರೂಪಿಸಿದ ಗುರು ವಚನವಿಡಿದು, ಗುರುಪ್ರಸಾದ ಜ್ಞಾನದಿಂದ ವಿದ್ಯಾನಗರದ ಕಲ್ಲುಮಠದ ಪ್ರಭುದೇವಾರ್ಯನು ಪುರಾತನರ ವಚನಂಗಳಲ್ಲಿಯೂ ಸಾರವಾದ ವಚನಂಗಳ ತಕ್ಕೊಂಡು ಷೋಡಶ ಸ್ಥಲ ಪರಿಕ್ರಮದಿಂದ ಸೇರಿಸಿ ಅರ್ಥೈಸಿದ ವಚನಾಗಮವಿದು."[೨೦೯]

ಅಲ್ಲದೇ ಗ್ರಂಥದ ಕೊನೆಯಲ್ಲಿ ಹೇಳುವಂತೆ –

> "ಈ ಲಿಂಗಲೀಲಾ ವಿಲಾಸ ಚಾರಿತ್ರವೇ ಶರಣ ಚಾರಿತ್ರವೆಂದು ಪುರಾತನರ
> ವಚನಗಳಿಂದ ಕಾಣಲಾಯಿತ್ತಾಗಿ, ಮಿಕ್ಕಿನ ವೇದಾಗಮಂಗಳು
> ಜಡ್ಡುಗೊಜಡೆಂದು ಅವಬಿಟ್ಟು, ಪುರಾತನರ ವಚನ ಏಳು ನೂಱ
> ಎಪ್ಪತ್ತು ತೆಗೆದುಕೊಂಡು, ಷೋಡಶಸ್ಥಲ ಪರಿಕ್ರಮದಿಂದ ಸೇರಿಸಿ,
> ವ್ಯಾಖ್ಯಾನವ ಮಾಡಿದ ವಿದ್ಯಾನಗರದ ಕಲ್ಲುಮಠದ ಪ್ರಭುದೇವಾ
> ರ್ಯನು ಇದಱ ನಾಮ ಲಿಂಗಲೀಲಾ ವಿಲಾಸ ಚಾರಿತ್ರ"[೨೧೦]

ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಅಲ್ಲಮ, ಬಸವ, ಚೆನ್ನಬಸವ, ಮಹಾದೇವಿಯಕ್ಕ ಮೊದಲಾದ ೫೮ ವಚನಕಾರರ ವಚನ ಆಯ್ದುಕೊಂಡು ಷೋಡಶಸ್ಥಲ ಪರಿಕ್ರಮದಿಂದ ಸೇರಿಸಿ ವ್ಯಾಖ್ಯಾನ ಬರೆದ ಗ್ರಂಥವೇ 'ಲಿಂಗಲೀಲಾವಿಲಾಸ ಚಾರಿತ್ರ".

ಈತನ ಇನ್ನೊಂದು ಟೀಕೆ – ಮಂತ್ರಗೋಪ್ಯ ಟೀಕೆ. ಪ್ರಭುದೇವರ ೨೭ ಪದಗಳಿಗೆ ಟೀಕೆ ಬರೆದಿದ್ದಾನೆ. ಈ ಕೃತಿ ಕುರಿತು ಗುಮ್ಮಳಾಪುರದ ಸಿದ್ಧಲಿಂಗ ತನ್ನ ಶೂನ್ಯಸಂಪಾದನೆ ಆರಂಭದಲ್ಲಿ ಉಲ್ಲೇಖಿಸಿದ್ದಾನೆ. ಅಲ್ಲದೇ, ಅದೃಶ್ಯ (ಸು.೧೫೮೦), ಸಿದ್ಧನಂಜೇಶ (ಸು. ೧೬೦೦), ಶಾಂತಲಿಂಗದೇಶಿಕ (೧೬೩೨)ರು ಕೂಡಾ ಈತನ ಬಗೆಗೆ ಪ್ರಸ್ತಾಪ ಮಾಡಿರುವುದನ್ನು ಗಮನಿಸಬಹುದು.

ಅಂದರೆ, ಜಕ್ಕಣಾರ್ಯನು (ಕ್ರಿ.ಶ.ಸು. ೧೪೩೦) ಹೊರಡಿಸಿದ ಏಕೋತ್ತರ ಶತಸ್ಥಲದ ಮೆರವಣಿಗೆಯ ಸಂದರ್ಭದಲ್ಲಿ ಶಿವಸ್ವರೂಪವಾದ ನೂರೊಂದು ವಿರಕ್ತರು ಪಾಲ್ಗೊಂಡಿದ್ದರೆಂಬುದನ್ನು ಮೇಲ್ಕಂಡ ಕವಿಗಳು ಕಾವ್ಯದಲ್ಲಿ ವಿವರಿಸಿದ್ದಾರೆ. 'ರಾಘವಾಂಕ ಚರಿತ' ಬರೆದ ಸಿದ್ಧನಂಜೇಶನು (ಕ್ರಿ.ಶ. ಸು ೧೬೦೦) ಹರಿಹರ, ರಾಘವಾಂಕ, ಕೆರೆಯ ಪದ್ಮರಸ, ಜಕ್ಕಣಾಚಾರ್ಯ, ಚಾಮರಸ, ಭೀಮರಸರ ಜೊತೆಯಲ್ಲಿ ಕಲ್ಲುಮಠದಾಚಾರ್ಯರನ್ನು ಸ್ಮರಿಸಿಕೊಂಡಿದ್ದಾನೆ. ಉದಾಹರಣೆಗೆ –

> "ಜಕ್ಕಣ ದಂಡೇಶ ಮಂತ್ರಿಯು ಕಲ್ಲುಮಠದ ಪ್ರಭುದೇವಾ
> ಚಾರ್ಯನು, ಚಾಮರಸಯ್ಯನೆಂಬಾರಾಧ್ಯರು, ಕರಸ್ಥಲದ ನಾಗಿ
> ದೇವರು, ವೀರಣ್ಣ ಒಡೆಯದೇವರು ಮುಖ್ಯವಾದ ನೂರೊಂದು
> ವಿರಕ್ತರು ಭಕ್ತರು ಸಹವಾಗಿ ಏಕೋತ್ತರ ಶತಸ್ಥಲಮಂ ಪುಷ್ಪಕದೊಳ
> ಗಿಟ್ಟು ಸರ್ವ ಸಂಭ್ರಮದಿಂದೆ ರಾತ್ರೆಯಲ್ಲಿ ಮೆರವಣಿಗೆಯಂ ಮಾಡಲು"[೨೧೧]

ಎಂಬ ಅಭಿಪ್ರಾಯದಿಂದ ಕಲ್ಲುಮಠದ ಪ್ರಭುದೇವನ ಸಮಕಾಲೀನ ಪರಿಸರ ಹಾಗೂ ಕಾಲದ ಬಗೆಗೆ ಖಚಿತ ಬೆಳಕು ಚೆಲ್ಲುತ್ತದೆ. ಈ ಹಿನ್ನಲೆಯಲ್ಲಿ ಭಕ್ತಿ ಭಂಡಾರಿ ಬಿರುದಿದ್ದ ಜಕ್ಕಣಾರ್ಯನು ವಿಜಯನಗರದ ಪ್ರೌಢದೇವರಾಯನಲ್ಲಿ (ಕ್ರಿ.ಶ. ೧೪೧೯–೧೪೪೬) ದಂಡನಾಯಕನಾಗಿದ್ದ."[೨೧೨] ನೆಂಬ ಸಂಗತಿ ಹಾಗೂ "ವಿದ್ಯಾನಗರದಲ್ಲಿ ೧೦೧ ವಿರಕ್ತರಲ್ಲಿ ಒಬ್ಬನು"[೨೧೩] ಎಂದು ಕಲ್ಲುಮಠದ ಪ್ರಭುದೇವನ ಕುರಿತು ಕವಿಚರಿತೆಕಾರರು ಹೇಳಿದ ಸಂಗತಿ ಸತ್ಯವೆನಿಸುತ್ತದೆ. ಎಸ್.ಎಸ್. ಭೂಸನೂರಮಠರು ಹೇಳುವಂತೆ "......ಕಲ್ಲುಮಠದ ಪ್ರಭುದೇವರು ೧೫ ನೇ ಶತಮಾನದ ಪೂರ್ವಾರ್ಧದಲ್ಲಿ ಪ್ರೌಢದೇವರಾಯನ ವಿಜಯನಗರದಲ್ಲಿ ಬಾಳಿ ಬದುಕಿದನೆಂಬ ಸಂಗತಿ ಇತಿಹಾಸ ಮನ್ನಿಸತಕ್ಕದ್ದು"[೨೧೪] ಎಂಬ ಅಭಿಪ್ರಾಯವನ್ನು ಸಮ್ಮತಿಸಬಹುದಾಗಿದೆ.

**ಕೃತಿಸ್ವರೂಪ:** ಧಾರವಾಡದ ಮುರುಘಾಮಠದಿಂದ ೧೯೫೬ ರಲ್ಲಿ ಶಿ.ಶಿ. ಭೂಸನೂರಮಠರ ಸಂಪಾದಕತ್ವದಲ್ಲಿ ಪ್ರಕಟವಾದ ಕಲ್ಲುಮಠದ ಪ್ರಭುದೇವನ 'ಲಿಂಗಲೀಲಾವಿಲಾಸ ಚಾರಿತ್ರ' ಗ್ರಂಥದ ಮುನ್ನುಡಿಯಲ್ಲಿ ಹೇಳುವಂತೆ ಈ ಗ್ರಂಥದಲ್ಲಿ "ಏಳು ನೂಱ ಎಪ್ಪತ್ತು' ಇಲ್ಲವೆ 'ಏಳನೂಱೆಪ್ಪತ್ತೈದು' ವಚನಗಳಿರಬೇಕು. ೭೭೦ ಈ ಸಂಖ್ಯೆ ವೀರಶೈವರಲ್ಲಿ ಪ್ರಸಿದ್ಧವಾದ ಅಮರಗಣಂಗಳ ಸಂಖ್ಯೆ. ಕಲ್ಲುಮಠದ ಪ್ರಭುದೇವರು ಈ ಸಂಖ್ಯೆಯೇ ಶುಭವೆಂದು ತಮ್ಮ ಗ್ರಂಥದಲ್ಲಿ ೭೭೦ ವಚನಗಳನ್ನೇ ಸೇರಿಸಿಕೊಂಡಿರಬಹುದು. ಉಳಿದ ವಚನಗಳು ಹೇಗೆ ಗ್ರಂಥದಿಂದ ಜಾರಿದವೆಂದೂಹಿಸುವುದು ಕಷ್ಟ"[೨೧೫] ಎಂದಿದ್ದಾರೆ.

ಇಲ್ಲಿಯ ಸಮಸ್ಯೆಗೆ ಕಾರಣವೆಂದರೆ – ಪ್ರಭುದೇವರ ಗ್ರಂಥದ ಕೊನೆಯಲ್ಲಿ ವಚನಗಳ ಸಂಖ್ಯೆ ೭೭೦ ಎಂದು ಹೇಳಿದರೆ; 'ಸ್ವಲೀಲಾನಂದ ಸ್ಥಲ'ದ ಕೊನೆಯಲ್ಲಿ ಅವನೇ ಹೇಳಿರುವ "ಅಂತು ಸ್ಥಲ ೧೬ಕ್ಕಂ, ಶ್ಲೋಕ ೧೩೫ಕ್ಕಂ, ವಚನ ೨೧೨ ಕ್ಕಂ ಮಂಗಳಂ" ಎಂದು ಹೇಳಿರುವುದು. ಹಾಗಾದರೆ, ಈ ಗ್ರಂಥದಲ್ಲಿ ಪ್ರಕ್ಷಿಪ್ತ ವಚನಗಳು ಸೇರಿರಬಹುದೆ? ಎಂಬ ಪ್ರಶ್ನೆ ಕಾಡುತ್ತದೆ. ಮೂಲಮಾತೃಕೆಯ

ವಚನಗಳ ಸಂಖ್ಯೆ ೭೫. ಪ್ರಕ್ಷಿಪ್ತ ವಚನಗಳಲ್ಲಿ ಸಿದ್ಧರಾಮಯ್ಯ ದೇವರ ಗುರು ಕರಣದ ವಚನಗಳು – ೩೩, ಯೋಗಿನಾಥ ಮುದ್ರಿಕೆಯ ತ್ರಿವಿಧಿಗಳು– ೧೨. ಒಟ್ಟು – ೪೫ ಪ್ರಕ್ಷಿಪ್ತ ವಚನಗಳಿಗೆ ೭೫ ಮೂಲಮಾತೃಕೆ ವಚನ ಸಂಖ್ಯೆ ಸೇರಿದರೆ ೭೭೦ ವಚನಗಳಾಗುತ್ತವೆ. ಈ ರೀತಿಯ ಪ್ರಕ್ಷಿಪ್ತ ಕಾರ್ಯವು ಶೂನ್ಯ ಸಂಪಾದನೆಗಳ ಸಂಕಲನ ಕಾಲದಲ್ಲಿ ನಡೆದಿರಬೇಕೆಂಬ ವಾದಕ್ಕೆ ಸಮರ್ಥನೆ ದೊರಕುತ್ತಿದೆ.[೨೧೬] ಈ ಪ್ರಕ್ಷಿಪ್ತ ವಚನಗಳು ಬಹುಶಃ ೧೬–೧೭ನೆಯ ಶತಮಾನದಲ್ಲಿ ಲಿಂಗಲೀಲಾ ವಿಲಾಸ ಚಾರಿತ್ರದಲ್ಲಿ ಸೇರಿರಬೇಕು"[೨೧೭] ಎಂಬ ಡಾ. ಬಿ. ವಿ. ಶಿರೂರರ ಅಭಿಪ್ರಾಯ ಸೂಕ್ತವೆನ್ನಬಹುದು.

'ಲಿಂಗಲೀಲಾವಿಲಾಸ ಚಾರಿತ್ರ'ವು ೧೬ ಸ್ಥಲಗಳಲ್ಲಿ ನಿರೂಪಗೊಂಡಿದೆ. ಎಲ್ಲ ಸ್ಥಲಗಳಿಗೆ ಸಂಬಂಧಿಸಿದಂತೆ ಸೂತ್ರಗಳನ್ನು ಮತ್ತು ಕೆಲವಕ್ಕೆ ವೃತ್ತವನ್ನು ಹಲವು ಸಂಸ್ಕೃತ ಶ್ಲೋಕಗಳನ್ನು ಬರೆದು ಈ ಶ್ಲೋಕ ಹಾಗೂ ವಚನಗಳಿಗೆ ಪ್ರಭುದೇವನು ಟೀಕೆಯನ್ನು ಬರೆದಿದ್ದಾನೆ. ಒಟ್ಟು ೩೮ ವಚನಕಾರರ ೭೭೦ ವಚನಗಳಿಗೆ, ೧೩೫ ಸಂಸ್ಕೃತ ಶ್ಲೋಕಗಳಿಗೂ ವ್ಯಾಖ್ಯಾನ ಮಾಡಿದ್ದಾನೆ.

ಡಾ. ಶಿವಾನಂದ ವಿರಕ್ತಮಠರು – "ಇದರಲ್ಲಿ ಪ್ರಭು, ಚೆನ್ನಬಸವ, ಬಸವಣ್ಣ, ಸಿದ್ಧರಾಮ, ಅಂಬಿಗರ ಚೌಡಯ್ಯನಂತಹ ಸುಪರಿಚಿತರೂ, ಘಟ್ಟಿವಾಳಯ್ಯ, ನೂಲಿಯ ಚಂದಯ್ಯ, ಮೆರೆಮಿಂಡದೇವರಂತಹ ಪರಿಚಿತರೂ, ಚಂದಿಮರಸ, ಚಿಕ್ಕಣ್ಣ, ಪಾಕದ ಭೀಮಯ್ಯ, ಮೇದಾರ ಮೋಯಣ್ಣನಂಥ ಅಪರಿಚಿತರೂ, ಮುಕ್ತಾಯಕ್ಕ, ಮಹಾದೇವಿಯಕ್ಕರಂತಹ ಶರಣೆಯರೂ ಸೇರಿದ್ದಾರೆ. ಇವರಲ್ಲಿ ತೆಲುಗು ಬೊಮ್ಮಯ್ಯ, ನೂಲಿಯ ಚಂದಯ್ಯ, ಕದಂಬ ವಿಳಾಸ, ಕೂಡಲಚೆನ್ನಸಂಗಾಂಕಿತ ಶರಣ, ಬಿಬ್ಬಿ ಬಾಚಯ್ಯ ಇವರ ಒಂದೊಂದೇ ವಚನಗಳಿವೆ. ಇಲ್ಲಿ ಅತಿ ಹೆಚ್ಚೆಂದರೆ ಸು. ೧೮೯ ವಚನಗಳು. ಇವು ಚೆನ್ನಬಸವಣ್ಣನವು.[೨೧೮] ಅಂದರೆ ಅಲ್ಲಮಪ್ರಭುವಿನ ೧೭೦, ಬಸವಣ್ಣನ ೧೭೭, ಚೆನ್ನಬಸವಣ್ಣನ ೧೮೯, ಸಿದ್ಧರಾಮನ ೩೩, ಅಕ್ಕಮಹಾದೇವಿಯ ೨೨, ಉರಿಲಿಂಗಪೆದ್ದಿಯ ೨೫, ಯೋಗಿನಾಥ ಮುದ್ರಿಕೆಯ ತ್ರಿವಿದಿಗಳು ೧೭, ಚಂದಿಮರಸನ ೧೪, ಜೇಡರದಾಸಿಮಯ್ಯನ ೧೦, ಘಟ್ಟಿವಾಳಯ್ಯ ೦೯, ಮಡಿವಾಳಮಾಚಿದೇವನ ೦೭, ಬಹುರೂಪಿ ಚೌಡಯ್ಯನ ೦೬, ಅಂಬಿಗರ ಚೌಡಯ್ಯನ ೦೫, ಹಾವಿನಾಳ ಕಲ್ಲಯ್ಯನ ೦೫, ಮುಕ್ತಾಯಕ್ಕನ ೦೪, ಸೊಡ್ಡಳಬಾಚರಸನ ೦೪, ಗಜೇಶಮಸಣಯ್ಯನ ೦೩, ಚಿಕ್ಕಣ್ಣನ ೦೩, ಉರಿಲಿಂಗದೇವನ ೦೩, ಸತ್ಯಕ್ಕನ ೦೪, ಮೋಳಿಗೆಯ ಮಾರಿತಂದೆಯ ೦೪, ಬಿಬ್ಬಿಬಾಚಯ್ಯನ ೦೨, ಅಮುಗೆದೇವಯ್ಯನ ೦೨, ಸಕಳೇಶ ಮಾದರಸನ ೦೨, ಡೋಹರಕಕ್ಕಯ್ಯನ ೦೨ ವಚನಗಳಿಗೆ ವ್ಯಾಖ್ಯಾನ ಬರೆದಿದ್ದಾನೆ.

"ಲಿಂಗಲೀಲೆಯೆಂಬುದು ಸಮಷ್ಟಿ ಪದವೇ ಆಗಿದೆ. ಲಿಂಗ ಮತ್ತು ಲೀಲೆ ಬೇರೆ ಬೇರೆ ಪದಗಳೇನೂ ಅಲ್ಲ. 'ಲಿಕಾರವೇ ಶೂನ್ಯ, ಬಿಂದುವೇ ಲೀಲೆ. ಗ ಕಾರವೇ ಚಿತ್ತು' ಇದುವೇ ಲಿಂಗ ಪದದ ನಿರ್ವಚನ ಎಂಬುದಾಗಿ ಚೆನ್ನಬಸವಣ್ಣನ ವಚನಕ್ಕೆ ಕಲ್ಲುಮಠದ ಪ್ರಭುದೇವನು ತಾತ್ಪರ್ಯ ಬರೆದಿದ್ದಾನೆ.

ಲಿಂಗಲೀಲಾ ವಿಲಾಸದಲ್ಲಿ ಶರಣರ ವಚನಗಳೇ "ಗುರುವಚನ" ಆ ವಚನಗಳು 'ವೇದಾಗಮ' ಮೀರಿ ನಿಂತಿರುವ 'ವಚನಾಗಮ' ಎನ್ನುತ್ತಾನೆ. ಇವರ ಪ್ರಕಾರ 'ವಚನ' ವೆಂದರೆ "ಶಿವಾನುಭವಿಗಳು ಶಿವಸುಖವನನುಭವಿಸಿ, ತೃಪ್ತಿ ಪಡೆದು ಸಂತುಷ್ಟಿ ನಿಮಿರ್ದು ವಾಂಙ್ಮನದಿಂದುಕ್ಕಿ ನುಡಿದ ನುಡಿಯೇ ವಚನ"[೨೯] ಎಂದಿದ್ದಾನೆ. ಶಿವಶರಣರು ಶಿವನ ಸಾನ್ನಿಧ್ಯದಲ್ಲಿ ತಮ್ಮನ್ನು ತಾವು ಕಂಡುಕೊಳ್ಳುವ ಮೂಲಕ ಜೀವ ಪರಮಾತ್ಮಗಳ ತಿಳಿವಿನ ಆತ್ಮಾವಲೋಕನದ ಮಾತೇ ವಚನವೆಂದು ಪರಿಭಾವಿಸಲಾಗಿದೆ. ಇದಲ್ಲದೇ ಕಲ್ಲುಮಠದ ಪ್ರಭುದೇವ ಜೀವಿಸಿದ್ದ ಪ್ರೌಢದೇವರಾಯನ ಕಾಲಘಟ್ಟದಲ್ಲಿಯೇ– "......... ವಚನಸಾಹಿತ್ಯಕ್ಕೆ ಆಗಮಸಾಹಿತ್ಯದ ಬಣ್ಣ ಬರತೊಡಗಿತು. ಈ ಕಾಲದಲ್ಲಿ ವಚನಸಾಹಿತ್ಯವನ್ನು 'ವಚನಾಗಮ' (ವಚನ+ಆಗಮ)......... ಈ ಶಬ್ದವನ್ನು ಮೊದಲು ಬಳಸಿದವನು ಕಲ್ಲುಮಠದ ಪ್ರಭುದೇವ. ೧. ಈಗ ವಚನ ಸಂಕಲನಗಳ ಪ್ರತಿಯೊಂದು ಪ್ರಕರಣದ ಆರಂಭದಲ್ಲಿ ಆಗಮ ಶ್ಲೋಕಗಳನ್ನು ಜೋಡಿಸುವ. ೨. ಆಗಮ ಶ್ಲೋಕಗಳನ್ನು ವಚನಗಳ ಒಡಲಲ್ಲಿ ಸೇರಿಸುವ. ೩. ಆಗಮ ಸಿದ್ಧಾಂತಕ್ಕೆ ಹೊಂದುವಂತೆ ವಚನ ಪಾಠಗಳನ್ನು ವ್ಯತ್ಯಾಸ ಮಾಡುವ ೪. ಆಗಮ ಸಿದ್ಧಾಂತಕ್ಕೆ ಅನುಗುಣವಾದ ಕೃತಕ ವಚನಗಳನ್ನು ಶರಣರ ಹೆಸರಿನಲ್ಲಿ ಸೃಷ್ಟಿಸುವ ಕೆಲಸ ವಿಶೇಷವಾಗಿ ಜರುಗಿತು........."[೩೦] ಎಂದು ಡಾ. ಎಂ.ಎಂ. ಕಲಬುರ್ಗಿ ಅಭಿಪ್ರಾಯಪಟ್ಟಿದ್ದಾರೆ. ಇವರ ಹೇಳಿಕೆಯಲ್ಲಿ ಸತ್ಯಾಂಶವಿದ್ದುದರಿಂದ ಕೃತಕ (ಪ್ರಕ್ಷಿಪ್ತ) ವಚನಗಳನ್ನು ಸೇರಿಸುವ, ವಚನ ಪಾಠ ವ್ಯತ್ಯಾಸ ಮಾಡುವ ಅಂಶಗಳನ್ನು ಸೂಕ್ಷ್ಮವಾಗಿ ಅವಲೋಕಿಸಬೇಕಾಗುತ್ತದೆ. ಇದೊಂದು ಪ್ರತ್ಯೇಕ ಅಧ್ಯಯನದ ವಿಷಯವಾಗಿದೆ.

**ಟೀಕಿನ ವಚನಗಳ ಸ್ವರೂಪ:**

ಕಲ್ಲುಮಠದ ಪ್ರಭುದೇವರು ಇಲ್ಲಿ ೩೮ ವಚನಕಾರರ ವಚನಗಳಲ್ಲಡಗಿದ ರಹಸ್ಯ, ತಾತ್ವಿಕ ಹಿನ್ನೆಲೆ, ತತ್ವದರ್ಶನ, ಶಿವಸ್ವರೂಪದ ಮೂಲವನ್ನು ತಾತ್ಪರ್ಯಾರ್ಥಗಳಿಂದ ವ್ಯಾಖ್ಯಾನದ ಮೂಲಕ ಶರಣರ ಚಾರಿತ್ರದ ಲಿಂಗಲೀಲೆಯ ಮಹತಿಯನ್ನು ತಿಳಿಸಲು ಉದ್ದೇಶಿಸಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ, ತನ್ನ ಸಮಕಾಲೀನ ಸಂದರ್ಭದಲ್ಲಿ ಲಿಂಗಾಯತರಲ್ಲಿಯೇ ಶೈವ–ವೀರಶೈವದ ತಾತ್ವಿಕ ಭಿನ್ನಾಭಿಪ್ರಾಯದಿಂದ ಸಮಾಜ ದಾರಿತಪ್ಪುವಂತೆ ಕಂಡುಬಂದಿರಬೇಕು. ಟೀಕಾಕಾರ ಪ್ರಭುದೇವನೆ ಹೇಳುವಂತೆ– "ಇದು ಶೈವಗಜಕ್ಕೆ ಕೇಸರಿ, ಶೈವಾದ್ರಿಯ ಪೊಳಲ್ಚುವಡೆ ಕುಲಿಶಾಯುಧ, ವೀರಶೈವಾಮೃತವ ಭೋರೆನೆ ನೆರೆ ನೀಡುತಿಹ ಸುರ ಬೂರುಹ" ಎಂದು ಹೇಳಿರುವುದರಿಂದ ಈ ಕೃತಿ ವೀರಶೈವರಿಗೆ ಪವಿತ್ರ ಗ್ರಂಥವಾಗಿ ಸನ್ಮಾರ್ಗ ತೋರಲಿದೆ ಎಂಬ ಭಾವನೆ ಇಲ್ಲಿ ಮುಖ್ಯವಾದಂತಿದೆ.

ಅಲ್ಲದೇ ಶಿವಶರಣರು ಸತ್ಯಶುದ್ಧ ನಡೆ–ನುಡಿ, ಅರಿವು–ಆಚಾರದ ಮೂಲಕ ನುಡಿದ ವಚನಗಳು ವೇದಾಗಮಗಳಿಗಿಂತಲೂ ಶ್ರೇಷ್ಠವಾದವು ಎಂಬುದನ್ನು ಕಂಡುಕೊಂಡು ಅದನ್ನು ಈ ಕೃತಿಯ ಮೂಲಕ ಸಮರ್ಥನೆ ನೀಡಲು ಪ್ರಯತ್ನಿಸಿದಂತಿದೆ. "ಲಿಂಗಲೀಲಾ ವಿಲಾಸ ಚಾರಿತ್ರ"ವೆ ಶರಣ ಚಾರಿತ್ರವೆಂದು ಪುರಾತನ ವಚನಗಳಿಂದ ಕಾಣಲಾಯಿತ್ತಾಗಿ ಮಿಕ್ಕಿನ ವೇದಾಗಮಂಗಳು ಜಡ್ಡುಗೊಜಡೆಂದು

ಅವ ಬಿಟ್ಟು ಪುರಾತನ ವಚನ ಏಳನೂಱೆಪ್ಪತ್ತ ತೆಗೆದುಕೊಂಡು, ಷೋಡಶಸ್ಥಲಪರಿಕ್ರಮದಿಂದ ಸೇರಿಸಿ ವ್ಯಾಖ್ಯಾನವ ಮಾಡಿದ ವಿದ್ಯಾನಗರ ಕಲ್ಲುಮಠದ ಪ್ರಭುದೇವಾರ್ಯನು."[೨೫೦] ಡಾ. ವಿ. ಶಿವಾನಂದರು ಹೇಳುವಂತೆ "ಶರಣನ ಬಾಹ್ಯ ಜೀವನದ ಕಥೆಯಲ್ಲ, ಷಡುಸ್ಥಲ ಮಾರ್ಗದಲ್ಲಿ ಭಕ್ತಿವಿಡಿದಾಚರಿಸುವ ಶರಣನ ಲಿಂಗಲೀಲಾವಿಲಾಸದ ಕಥೆ"[೨೫೧] ಎಂದು ಹೇಳಿರುವುದು ಸೂಕ್ತವಾಗಿದೆ.

ಹೀಗಾಗಿ, ಈ ಜಗತ್ತು, ದೇಹ, ಪ್ರಾಣ, ಭಾವಗಳು ಲಿಂಗ ಸ್ವರೂಪವಾಗಿವೆ. ಇಲ್ಲಿ ಸೇವ್ಯನಿಲ್ಲ, ಸೇವಕನಿಲ್ಲ; ಪೂಜ್ಯನಿಲ್ಲ, ಪೂಜಕನಿಲ್ಲ; ಆದಿ ಅನಾದಿಗಳಿಲ್ಲ; ಶೂನ್ಯ ನಿಶ್ಶೂನ್ಯಗಳಿಲ್ಲ; ಏನೂ ಏನೂ ಇಲ್ಲ. ಇದು ಅಭಾವ ವೈರಾಗ್ಯವಲ್ಲ. ನೇತಿ ಮಾರ್ಗವೂ ಅಲ್ಲ. ಇದುವೇ ಶಕ್ತಿವಿಶಿಷ್ಟಾದ್ವೈತದ ಕಲ್ಪನೆ, ಷಟ್‌ಸ್ಥಲದ ವಿಚಾರ. ಇದನ್ನರಿತು ಸುಜ್ಞಾನಿಯಾಗಿ ತನ್ನ ದೇಹ, ಪ್ರಾಣ, ಭಾವಗಳ ಮಲಗಳನ್ನು ತೊಳೆದು ಸರ್ವಾಂಗಲಿಂಗಿಯಾಗಿ ಆಚರಿಸುವುದೇ ಅನುಭಾವ. ಇದುವೇ ಲಿಂಗಲೀಲಾ ವಿಲಾಸದ ವೈಚಿತ್ರ್ಯ

ಪ್ರತಿಯೊಂದು ಸ್ಥಲದ ಪ್ರಾರಂಭದಲ್ಲಿ ಆ ಸ್ಥಲದ ವಿವರಣೆಯನ್ನು ಸೂತ್ರ ರೂಪದಲ್ಲಿ ಕೊಡಲಾಗಿದೆ. ಉದಾಹರಣೆ – "ಅಖಂಡಾದ್ವಯ ನಿತ್ಯ ನಿರವಯ ಪರಿಪೂರ್ಣ ಸಚ್ಚಿದಾನಂದಪ್ಪ ನಿಷ್ಕಲವಸ್ತು ತಾನೊಂದೆಯಲ್ಲದೇ ಅನ್ಯವಾಗಿ ತೋರುವ ತತ್ವಂಗಳೇನೂ ಇಲ್ಲದೆ ಸರ್ವವೂ ಶೂನ್ಯವಾಗಿ ಮತ್ತೇನೂ ಏನೂ ಇಲ್ಲದೆ ತಾನೆ ತಾನೆಯಾಗಿ, ನಾನೆಂಬ ಅಱಿವಿನ ತೋಱಿಕೆ ತೋಱದೆ ತನ್ನ ನಿಜಸ್ವಭಾವದಲ್ಲಿಪ್ಪ ನಿಶ್ಶೂನ್ಯವಸ್ತುವನು ನಿಷ್ಕಲಲಿಂಗಸ್ಥಲವೆಂದು ಹೇಳಲಾಯಿತ್ತು."[೨೫೨] ಈ ಸೂತ್ರಗಳು "........ಸಂದಿಗ್ಧತೆ ಸಂದೇಹಗಳಿಗೆಡೆಗೊಡದೆ, ಸಮಗ್ರವಾದ ಸ್ಥಲಮಹಾತ್ಮೆಯನ್ನು ಸಂಕ್ಷೇಪಿಸಿ ಹೇಳುವ ಗದ್ಯಮಂತ್ರಗಳಂತಿವೆ ಎನ್ನುತ್ತಾರೆ."[೨೫೪] "ಪ್ರತಿ ಸ್ಥಲದ ಆದಿಯಲ್ಲಿ ಬಂದಿರುವ ಸೂತ್ರಭಾಗಗಳನ್ನು ಮತ್ತು ಗ್ರಂಥದ ಆದಿಯಲ್ಲಿರುವ ಪೀಠಿಕಾ ಭಾಗವನ್ನು ಒಂದೆಡೆ ಸಂಗ್ರಹಿಸಿದರೆ ಅವು ವೀರಶೈವ ಧರ್ಮದ ತತ್ವಜ್ಞಾನಕ್ಕೆ ಕೈಗನ್ನಡಿಯಂತಾಗಬಹುದು."[೨೫೫] ಎಂದು ಡಾ. ಬಿ.ವಿ. ಶಿರೂರರು ಅಭಿಪ್ರಾಯಪಟ್ಟಿರುವುದರಲ್ಲಿ ಅತಿಶಯೋಕ್ತಿಯಿಲ್ಲ.

ಈ ಕೃತಿಯ ಪ್ರತಿ ಸ್ಥಲದ ಸೂತ್ರದ ತರುವಾಯ ಆ ಸ್ಥಲವನ್ನು ಪುಷ್ಟೀಕರಿಸಲು ಸಂಸ್ಕೃತ ಶ್ಲೋಕಗಳನ್ನು ಟೀಕಾಸಹಿತ ಕೊಡಲಾಗಿದೆ. ಉದಾಹರಣೆಗೆ ಗುರುಕರುಣ ಸ್ಥಲದ ಆರಂಭದ ಹಲವು ಶ್ಲೋಕಗಳಲ್ಲಿ ಒಂದನ್ನು ಗಮನಿಸಬಹುದು–

"ಚೈತನ್ಯಂ ಶಾಶ್ವತಂ ಶಾಂತಂ ವ್ಯೋಮಾತೀತಂ ನಿರಂಜನಮ್

ನಾದಬಿಂದು ಕಲಾತೀತಂ ತಸ್ಮೈ ಶ್ರೀ ಗುರುವೇ ನಮಃ" ಇದಕ್ಕೆ ಈ ರೀತಿಯಾಗಿ ಟೀಕೆ ಬರೆಯಲಾಗಿದೆ.

**ಟೀಕು:** ಚೈತನ್ಯಾತ್ಮಕನಾದಂಥಾ ನಿತ್ಯನಾದಂಥಾ ಶಾಂತನಾದಂಥಾ
ಆಕಾಶಾದಿ ತತ್ತ್ವವನು ಮಿಱಿದಂಥಾ ನಿರಂಜನನಂಥಾ ನಾದ ಬಿಂದು
ಕಲೆಗಳ ಮಿಱಿದಂಥಾ ಶ್ರೀ ಗುರುವಿಗೋಸ್ಕರ ನಮಸ್ಕಾರವು.

ಹೀಗೆ ಪ್ರತಿ ಸ್ಥಲದ ಆರಂಭದಲ್ಲಿ ೫ ರಿಂದ ೬ ಸಂಸ್ಕೃತ ಶ್ಲೋಕ ಕೊಟ್ಟು ವಿಷಯ ವಿವರಿಸಲಾಗಿದೆ. "ಇಲ್ಲಿ ಒಟ್ಟು ೧೩೫ ಶ್ಲೋಕಗಳಿವೆ. ಈ ಶ್ಲೋಕಗಳನ್ನು ವಾತುಳ, ಸ್ಕಂದ, ಲೈಂಗ್ಯ, ಶಿವಪುರಾಣ, ರುದ್ರಯಮಳ, ಬ್ರಹ್ಮಗೀತೆ, ಶಿವಧರ್ಮ, ಸಿದ್ಧಾಂತ ಶಿಖರ, ಅನಾದಿ ವೀರಶೈವ ಸಾರಸಂಗ್ರಹ, ವಾಸಿಷ್ಠ, ಶಿವಧರ್ಮೋತ್ತರ, ಶ್ರುತಿ, ವಿಶ್ವಸಾದಾಖ್ಯ ಶೈವರತ್ನಾಕರ, ಸ್ತೋತ್ರವರ್ಣವ, ಯೋಗಸಾರ, ತತ್ವಸಾರ, ಶಿವಾನುಭವಸೂತ್ರ ಇತ್ಯಾದಿ ಗ್ರಂಥಗಳಿಂದ ಎತ್ತಿಕೊಳ್ಳಲಾಗಿದೆ".[೨೬]

**ಅಂಗಸ್ಥಲ ಸೂತ್ರ** : ಅಂತು ಅಖಂಡ ಚಿತ್ಪ್ರಕಾಶತೇಜೋಮೂರ್ತಿಯಾದ ಮಹಾಲಿಂಗವು ಪಂಚಸಾದಾಖ್ಯ ಲಿಂಗಮೂರ್ತಿಯಾಗುತ್ತದೆ. ಆತ್ಮನೆಂಬ ಅಂಗವು ತಾನೆಯಾಯಿತ್ತು. ಅಂತು ತನ್ನ ಸ್ವಲೀಲೆಯಿಂದ ಲಿಂಗಾಂಗವೆರಡಾಗಿ ಪೂಜ್ಯ ಪೂಜಕನಾದುದು ಒಂದೇ ವಸ್ತು. ಅಂದು ಶಿವಾಂಶಿಕನಾದ ಆತ್ಮನೇ ಆ ಲಿಂಗಕ್ಕೆ ಅಂಗವಾದುದಾಗಿ ಅಂಗಸ್ಥಲವೆಂದು ಹೇಳಲಾದುದು.

ಅಂಗಸ್ಥಲಕ್ಕೆ ಶ್ಲೋಕ: ಸ್ವಶಕ್ತಿ ಕ್ಷೋಭಮಾತ್ರೇಣ ಸ್ಥಲಂ ತದ್ದ್ವಿವಿಧಂ ಭವೇತ್ಏಕಂ ಲಿಂಗಸ್ಥಲಂ ಪ್ರೋಕ್ತಂ ಅನ್ಯದಂಗಸ್ಥಲಂ ಸ್ಮೃತಂ

**ಟೀಕೆ** : ತತ್‌ಸ್ಥಲಂ–ಆ ಸ್ಥಲವು, ಸ್ವಶಕ್ತಿಕ್ಷೋಭಮಾತ್ರೇಣ; ಸ್ವ–ತನ್ನ, ಶಕ್ತಿ–ಮಾಯಾ ಶಕ್ತಿಯ; ಕ್ಷೋಭಮಾತ್ರೇಣ–ಚಲನೆ ಮಾತ್ರದಿಂದವೆ; ದ್ವಿವಿಧಂ ಭವೇತ್–ಎರಡು ಪ್ರಕಾರವಾದುದು. ಆ ಎರಡಜೊಳಗೆ ಏಕಂ–ಒಂದು ಸ್ಥಲವು, ಲಿಂಗಸ್ಥಲಂ–ಲಿಂಗಸ್ಥಲವೆಂದು, ಪ್ರೋಕ್ತಂ–ಹೇಳಲ್ಪಟ್ಟುದು, ಅನ್ಯತ್–ಮತ್ತೊಂದು, ಅಂಗಸ್ಥಲಂ–ಅಂಗಸ್ಥಲವೆಂದು, ಸ್ಮೃತಂ–ನೆನೆಯಲ್ಪಟ್ಟಿತ್ತು. ಇದೇ ರೀತಿಯಾಗಿ ಒಟ್ಟು ೧೩ ಶ್ಲೋಕಗಳನ್ನು ಅವುಗಳ ಟೀಕನ್ನೂ ಕೊಡಲಾಗಿದೆ. ಈಗ ಅಂಗಸ್ಥಲದ ಒಂದು ವಚನ ಹಾಗೂ ಟೀಕನ್ನು ಗಮನಿಸೋಣ.

**ವಚನ:** ಓಂ ಪ್ರಥಮದಲ್ಲಿ ದಿವ್ಯನಿರಾಲಂಬಮೂರ್ತಿ ಜಗತ್ ಸೃಷ್ಟ್ಯರ್ಥಕಾರಣವಾಗಿ ತತ್ತಾದಲ್ಲಿ ಪಂಚಬ್ರಹ್ಮ ಸಾಕಾರಮೂರ್ತಿಯಾದ ಲೀಲಾಸಂಭವವಾದಲ್ಲಿ ಅಣುವಿಂಗೆ ಅಣು, ಮಹತ್ತಿಂಗೆ ಮಹತ್ತು ಅಂಗಕರಂಡ ಆತ್ಮಸುಗಂಧ ನೀನಾದೆಯಲ್ಲ ಏಣಾಂಕಧರ ಸೋಮೇಶ್ವರಾ.

**ಟೀಕು:** ಸಾಕಾರಗಳನವಲಂಬಿಸದೇ ನಿಃಕಲವಾಗಿದ್ದಿತ್ತು ಪರಬ್ರಹ್ಮ ಮೊಟ್ಟ ಮೊದಲಲ್ಲಿ ಎಂಬುದೀಗ ಓಂ ಪ್ರಥಮದಲ್ಲಿ ದಿವ್ಯ ನಿರಾಲಂಬಮೂರ್ತಿ ಎಂಬ ಶಬ್ಧಕ್ಕೆ ಅರ್ಥ. ಅಂದು ನಿಃಕಲವಾಗಿರ್ದ ಅಖಂಡ ಚೈತನ್ಯ ಜ್ಞಾನವಸ್ತು ತನ್ನ ತಾನೇ ಸೇವ್ಯ ಸೇವಕನಾಗಿರಬೇಕೆಂಬ ಲೀಲಾ ಚಿಂತನೆದೋಜೆ ಅಖಂಡ ತೇಜೋಮೂರ್ತಿಯಾದ ಮಹಾಲಿಂಗವಾಯಿತ್ತೆಂಬುದೀಗ 'ಜಗತ್ ಸೃಷ್ಟ್ಯರ್ಥ ಕಾರಣವಾಗಿ ತತ್ತಾದ'ನೆಂಬ ಶಬ್ಧಕ್ಕರ್ಥ. ಅಂತಾದ ಮಹಾಲಿಂಗವು ತನ್ನ ಸ್ವಲೀಲೆಯಿಂದವೇ ಪಂಚಸಾದಾಖ್ಯಮೂರ್ತಿಯಾಗಿ ಸಾಕಾರವಾದನೆಂಬುದೀಗ ತತ್ತಾದಲ್ಲಿ ಪಂಚಬ್ರಹ್ಮ ಸಾಕಾರಮೂರ್ತಿಯಾದನೆಂಬ ಶಬ್ದಕ್ಕರ್ಥ. ಅಂತು ಪಂಚಬ್ರಹ್ಮಸಾಕಾರ ಮೂರ್ತಿಯಾದ ಮಹತ್ತಾಗುತ್ತವೆ. ಆ ಲಿಂಗವು ಅಣುರೂಪವಾದ ಆತ್ಮನೆಂಬ

ಅಂಗಸ್ವರೂಪುತಾನೆಯಾದನೆಂಬುದೀಗ 'ಅಣುವಿಂಗೆ ಅಣು, ಮಹತ್ತಿಂಗೆ ಮಹತ್ತು, ಅಂಗಕರಂಡ ಆತ್ಮ, ಸುಗಂಧ ನೀನಾದೆಯಲ್ಲ ಏಣಾಂಕಧರ ಸೋಮೇಶ್ವರ ಎಂಬ ಶಬ್ಧಕ್ಕರ್ಥ".[೨೨೭]

ಇದೇ ಕ್ರಮವನ್ನು ಎಲ್ಲ ಸ್ಥಲಗಳಲ್ಲಿಯೂ ಅನುಸರಿಸಲಾಗಿದೆ. ಟೀಕೆ ಎಂಬುದು ಆಯಾ ಸ್ಥಲದಲ್ಲಿ ಬಳಸಿಕೊಂಡ ವಚನಗಳ ಹೊರಮೈ ಇಲ್ಲವೇ ಒಳಮೈ ಇವೆರಡನ್ನು ಕುರಿತು ನಡೆಸಿದ ಅಧ್ಯಯನವೆನ್ನಬಹುದು. ಇವುಗಳಲ್ಲಿ "ಹೊರಮೈ ಅಧ್ಯಯನ ಶಬ್ದಾರ್ಥ ಪಾತಳಿಯಲ್ಲಿ ವ್ಯವಹಿಸಿದರೆ, ಒಳಮೈ ಅಧ್ಯಯನ ಭಾವಾರ್ಥ ಪಾತಳಿಯಲ್ಲಿ ವ್ಯವಹರಿಸುತ್ತದೆ".[೨೨೮] ಇದೇ ಮಾದರಿ ಇಲ್ಲಿಯ ಲಿಂಗಲೀಲಾವಿಲಾಸ ಚಾರಿತ್ರ್ಯದ ಟೀಕೆಗಳಲ್ಲಿ ಅಂದರೆ, ಶಬ್ದಾರ್ಥ, ತಾತ್ಪರ್ಯಾರ್ಥ ಮಾದರಿಯಲ್ಲಿ ವಚನಗಳ ಹೊರಮೈ, ಒಳಮೈಗಳೆರಡನ್ನೂ ಕಲ್ಲುಮಠದ ಪ್ರಭುದೇವರು ಪರಿಚಯಿಸಲು ಪ್ರಯತ್ನಿಸುತ್ತಾರೆ. ಪ್ರಖಾಂಡ ಸಂಸ್ಕೃತ ಪಾಂಡಿತ್ಯ ಹೊಂದಿದ ಈತನು ಸಂಸ್ಕೃತ ಭಾಷೆಯ ಗಾಂಭೀರ್ಯವನ್ನು ತನ್ನ ಟೀಕೆಯಲ್ಲಿ ತೋರ್ಪಡಿಸಿದ್ದಾನೆ. ಅಲ್ಲದೇ ಇಲ್ಲಿಯ ವಚನ ಟೀಕುಗಳು ಆಧ್ಯಾತ್ಮಿಕ ನೆಲೆಯಲ್ಲಿ ಮಾತ್ರ ಪ್ರವಹಿಸುತ್ತವೆಯೇ ಹೊರತು ಲೌಕಿಕ ಪಾತಳಿಯಲ್ಲಿ ಅಲ್ಲವೆಂಬುದನ್ನು ಹಲವು ಮಾದರಿ ಟೀಕೆಗಳ ಮೂಲಕ ಗಮನಿಸಬಹುದು.

**ವಚನ:** ಶಿಲೆಯೊಳಗಣ ಪಾವಕನಂತೆ, ಉದಕದೊಳಗಣ ಪ್ರತಿಬಿಂಬದಂತೆ,
ಬೀಜದೊಳಗಣ ವೃಕ್ಷದಂತೆ, ಶಬ್ದದೊಳಗಣ ನಿಶ್ಯಬ್ದದಂತೆ
ಗುಹೇಶ್ವರಾ ನಿಮ್ಮ ಶರಣ ಸಂಬಂಧ.

**ಟೀಕು:** "ಶಿವಾಂಶಿಕನಾದ ಆತ್ಮನು ಜಡಪಿಂಡಸಂಬಂಧಿಯಾಗಿ ತನ್ನ ನಿಜದನಿಲವಪ್ಪ ಪರಬ್ರಹ್ಮವ ಮರೆದಿಪ್ಪ ಆ ಆತ್ಮದ ನಿಜದರೆವಪ್ಪ ಪರಬ್ರಹ್ಮವು ಎಂತಿದ್ದಿತ್ತೆಂದಡೆ ಶಿಲೆಯೊಳಗಿಪ್ಪ ಅಗ್ನಿ ಮೈದೋರದ ಹಾಂಗೆ ಆ ಪರಬ್ರಹ್ಮವು ಪಿಂಡಸ್ಥವಾಗಿರ್ದು ಕಾಣಿಸಬಾರದೆಂಬುದೀಗ–'ಶಿಲೆಯೊಳಗಣ ಪಾವಕನಂತೆ' ಎಂಬ ಶಬ್ದಕ್ಕರ್ಥ.

ಉದಕದೊಳಗೆ ಪ್ರತಿಬಿಂಬವು ಉದಕದ ಗುಣ ಧರ್ಮಕರ್ಮ ಹೊದ್ದದ ಹಾಂಗೆ ಆ ಪರಬ್ರಹ್ಮವು ಪಿಂಡದ ಗುಣ ಧರ್ಮಕರ್ಮದ ಹೊದ್ದತಿಪ್ಪದೆಂಬುದೀಗ – 'ಉದಕದೊಳಗಣ ಪ್ರತಿಬಿಂಬದಂತೆ' ಎಂಬ ಶಬ್ದಕ್ಕರ್ಥ.

ಬೀಜದೊಳಗಡಗಿಪ್ಪ ವೃಕ್ಷದ ಹಾಂಗೆ ಆ ಪರಬ್ರಹ್ಮವು ಪಿಂಡಮಧ್ಯದಲ್ಲಿ ಗೂಢವಾಗಿಪ್ಪುದೆಂಬುದೀಗ– 'ಬೀಜದೊಳಗಣ ವೃಕ್ಷದಂತೆ ಎಂಬ ಶಬ್ದಕ್ಕರ್ಥ. ಈ ಶಬ್ದದೊಳಗೆ ನಿಃಶಬ್ಧವಾಗಿದ್ದುದನು ಭೇದಿಸಬಾರದ ಹಾಂಗೆ ಆ ಪರಬ್ರಹ್ಮವು ಪಿಂಡಸ್ಥವಾಗಿರ್ದು ಅಭೇದ್ಯವಾಗಿರ್ಪುದೆಂಬುದೀಗ – 'ಶಬ್ದದೊಳಗಣ ನಿಃಶಬ್ದದಂತೆ' ಎಂಬ ಶಬ್ದಕ್ಕರ್ಥ.

ಅಂತು ಶಿವಾಂಸಿಕನಾದ ಆತ್ಮನು ಶಿವನಾಜ್ಞೆಯಿಂದ ಜಡಪಿಂಡಸಂಬಂಧಿಯಾಗಿ ತನ್ನ ನಿಜವ ಮರೆದಿಪ್ಪಲ್ಲಿ ಆ ಆತ್ಮನ ನಿಜಸ್ವರೂಪನಮಪ್ಪ ಪರಬ್ರಹ್ಮವು ಪಿಂಡಸ್ಥನಾದ ಆತ್ಮನಲ್ಲಿ ವಿಯೋಗವಿಲ್ಲದೇ

ಪರಿಪೂರ್ಣವಾಗಿರ್ದು ಸ್ಫುರಿಸದೆ ಅಡಗಿಪ್ಪುದು. ಅಂತು ಆತ್ಮನು ತನ್ನಲ್ಲಿ ವಿಯೋಗವಿಲ್ಲದೆ ತಾನೆಯಾಗಿರ್ದ ಪರಬ್ರಹ್ಮವೆ ತಾನೆಂಬ ಶಿವಜ್ಞಾನ ತಲೆದೋರಿದಲ್ಲಿ ಲಿಂಗಶರಣನೆನಿಸುವನೆಂಬುದೀಗ 'ಗೂಹೇಶ್ವರಾ ನಿಮ್ಮ ಶರಣ ಸಂಬಂಧ'ವೆಂಬ ಶಬ್ದಕ್ಕರ್ಥ".[೨೨೯]

**ಮೇಲ್ಕಂಡ ಇದೇ ವಚನಕ್ಕೆ ಮಹಾಲಿಂಗದೇವನ ಟೀಕೆ ಹೀಗಿದೆ:**

**ಟೀಕು:** ಶಿಲೆಯೊಳಗಿಪ್ಪ ಅಗ್ನಿ ಮೈದೋರದ ಹಾಂಗೆ, ಪರಬ್ರಹ್ಮವು ಪಿಂಡಸ್ಥವಾಗಿರ್ದು ಕಾಣಿಸಬಾರದೆಂಬುದೀಗ – 'ಶಿಲೆಯೊಳಗಣ ಪಾವಕನಂತೆ' ಎಂಬ ಶಬ್ದಕ್ಕರ್ಥ.

ಆವುದಾನೊಂದು ಪ್ರತಿಬಿಂಬವು ಉದಕದೊಳಗಿರ್ದು ಆ ಉದಕದ ಗುಣಧರ್ಮ ಕರ್ಮವ ಹೊದ್ದದ ಹಾಂಗೆ ಆ ಪರಬ್ರಹ್ಮವು ಪಿಂಡಸ್ಥವಾಗಿರ್ದು ಆ ಪಿಂಡದ ಗುಣಧರ್ಮ ಕರ್ಮವ ಹೊದ್ದದಿಪ್ಪುದೀಗ ಉದಕದೊಳಗಣ ಪ್ರತಿಬಿಂಬದಂತೆಂಬ ಶಬ್ದಕ್ಕರ್ಥ.

ಬೀಜದೊಳಗೆ ನಿಶ್ಯಬ್ದವಾಗಿರ್ದುದನು ಭೇದಿಸಬಾರದ ಹಾಂಗೆ ಆ ಪರಬ್ರಹ್ಮವು ಪಿಂಡಸ್ಥವಾಗಿರ್ದು ಅಭೇದ್ಯವಾಗಿರ್ಪುದೆಂಬುದೀಗ – 'ಶಬ್ದದೊಳಗಣ ನಿಶ್ಯಬ್ದದಂತೆ ಎಂಬುದಕ್ಕರ್ಥ".[೨೩೦]

ಇಲ್ಲಿಯ ಒಂದೇ ವಚನಕ್ಕಿರುವ ಎರಡು ರೀತಿಯ ಟೀಕೆಗಳನ್ನು ತುಲನಾತ್ಮಕವಾಗಿ ಗಮನಿಸಿದಾಗ ಕಂಡುಬರುವ ಅಂಶಗಳನ್ನು ಹೀಗೆ ಗುರುತಿಸಬಹುದು. ಕಲ್ಲುಮಠದ ಪ್ರಭುದೇವನ ವಚನ ಟೀಕೆ ವಿವರಣೆಯಿಂದ ಕೂಡಿದ್ದು ಸಾಮಾನ್ಯ ಸಾಧಕನಿಗೂ ಮನವರಿಕೆಯಾಗುವಂತಿದೆ. ಮಹಾಲಿಂಗದೇವನ ವಚನ ಟೀಕೆ ಸಂಕ್ಷೇಪವಾಗಿದ್ದು ವೀರಶೈವ ತತ್ವಜ್ಞಾನಿಗಳಾದವರು ಮಾತ್ರ ಅರ್ಥಮಾಡಿಕೊಳ್ಳುವಂತಿದೆ.

ಈ ಹಿನ್ನಲೆಯಲ್ಲಿ ಕಲ್ಲುಮಠದ ಪ್ರಭುದೇವನ ವಚನ ಟೀಕೆ ಆಯಾ ವಚನದ ಸಮಗ್ರವಾದ ಅರ್ಥವನ್ನು ಆಧ್ಯಾತ್ಮಿಕ ಹಿನ್ನೆಲೆಯೊಂದಿಗೆ ವೀರಶೈವ ತತ್ವಜ್ಞಾನದ ದರ್ಶನವನ್ನು ಸೊಗಸಾದ ರೀತಿಯಲ್ಲಿ ಮಾಡಿಸುತ್ತದೆ. ಹೀಗಾಗಿ ವಚನ ಟೀಕೆಯಲ್ಲಿ ಮೊದಲಿಗನಾದ ಮಹಾಲಿಂಗದೇವನ ಸಮಕಾಲೀನನಾದ ಈತ ತನ್ನ ಪಾಂಡಿತ್ಯ, ಪ್ರತಿಭೆಯೆಲ್ಲವನ್ನು ವಚನ ಟೀಕೆಗೆ ಧಾರೆಯೆರೆದಿರುವುದನ್ನು ಕಾಣುತ್ತೇವೆ.

ವಚನಗಳಲ್ಲಿಯ ಅಲಂಕಾರವನ್ನು ವಿಶ್ಲೇಷಿಸದೇ ಕೇವಲ ಆ ವಚನದ ನೇರವಾದ ತಾತ್ಪರ್ಯಾರ್ಥ ಬರೆಯುವಲ್ಲಿ ಕಲ್ಲುಮಠದ ಪ್ರಭುದೇವ ಮಾಡಿದ ಪ್ರಯತ್ನವನ್ನು ಕೆಳಗಿನ ವಚನದಲ್ಲಿ ಕಾಣಬಹುದು.

**ವಚನ:** ಹಾವಿನ ಡೊಂಕು ಹುತ್ತಕ್ಕೆ ಸಸಿನ, ನಂದಿಯ ಡೊಂಕು ಸಮುದ್ರಕ್ಕೆ ಸಸಿನ; ನಮ್ಮ ಕೂಡಲಸಂಗಮನ ಶರಣರ ಡೊಂಕು ಲಿಂಗಕ್ಕೆ ಸಸಿನ.

**ಟೀಕು:** 'ಫಲಪದ ಮುಕ್ತಿಗಳೆಂಬುವನೇನು ಬಯಸದೆ, ಶಿವಭಾವ ಘಟಿಸಿ ಮಾಡುವ ಸದ್ಭಕ್ತನ ಕ್ರಿಯಾಚಾರಿತ್ರಂಗಳೆಂತಾದರೆಯಾ ಲಿಂಗಕ್ಕೆ ಒಪ್ಪೆಂಬುದೀ ವಚನದ ತಾತ್ಪರ್ಯಾರ್ಥ. ಈ ವಚನಕ್ಕೆ ಟೀಕೆ ಬರೆದ ಇನ್ನೂ ಹಲವರು ಈ ವಚನಾರ್ಥವನ್ನು ಹಿಗ್ಗುಮುಗ್ಗಾಗಿ ಎಳೆದಾಡಿರುವುದನ್ನು ಬೇರೆಡೆ

ಕಾಣಬಹುದು."[೨೩೧] ಅದೇ ರೀತಿ ಬೆಡಗಿನ ವಚನಗಳಿಗೆ ಬರೆದ ಟೀಕೆಗಳೂ ಕೂಡಾ ಅರ್ಥಸ್ಪಷ್ಟತೆಯಿಂದ ಕೂಡಿರುವುದನ್ನು ಕಾಣುತ್ತೇವೆ. ಉದಾಹರಣೆಗೆ–

**ವಚನ:** ಸತ್ತಾತನೊಬ್ಬ ಹೊತ್ತಾತನೊಬ್ಬ, ಇವರಿಬ್ಬರನೂ ಒಯ್ದು ಸುಟ್ಟಾತನೊಬ್ಬ! ಮಧುವಣಿಗನಾರೋ? ಮದುವಳಿಗೆ ಯಾರೋ? ಮದುವೆಯ ನಡುವೆ ಮರಣವಡ್ಡ ಬಿದ್ದಿತ್ತು! ಹಸುಳೆಯಳಿಯದ ಮುನ್ನ ಮದುವಣಿಗನಳಿದ! ಗೂಹೇಶ್ವರಾ, ನಿಮ್ಮ ಶರಣನೆಂದೂ ಅಳಿಯ!!

**ಟೀಕು:** ಸತ್ತಾತನೆಂದರೆ ಲಿಂಗವು, ಹೊತ್ತಾತನೆಂದರೆ ಆ ಲಿಂಗದ ಅಂಗದಲ್ಲಿ ಧರಿಸಿದ ಶರಣನು. ಅಂತಪ್ಪ ಶರಣ ಲಿಂಗವೆರಡೂ ಒಂದೇ ಮಹಾಘನಲಿಂಗವೆಂದು ನಿಜವನರುಹಿಸಿ ಕೊಟ್ಟು ದ್ವೈತಭಾವವನು ಮಹಾಜ್ಞಾನಾಗ್ನಿಯಿಂದ ದಹನವ ಮಾಡಲು ಅದೀಗ – 'ಸತ್ತಾತನೊಬ್ಬ, ಹೊತ್ತಾತನೊಬ್ಬ, ಇವರಿಬ್ಬರನೂ ಒಯ್ದು ಸುಟ್ಟಾತನೊಬ್ಬ'ನೆಂಬ ಶಬ್ಧಕ್ಕರ್ಥ.

ಅಂತು ಮಹಾಜ್ಞಾನಾಗ್ನಿಯಿಂದ ಆತ್ಮನೆಂಬಂಗವು ಲಿಂಗವು ಎರಡೂ ಏಕರಸವಾಗಲು ಶರಣಸತಿ, ಲಿಂಗಪತಿಯೆಂಬ ಭಾವ ಕೈಗೂಡಲಾಕ್ಷಣವು ಉಭಯಭಾವವುಳಿಯಿತ್ತೆಂಬುದೀಗ 'ಮದುವಣಿಗನಾರೋ ಮದುವಳಿಗೆ ಯಾರೋ ಮದುವೆಯ ನಡುವೆ ಮರಣವಡ್ಡ ಬಿದ್ದಿತ್ತು' ಎಂಬ ಶಬ್ದಕ್ಕರ್ಥ.

ಹಸೆಯೆಂದರೆ ಸದಾಚಾರ ಕ್ರೀ. ಅಂತಪ್ಪ ಸದಾಚಾರ ಕ್ರೀಯಿದ್ದಂತೆ ಶರಣ ಸಂಗದೊಳಗೆ ಲಿಂಗೈಕ್ಯರಾಗಿ, ಭಿನ್ನವಳಿದು ಶರಣನೆಲ್ಲಾ ಮಹಾಘನಲಿಂಗವೆಯಾಗಿ ನಿತ್ಯನಾಗಿರ್ದನೆಂಬುದೀಗ ಹಸೆಯುಳಿಯದ ಮುನ್ನ ಮದುವಣಿಗನಳಿದ ಗೊಹೇಶ್ವರಾ ನಿಮ್ಮ ಶರಣನೆಂದೂ ಅಳಿಯ ನೆಂಬ ಶಬ್ಧಕ್ಕರ್ಥ.[೨೩೨]

**ಮೇಲ್ಕಂಡ ಇವೇ ವಚನ ಟೀಕೆಗೆ ಮಹಾಲಿಂಗದೇವ ಬರೆದ ಟೀಕೆ ಈ ರೀತಿಯಾಗಿದೆ.**

ಶರಣನಲ್ಲಿ ಲಿಂಗೈಕ್ಯವಾಗಲು ಆ ಶರಣ ಆ ಲಿಂಗವನು ಶರಣ ಮುಖ ಲಿಂಗವಾಗಿ ಧರಿಸಿಕೊಂಡಿರುತ್ತಿರಲು ಅಲ್ಲಿ ಲಿಂಗ ಶರಣ ಶರಣಲಿಂಗವೆಂಬ ದ್ವೈತಭಾವವನು ಮಹಾಜ್ಞಾನಾಗ್ನಿಯಿಂದ ದಹನವ ಮಾಡಲು ಅದೀಗ ಸತ್ತಾತನೊಬ್ಬ ಹೊತ್ತಾತನೊಬ್ಬ, ಈ ಇಬ್ಬರನೂ ಒಯ್ದು ಸುಟ್ಟಾತನೊಬ್ಬ ಎಂಬ ಶಬ್ದಕ್ಕರ್ಥ.

ಇಂತು ಜ್ಞಾನಾಗ್ನಿಯಲ್ಲಿ ಜ್ಞಾತೃ ಜ್ಞೇಯಗಳೆರಡೂ ಏಕರಸವಾಗಲು ಶರಣಸತಿಲಿಂಗಪತಿಯೆಂಬ ಭಾವ ಕೈಗೂಡದ ಮುನ್ನವೇ ಉಭಯವೂ ನಾಸ್ತಿಯಾಯಿತ್ತೆಂಬುದೀಗ ಮದುವಣಿಗನಾರೋ? ಮದುವಳಿಗಳಾರೋ? ಮದುವೆಯ ನಡುವೆ ಮರಣವಡ್ಡಬಿದ್ದಿತ್ತೆಂಬ ಶಬ್ದಕ್ಕರ್ಥ.

ಹಸೆಯೆಂದಡೆ ಸದಾಚಾರ ಆ ಆಚಾರವಿದ್ದಂತೆ ಇದ್ದಿತ್ತು, ಅಲ್ಲಿ ಲಿಂಗವೆಂಬ ಭಾವವಳಿದು ನಿರ್ಭಾವವುಳಿಯಿತ್ತೆಂಬುದೀಗ 'ಹಸೆಯಳಿಯದ ಮುನ್ನ ಮದವಳಿಗನಳಿದ ಗುಹೇಶ್ವರ ನಿಮ್ಮ ಶರಣನೆಂದೂ ಅಳಿಯನೆಂಬ ಶಬ್ಧಕ್ಕರ್ಥ".[೨೩೩]

ಹೀಗೆ ಗೂಡಾರ್ಥದಿಂದ ಕೂಡಿದ, ಲೌಕಿಕರನ್ನು ಬೆರಗುಗೊಳಿಸಬಲ್ಲ ಬೆಡಗಿನ ವಚನಗಳಿಗೆ ಕಲ್ಲುಮಠದ ಪ್ರಭುದೇವನು ಅರ್ಥಪೂರ್ಣವಾದ ಟೀಕೆ ಬರೆದು ಓದುಗರನ್ನು ತನ್ನತ್ತ ಸೆಳೆಯ ಬಲ್ಲವನಾಗಿದ್ದಾನೆ. ಚಿಕ್ಕ ಚಿಕ್ಕದಾದ ವಾಕ್ಯಗಳು, ನೇರ ಹಾಗೂ ಖಚಿತ ಅರ್ಥವುಳ್ಳ ವಿಷಯ ನಿರೂಪಣೆ, ವೀರಶೈವ ಪಾರಿಭಾಷಿಕ ಪದಗಳ ಹಿತಮಿತವಾದ ಬಳಕೆಯಿಂದಾಗಿ ಕಲ್ಲುಮಠದ ಪ್ರಭುದೇವನ ವಚನ ಟೀಕೆ ವಚನ ಟೀಕಾ ಸಾಹಿತ್ಯದಲ್ಲಿಯೇ ಮೇರುಸ್ಥಾನ ಪಡೆಯಬಹುದಾಗಿದೆ.

ಡಾ. ಬಿ.ವಿ. ಶಿರೂರರು ಅಭಿಪ್ರಾಯಪಡುವಂತೆ – "ಆಧ್ಯಾತ್ಮಿಕ ವಿವರಣೆಯನ್ನು ಬಿಟ್ಟರೆ ಆತನ ಟೀಕೆಯಲ್ಲಿ, ಬಸವಣ್ಣನ ವಚನಗಳ ಟೀಕಾಕಾರರುಗಳಲ್ಲಿಯಂತೆ ಲೋಕಾನುಭವದ ಮಾತುಗಳಾಗಲಿ, ಅಂದಿನ ಜನಜೀವನದ ರೀತಿ ನೀತಿಗಳಾಗಲಿ ಕಂಡುಬರುವುದಿಲ್ಲ. ಹೀಗಾಗಿ ಆತನ ಟೀಕಾ ವಿವರಣೆ ತುಂಬಿದ ನದಿಯಂತೆ ಪ್ರಶಾಂತ ಗಭೀರ ರೂಪದಲ್ಲಿ ಪ್ರವಹಿಸಿ ಬರುತ್ತದೆ"[೨೩೪] ಎಂದು ಹೇಳುವಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ. ಆದರೆ, ಲೋಕಾನುಭವ ಮತ್ತು ಜನಜೀವನದ ರೀತಿ ನೀತಿಯನ್ನು ಅಲ್ಲಲ್ಲಿ ಪ್ರಸ್ತಾಪಿಸಿದ್ದರೆ ಅಂದಿನ ಸಂಸ್ಕೃತಿಯ ಪರಿಚಯವಾಗುತ್ತಿತ್ತು.

ಲಿಂಗಲೀಲಾ ವಿಲಾಸ ಚಾರಿತ್ರದಲ್ಲಿಯ ವಚನ ಟೀಕೆಗಳು ನೇರವಾದ ಅರ್ಥಪೂರ್ಣ ತಾತ್ಪರ್ಯದೊಂದಿಗೆ ವಚನಗಳನ್ನು ಸರಳವಾಗಿ ಅರಿಯಲು ತೋರಿದ ರೀತಿಯನ್ನು ಇನ್ನೆರಡು ಉದಾಹರಣೆಗಳ ಮೂಲಕ ನೋಡಬಹುದು.

**ವಚನ:** ವನದ ಕೋಗಿಲೆ ಮನೆಗೆ ಬಂದರೆ ತನ್ನ ವನವ ನೆನೆವುದ ಮಾಣ್ಬುದೆ?
ಮಲೆಯ ಗಜವು ಮನೆಗೆ ಬಂದರೆ ತನ್ನ ಮಲೆಯ ನೆನೆವುದ ಮಾಣ್ಬುದೆ?
ಕೂಡಲಸಂಗನ ಶರಣರ ಮಱೆದು ಮರ್ತ್ಯಕ್ಕೆ ಬಂದರೆ ತಮ್ಮ ಆದಿ
ಮದ್ಯಾಂತರಂಗದ ಲಿಂಗವ ನೆನೆವುದ ಮಾಣ್ಬರೆ?

**ಟೀಕೆ:** ಆನೆಗಳು ಕೋಗಿಲೆಗಳು ತಮ್ಮ ನಿಜ ಜನನ ಸ್ಥಳವನಗಲಿ ಬಂಧನಕ್ಕೆ ಬಂದಲ್ಲಿ ತಮ್ಮ ನಿಜಸ್ಥಲವನೆ ಚಿಂತಿಸುತ್ತಿಪ್ಪಂತೆ ಶಿವನ ಚಿದಂಶವಾದ ಶರಣರು ಶಿವಾಜ್ಞೆಯಿಂದ ತಮ್ಮ ನಿಜವ ಮಱೆದು ಮಾಯಾದೇಹ ಸಂಸಾರಯುಕ್ತವಾಗಿ ಮರ್ತ್ಯಕ್ಕೆ ಬಂದಲ್ಲಿ ಶಿವಜ್ಞಾನೋದಯದಿಂದ ತಮ್ಮ ನಿಜಸ್ವರೂಪವೇ ಲಿಂಗವೆಂದಱಿದು ಅಂತರಂಗದ ಅರಿವೆಲ್ಲಾ ಲಿಂಗವ ಬೆರೆಸುವ ನೆನಹಿನ ಚಿಂತನೆಯ ಆತುರಗುಂದದೆ ಇಪ್ಪರು ಶರಣರೆಂಬುದೀ ವಚನದ ತಾತ್ಪರ್ಯಾರ್ಥ.[೨೩೫]

**ವಚನ:** ಸಾವುತಡವಲ್ಲ ನರಕ ದೂರವಲ್ಲ ಕೆಮ್ಮನೆ ಕೆಡಬೇಡಾ
ವಿಷಯವ ಬಿಡು ಗುರುಬಕ್ತಿಯಲ್ಲಿ ನಂಬು, ಸುಖಿಯಪ್ಪೆ ಚಿಮ್ಮಲಿಗೆಯ
ಚೆನ್ನರಾಮಾ.

**ಟೀಕು:** "ಅನಿತ್ಯವಾದ ಶರೀರ ಬೋಗಕ್ಕಾಗಿ ಮಾಡಬಾರದ ಪಾಪವ ಮಾಡಿದರೆ ನರಕ ತಪ್ಪದು ಕೆಡಬೇಡ ಮನುಜಾ. ಗುರುಭಕ್ತಿಯ ಮಾಡಿದರೆ ನಿತ್ಯ ಮುಕ್ತಿಯಹುದೆಂಬುದೀ ವಚನದ ತಾತ್ಪರ್ಯಾರ್ಥ.[೨೩೬]

ಹೀಗೆ, ಶಿವಶರಣರ ವಚನಗಳಿಗೆ ಅತ್ಯಂತ ನಿಖರವಾದ ರೀತಿಯಲ್ಲಿ ತಾತ್ಪರ್ಯವನ್ನು ಬರೆಯುವ ಮೂಲಕ ಕಲ್ಲುಮಠದ ಪ್ರಭುದೇವನು ಲಿಂಗಾಯತ ಧರ್ಮೀಯರಿಗೆ ಮಾತ್ರವಲ್ಲ ಇತರೆ ಧರ್ಮದ ಸಾಮಾನ್ಯ ಓದುಗನೂ ಕೂಡಾ ವಚನಗಳನ್ನು ಅರಿಯುವ ಮಾದರಿಯಲ್ಲಿ ಟೀಕೆ ಬರೆದು ಗಮನ ಸೆಳೆಯುತ್ತಾನೆ. ಈ ಗ್ರಂಥವನ್ನು ಸಂಪಾದಿಸಿದ ಸಂ.ಶಿ. ಭೂಸನೂರಮಠರು – "ಇದರ ಭಾಷೆ ಕನ್ನಡ. ವಿಶ್ವನಾಥನ ದರ್ಶನ ಬೇಕಾದರೆ ಕಾಶಿಗೆ ಹೋಗಬೇಕು. ವಿರೂಪಾಕ್ಷನ ದರ್ಶನ ಬೇಕಿದ್ದರೆ ಹಂಪೆಗೆ ಬರಬೇಕು. ಜ್ಞಾನದ ತೃಷೆಗೆ ಯಾವ ಭಾಷೆಯನ್ನಾದರೂ ಅಭ್ಯಸಿಸಬೇಕು. ಆದರೆ, ಶಿವಾನುಭವವನ್ನು ಪಡೆಯಬೇಕಾದರೆ ಕನ್ನಡವನ್ನು ಕಲಿಯಬೇಕು. ಲಿಂಗಲೀಲಾ ವಿಲಾಸ ಚಾರಿತ್ರದಂಥ ಕನ್ನಡ ಗ್ರಂಥವನ್ನು ಸ್ವಾನುಭವದ ಪ್ರಸನ್ನ ಮತ್ತು ಪ್ರಸ್ಫುಟವಾದ ಪ್ರಕಾಶವನ್ನು ಪಡೆಯಲಿಚ್ಛಿಸುವರೆಲ್ಲ ಓದಬೇಕು"[೨೩೭] ಎಂದು ಗ್ರಂಥದ ಸಾರ್ವತ್ರಿಕ ಮೌಲ್ಯವನ್ನು ಸ್ಪಷ್ಟಪಡಿಸಿದಂತಿದೆ.

೧೨ನೇ ಶತಮಾನದ ಶಿವಶರಣರು ತಮ್ಮ ಶುದ್ಧವಾದ ನಡೆ ನುಡಿಗಳ ಚಾರಿತ್ರವನ್ನು ವಚನಗಳಲ್ಲಿ ಬಂಧಿಸಿದರು. ಇದನ್ನು ಆಳವಾದ ಅಧ್ಯಯನದ ಮೂಲಕ ಅರಗಿಸಿಕೊಂಡ ಕಲ್ಲುಮಠದ ಪ್ರಭುದೇವನು ಸತ್ಯ–ಶುದ್ಧ–ಕಾಯಕ, ನಡೆ–ನುಡಿ–ಆಚಾರವುಳ್ಳ ವಚನಗಳು ವೇದಾಗಮುಗಳಿಗಿಂತಲೂ ಶ್ರೇಷ್ಠವಾದವುಗಳೆಂಬುದನ್ನು ಪ್ರತಿಪಾದಿಸುವ ಉದ್ದೇಶದೊಂದಿಗೆ ವಚನಗಳಿಗೆ ಟೀಕೆ ಬರೆದಿರುವುದನ್ನು ಕಾಣುತ್ತೇವೆ. ಈತನ ಟೀಕಾ ವಿವರಣೆಯಲ್ಲಿ ಗೊಂದಲವಿಲ್ಲ.

೧೨ನೇ ಶತಮಾನದಲ್ಲಿದ್ದ ಶಿವಶರಣರನ್ನು ನಂತರದ ಕವಿಗಳು ಪೌರಾಣಿಕವಾಗಿ ಚಿತ್ರಿಸಲು ಮಾಡಿದ ಪ್ರಯತ್ನಗಳಂತೆಯೇ ಆ ಕಾಲದ ವಚನ ಟೀಕಾಕಾರರು ಕೂಡಾ ಲೌಕಿಕ ಹಾಗೂ ವಾಸ್ತವಕ್ಕೆ ವಿಮುಖರಾಗಿ ಕೇವಲ ತಾತ್ವಿಕ–ಧಾರ್ಮಿಕ ನೆಲೆಯಲ್ಲಿ ವಚನ ವ್ಯಾಖ್ಯಾನ ಮಾಡಿದ್ದರಿಂದ ಸಾರ್ವತ್ರಿಕವಾಗಿ ನೆಲೆ ಬೆಲೆ ಕಂಡುಕೊಳ್ಳದೇ ಹಿನ್ನಡೆ ಹೊಂದಲು ಕಾರಣವಾಗಿರಬೇಕು.

ಕಲ್ಲುಮಠದ ಪ್ರಭುದೇವನ ಪಾಂಡಿತ್ಯವೇ ಕೆಲವೊಮ್ಮೆ ವಚನಗಳನ್ನು ಸರಳತೆಗಿಂತ ಕಠಿಣಗೊಳಿಸುವಂತೆ ಕಂಡುಬಂದರೂ ಸಂಕ್ಷೇಪದಲ್ಲಿ ನೀಡುವ ಭಾವಾರ್ಥ ಮಾತ್ರ ಅರ್ಥಪೂರ್ಣ. ಇದಕ್ಕೆ ಉದಾಹರಣೆ

**ವಚನ:** ಕಿಚ್ಚಿನ ಕೆಂಡದಂತೆ ಹೊಜೆಯಿಲ್ಲದಿಪ್ಪೆಯಯ್ಯಾ
ಬೆಂಕಿಯ ಬೆಳಕಿನಂತೆ ನೀನಿಪ್ಪೆಯಯ್ಯ
ಇದು ಕಾರಣ ನಿಮ್ಮ ಕಂಡ ಪರಮಜ್ಞಾನಿ ಗುಹೇಶ್ವರ

**ಟೀಕು:** ಕಾಷ್ಠದೊಳಗೆ ಅಗ್ನಿ ಭಿನ್ನವಿಲ್ಲದೆ ಪರಿಪೂರ್ಣವಾಗಿಪ್ಪಂತೆ, ಬೆಂಕಿಯಲ್ಲಿ ಪ್ರಕಾಶ ಭಿನ್ನವಿಲ್ಲದೇ ಪರಿಪೂರ್ಣವಾಗಿಪ್ಪಂತೆ ಶರಣನ ಆತ್ಮಾಂಗದೊಳಗೆ ಚಿತ್ಪರಮಲಿಂಗವು ಭಿನ್ನವಿಲ್ಲದೆ ಪರಿಪೂರ್ಣವಾಗಿರ್ದ ಕಾರಣ ಸಮ್ಯಗ್‌ಜ್ಞಾನೋದಯವಾಗಿ ಶರಣ ಲಿಂಗವ ಪ್ರತ್ಯಕ್ಷವಾಗಿ ಕಂಡು ಕೂಡಿ ಲಿಂಗವಾದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. (ಲಿಂ.ಲೀ.ವಿ.ಚಾ. ಪು ೨೯೦)

ಇಲ್ಲಿ 'ಕಿಚ್ಚಿನ ಕೆಂಡದಂತೆ' ಪದಕ್ಕೆ 'ಕಾಷ್ಠದೊಳಗೆ ಅಗ್ನಿ ಪದ ಬಳಸಿರುವುದು ಸಂಸ್ಕೃತ ಭಾಷಾ ಪ್ರಭಾವವೇ ಸಾಕ್ಷಿ. ಅಲ್ಲದೇ, ಗುಹೇಶ್ವರನೆಂಬ ಲಿಂಗವು ಕಿಚ್ಚಿನೊಳಗನ ಕೆಂಡದಂತೆ, ಬೆಂಕಿಯೊಳಗಿನ

ಬೆಳಕಿನಂತೆ ಶರಣನ ಆತ್ಮಾಂಗದೊಳಗೆ ಪರಿಪೂರ್ಣವಾಗಿದೆ. ಅದನ್ನು ಗುರುವೆಂಬ ಸಮಗ್ ಜ್ಞಾನದ ಅರಿವಿನ ಮೂಲಕ ಕಾಣಬೇಕೆಂಬುದು ಇಲ್ಲಿಯ ಭಾವಾರ್ಥವೆನ್ನಬಹುದು.

ಕಲ್ಲುಮಠದ ಪ್ರಭುದೇವನು ಬೆಡಗಿನ ವಚನಗಳಿಗೆ ಅತ್ಯಂತ ಸ್ಪಷ್ಟವಾದ ರೀತಿಯಲ್ಲಿ ವ್ಯಾಖ್ಯಾನ ಮಾಡುವ ಮೂಲಕ ಓದುಗರ ಗಮನ ಸೆಳೆಯುತ್ತಾನೆ . ವಚನಗಳ ಶಬ್ದಾರ್ಥ. ವಾಕ್ಯಾರ್ಥ ಆಧರಿಸಿ ವ್ಯಾಖ್ಯಾನ ಮಾಡಿರುವಂತೆಯೇ ಶಬ್ದಾರ್ಥ ವಾಕ್ಯಗಳನ್ನು ಹಿಮ್ಮೆಟ್ಟಿಸಿ ಒಟ್ಟು ಭಾವಾರ್ಥದ ವ್ಯಾಖ್ಯಾನ ಮಾಡಿರುವುದನ್ನು ಕಾಣುತ್ತೇವೆ.

**ವಚನ:** ಅಂಗೈಯೊಳಗಣ ನಾರಿವಾಣದ ಸಸಿ ಅಂಬರದೆರಳೆಯ ನುಂಗಿತ್ತಲ್ಲ!
ಕಂಬದೊಳಗಣ ಮಾಣಿಕ್ಯದ ಬಿಂದು ನವಕೋಟಿ ಬ್ರಹ್ಮರ ನುಂಗಿತ್ತಲ್ಲ!
ಅಂಡಜವೆಂಬ ತತ್ತಿ ಹಲವು ಪಕ್ಷಿಯ ನುಂಗಿ ನಿರ್ವಯಲಾಯಿತ್ತು ಗುಹೇಶ್ವರ.

**ಟೀಕು:** ಅಂಗೈಯೊಳಗಣ ನಾರಿವಾಣದ ಸಸಿ ಎಂದರೆ ತನ್ನ ಭಕ್ತರಿಗೆ ಬೇಡಿದ ಚತುರ್ವಿಧ ಪದ ಮೊದಲಾದ ನಿತ್ಯಮೃತಗಳನೀವುತ್ತ ಕಲ್ಪವೃಕ್ಷವಾಗಿಪ್ಪುದು ಕರಸ್ಥಲದ ಇಷ್ಟಲಿಂಗವು. ಅಂತಪ್ಪ ಇಷ್ಟಲಿಂಗವು ಅಂಗಪ್ರಾಣ ಭಾವಂಗಳೊಳಗೆ ಪರಿಪೂರ್ಣಭಾವವನೆಯ್ದಿ ಶರಣನವಗ್ರಹಿಸಿದಲ್ಲಿ ಶರಣನ ಆತ್ಮಾಕಾಶ ಮಧ್ಯದಲ್ಲಿ ಸಂಚರಿಸುತಿರ್ದ ಮನವೆಂಬ ಕಳಂಕನು ಅವಗ್ರಹಿಸಿತ್ತೆಂಬುದೀಗ ಅಂಗೈಯೊಳಗಣ ನಾರಿವಾಣದ ಶಶಿ ಅಂಬರದೆರಳೆಯ ನುಂಗಿತ್ತಲ್ಲಾ ಎಂಬ ಶಬ್ಧಕ್ಕರ್ಥ.

ಅಂತು ಒಳ ಹೊರಗೆನ್ನದೆ ಶರಣನೆಲ್ಲಾ ಲಿಂಗವೆಯಾಗಿ ಭಿನ್ನಭಾವದೋರದೆಯಿರ್ದ ಏಕೋಭಾವವೀಗ ಕಂಬ. ಅಂತು ಏಕೋಭಾವದಲ್ಲಿಪ್ಪ ಅಖಂಡ ಚಿತ್ಪ್ರಭಾಲಿಂಗವೆಂಬುದೀಗ ಮಾಣಿಕ್ಯವೆಂಬ ಶಬ್ಧಕ್ಕರ್ಥ. ಆ ಲಿಂಗದ ಚಿತ್ಪ್ರಕಾಶಾಂಗವೇ ಚಿದ್ಬಿಂದು. ಅಂತು ಶರಣನೆಲ್ಲಾ ಲಿಂಗದ ಚಿದಂಗವಾಗಿ ಅನಂತ ಬ್ರಹ್ಮಕಲ್ಪಂಗಳ ತನ್ನಲ್ಲಿ ನಾಶವ ಮಾಡಿ ಜನನ ಮರಣ ವಿರಹಿತವಾದ ಶರಣನೆಂಬುದೀಗ– ಕಂಭದೊಳಗಣ ಮಾಣಿಕ್ಯದ ಬಿಂದು ನವಕೋಟಿಬ್ರಹ್ಮರ ನುಂಗಿತ್ತಲ್ಲಾ ಎಂಬ ಶಬ್ಧಕ್ಕರ್ಥ. ಅಂತು ಶರಣನೆಂಬ ಚಿದ್‌ಬಿಂದುವೇ ಚಿದ್‌ಬ್ರಹ್ಮಾಂಡ. ಅಂತು ಚಿದ್ ಬ್ರಹ್ಮಾಂಡ ಸ್ವರೂಪನಾದ ಶರಣನ ಚಿತ್ತುವೇ ಜೀವಹಂಸ ಸಂಬಂಧವಾದ ಕರಣಂಗಳೆಲ್ಲವನವಗ್ರಹಿಸಿ, ತಾನೆ ಶಿವನೆಂಬ ಚಿದಹಂಕಾರ ನಿರಹಂಕಾರವನೆಯ್ದಿನಿರ್ವಯಲಪ್ಪ ಪರಶಿವಲಿಂಗವೆಯಾಗಿರ್ದ ಶರಣನೆಂಬುದೀಗ ಅಂಡಜನೆಂಬ ತತ್ತಿ ಹಲವು ಪಕ್ಷಿಯ ನುಂಗಿ ನಿರ್ವಯಲಾಯಿತ್ತು ಗುಹೇಶ್ವರ ಎಂಬ ಶಬ್ಧಕ್ಕರ್ಥ.

ವಚನ ಟೀಕೆಗಳ ತೌಲನಿಕ ಅಧ್ಯಯನಕ್ಕೆ ಅನುಕೂಲವಾಗಲೆಂಬ ಉದ್ದೇಶದಿಂದ ಇಮ್ಮಡಿ ಶಿವಬಸವ ಸ್ವಾಮೀಜಿಯವರು ಇಬ್ಬರ ವ್ಯಾಖ್ಯಾನಗಳನ್ನು ಒಂದೆಡೆ ಸಂಪಾದಿಸಿರುವುದಾಗಿ ಹೇಳಿದ್ದಾರೆ. ಅವರ ಈ ಕಾರ್ಯ ಟೀಕಿನ ವಚನಗಳ ಅಧ್ಯಯನ ಮತ್ತು ತುಲನಾತ್ಮಕ ಪರಾಮರ್ಶೆಗೆ ತುಂಬಾ ಸಹಕಾರಿಯಾಗಿದೆ.

ನಾರಿವಾಣದ ಶಶಿ ಎಂದರೆ ಕಲ್ಲುಮಠದ ಪ್ರಭುದೇವ "ಕರಸ್ಥಲದ ಇಷ್ಟಲಿಂಗವು" ಎಂದು ನೇರವಾಗಿ ಹೇಳುತ್ತಾನೆ. ಇದನ್ನೇ ಮಹಾಲಿಂಗದೇವ "ಇಷ್ಟಾರ್ಥಸಿದ್ಧಿಯ ಕೊಡುವ ಕಲ್ಪತರುವಿಂಗೆ ಪೆಸರು" ಎಂದು ಹೇಳುತ್ತಾನೆ. ಮುಂದಿನ ವಾಕ್ಯದಲ್ಲಿ ಇದನ್ನೇ ಇಷ್ಟಲಿಂಗವೆಂದು ಈತ ವಿಸ್ತರಿಸುತ್ತಾನೆ.

"........ಶರಣನೆಲ್ಲಾ ಲಿಂಗವೆಯಾಗಿ ಭಿನ್ನಭಾವದೋರದೆಯಿರ್ದ ಏಕೋಭಾವವೀಗ ಕಂಭ. ಅಂತು ಏಕೋಭಾವದಲ್ಲಿಪ್ಪ ಅಖಂಡ ಚಿತ್ಪ್ರಭಾಲಿಂಗವೆಂಬುದೀಗ ಮಾಣಿಕ್ಯವೆಂಬ ಶಬ್ಧಕ್ಕರ್ಥ". ಎಂದು ಸಂಕ್ಷೇಪಿಸಿ ಪನಃ ವಿವರಣೆಯನ್ನು ಕಲ್ಲುಮಠದ ಪ್ರಭುದೇವ ನೀಡುತ್ತಾನೆ. ಆದರೆ, ಈ ಕ್ರಮವನ್ನು ಮಹಾಲಿಂಗದೇವ ಇಲ್ಲಿ ಅನುಸರಿಸಿಲ್ಲ. ಇಷ್ಟಾಗಿಯೂ ಇಬ್ಬರಲ್ಲಿ ಯಾರ ವಚನ ವ್ಯಾಖ್ಯಾನವನ್ನು ಯಾರು ಅನುಸರಿಸಿದರೆಂಬುದನ್ನು ನಿರ್ಧರಿಸುವುದು ತುಂಬಾ ಕಷ್ಟ. ಇಬ್ಬರೂ ಸಮಕಾಲೀನರೆಂದು ನಿರ್ಧರಿಸಿರುವುದರಿಂದ ಮೂಲ ಹಸ್ತಪ್ರತಿಗಳ ಬರವಣಿಗೆ, ಭಾಷೆ, ಶೈಲಿಯ ಆಧಾರದ ಮೇಲೆ ವಚನ ಟೀಕುಗಳನ್ನು ಮರುವಿವೇಚನೆಗೆ ಒಳಪಡಿಸಿದಲ್ಲಿ ಮಾತ್ರ ವ್ಯಾಖ್ಯಾನದ ಮಾದರಿಯಲ್ಲಿ ಯಾರು ಯಾರನ್ನು ಅನುಕರಿಸಿದರೆಂಬುದಕ್ಕೆ ಸಮಾಧಾನದ ಉತ್ತರ ಸಿಗಬಹುದು.

**ವಚನ:** ಬೆಳಗು ಕತ್ತಲೆಯ ನುಂಗಿ, ಒಳಗೆ ತಾನೊಬ್ಬನೆಯಾಗಿ,
ಕಾಬ ಕತ್ತಲೆಯ ಕಳೆದುಳಿದು ನಿಮಗೆ ನಾನು ಗುರಿಯಾದೆ ಗುಹೇಶ್ವರ

**ಟೀಕು:** ಬೆಳಗೆಂಬ ಜ್ಞಾನ ಪ್ರಕಾಶವಾಗಲು ಅಜ್ಞಾನವಳಿದು ಅಂತರಂಗದಲ್ಲಿ ತನ್ನ ನೋಡಿ ತಾನೆ ಶಿವನೆಂದು ಕಂಡು ಶಿವೋಹಂ ಎನ್ನುತ್ತಿಪ್ಪ ಚಿದಹಂಭಾವವೇ ಮರವೆಯಂದರಿದು ಆ ಚಿದಹಂಭಾವವನಳಿದು ನಿರಂಹಂಭಾವವಪ್ಪ ಭಕ್ತಿಯೋಗದಿಂದ ಶರಣ ಲಿಂಗದಲೈಕ್ಯವಾದನೆಂಬುದೀ ವಚನದ ತಾತ್ಪರ್ಯಾರ್ಥ. ಮಹಾಲಿಂಗದೇವನು ಇದೇ ವಚನದ ವ್ಯಾಖ್ಯಾನ ಹೀಗೆ ನೀಡಿದ್ದಾನೆ.

**ಟೀಕು:** "ಬೆಳಗೆಂಬ ಜ್ಞಾನ ಕತ್ತಲೆಯೆಂಬ ಅಜ್ಞಾನ. ಈ ಎರಡು ಜ್ಞಾನಾಜ್ಞಾನಂಗಳನ್ನು ಮಹಾಜ್ಞಾನವಗ್ರಹಿಸಿ ಅಂತರಂಗದೊಳಗೆ ತಾನೊಬ್ಬನೆಯಾಗಿ ತೋರುವ ತೋರಿಕೆಯ ಅಜ್ಞಾನವೆಂಬ ಕತ್ತಲೆಯನು ಅಳಿದುಳಿದು ಆ ಮಹಾಶರಣ ಲಿಂಗದಲ್ಲಿ ಐಕ್ಯವಾಗಿದ್ದನೆಂಬುದೀ ವಚನದ ತಾತ್ಪರ್ಯಾರ್ಥ."

ಇರ್ವರು ಸಂಕ್ಷೇಪದಲ್ಲಿಯೇ ಭಾವಾರ್ಥ ಪಾತಳಿಯಲ್ಲಿ ವ್ಯಾಖ್ಯಾನ ಮಾಡಿದರೂ ಕೂಡಾ, ವಿಭಿನ್ನವಾದ ಪದಗಳನ್ನು ಬಳಸಿದರೂ ಕೂಡಾ ವ್ಯಾಖ್ಯಾನದ ಕೊನೆಯಲ್ಲಿ ಒಂದೇ ಅರ್ಥವನ್ನು ಹೇಳುತ್ತಾರೆ. ಉದಾ ಆ ಮಹಾಶರಣ ಲಿಂಗದಲ್ಲಿ ಐಕ್ಯವಾಗಿದ್ದನೆಂಬುದೀ......." ಎಂದು ಮಹಾಲಿಂಗದೇವ ಹೇಳಿದರೆ ಶರಣ ಲಿಂಗದಲೈಕ್ಯವಾದನೆಂಬುದೀ........." ಎಂದು ಪ್ರಭುದೇವನು ಸರಳೀಕರಿಸಿ ಹೇಳುತ್ತಾನೆ.

ಹೀಗೆ, ಕಲ್ಲುಮಠದ ಪ್ರಭುದೇವರು ಪ್ರಾಚೀನ ವಚನಕಾರರ ವಚನಗಳನ್ನು ಸ್ಥಲಾನುಗುಣವಾಗಿ ಸಂಪಾದಿಸಿ, ಅವುಗಳಿಗೆ ಟೀಕೆ ಬರೆದಿದ್ದಾರೆ. ತುಂಬಾ ಮುಖ್ಯವಾದುದೆಂದರೆ, ಅನೇಕ ವ್ಯಕ್ತಿವಚನಕಾರರನ್ನು ಗುರುತಿಸಿ ಅವರ ವಚನಗಳಿಗೂ ಟೀಕೆ ಬರೆಯುವ ಮೂಲಕ ಕೇವಲ ಕೆಲವು ಪ್ರಮುಖ ವಚನಕಾರರಿಗೆ

ಸೀಮಿತವಾಗಿದ್ದ ವಚನ ಟೀಕೆಯ ಸ್ವರೂಪವನ್ನೇ ಬದಲಾಯಿಸಿ ತಳವರ್ಗದ ವಚನಕಾರರನ್ನು ಮೊಟ್ಟಮೊದಲು ಗುರುತಿಸಿದ ಶ್ರೇಯಸ್ಸು ಈತನಿಗೆ ಸಲ್ಲುತ್ತದೆ. ಎನ್. ಬಸವರಾಧ್ಯರು ಹೇಳುವಂತೆ– "ಇವರು ಪ್ರಾಚೀನ ವಚನಗಳನ್ನು ಪರಿಷ್ಕಾರ ಮಾಡಲಿಲ್ಲ. ಟೀಕೆ, ವ್ಯಾಖ್ಯಾನಗಳಿಂದ ಆವಿಷ್ಕಾರಗೊಳಿಸಿದ್ದಾರೆ. ಈ ದೃಷ್ಟಿಯಿಂದ ಕಲ್ಲುಮಠದ ಪ್ರಭುದೇವರ ಹೆಸರು ವಚನ ಸಾಹಿತ್ಯದ ದ್ವಿತೀಯಘಟ್ಟದಲ್ಲಿ ಶಾಶ್ವತವಾಗಿ ನಿಲ್ಲುವಂತಹದಾಗಿದೆ.[೨೩೮]

ಅರ್ಥಪೂರ್ಣವಾದ ಪೀಠಿಕೆಯೊಂದಿಗೆ ಈ ಕೃತಿಯನ್ನು ಹಸ್ತಪ್ರತಿಗಳ ಸಹಾಯದಿಂದ ಸಂ. ಶಿ. ಭೂಸನೂರಮಠರು ಸಂಪಾದಿಸಿದ್ದಾರೆ. "ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ 'ಲಿಂಗಲೀಲಾ ವಿಲಾಸ ಗ್ರಂಥದ ವ್ಯಾಖ್ಯಾನ' ಎಂಬ ಹೆಸರಿನಲ್ಲಿ ಕೆ.೩೨೨/೧೦ ಕೆ.ಎ. ೮೮. ಒಂದು ಓಲೆ ಪ್ರತಿ ಮತ್ತು ಕಾಗದದ ಪ್ರತಿಗಳಿವೆ. ಲಿಂಗಲೀಲಾವಿಲಾಸದಲ್ಲಿ ಉದಾಹೃತಗಳಾಗಿರುವ ಶಿವಾಗಮ ಸಂಸ್ಕೃತ ಕಾರಿಕೆಗಳಿಗೆ ಪ್ರತಿಪದ ಕನ್ನಡ ಟೀಕನ್ನು ಸ್ಥಲಾನುಗುಣವಾಗಿ ಬರೆದಿದೆ" ಎಂದು ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯ ಸಂಪಾದಕರು ಹೇಳುತ್ತಾರೆ. ಇಲ್ಲಿ ಪ್ರಮುಖವಾಗಿ ಲಕ್ಷಿಸಬೇಕಾದುದೆಂದರೆ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಕೆ.೩೨೨/೧೦ರಲ್ಲಿ "ಅಂಗಸ್ಥಲನಿಃಕಲ ॥ಈಶ್ವರೌವಾಚ॥ ಏಕೆಂದರೆ, ಕಣ್ತಪ್ಪಿನಿಂದ ಕೆಲವು ಭಾಗ ಪ್ರಕಟಗೊಳ್ಳದೇ ಇರುವುದು. ಉದಾಹರಣೆಗೆ,

ಅಲಕ್ಷ್ಯಮದ್ವಯಂ ಶೂನ್ಯಮಮೂರ್ತಂ ಪರಮಾವ್ಯಯಂ

"ಅನಾಮಪ್ಯಕುಲಂ ಶುದ್ಧಮನಾದ್ಯಂ ಶಿವಮುಚ್ಚತೇ॥ ಎಂಬ ಶ್ಲೋಕವಿದೆ. ಈ ಶ್ಲೋಕ ಭೂಸನೂರಮಠ ಅವರು ಸಂಪಾದಿಸಿರುವ ಮುದ್ರಿತ ಪ್ರತಿಯಲ್ಲೂ ಇದೆ. ಆದರೆ ಮುದ್ರಿತ ಪ್ರತಿಯಲ್ಲಿ ಇದಕ್ಕೆ ಟೀಕು ಇಲ್ಲ. ಹಸ್ತಪ್ರತಿಯಲ್ಲಿದೆ."[೨೩೯] ಎಂದು ಸ್ಪಷ್ಟಪಡಿಸುವ ಎನ್. ಬಸವಾರಾಧ್ಯರು ಟೀಕು ಸಹಿತ ಹೀಗೆ ಹೇಳುತ್ತಾರೆ.

**ಟೀಕು:** ಅಲಕ್ಷ್ಯಂ–ಲಕ್ಷಿಸಲು ಬಾರದಂಥ, ಅದ್ವಯಂ–ಕರ್ತೃಕರ್ಮಾದಿ ಭೇದ ಪ್ರಪಂಚವಿಲ್ಲದಂತ, ಶೂನ್ಯಂ–ಅವ್ಯಕ್ತಸದಾತ್ಮಕವಾದಂಥಾ, ಅಮೂರ್ತಂ–ಚಂದ್ರಶೇಖರಾದಿ ನಾನಾ ವಿಗ್ರಹ ರಹಿತನಾದಂಥಾ, ಅನಾಧ್ಯಂ–ತನಗೊಂದಾದಿಯಿಲ್ಲದಂಥಾ ಜಗತ್ಕಾರಣ ವಸ್ತುವು, ಶಿವಂ–ಶಿವತತ್ವವೆಂದು, ಉಚ್ಯತೇ–ಹೇಳಲ್ಪಡುತ್ತಿದ್ದೀತು ಈ ವಿವರಣೆ ಕಂಡುಬರುತ್ತದೆ. ಅಂತೆಯೇ ಮುದ್ರಿತ ಪ್ರತಿಯಲ್ಲಿ ಇನ್ನೂ ಕೆಲವು ಶ್ಲೋಕಗಳಿಗೆ ಟೀಕುಗಳು ಕಂಡುಬರುವುದಿಲ್ಲ. ಅವು ಹಸ್ತಪ್ರತಿಗಳಲ್ಲಿ ಲಭ್ಯವಾಗುತ್ತವೆ. ಈ ಎಲ್ಲಾ ದೃಷ್ಟಿಗಳಿಂದ 'ಲಿಂಗಲೀಲಾ ವಿಲಾಸ ಚಾರಿತ್ರ'ದ ಹಸ್ತಪ್ರತಿಗಳೆಲ್ಲವನ್ನು ಸಂಗ್ರಹಿಸಿ ಇನ್ನೊಂದು ಶಾಸ್ತ್ರೀಯ ಆವೃತ್ತಿ (Critical Edition) ಯನ್ನು ಹೊರತಂದರೆ ಈ ಗ್ರಂಥದಲ್ಲಿ ಉದ್ಧೃತವಾಗಿರುವ ಸಂಸ್ಕೃತ ಶ್ಲೋಕಗಳ ಆಕರಗಳು ಲಭ್ಯವಾಗಬಹುದು. ಅಲ್ಲದೇ ಈಗಿರುವ ೭೯ ವಚನಗಳಿಗೆ ಬದಲಾಗಿ ೭೭೦ ವಚನಗಳು ಸಿಕ್ಕಬಹುದು."[೨೪೦] ಎಂಬ ಅಭಿಪ್ರಾಯದಿಂದ ಈ ಗ್ರಂಥದ ಮೂಲಹಸ್ತಪ್ರತಿ ಪರಿಶೀಲನೆಯ ಅಗತ್ಯವಿದೆ ಎನ್ನಬಹುದು.

**ವಚನ ಟೀಕುಗಳ ಸಾಮ್ಯತೆ:**

ಈಗಾಗಲೇ ಹೇಳಿದಂತೆ ಮಹಾಲಿಂಗದೇವ ಮತ್ತು ಕಲ್ಲುಮಠದ ಪ್ರಭುದೇವರು ಸಮಕಾಲೀನರು(೧೪೩೦). ಮಹಾಲಿಂಗದೇವರ ಅಲ್ಲಮಪ್ರಭುವಿನ ಟೀಕಿನ ವಚನಗಳು ಕೃತಿಯಲ್ಲಿ[೨೪೧] ಪ್ರಭುವಿನ ೭೯೭ ವಚನಗಳಿಗೆ ಟೀಕೆ ಇದೆ. ಇವುಗಳಲ್ಲಿ ಸು.೨೦ ವಚನಗಳಿಗೆ[೨೪೨] ಮಾತ್ರ ಇಬ್ಬರಲ್ಲಿ ಒಂದೇ ವಿಧವಾದ ಟೀಕೆ ಇದೆ. ಉಳಿದ ಸುಮಾರು ೧೫೦ ವಚನಗಳಿಗೆ ಕಲ್ಲುಮಠದ ಪ್ರಭುದೇವ, ಮಹಾಲಿಂಗದೇವನಿಂದ ಭಿನ್ನವಾದ ಟೀಕೆ ಬರೆದಿದ್ದಾನೆ. ಮೇಲಿನ ೨೦ ವಚನಗಳಿಗೆ ಟೀಕೆ ಬರೆಯುವಲ್ಲಿ ಯಾರು ಯಾರಿಂದ ಸಹಾಯ ಪಡೆದರು ಎಂಬುದನ್ನು ಹೇಳುವುದು ಕಷ್ಟ.

"ಬಸವಣ್ಣನವರ ವಚನಗಳಿಗೆ ಟೀಕೆ ಬರೆದ ೫ ಜನ ಟೀಕಾಕಾರರಲ್ಲಿ ೪ ನೇಯ ಟೀಕಾಕಾರ ಗುರುಬಸವರಾಜದೇವರು. ಬಸವಣ್ಣನ ೩೨೪ ವಚನಗಳಿಗೆ ಟೀಕೆ ಬರೆದಿದ್ದು ಅವುಗಳಲ್ಲಿ ಸು. ೭೩ ವಚನಗಳ ಟೀಕೆಗಳು ಲಿಂಗಲೀಲಾ ವಿಲಾಸ ಚಾರಿತ್ರ್ಯದಲ್ಲಿ ಗೋಚರಿಸುತ್ತದೆ."[೨೪೩] "ಈ ಎರಡು ಟೀಕಾ ಗ್ರಂಥಗಳಿಗೆ ಬೇರೊಂದು ಟೀಕಾ ಗ್ರಂಥ ಮೂಲವಾಗಿರುವ ಸಂಭವವಿದೆ."[೨೪೪] ಎಂಬ ಅಭಿಪ್ರಾಯವನ್ನು ಗಮನಿಸಬೇಕಾದ ತುರ್ತು ಅಗತ್ಯವಿದೆ.

ಅದೇ ರೀತಿ 'ಸಂಪಾದನೆಯ ಸಾರಾಮೃತ' ಎಂಬ ಟೀಕಾ ಗ್ರಂಥ ಬರೆದ ಕಟ್ಟಿಗೆಹಳ್ಳಿ ಸಿದ್ಧಲಿಂಗ ಸ್ವಾಮಿ ತಾನು ಆಯ್ದುಕೊಂಡ ೨೨೦ ವಚನಗಳಲ್ಲಿ ಲಿಂಗಲೀಲಾವಿಲಾಸ ಚಾರಿತ್ರದಲ್ಲಿರುವ ೮೮ ವಚನಗಳಿಗೆ ಟೀಕೆ ಬರೆದಿದ್ದು ಅವುಗಳಲ್ಲಿ ೧೮ ವಚನಬಿಟ್ಟು[೨೪೫] ಉಳಿದೆಲ್ಲ ವಚನಗಳ ಟೀಕೆಯನ್ನು ಲಿಂಗಲೀಲಾವಿಲಾಸ ಚಾರಿತ್ರ್ಯದಿಂದ ಎತ್ತಿಕೊಂಡಿದ್ದಾನೆ. ಆದರೆ, ಒಂದು ವಚನಕ್ಕೆ ಮಾತ್ರ (೧೨೪) ಕಲ್ಲುಮಠದ ಪ್ರಭುದೇವ 'ಈ ವಚನ ಕಾಣಬಂದರ್ಥ' ಎಂದು ಹೇಳಿ ಮುಂದೆ ಹೋಗಿದ್ದರೆ, ಕಟ್ಟಿಗೆ ಹಳ್ಳಿ ಸಿದ್ಧಲಿಂಗಸ್ವಾಮಿ ಅದಕ್ಕೆ ಟೀಕೆ ಬರೆದಿದ್ದಾನೆ.

ಇದೆಲ್ಲವನ್ನು ಅವಲೋಕಿಸಿದರೆ ವಚನ ಸಂಕಲನ, ಸಂಪಾದನ ಮಾದರಿಯ ಪರಂಪರೆಯಂತೆ ಟೀಕಿನ ವಚನ ವ್ಯಾಖ್ಯಾನ ಪರಂಪರೆ ಇತ್ತು. ಸಮಕಾಲೀನ ಇಲ್ಲವೇ ನಂತರದ ಟೀಕಿನ ವಚನಕಾರರು ಇವರಲ್ಲಿ ಕೆಲವರು ಟೀಕನ್ನು ಯಥಾಸ್ಥಿತಿ ಮುಂದುವರಿಸಿದರು. ಇನ್ನೂ ಕೆಲವರು ಸ್ವಸಾಮರ್ಥ್ಯ, ಪಾಂಡಿತ್ಯ ತೋರಲು ಪ್ರಯತ್ನಿಸಿದ್ದಾರೆ. ಮೂಲಹಸ್ತಪ್ರತಿಗಳ ಸಮಗ್ರ ಅಧ್ಯಯನದಿಂದ ಟೀಕಾ ಪರಂಪರೆಯ ವಿಶಿಷ್ಟತೆಯನ್ನು ಅರಿಯಬಹುದಾಗಿದೆ.

**೨. ಸಿಂಗಳದ ಸಿದ್ಧಬಸವರಾಜನ ಟೀಕು:**

ಶಿವಶರಣರ ಬೆಡಗಿನ ವಚನಗಳನ್ನು ಒಂದೆಡೆ ಸಂಕಲಿಸಿ, ಅವಕ್ಕೆ ಟೀಕನ್ನು ಬರೆದವರಲ್ಲಿ ಕ್ರಿ.ಶ.೧೬೦೦ರಲ್ಲಿ ಜೀವಿಸಿದ್ದ ಸಿಂಗಳದ ಸಿದ್ಧಬಸವರಾಜನು ಪ್ರಮುಖ. ಉಕ್ಕಿನ ಕಡಲೆಯಂತಿದ್ದ ಬೆಡಗಿನ ವಚನಗಳನ್ನು ಸಾಮಾನ್ಯರು ಅರ್ಥಮಾಡಿಕೊಳ್ಳುವುದು ಕಷ್ಟವೆಂದರಿತ ವಚನ ಟೀಕಾಕಾರರು ಅವುಗಳಿಗೆ ತಮ್ಮ ಪ್ರತಿಭೆ ಪಾಂಡಿತ್ಯದ ಉಳಿಯನ್ನು ಮುಟ್ಟಿಸಿ ವಚನಗಳ ನಿಗೂಢಾರ್ಥವನ್ನು ಬಯಲು

ಮಾಡಿದರು. ಈ ದಿಶೆಯಲ್ಲಿ - ''ಸಿಂಗಳದ ಸಿದ್ಧಬಸವ ಬೆಡಗಿನ ವಚನಗಳಿಗೆ ಟೀಕೆ ಬರೆದು ಮಾರ್ಗದರ್ಶಿಗಳಾದರು. ಮುಂದಿನ ಪೀಳಿಗೆಯ ಶರಣರಿಗೆ ಉಪಕಾರ ಮಾಡಿದರು''.[೨೪೬] ಎಂಬ ಡಾ. ಎಂ. ಎಸ್. ಸುಂಕಾಪುರರ ಅಭಿಪ್ರಾಯವು ಸಮಂಜಸವಾಗಿದೆ.

ಧಾರವಾಡದ ಕನ್ನಡ ಅಧ್ಯಯನ ಪೀಠವು - ''ಸಕಲ ಪುರಾತನರ ವಚನ''ಗಳು ಎಂಬ ಹೆಸರಿನಲ್ಲಿ ಮೂರು ಸಂಪುಟಗಳನ್ನು ಪ್ರಕಟಿಸಿದೆ. "ಸಕಲ ಪುರಾತನರ ಬೆಡಗಿನ ವಚನಗಳು ಇದೀಗ ಪ್ರಕಟಗೊಳ್ಳಲಿದೆ. ಇದರಲ್ಲಿ ಸಿಂಗಳದ ಸಿದ್ಧಬಸವದೇವರು ಬರೆದ ಬೆಡಗಿನ ವಚನಗಳು ಮಾತ್ರ ಸೇರಿಕೊಂಡಿವೆ. ಇನ್ನು ಕೆಲವೊಂದು ವಚನಗಳು ಬೆಡಗಿನಲ್ಲಿರುವುದು ಈಗೀಗ ಗೊತ್ತಾಗಿದೆ. ಅವುಗಳನ್ನೆಲಾ ಸೇರಿಸಿ ಇನ್ನೊಂದು ಬೆಡಗಿನ ವಚನಗಳ ಸಂಪುಟ ತರುವುದು ಅವಶ್ಯಕ. ಅದಕ್ಕೆ ಕಾಲಕೂಡಿ ಬರಬೇಕೆಂದು''[೨೪೭] ಡಾ. ಸುಂಕಾಪೂರ ಅಭಿಪ್ರಾಯಪಟ್ಟಿದ್ದಾರೆ.

''ಕ್ರಿ.ಶ.ಸು. ೧೬೦೦ ರಲ್ಲಿದ್ದ ಸಿದ್ಧನಂಜೇಶನು 'ರಾಘವಾಂಕ ಚರಿತ್ರೆ'ಯಲ್ಲಿ (೧೯-೯೫) ಸಿಂಗಳದ ಸಿದ್ಧಬಸವನನ್ನು ಹೆಸರಿಸಿದ್ದಾನೆ. ಈತ ಸು.೧೫೬೦ ರಲ್ಲಿರಬಹುದೆಂದು''[೨೪೮] ಡಾ. ಎಸ್. ಶಿವಣ್ಣ ಹೇಳುತ್ತಾರೆ. ಡಾ. ಎಂ. ಚಿದಾನಂದಮೂರ್ತಿ ಈತನ ಕಾಲ ಕ್ರಿ.ಶ.ಸು. ೧೬೦೦''[೨೪೯] ಎನ್ನುತ್ತಾರೆ.

ಈತನು 'ಬೆಡಗಿನ ವಚನ'ಗಳು ಹೆಸರಿನಲ್ಲಿ ಕೋಲಶಾಂತಯ್ಯ, ತುರುಗಾಹಿ ರಾಮಣ್ಣ,ಬೋಗಣ್ಣ, ಗಾಣದ ಕಣ್ಣಪ್ಪ, ಕದಿರೆ ರೆಮ್ಮವ್ವೆ, ಕೀಲಾರದ ಭೀಮಣ್ಣ, ಹಡಪದ ಅಪ್ಪಣ್ಣ, ವಚನ ಭಂಡಾರಿ ಶಾಂತರಸ ಮೊದಲಾದ ೪೨ ಸಕಲ ಪುರಾತನ ಶಿವಶರಣರ ೫೪೧ ವಚನಗಳಿಗೆ ಟೀಕೆ ಬರೆದಿದ್ದಾನೆ. ಇದರಲ್ಲಿ ಅಲ್ಲಮಪ್ರಭುದೇವರ ೧೨ ವಚನಗಳಿಗೆ ಟೀಕೆಯನ್ನು ಬರೆದಿದ್ದಾನೆ.

ವಚನಕಾರರು ತಾವು ರಚಿಸಿದ ವಚನಗಳನ್ನು ಸರಳವಚನಗಳು, ಬೆಡಗಿನ ವಚನಗಳು ಎಂದು ಎಲ್ಲಿಯೂ ವಿಂಗಡಿಸಿಲ್ಲ. ಆದರೆ, ನಂತರದ ಕಾಲಘಟ್ಟದಲ್ಲಿ ವಚನಗಳನ್ನು ಸಂಗ್ರಹಿಸುವ-ಸಂಕಲಿಸುವ-ಸಂಪಾದಿಸುವ-ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಬೆಡಗಿನ ವಚನಗಳನ್ನು ಗುರುತಿಸಿ, ಬೇರ್ಪಡಿಸಿ, ವ್ಯಾಖ್ಯಾನ ಮಾಡಿರುವುದನ್ನು ಕಾಣುತ್ತೇವೆ. ೧೫ನೇ ಶತಮಾನದಲ್ಲಿ ಮಹಾಲಿಂಗದೇವ, ಕಲ್ಲುಮಠದ ಪ್ರಭುದೇವ, ಜಕ್ಕಣಾರ್ಯ, ಕುಮಾರ ಬಂಕನಾಥ ಮತ್ತಿತರ ವಚನ ಟೀಕಾಚಾರ್ಯರು ೧೨ನೇ ಶತಮಾನದ ಪ್ರಮುಖ ವಚನಕಾರರ ಎಲ್ಲ ರೀತಿಯ ವಚನಗಳಿಗೆ ಟೀಕೆ ಬರೆಯಲು ಪ್ರಯತ್ನಿಸಿರುವುದನ್ನು ವ್ಯಾಪಕವಾಗಿ ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ೧೫ ರಿಂದ ೧೭ನೇ ಶತಮಾನದ ಕಾಲಘಟ್ಟವನ್ನು ವೀರಶೈವ ಟೀಕಾ ಸಾಹಿತ್ಯದ ಸುಗ್ಗಿಯ ಕಾಲವೆನ್ನಬಹುದು. ಅಂದರೆ, ವೀರಶೈವವು ಚಳುವಳಿಯ ಸ್ವರೂಪವನ್ನು ಕಳಚಿಕೊಂಡು ಸಾಂಸ್ಥಿಕ ಧರ್ಮವಾಗಿ ರೂಪಪಡೆಯುವ ಕಾಲಘಟ್ಟದಲ್ಲಿ ವಚನ ಟೀಕಾ ಸಾಹಿತ್ಯ ವ್ಯಾಪಕವಾಗಿ ಬೆಳೆಯಿತು. ಇದೆಲ್ಲವನ್ನು ಸೂಕ್ಷ್ಮವಾಗಿ ಅವಲೋಕಿಸಿದ ಸಿಂಗಳದ ಸಿದ್ದಬಸವರಾಜ ದೇವರು ಸಕಲಪುರಾತನರ ಎಲ್ಲ ರೀತಿಯ ವಚನಗಳಿಗೆ ವ್ಯಾಖ್ಯಾನ ಮಾಡದೇ ಕೇವಲ ಬೆಡಗಿನ ವಚನಗಳನ್ನು ಆಯ್ಕೆಮಾಡಿಕೊಂಡು ವ್ಯಾಖ್ಯಾನ ಬರೆಯುವ ಮೂಲಕ ವಿನೂತನವಾದ ಸಂಪ್ರದಾಯಕ್ಕೆ ನಾಂದಿ ಹಾಡಿದನೆನ್ನಬಹುದು.

**ವಚನಕಾರರು-ವಚನಗಳು-ವ್ಯಾಖ್ಯಾನ**

ಸಿಂಗಳದ ಸಿದ್ದಬಸವರಾಜದೇವರು ವ್ಯಾಖ್ಯಾನಿಸಿದ ಸಕಲ ಪುರಾತನರ ಬೆಡಗಿನ ವಚನಗಳು ಕೃತಿಯ ಆರಂಭದಲ್ಲಿ - ''ಸಿಂಗಳಸಿದ್ಧ-ಬಸವರಾಜದೇವರ ವ್ಯಾಖ್ಯಾನ'' ಎಂದಿದ್ದರೂ ತರುವಾಯ ಟೀಕು ಎಂದೇ ನಿರೂಪಿತವಾಗಿದ್ದನ್ನು ನೋಡಬಹುದು. ಇವೆರಡೂ ಒಂದಕ್ಕೊಂದು ಪರ್ಯಾಯ ಪದಗಳಾಗಿ ಬಳಕೆಯಾಗುತ್ತಿದ್ದವೆಂಬುದಕ್ಕೆ ಈ ಕೃತಿ ಸಾಕ್ಷಿಯಾಗಿದೆ.

ಕೃತಿಯ ಕುರಿತು - ಡಾ. ಪಂಚಾಕ್ಷರಿ ಹಿರೇಮಠರು ''ಏಳನೂರು ಎಪ್ಪತ್ತು ಪುಟಗಳುದ್ದಕ್ಕೂ ಈ ಮಹಾನುಭಾವ ಅಮೋಘವಾದ ರೀತಿಯಲ್ಲಿ ನಲವತ್ತೇಳು ಮಂದಿ ವಚನಕಾರರ, ಐದನೂರ ಮೂವತ್ತಾರು ವಚನಗಳಿಗೆ ವ್ಯಾಖ್ಯಾನ ನೀಡಿದ್ದಾನೆ''[೨೫೦] ಎಂದು ಅಭಿಪ್ರಾಯಪಡುತ್ತಾರೆ. ಡಾ. ಸಿ ನಾಗಭೂಷಣ ಅವರು - ''ಅಂದಾಜು ನಲವತ್ಮೂರು ವಚನಕಾರರನ್ನು ಹೆಸರಿಸಿ, ಒಟ್ಟು ೫೪೧ ಬೆಡಗಿನ ವಚನಗಳಿಗ ಟೀಕೆಯನ್ನು ಬರೆದಿದ್ದಾರೆ.[೨೫೧] ಎಂದು ಹೇಳುತ್ತಾರೆ. ಡಾ. ಬಿ. ಆರ್. ಹಿರೇಮಠರು ೪೫ ವಚನಕಾರರ ೫೪೧ ಬೆಡಗಿನ ವಚನಗಳಿಗೆ ಮಾತ್ರ ವ್ಯಾಖ್ಯಾನ ಬರೆದಿದ್ದಾನೆ.''[೨೫೨] ಎನ್ನುತ್ತಾರೆ. ಹೀಗೆ, ವಚನಕಾರರು ಮತ್ತು ವಚನಗಳ ಸಂಖ್ಯೆಯನ್ನು ನಿರ್ಣಯಿಸುವಲ್ಲಿ ಭಿನ್ನಾಭಿಪ್ರಾಯಗಳಿರುವುದು ಕಂಡುಬರುತ್ತದೆ.

ಕೋಲಶಾಂತಯ್ಯ ೩೩, ಮಧುವಯ್ಯ ೩೩, ಬಿಬ್ಬಿ ಬಾಚಯ್ಯ ೨೩, ಅರಿವಿನಮಾರಿತಂದೆ ೫೧, ಶಿವಲೆಂಕ ಮಂಚಣ್ಣ ೦೮, ಡಕ್ಕೆಯ ಬೊಮ್ಮಣ್ಣ ೦೪, ಮನುಮುನಿ ಗುಮ್ಮಟಯ್ಯ ೨೫, ವಚನ ಭಂಡಾರಿ ಶಾಂತರಸ ೨೧,ಮಾದಾರ ಧೂಳಯ್ಯ ೦೩, ಪ್ರಸಾದಿ ಬೋಗಣ್ಣ ೦೨, ಅವಸರದ ರೇಚಣ್ಣ ೦೫, ತುರುಗಾಹಿ ರಾಮಣ್ಣ ೧೫, ದಾಸೋಹದ ಸಂಗಣ್ಣ ೦೯, ನಗೆಯ ಮಾರಿತಂದೆ ೦೯, ಸಗರದ ಬೊಮ್ಮಣ್ಣ ೩೧, ಗುಪ್ತ ಮಂಚಣ್ಣ ೨೨, ಆದಯ್ಯಗಳ ವಚನ ೧೨, ಸುಂಕದ ಬಂಕಣ್ಣ ೩೬, ವೈದ್ಯ ಸಂಗಣ್ಣ ೦೧, ಘಟ್ಟಿವಾಳಯ್ಯ ೧೪, ತಳವಾರ ಕಾಯಿದೇವಯ್ಯ ೦೨, ಗಾಣದ ಕಣ್ಣಪ್ಪ ೦೬, ಬಹುರೂಪಿ ಚೌಡಯ್ಯ ೦೫, ಬೊಕ್ಕಸದ ಚಿಕ್ಕಣ್ಣ ೦೪, ಗೋರಕ್ಷಯ್ಯ ೦೪, ಕಂಬದ ಮಾರಿತಂದೆ ೦೭, ರಕ್ಕಸ ಬೊಮ್ಮಣ್ಣ ೦೫, ಕದಿರ ರೆಮ್ಮವ್ವೆ ೦೩, ಕನ್ನದ ಮಾರಿತಂದೆ ೦೩, ಕಲಕೇತಯ್ಯ ೦೪, ಕಾಮಾಟದ ಭೀಮಣ್ಣ ೦೨, ಉಗ್ಗಡಿಸುವ ಗುಬ್ಬಿದೇವಯ್ಯ ೦೩, ವೀರಗೊಲ್ಲಾಳ ೦೫, ಅನಾಮಿಕ ನಾಚಯ್ಯ ೦೧, ತೆಲುಗೇಶ ಮಸಣಯ್ಯ ೦೧, ಬಳ್ಳೇಶ ಮಲ್ಲಯ್ಯ ೦೫, ಒಕ್ಕಲಿಗ ಮುದ್ದಯ್ಯ ೦೫, ಕೀಲಾರದ ಭೀಮಣ್ಣ ೦೪, ಬಾಚಿಕಾಯಕದ ಬಸವಣ್ಣ ೦೨, ಹೊಡೆಹುಲ್ಲಬಂಕಣ್ಣ ೦೪, ಸೂಜಿಕಾಯಕದ ರಾಮಿತಂದೆ ೦೯,ಕನ್ನಡಿ ಕಾಯಕದ ಅಮುಗಿ ದೇವಯ್ಯ ೦೫, ಮಲಹರ ಕಾಯಕದ ಚಿಕ್ಕದೇವಯ್ಯ ೦೨, ಹಡಪದ ಅಪ್ಪಣ್ಣ ೦೪, ಪ್ರಭುದೇವರು ೧೨. ಬೋಗಣ್ಣ ೧೦, ಮೋಳಿಗಯ್ಯ ೬೧, ಹೀಗೆ ೪೭ ವಚನಕಾರರ ೫೩೬ ವಚನಗಳು ವ್ಯಾಖ್ಯಾನದೊಂದಿಗೆ ಸಮಾವೇಶಗೊಂಡಿವೆ.

ಇದರಲ್ಲಿ ಮೋಳಿಗಯ್ಯ ೬೧, ಅರಿವಿನ ಮಾರಿತಂದೆ ೫೧, ಸುಂಕದ ಬಂಕಣ್ಣ ೩೬,ಕೋಲ ಶಾಂತಯ್ಯ ೩೩,ಮಧುವಯ್ಯ ೩೩, ಸಗರದ ಬೊಮ್ಮಣ್ಣ ೩೧, ಮನುಮುನಿ ಗುಮ್ಮಟ್ಟಯ್ಯ ೨೫,ಬಿಬ್ಬಿ

ಬಾಚಯ್ಯ ೨೩,ಗುಪ್ತ ಮಂಚಣ್ಣ ೨೨, ಶಾಂತರಸ ೨೧, ತುರುಗಾಹಿ ರಾಮಣ್ಣ ೧೫, ಆದಯ್ಯ ೧೨, ಪ್ರಭುದೇವರ ೧೨ ಹೀಗೆ ಕೆಲವು ವಚನಕಾರರ ಹೆಚ್ಚಿನ ಸಂಖ್ಯೆಯ ಬೆಡಗಿನ ವಚನಗಳಿಗೆ ಟೀಕೆಯನ್ನು ಬರೆಯಲಾಗಿದೆ. ಬೆಡಗಿನ ವಚನಗಳ ವ್ಯಾಖ್ಯಾನಗಳ ಸ್ವರೂಪವನ್ನು ಡಾ. ಬಿ. ಆರ್. ಹಿರೇಮಠರು ಹೀಗೆ ವಿವರಿಸುತ್ತಾರೆ.

೧. ಕೇವಲ ಬೆಡಗಿನ ವಚನಗಳ ವ್ಯಾಖ್ಯಾನ

೨. ವಚನಕಾರರ ಸಮಗ್ರ ವಚನಗಳಲ್ಲಿಯ ವಚನಗಳ ವ್ಯಾಖ್ಯಾನ

೩. ವಚನ ಸಂಕಲನಗಳಲ್ಲಿಯ ಬೆಡಗಿನ ವಚನಗಳ ವ್ಯಾಖ್ಯಾನ ಎಂದು ಮೂರು ರೀತಿಯಲ್ಲಿ ಲಭಿಸುತ್ತವೆ. ಈ ವ್ಯಾಖ್ಯಾನಗಳು ಕೇವಲ ತಾತ್ವಿಕಾರ್ಥ ಪ್ರಧಾನವಾದವುಗಳಾಗಿರುತ್ತವೆ ಎಂದು ಹೇಳಿದ್ದಾರೆ.[೨೫೩] ಅಲ್ಲದೇ ಬೆಡಗಿನ ವಚನಗಳಿಗೆ ವಿವಿಧ ಸ್ವರೂಪದ ವ್ಯಾಖ್ಯಾನಗಳಿವೆ ಎಂಬುದನ್ನು ಗುರುತಿಸಿ ಕೆಳಗಿನಂತೆ ತಿಳಿಸಿದ್ದಾರೆ.

೧. ತಾತ್ವಿಕಾರ್ಥದಲ್ಲಿರುವ ಪ್ರತಿಪದಾರ್ಥ

೨. ವಾಕ್ಯರೂಪದ ತಾತ್ವಿಕಾರ್ಥ

೩. ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ವಿವರಣ ರೂಪದ ತಾತ್ವಿಕಾರ್ಥ

೪. ಪದವನ್ನು ಹಿಮ್ಮೆಟ್ಟಿಸಿ ಬರೆದ ಪ್ರತಿಪದಾರ್ಥ ಹಾಗೂ ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ತಾತ್ವಿಕಾರ್ಥ.

೫. ಸಾರವತ್ತಾದ ಹಾಗೂ ಸಂಗ್ರಹರೂಪದ ತಾತ್ವಿಕಾರ್ಥ.

೬. ವಾಕ್ಯರೂಪ ಹಾಗೂ ಸಾರರೂಪದಲ್ಲಿರುವ ಎರಡು ತಾತ್ವಿಕಾರ್ಥ".[೨೫೪]

ಸಿಂಗಳದ ಸಿದ್ಧಬಸವರಾಜದೇವರು ಟೀಕೆಯ ಆರಂಭದಲ್ಲಿ - ''ಶ್ರೀಗುರು ಬಸವಲಿಂಗಾಯನಮಃ ಸರ್ವಗಣಂಗಳ ಬೆಡಗಿನ ಸಿಂಗಳದ ಸಿದ್ಧಬಸವರಾಜದೇವರು ವ್ಯಾಖ್ಯಾನಮಂ ಮಾಡಿದ ಎಲ್ಲ ಪುರಾತನರ ವಚನ. ಬೆಡಗಿನ ವಚನ ಪ್ರಥಮದಲ್ಲಿ ಎಂದು ನುಡಿದಿದ್ದಾರೆ.

ಡಾ. ಸಿ. ನಾಗಭೂಷಣ ಅವರು ಸಿಂಗಳ ಸಿದ್ಧಬಸವರಾಜದೇವರ ಬೆಡಗಿನ ವಚನ ವ್ಯಾಖ್ಯಾನ ಮಾದರಿ ಕುರಿತು ''.......ವಾಚ್ಯಾರ್ಥಕ್ಕಿಂತ ತಾತ್ವಿಕಾರ್ಥವನ್ನೇ ಒಳಗೊಂಡಿದೆ. ಬಹುಪಾಲು ಈತನ ಬೆಡಗಿನ ವಚನಗಳ ಟೀಕೆಯು ವ್ಯಾಖ್ಯಾನವನ್ನು ಹಿಮ್ಮೆಟ್ಟಿಸಿ ಬರೆದ ವಿವರಣಾರೂಪದ ತಾತ್ವಿಕಾರ್ಥವುಳ್ಳದ್ದಾಗಿದೆ. ಈತನು ಕೆಲವು ವಿಶಿಷ್ಟ ಪದಗಳಿಗೆ ಬರೆದ ಶಬ್ದಾರ್ಥ, ದೇಶಿಪದಗಳನ್ನೊಳಗೊಂಡ ವ್ಯಾಖ್ಯೆಗಳು ವಿಶೇಷ ಅಧ್ಯಯನಕ್ಕೆ ಅನುಕೂಲಕರವಾಗಿದೆ. ಪ್ರತಿಯೊಂದು ವಚನ ಪದಕ್ಕೆ ಅರ್ಥವನ್ನು ಹೇಳಿರುವಲ್ಲಿ ಈತನ ಬಹುಭಾಷಾ ಪರಿಜ್ಞಾನ ಪಾಂಡಿತ್ಯ ಪ್ರತಿಭೆಗಳನ್ನು ಗುರುತಿಸಬಹುದು. ಪ್ರತಿಪದದ ಅರ್ಥದ ವಿವರಣೆಯಿಂದ ಕನ್ನಡ ಶಬ್ದಭಂಡಾರವನ್ನು ಶ್ರೀಮಂತಗೊಳಿಸಿದ್ದಾರೆ. ಸಿಂಗಳ ಸಿದ್ಧನ ಈ ಟೀಕೆಯು ವಚನಗಳ ಪದದ ಅರ್ಥವನ್ನು ಸಮಕಾಲೀನರಿಗೆ ಬಿಡಿಸಿ ಹೇಳುವ ಉದ್ದೇಶದಿಂದ ರಚಿತವಾಗಿರುವ ಹಿನ್ನೆಲೆಯಲ್ಲಿ ಕೆಲವೆಡೆ ಆ ಕಾಲದ ಸಾಮಾಜಿಕ ಆಚಾರ ವಿಚಾರಗಳು ಮೇಳೈಸಿವೆ''[೨೫೫] ಎಂದು ಅಭಿಪ್ರಾಯಪಡುತ್ತಾರೆ. ಈತನ ಟೀಕೆಗಳ ಸ್ವರೂಪವನ್ನು ಗಮನಿಸೋಣ.

**೧. ವಾಕ್ಯವನ್ನು ಹಿಮ್ಮೆಟ್ಟಿಸಿ ವಿವರಣರೂಪದ ತಾತ್ವಿಕಾರ್ಥ ನೀಡಿದ್ದಕ್ಕೆ ಉದಾಹರಣೆ**

**ವಚನ:-** ತಲೆಯಿಲ್ಲದ ಮೃಗವು ಒಡಲಿಲ್ಲದೆ ಆಹಾರವ ಕೊಂಡಿತ್ತು.
ಹೆಜ್ಜೆಯಿಲ್ಲದೆ ಹರಿಯಿತ್ತು.
ಅದ ಶುದ್ಧಿಯ ಮಾಡಹೋದಾತನಿನ್ನೂ ಮರಳನು.
ವೆಜ್ಜವಿಲ್ಲದ ಮಣಿಯ ದಾರವಿಲ್ಲದೆ ಪವಣಿಸುವ
ಗುಹೇಶ್ವರಾ ನಿಮ್ಮ ಶರಣನ ಪರಿಯ ನೋಡಾ (ವ-೪೬೩-ಪುಟ-೬೫೫)

**ಟೀಕು:-** ವೃತ್ತಿ ಜ್ಞಾನವಿಲ್ಲದ ಸಜ್ಜೀವಾತ್ಮನೆಂಬುದೀಗ, ತಲೆಯಿಲ್ಲದ ಮೃಗ ಎಂಬ ಶಬ್ಧಕ್ಕರ್ಥ.

ಅ ಸಜ್ಜೀವನು ತನುಗುಣರಹಿತನಾಗಿ ಶಿವ ಸುಖಾನಂದವ ಸವಿವುತ್ತ ಅಭಿನ್ನಕ್ರಿಯಾಚರಿತ್ರೆವಿಡಿದು ಗಮನಿಸುತ್ತಿರಲದೀಗ, ಒಡಲಿಲ್ಲದೆ ಆಹಾರವ ಕೊಂಡಿತ್ತು ಹೆಜ್ಜೆಯಿಲ್ಲದೆ ಹರಿಯಿತ್ತು ಎಂಬ ಶಬ್ಧಕ್ಕರ್ಥ.

ಇಂತೀ ಸಜ್ಜೀವನ ನಿಲವನಱಸುತ್ತಿದ್ದ ಶರಣ ಮರಳಿಪುನರಪಿವಿಡಿದು ವರ್ತಿಸನೆಂಬುದೀಗ, ಅದಶುದ್ಧಿಯ ಮಾಡಹೋದಾತನಿನ್ನೂ ಮರಳನು ಎಂಬ ಶಬ್ಧಕ್ಕರ್ಥ.

ಇಂತಪ್ಪ ಶರಣನು ಅಭೇದ್ಯಜ್ಞಾನ ಸ್ವರೂಪವಾದ ಅವಿರಳ ಪರವಸ್ತು ಪ್ರಾಣವಾಯು ಸೂತ್ರವಳಿದ ಸ್ವಾನುಭಾವ ಸೂತ್ರದಲ್ಲಿ ಸಂಬಂಧಿಸಿ ದೃಢ ಕಂಠದೊಳಲಂಕರಿಸುತ್ತಿರಲದೀಗ, ವೆಜ್ಜವಿಲ್ಲದ ಮಣಿಯ ದಾರವಿಲ್ಲದೆ ಪವಣಿಸುವ ಗುಹೇಶ್ವರಾ ನಿಮ್ಮ ಶರಣನ ಪರಿಯನೋಡಾ ಎಂಬ ಶಬ್ಬಕ್ಕರ್ಥ.

ಹೀಗೆ ಬೆಡಗಿನ ವಚನದ ಒಂದೊಂದು ಸಾಲು ಇಲ್ಲವೇ ವಾಕ್ಯವನ್ನು ಹಿಮ್ಮೆಟ್ಟಿಸಿ ತಾತ್ವಿಕಾರ್ಥ ನೀಡಿದ ಮಾದರಿಗಳು ಹೆಚ್ಚಾಗಿರುವುದನ್ನು ಕಾಣಬಹುದು.

**೨ ವಾಕ್ಯವನ್ನು ಹಿಮ್ಮೆಟ್ಟಿಸಿ ತಾತ್ವಿಕಾರ್ಥ ನೀಡುವ ವಾಖ್ಯಾನಕಾರ ಕೆಲವೊಮ್ಮೆ ಶಬ್ದರ್ಥ ನೀಡಿ ಬೆಡಗಿನ ವಚನದ ಶಬ್ಧಕ್ಕೆ ನಿಖರವಾದ ಅರ್ಥ ನೀಡುತ್ತಾನೆ.**

**ಉದಾಹರಣೆಗೆ ವಚನ:** ಹುಟ್ಟು ಬಂಜೆಯ ಮಗನೊಬ್ಬ ಈನದೆಮ್ಮೆಯ ಗಿಣ್ಣ ಬೇಡಿದನು.
ಕೊಂಬಿಲ್ಲದ ಮರನನೇರಿ ಹೊಟ್ಟೆ ತುಂಬ ಹಣ್ಣ ಮೆಲಿದನು.
ಗುಹೇಶ್ವರ ಗುಹೇಶ್ವರಾ ಇಳಿ ಇಳಿ ಎಂದೊಡೆ ಅಳುತೈದಾನೆ
(ವ-೪೬೫, ಪುಟ-೬೫೭)

**ಟೀಕು:-** ಜನನ ಕರ್ಮಂಗಳಿಲ್ಲದ ಚಿದಂಶೀಭೂತನಾದಾತ್ಮನು ನಿಜವಂ ಮರದು ಜೀವಭಾವ ಭ್ರಾಂತಿಯಂ ಜ್ಞಾನೋತ್ಪತ್ತಿಯಿಲ್ಲದ ಮಾಯಾಸುಖವನಿಚ್ಛೈಸುತ್ತಿರಲದೀಗ, ಹುಟ್ಟು ಬಂಜೆಯ ಮಗನೊಬ್ಬ ಈನದೆಮ್ಮೆಯ ಗಿಣ್ಣ ಬೇಡಿದನು ಎಂಬ ಶಬ್ಬಕ್ಕರ್ಥ.

ಇಂತು ಮಾಯಾ ಸುಖವನಿಚ್ಛೈಸುತ್ತಿರ್ದ ಜೀವನು ಕೊಂಬಿಲ್ಲದ ಮರನೆಂದೊಡೆ ತಾಳಮರ. ಅಂತಪ್ಪ ಮರದ ಗುಣಧರ್ಮವನುಳ್ಳ ದೇಹವೆಂಬ ವೃಕ್ಷವನಾಶ್ರೈಸಿ ತತ್ಕರ್ಮ ಫಲಂಗಳನನುಭವಿಸುತ್ತಿರಲದೀಗ, ಕೊಂಬಿಲ್ಲದ ಮರವನೇರಿ ಹೊಟ್ಟೆ ತುಂಬ ಹಣ್ಣ ಮೆಲಿದನು ಎಂಬ ಶಬ್ಬಕ್ಕರ್ಥ.

ಇಂತೀ ದೇಹಸುಖಂಗಳ ಮೆಚ್ಚಿ ಬಿಡಲಾಱದೆ ಸಂಸಾರ ದುಃಖಕ್ಕೊಳಗಾಗಿ ಮರುಗುತ್ತಿರ್ದ ಜೀವನವೆಂಬುದೀಗ, ಗುಹೇಶ್ವರ ಗುಹೇಶ್ವರಾ ಇಳಿ ಇಳಿ ಎಂದೊಡೆ ಅಳುತ್ತೈದಾನೆ ಎಂಬ ಶಬ್ದಕ್ಕರ್ಥ. ಇಲ್ಲಿ ಮರನೆಂದೊಡೆ - ತಾಳಮರ ಎಂದು ಹೇಳುವ ವ್ಯಾಖ್ಯಾನಕಾರ ಅಂತಪ್ಪ ಮರದ ಗುಣಧರ್ಮವನುಳ್ಳ ದೇಹವೆಂಬ ವೃಕ್ಷ...... ಎಂದು ನಿಖರವಾಗಿ ಹೇಳುವ ಮೂಲಕ ಬೆಡಗಿನ ವಚನವನ್ನು ಸಾಮಾನ್ಯರು ಅರ್ಥಮಾಡಿಕೊಳ್ಳಲು ಅನುಕೂಲವಾಗುವಂತಿದೆ. ಏಕೆಂದರೆ, ಕೊಂಬಿಲ್ಲದ ಮರವೆಂದರೆ ಯಾವುದಿರಬಹುದೆಂಬ ಗೊಂದಲಕ್ಕೆ ಟೀಕಾಕಾರನ ವ್ಯಾಖ್ಯಾನ ತೆರೆ ಎಳೆದುಬಿಡುತ್ತದೆ. ಹೀಗೆ ಬೆಡಗಿನ ವಚನಗಳಿಗೆ ವ್ಯಾಖ್ಯಾನ ಬರೆಯದೇ ಇದ್ದಲ್ಲಿ ವಚನಕಾರರ ಆದ್ಯಾತ್ಮ ಅನುಭಾವದ ಎತ್ತರಕ್ಕೇರಲಾಗದ ಅಸಂಖ್ಯಾತರು ಕಣ್ಣಿದ್ದು ಕುರುಡರಂತೆ ವಚನವನ್ನು ಓದಿದರೂ ಅರ್ಥವಾಗದೇ ಪರದಾಡಬೇಕಾಗುತ್ತಿತ್ತು. ಈ ದಿಶೆಯಲ್ಲಿ ವಚನ ಟೀಕಾಕಾರರು ಅದರಲ್ಲೂ ಬೆಡಗಿನ ನಿಗೂಢಹೊತ್ತ ವಚನಗಳಿಗೆ ವ್ಯಾಖ್ಯಾನ ಬರೆಯದೇ ಇದ್ದಲ್ಲಿ ವಚನಗಳಲ್ಲಿ ಹುದುಗಿದ ಸತ್ಯವನ್ನು ಇಂದು ಅರಿಯುವುದು ತುಂಬಾ ಕಷ್ಟಕರವಾಗುತ್ತಿತ್ತು. ಅಲ್ಲಮಪ್ರಭುವಿನ ಇನ್ನೊಂದು ಬೆಡಗಿನ ವಚನ ವ್ಯಾಖ್ಯಾನ ನೋಡೋಣ.

**ವಚನ:** ಗಂಗಾದೇವಿ ಮುಂಡೆಯಾದಳು। ಗೌರಾದೇವಿ ವಾಲೆಯ ಕಳೆದಳು
ಚಂದ್ರ ಸೂರ್ಯರಿಬ್ಬರು ನೀರಿಳಿದರು। ವಾಯುದೇವ ವಿಮಾನವ ಹೊತ್ತ,
ವಾಸುದೇವ ತಲೆಗೊಳ್ಳಿಯನಿರಿದ। ಅಲ್ಲಿಂದತ್ತ ಗುಹೇಶ್ವರ ಸತ್ತನೆಂಬ ಸುದ್ದಿ.

**ಟೀಕು:** ಶರಣರ ಕರಸ್ಥಲದ ಲಿಂಗ ಮನಸ್ಥಲಕ್ಕೆ ವೇದಿಸಿ ನಿಜೈಕ್ಯವಾಗಲು ಜ್ಞಾನಶಕ್ತಿ ಸತಿಪತಿಭಾವ ನಿಷ್ಪತ್ತಿಯಾಗಿರ್ಪಳೇಂಬುದೀಗ, ಗಂಗಾದೇವಿ ಮುಂಡೆಯಾದಳು. ಇಂತಾಗಲು ಕ್ರಿಯಾಶಕ್ತಿ ಆಚಾರವಳಿದುಳಿದಿರ್ಪಳೆಂಬುದೀಗ, ಗೌರಾದೇವಿ ವಾಲೆಯ ಕಳೆದಳು ಎಂಬ ಶಬ್ಧಕ್ಕರ್ಥ.

ಇಂತಾಗಲು ಚಂದ್ರಸೂರ್ಯ ಸ್ವರಂಗಳು ಧ್ಯಾನಾನಂದ ಜಲದಲ್ಲಿ ಸೂತಕವಳಿದಿರ್ಪವೆಂಬುದೀಗ, ಚಂದ್ರಸೂರ್ಯರಿಬ್ಬರು ನೀರಿಳಿದರು ಎಂಬ ಶಬ್ಧಕ್ಕರ್ಥ.

ಇಂತಿವು ನಿವೃತ್ತಿ ಮುಖವನೆಯ್ದಲು ಆ ಲಿಂಗೈಕ್ಯ ಪದವ ಪ್ರಾಣವಾಯು ಧರಿಸಿಕೊಂಡು ಪರಮ ವಿಶ್ರಾಂತಿಯಲ್ಲಿರಲದು ಪರಮ ಚೈತನ್ಯಾತ್ಮಕನು ಮಹಾಜ್ಞಾನ ಸಂಪರ್ಕದಿಂ ನಿರೂಪಿಸಿದನೆಂಬುದೀಗ, ವಾಯುದೇವ ವಿಮಾನವ ಹೊತ್ತ ವಾಸುದೇವ ತಲೆಗೊಳ್ಳಿಯನಿರಿದ ಎಂಬ ಶಬ್ಧಕ್ಕರ್ಥ.

ಇಂತಾಗಲು ಲಿಂಗೈಕ್ಯ ಪದವು ನಿರ್ನಾಮವೆನಿಸಿರ್ಪುದೆಂಬುದೀಗ ಅಲ್ಲಿಂದತ್ತ ಗುಹೇಶ್ವರ ಸತ್ತನೆಂಬ ಸುದ್ದಿ ಎಂಬ ಶಬ್ಬಕ್ಕರ್ಥ. (ವಚನ - ೪೬೭ - ಪುಟ - ೬೫೫) ಹೀಗೆ, ಅಲ್ಲಮಪ್ರಭುವಿನ ಬೆಡಗಿನ ವಚನಗಳಲ್ಲದೇ ಸಕಲ ಪುರಾತನರ ಬೆಡಗಿನ ವಚನಗಳನ್ನು ತೆಗೆದುಕೊಂಡು ಅವುಗಳಲ್ಲಿಯ ಗೂಢಾರ್ಥವನ್ನು ಗುರುತಿಸಿ ವ್ಯಾಖ್ಯಾನ ಮಾಡಿರುವುದು ಸಿಂಗಳದ ಸಿದ್ಧಬಸವರಾಜರ ಪ್ರತಿಭೆ ಪಾಂಡಿತ್ಯಕ್ಕೆ ನಿದರ್ಶನವಾಗಿವೆ. ಡಾ. ಸಿ.ನಾಗಭೂಷಣ ಅವರು - ''ಉಕ್ಕಿನ ಕಡಲೆಯಂತಿದ್ದ ಬೆಡಗಿನ ವಚನಗಳನ್ನು ಕಡಿದು ಭೇದಿಸಿ ಅದರಂತರಂಗದ ಭಾವಾರ್ಥವನ್ನು ಬಯಲಿಗೆ ತಂದು ಬಿಚ್ಚಿ ಹೇಳುವ ಅವರ ಜಾಣ್ಮೆ ಎಂತಹವರನ್ನೂ ಬೆರಗುಗೊಳಿಸುವಂತಹದ್ದಾಗಿದೆ''[೨೫] ಎಂಬ ಅಭಿಪ್ರಾಯ ಸೂಕ್ತವಾಗಿದೆ.

**ಇತರೆ ಬೆಡಗಿನ ವಚನ ಟೀಕಾಕಾರರು**

ಶಿವಶರಣರ ಬೆಡಗಿನ ವಚನಗಳನ್ನು ಆಯ್ಕೆಮಾಡಿಕೊಂಡು ಅವಕ್ಕೆ ವ್ಯಾಖ್ಯಾನ ಬರೆದವರಲ್ಲಿ ಸಿಂಗಳದ ಸಿದ್ಧಬಸವರಾಜದೇವರು ಮೊದಲಿಗರಾದರೆ, ನಂತರ ಇದೇ ಮಾರ್ಗ ಅನುಸರಿಸಿದವನು - ಸೋಮಶೇಖರ ಶಿವಯೋಗಿ.

ಸೋಮಶೇಖರ ಶಿವಯೋಗಿಯು (ಸು-೧೭೨೦) ತೋಂಟದ ಸಿದ್ಧಲಿಂಗೇಶ್ವರರ ಷಟ್‌ಸ್ಥಲ ಜ್ಞಾನಸಾರಾಮೃತದಲ್ಲಿಯ ೧೫೨ ಬೆಡಗಿನ ವಚನಗಳಿಗ ಮಾತ್ರ ವ್ಯಾಖ್ಯಾನ ಮಾಡಿದ್ದಾನೆ. ಪ್ರಸ್ತುತ ಸೋಮಶೇಖರ ಶಿವಯೋಗಿಯ ಟೀಕಾಗ್ರಂಥವನ್ನು ಡಾ. ಬಿ.ವಿ. ಶಿರೂರ ಅವರು ಸಂಪಾದಿಸಿದ್ದಾರೆ. ಗದಗ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ ಈ ಗ್ರಂಥವನ್ನು ಪ್ರಕಟಿಸಿದೆ. ಅದೇ ರೀತಿ ಅನಾಮಧೇಯ ಟೀಕಾಕಾರನೊಬ್ಬ ಇದೇ ಸಿದ್ಧಲಿಂಗಯತಿಗಳ ಷಟ್‌ಸ್ಥಲಜ್ಞಾನಸಾರಾಮೃತದ ೨೬೬ ಬೆಡಗಿನ ವಚನಗಳಿಗೆ ಟೀಕೆ ಬರೆದಿದ್ದಾನೆ. ಇದರ ಏಕೈಕ ಹಸ್ತಪ್ರತಿ ಆದರಿಸಿ ''ಷಟ್‌ಸ್ಥಲಜ್ಞಾನಸಾರಾಮೃತ ಟೀಕೆ'' ಎಂಬ ಹೆಸರಿನಲ್ಲಿ ಡಾ. ಎಸ್. ವಿದ್ಯಾಶಂಕರ ಸಂಪಾದಿಸಿದ್ದಾರೆ. ಟೀಕಾಕೃತಿ ಕಾಲವು ೧೮ ರಿಂದ ೧೯ನೇ ಶತಮಾನವೆಂದು ಅಂದಾಜಿಸಲಾಗಿದೆ. ಇದಲ್ಲದೇ ಇನ್ನೊಬ್ಬ ಅನಾಮಧೇಯ ಟೀಕಾಕಾರನು ತೋಂಟದ ಸಿದ್ಧಲಿಂಗಯತಿಗಳ ಬೆಡಗಿನ ವಚನಗಳಿಗೆ ಮಾತ್ರ ವ್ಯಾಖ್ಯಾನ ಮಾಡಿದ್ದಾನೆ. ಇದನ್ನು ''ತೋಂಟದಾರ್ಯ ವಚನ ವ್ಯಾಖ್ಯೆ'' ಹೆಸರಿನಲ್ಲಿ ಡಾ. ಸಾ. ಶಿ. ಮರುಳಯ್ಯನವರು ಪ್ರಕಟಿಸಿದ್ದಾರೆ.

ಟೀಕಾಕಾರ ಸೋಮಶೇಖರ ಶಿವಯೋಗಿಯು ಬಸವಣ್ಣನವರ ಷಟ್‌ಸ್ಥಲದ ವಚನಗಳ ಘಟ್ಟಿ ಘಟ್ಟಿ ನುಡಿಗಳಿಗೂ ವ್ಯಾಖ್ಯಾನ ಮಾಡಿದ್ದಾರೆ. ಇಲ್ಲಿ '' **'ಘಟ್ಟನುಡಿ'ಗಳೆಂದರೆ ಕೇವಲ ಬೆಡಗಿನ ವಚನಗಳೆಂದರ್ಥವಲ್ಲ**. ಕಠಿಣ ಪದಗಳೆಂದರ್ಥ. ಹೀಗಾಗಿ ಸೋಮಶೇಖರ ಶಿವಯೋಗಿ ಬಸವಣ್ಣನವರ ಬೆಡಗಿನ ವಚನಗಳಿಗೆ ಮಾತ್ರ ವ್ಯಾಖ್ಯಾನ ಬರೆದಿದ್ದಾನೆಂಬ ವಿದ್ವಾಂಸರ ಅಭಿಪ್ರಾಯ ಸರಿಯಾದುದಲ್ಲವೆನಿಸುತ್ತದೆ.''[೨೫೭] ಎಂದು ಡಾ. ಬಿ.ಆರ್. ಹಿರೇಮಠರು ಹೇಳಿರುವುದನ್ನು ಗಮನಿಸಬೇಕಾಗುತ್ತದೆ. ಅಲ್ಲದೇ, ಕೇವಲ ಬೆಡಗಿನ ವಚನಗಳನ್ನು ಆಯ್ಕೆಮಾಡಿಕೊಂಡು ಟೀಕುಬರೆದ ಟೀಕಾಕಾರರನ್ನು ಗುರುತಿಸುವ ಪ್ರಯತ್ನ ಇನ್ನೂ ನಡೆಯಬೇಕಾಗುತ್ತದೆ.

**೩. ಏಕೋತ್ತರ ಶತಸ್ಥಲ ವಚನ ಟೀಕಾ ಸಾಹಿತ್ಯ**

ಮನುಜರು ಪರಶಿವನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಆರು ಸ್ಥಲಗಳನ್ನು ಹಂತಹಂತವಾಗಿ ಏರಬೇಕೆಂಬುದು ಶರಣಧರ್ಮದ ಸಿದ್ಧಾಂತವಾಗಿದೆ. ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗ, ಶರಣ ಮತ್ತು ಐಕ್ಯ ಇವುಗಳನ್ನು ಷಟ್‌ಸ್ಥಲಗಳೆಂದು ಇನ್ನೊಂದರ್ಥದಲ್ಲಿ ಅಂಗಸ್ಥಲಗಳೆಂದು ಕರೆಯುತ್ತಾರೆ. ಇವುಗಳಿಗೆ ಪೂರಕವಾದ ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗಗಳನ್ನು ಲಿಂಗಸ್ಥಲವೆಂದು ಕರೆಯುತ್ತಾರೆ. ಇದನ್ನೇ ವಚನಕಾರರು

‘ಷಟ್‌ಸ್ಥಲ’ ಸಿದ್ಧಾಂತವೆಂದು ಹೆಸರಿಸುವ ಮೂಲಕ ಅಂಗನು ಲಿಂಗಮಯವಾಗುವ ‘ಲಿಂಗಾಂಗಸಾಮರಸ್ಯ’ದ ಹಲವು ಮಜಲುಗಳನ್ನು ಅನುಭಾವದ ನೆಲೆಯಲ್ಲಿ ವಿಂಗಡಿಸಿದ್ದಾರೆ.

ವೀರಶೈವ ದರ್ಮದ ಪಾರಿಭಾಷಿಕ ನೆಲೆಯಲ್ಲಿ ‘ಸ್ಥಲ’ವೆಂದರೆ ಲಿಂಗ. ಇದನ್ನು ಪರಶಿವ, ಪರಬ್ರಹ್ಮ, ಪರವಸ್ತು, ಶೂನ್ಯ, ಘನ, ನಿಜ, ಆಧಾರ, ವಸ್ತು ಇತ್ಯಾದಿ ಅರ್ಥದಲ್ಲಿ ಬಳಸುತ್ತಾರೆ. ಮಗ್ಗೆಯ ಮಾಯಿದೇವನ ಪ್ರಕಾರ ‘ಸ್ಥ’ ಎಂದರೆ ಯಾವುದರಿಂದ ಪ್ರಪಂಚವು ಹೊರಬರುತ್ತದೆಯೋ ಅದು; ‘ಲ’ ಎಂದರೆ ಯಾವುದರಿಂದ ಪ್ರಪಂಚವು ಲಯವಾಗಿ ಕೊನೆಗೆ ಎಲ್ಲಿಗೆ ಹಿಂತಿರುಗುತ್ತದೆಯೋ ಅದು, ಅಂದರೆ ಪರಶಿವ ಎಂದರ್ಥವಾಗುತ್ತದೆ. ಇದೇ ರೀತಿಯ ಅಭಿಪ್ರಾಯ ಇತರ ವಚನಕಾರರಲ್ಲಿಯೂ ಕಂಡುಬರುತ್ತದೆ.

ಅಂಗನು ಲಿಂಗದ ಬಳಿಗೆ ಹೋಗಲು ಏರುವ ಸೋಪಾನಗಳೇ ಈ ಸ್ಥಲಗಳು. ಇವನ್ನು ‘ಕೈವಲ್ಯ ಸೋಪಾನ’ಗಳೆಂದೇ ಕರೆದಿದ್ದಾರೆ. ಸಾಧಕನು ಕ್ರಮವಾಗಿ ಒಂದೊದು ಸ್ಥಲದಲ್ಲೂ ವಿರಮಿಸಿ, ಸ್ಥಲನಿರೂಪಣೆಯ ಕ್ರಮದಲ್ಲಿ ಆಚರಿಸಿ ನಂಬಿ ಮೇಲೇರಬೇಕಾಗುತ್ತದೆ. ಹೀಗೆ ಕ್ರಮಕ್ರಮವಾಗಿ ಮೇಲೇರಿ ಕೊನೆಗೆ ನೂರೊಂದು (ಇಲ್ಲವೆ ಇನ್ನೂರ ಹದಿನಾರನೇ) ಸ್ಥಲದಲ್ಲಿ ಸೇರಿ ತಾನು ಸಂಪೂರ್ಣವಾಗಿ ಇಲ್ಲವಾಗುತ್ತಾನೆ.”[೨೫೮] ಹೀಗೆ ವಿಶ್ವಧರ್ಮದ ಮಹತ್ವ ಹೊಂದಿದ ಶಿವಶರಣರ ವಚನಗಳನ್ನು ೧೫ನೇ ಶತಮಾನದಲ್ಲಿ ಪುನಃ ಸಂಗ್ರಹಿಸುವ, ನೂರಾರು ಸ್ಥಲಕಟ್ಟುಗಳಲ್ಲಿ ಸಂಕಲಿಸುವ, ಸಂಪಾದಿಸುವ, ವ್ಯಾಖ್ಯಾನ ಮಾಡುವ ಕಾರ್ಯ ತೀವ್ರಸ್ವರೂಪ ಪಡೆಯಿತು. ತನ್ಮೂಲಕ ಶರಣಧರ್ಮದ ತಾತ್ವಿಕ ಸಿದ್ಧಾಂತವನ್ನು ಅರಿತು ಆಚರಣೆಗೆ ತರಲು ಸ್ಥಲಕಟ್ಟುಗಳ ಹಲವು ಮಾದರಿಗಳನ್ನು ಈ ಕಾಲಘಟ್ಟದಲ್ಲಿ ವಚನ ಸಂಕಲನಕಾರರಾದ ಪುಲಿಗೆರೆಯ ಮಹಾಲಿಂಗದೇವ, ಜಕ್ಕಣಾರ್ಯ, ಕಲ್ಲುಮಠದ ಪ್ರಭುದೇವ, ಕುಮಾರ ಬಂಕನಾಥ, ಶ್ರೀ ಗಿರೀಂದ್ರ, ಮಗ್ಗೆಯ ಮಾಯಿದೇವ, ಸಿದ್ಧಲಿಂಗೇಶ(?), ಗುಬ್ಬಿಯ ಮಲ್ಲಣಾರ್ಯ ಮುಂತಾದವರು ಧರ್ಮನಿಷ್ಠೆ ಹಾಗೂ ಶ್ರದ್ಧೆಯಿಂದ ಕಾರ್ಯಮಾಡಿದರು.

ಆದರೆ, ಏಕೋತ್ತರ ಶತಸ್ಥಲ ಇಲ್ಲವೇ ನೂರೊಂದು ಸ್ಥಲಗಳನ್ನು ಮೊದಲು ಕಂಡುಕೊಂಡವರು ಬಸವಾದಿ ಶಿವಶರಣರೆಂಬುದಕ್ಕೆ ಚೆನ್ನಬಸವಣ್ಣನವರ ‘ವಚನೈಕೋತ್ತರ ಶತಸ್ಥಲ’ ಗ್ರಂಥವೇ ಪ್ರಮುಖ ಆಧಾರವಾಗಿದೆ. ‘ವಚನ ಸಂಕಲನಗಳಲ್ಲಿ ಇದೇ ಮೊದಲ ಕೃತಿ. ಚೆನ್ನಬಸವಣ್ಣನವರೇ ಮೊದಲ ವಚನ ಸಂಕಲನಕಾರರು.[೨೫೯] ಎಂಬ ಅಭಿಪ್ರಾಯದ ಹಿನ್ನೆಲೆಯಲ್ಲಿ ಏಕೋತ್ತರ ಶತಸ್ಥಲ ಸಾಹಿತ್ಯದ ಬೆಳವಣಿಗೆ ಹಾಗೂ ಇಲ್ಲಿಯ ಸ್ಥಲಕಟ್ಟು ವಚನಗಳಿಗೆ ರಚಿಸಿದ ವ್ಯಾಖ್ಯಾನ ಗ್ರಂಥಗಳ ಕುರಿತು ವಿಶ್ಲೇಷಣೆ ಮಾಡಲಾಗುವುದು.

**ಏಕೋತ್ತರ ಶತಸ್ಥಲ ಸಾಹಿತ್ಯ ಪರಂಪರೆ**

ಸಾಗರದೊಳಗಣ ಕಿಚ್ಚಿನ ಸಾಕಾರದಂತೆ
ಸಸಿಯೊಳಗಣ ಫಲ ಪುಷ್ಪಂಗಳ ರುಚಿ ಪರಿಮಳದಂತೆ

ಮನದ ಮರೆಯ ಮಾತು – ನೆನಹಿನಲ್ಲರಿದು
ನಾಲಗೆ ನುಡಿವಾಗಲಲ್ಲದೆ – ಕಾಣಬಾರದು ಕೇಳಬಾರದು
ಒಂದಂಗದೊಳಡಗಿದ ನೂರೊಂದರ ಪರಿ ರಾಮನಾಥ!

೧೨ನೇ ಶತಮಾನದ ಬಸವಾದಿ ಶಿವಶರಣರಿಂದ 'ಆದ್ಯವಚನಕಾರ'ನೆಂದು ಉಲ್ಲೇಖಿತನಾದ ದೇವರ ದಾಸಿಮಯ್ಯನವರ ಈ ವಚನವು ಇವರ ಕಾಲಕ್ಕೆ (ಸು ೧೧ನೇ ಶತಮಾನ) ನೂರೊಂದು ಸ್ಥಲದ ಪರಿಚಯ ಇತ್ತೆಂಬುದಕ್ಕೆ ಸಕಾರಣದಂತಿದೆ. ಅಲ್ಲದೇ ವಚನ ಸಾಹಿತ್ಯದ ಇತಿಹಾಸವನ್ನು ಗಮನಿಸಿದಾಗ ವಚನ ಸಂಕಲನ, ಪರಿಷ್ಕರಣ, ಸಂಪಾದನೆ ಕಾರ್ಯವು ೧೨ನೇ ಶತಮಾನದಲ್ಲಿಯೆ ನಡೆದಿದೆ ಎಂಬುದಕ್ಕೆ ಆಧಾರಗಳು ಇವೆ.

'ಷಟ್‌ಸ್ಥಲ ಬ್ರಹ್ಮಿ' ಎಂದೇ ಪ್ರಸಿದ್ಧರಾದ ಚೆನ್ನಬಸವಣ್ಣನವರು ಬರೆದರೆನ್ನಲಾದ 'ವಚನೈಕೋತ್ತರ ಶತಸ್ಥಲ' ಕೃತಿಯಿಂದ ಕಲ್ಯಾಣದ ಅನುಭವ ಮಂಟಪದಲ್ಲಿ ಷಟ್‌ಸ್ಥಲ ಸಿದ್ಧಾಂತ ಕುರಿತು ಚರ್ಚೆ ನಡೆದಿರಲು ಸಾಧ್ಯವಿದೆ. ಗುಬ್ಬಿಯ ಮಲ್ಲಣಾಚಾರ್ಯರು (ಕ್ರಿ.ಶ.ಸು. ೧೪೨೫) ರಚಿಸಿದ 'ಗಣಭಾಷಿತ ರತ್ನಮಾಲೆ' ಕೃತಿಯ ಆರಂಭದ ಗದ್ಯದಲ್ಲಿ 'ಅಸಂಖ್ಯಾತ ಮಹಾಗಣಂಗಳ ಪರಮ ಕಲ್ಯಾಣಪುರದೊಳು ವಿರಚಿತ ಹರಭಕ್ತಿ ಮಾರ್ಗಮಂ ಸ್ಥಲವಿಟ್ಟು ನುಡಿದ ವಚನಂಗಳ, ವರಗುರುನಾಥನಾಜ್ಞೆಯಂ ಧರೆಯೊಳು ನೂತನ ಗಣಂಗಳರಿಯಲೊರೆದುದಾಗಿ' ಹೇಳಿರುವುದರಿಂದ ಪೂರ್ವದ ಶರಣರು ಹಾಕಿಕೊಟ್ಟ ಷಟ್‌ಸ್ಥಲದ ಪಥದಲ್ಲಿಯೇ ನಡೆಯುತ್ತಿರುವುದು ಸ್ಪಷ್ಟವಾಗಿದೆ.

ನೂರೊಂದು ಸ್ಥಲದ ಸ್ವರೂಪವು ಚೆನ್ನಬಸವಣ್ಣನವರ ವಚನಗಳಲ್ಲಿ ಅಂದರೆ, ಲಿಂಗಸ್ಥಲದ ಅವಾಂತರ ಸ್ಥಲಗಳನ್ನು ನಿರೂಪಿಸುವ ವಚನದಲ್ಲಿ ಬಳಕೆಯಾಗಿದ್ದು ಉದಾಹರಣೆಗೆ ನೋಡಬಹುದು.

| | | |
|---|---|---|
| ಗುರುಲಿಂಗ ತ್ರಿವಿಧ | : | ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರು' |
| ಶಿವಲಿಂಗ ತ್ರಿವಿಧ | : | ಕ್ರಿಯಾಲಿಂಗ, ಭಾವಲಿಂಗ, ಜ್ಞಾನಲಿಂಗ; |
| ಜಂಗಮಲಿಂಗ ತ್ರಿವಿಧ | : | ಸ್ವಯ, ಚರ, ಪರ ಇಂತು ಆಚಾರಲಿಂಗಸ್ಥಲ ಒಂಬತ್ತು. |
| ಆಗಮಲಿಂಗ ತ್ರಿವಿಧ | : | ಕ್ರಿಯಾಗಮ, ಭಾವಾಗಮ, ಜ್ಞಾನಾಗಮ; |
| ಕಾಯಲಿಂಗ ತ್ರಿವಿಧ | : | ಸಕಾಯ, ಅಕಾಯ, ಪರಕಾಯ; |
| ಆಚಾರಲಿಂಗ ತ್ರಿವಿಧ | : | ಧರ್ಮಾಚಾರ, ಭಾವಾಚಾರ, ಜ್ಞಾನಾಚಾರ ಇಂತು ಗುರುಲಿಂಗಸ್ಥಲ ಒಂಬತ್ತು, ಅಂತು ಉಭಯಸ್ಥಲ ಹದಿನೆಂಟು. |
| ಅನುಗ್ರಹಲಿಂಗ ತ್ರಿವಿಧ | : | ಕಾಯಾನುಗ್ರಹ, ಇಂದ್ರಿಯಾನುಗ್ರಹ, ಪ್ರಾಣಾನುಗ್ರಹ, |
| ಅರ್ಪಿತಲಿಂಗ ತ್ರಿವಿಧ | : | ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತ. |
| ತನುಗುಣಲಿಂಗ ತ್ರಿವಿಧ | : | ಶಿಷ್ಯ, ಶುಶ್ರೂಷಾ, ಸೇಸ್ಯ–ಇಂತು ಶಿವಲಿಂಗಸ್ಥಲ ಒಂಬತ್ತು ಅಂತು ತೃತೀಯ ಸ್ಥಲ ಇಪ್ಪತ್ತೇಳು. |

ಒಲವುಲಿಂಗ ತ್ರಿವಿಧ : ಜೀವಾತ್ಮ, ಅಂತರಾತ್ಮ, ಪರಮಾತ್ಮ;

ನಿರೂಪಲಿಂಗ ತ್ರಿವಿಧ : ನಿರ್ದೇಹಾಗಮ, ನಿರ್ಭಾಗಮ, ನಷ್ಟಾಗಮ,

ಪ್ರಸಾದಲಿಂಗ ತ್ರಿವಿಧ : ಆದಿಪ್ರಸಾದಿ, ಅಂತ್ಯಪ್ರಸಾದಿ, ಸೇವ್ಯಪ್ರಸಾದಿ.

ಪಾದೋದಕಲಿಂಗ ತ್ರಿವಿಧ : ದೀಕ್ಷಾಪಾದೋದಕ, ಶಿಕ್ಷಾಪಾದೋದಕ, ಜ್ಞಾನಪಾದೋದಕ ಇಂತು ಜಂಗಮಸ್ಥಲ ಹನ್ನೆರಡು. ಅಂದು ಚತುರ್ಥಸ್ಥಲ ಮೂವತ್ತೊಂಬತ್ತು.

**ಮಿರೇದ ಕ್ರೀದಿಕ್ಷಾಕ್ರಮದಿಂದತ್ತಲು ನಿಃಪತಿಲಿಂಗತ್ರಿವಿಧ:** ಕ್ರಿಯಾನಿಃಪತಿ, ಭಾವನಿಃಪತಿ, ಜ್ಞಾನನಿಃಪತಿ;

**ಆಕಾಶಲಿಂಗ ತ್ರಿವಿಧ:** ಪಿಂಡಾಕಾಶ ಬಿಂಧ್ವಾಕಾಶ, ಮಹದಾಕಾಶ.

**ಪ್ರಕಾಶಲಿಂಗ ತ್ರಿವಿಧ:** ಕ್ರಿಯಾಪ್ರಕಾಶ, ಭಾವಪ್ರಕಾಶ, ಜ್ಞಾನಪ್ರಕಾಶ–ಇಂತು ಪ್ರಸಾದ ಲಿಂಗ ಒಂಬತ್ತು ಅಂತು ಪಂಚಮಸ್ಥಲ ನಾಲ್ವತ್ತೆಂಟು.

ಆ ಲಿಂಗೈಕ್ಯನು ಕೊಂಡುದು ಪ್ರಸಾದ, ನಿಂದುದೋಗರ, ಚರಾಚರನಾಸ್ತಿ ಇಂತೀ ತ್ರಿವಿಧ. ಭಾಂಡ, ಭಾಜನ, ಅಂಗಲೇಪನ–ಇಂತೀ ತ್ರಿವಿಧ. ಸ್ವಯಂಪರವರುಯದಸ್ಥಲ, ಭಾವಾಭಾವನಷ್ಟಸ್ಥಲ, ಜ್ಞಾನಶೂನ್ಯಸ್ಥಲ–ಇಂತು ಮಹಾಲಿಂಗಸ್ಥಲ–ಒಂಬತ್ತು. ಅಂತೂ ಷಡುಸ್ಥಲ ಐವತ್ತೇಳು, ಇಂತಿವೆಲ್ಲ ಸ್ಥಲಗಳನೊಳಕೊಂಡ ಮಹಾಮಹಿಮನು ಜ್ಞಾನಿಯಲ್ಲ; ಅಜ್ಞಾನಿಯಲ್ಲ, ಶೂನ್ಯನಲ್ಲ ನಿಶೂನ್ಯನಲ್ಲ, ಉಭಯಾಚಾರವು ತಾನೆಂದರಿದ ಪರಮಜ್ಞಾನಿಗೆ ಕೊಳುಕೊಡೆಯಿಲ್ಲ ಸಾಕಾರ ಸಂಬಂಧವನರಿದು ನಿತ್ಯಮುಕ್ತ, ನಿರವಯ, ಉಭಯಾತ್ಮಕ ತಾನು ಕೂಡಲ ಚೆನ್ನಸಂಗಯ್ಯನೆಂದೂ ಎನ್ನದ ಸುತಿಧಾನಿ."[೨೮೦]

ಮೇಲಿನ ವಚನದಲ್ಲಿ ಲಿಂಗಸ್ಥಲದೊಳಗಿನ ಸೂಕ್ಷ್ಮಸ್ಥಲಗಳನ್ನು ತಿಳಿಸಿದ್ದ ಅಂಗಸ್ಥಲದ ಮತ್ತು ಲಿಂಗಸ್ಥಲದ ಸಂಬಂಧ ಸ್ವರೂಪವನ್ನು ಚೆನ್ನಬಸವಣ್ಣನವರು ಇನ್ನೊಂದು ವಚನದಲ್ಲಿ ನಿರೂಪಿಸಿದ್ದು ಹೀಗಿದೆ:

**ಲಿಂಗಸ್ಥಲ** – ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಇವು ಆರು.

**ಅಂಗಸ್ಥಲ** – ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗ, ಶರಣ, ಐಕ್ಯ. ಅವರವರ ಸಂಬಂಧವಾವಾವೆಂದರೆ: ಘ್ರಾಣದಲ್ಲಿ ಆಚಾರಲಿಂಗ ಸಂಬಂಧ, ಜಿಹ್ವೆಯಲ್ಲಿ ಗುರುಲಿಂಗಸಂಬಂಧ. ತತ್‌ಪದವೆಂಬುದು ಲಿಂಗ, ತ್ವಂ ಪದವೆಂಬುದು ಅಂಗ, ಅಸಿಪದವೆಂಬುದು ಭಯ ಸಂಬಂಧ.

ಭಕ್ತನೆಂಬ ಅಂಗಕ್ಕೆ ಆಚಾರಲಿಂಗ, ಸುಚಿತ್ತವೆ ಹಸ್ತ, ಘ್ರಾಣೇಂದ್ರಿಯವೇ ಮುಖ, ಸದ್ಭಕ್ತಿ ಕ್ರಿಯಾಶಕ್ತಿ, ಪರಿಮಳ ದ್ರವ್ಯವರ್ಪಿತ, ಗಂಧಪ್ರಸಾದ.

ಮಾಹೇಶ್ವರನೆಂಬ ಅಂಗಕ್ಕೆ ಗುರುಲಿಂಗ, ಸುಬುದ್ಧಿಯೆ ಹಸ್ತ, ಜಿಹ್ವೆಯೆ ಮುಖ, ನೈಷ್ಠಿರವೆ ಭಕ್ತಿ, ಜ್ಞಾನಶಕ್ತಿ, ರಸದ್ರವ್ಯರ್ಪಿತ, ರುಚಿಪ್ರಸಾದ.

ಪ್ರಸಾದಿಯೆಂಬ ಅಂಗಕ್ಕೆ ಶಿವಲಿಂಗ, ನಿರಹಂಕಾರವೇ ಹಸ್ತ, ನೇತ್ರೇಂದ್ರಿಯೇ ಮುಖ, ಸಾವಧಾನವೇ ಭಕ್ತಿ, ಇಚ್ಛಾಶಕ್ತಿ, ರೂಪೇ ಅರ್ಪಿತ, ರೂಪು ಪ್ರಸಾದ

ಪ್ರಾಣಲಿಂಗ ಎಂಬ ಅಂಗಕ್ಕೆ ಚರಲಿಂಗ, ಸುಮನವೇ ಹಸ್ತ, ತ್ವಗೀಂದ್ರಿಯವೇ ಮುಖ, ಅನುಭಾವವೇ ಭಕ್ತಿ, ಆದಿಶಕ್ತಿ ಸೋಂಕೆ ಅರ್ಪಿತ, ಸ್ಪರ್ಶನವೇ ಪ್ರಸಾದ.

ಶರಣನೆಂಬ ಅಂಗಕ್ಕೆ ಪ್ರಸಾದಲಿಂಗ, ಜ್ಞಾನವೇ ಹಸ್ತ, ಶ್ರೋತ್ರೇಂದ್ರಿಯವೇ ಮುಖ, ಆನಂದವೇ ಭಕ್ತಿ, ಪರಾಶಕ್ತಿ, ಶಬ್ದವೇ ಅರ್ಪಿತ, ಶಬ್ದಪ್ರಸಾದ.

ಐಕ್ಯನೆಂಬ ಅಂಗಕ್ಕೆ ಮಹಾಲಿಂಗ, ಭಾವನೇ ಹಸ್ತ, ಹೃದಯವೇ ಮುಖ, ಸಮರಸವೇ ಭಕ್ತಿ, ಚಿಚ್ಛಕ್ತಿ, ತೃಪ್ತಿಯೆ ಅರ್ಪಿತ, ಪರಿಣಾಮವೇ ಪ್ರಸಾದ. ಇಂತು ಅಂಗಲಿಂಗ, ಹಸ್ತ, ಮುಖ, ಶಕ್ತಿ ಭಕ್ತಿ, ಅರ್ಪಿತ, ಪ್ರಸಾದವೆಂಬ ಅಷ್ಟವಿಧದ ಬ್ರಹ್ಮದ ಭೇದವನರಿದು ನಡೆಯಬಲ್ಲ ಮಹಾಮಹಿಮಂಗೆ ನಮೋ ನಮೋ ಎಂಬೆನಯ್ಯ ಕೂಡಲಚೆನ್ನಸಂಗಮದೇವಾ.[೨೧]

ಹೀಗೆ, ಅಂಗನು ಲಿಂಗದೊಡನೆ ಬೆರೆಯುವ ವಿಧಾನ ಇಲ್ಲಿಯ ವಚನಗಳಲ್ಲಿ "......ಸೂಕ್ಷ್ಮವಾಗಿ ಗಮನಿಸಿದಲ್ಲಿ ವೀರಶೈವಧರ್ಮಕ್ಕೆ ನೂರೊಂದುಸ್ಥಲವೇ ಸಿದ್ಧಾಂತ. ಇದು ಶರಣರ ಅನುಭಾವದಿಂದ ಹುಟ್ಟಿದ ತತ್ವ, ಆಚರಿಸಿದ ತತ್ವ, ಆದ್ದರಿಂದ ಏಕೋತ್ತರ ಶತಸ್ಥಲಕ್ಕೆ ಶರಣರ ವಚನಗಳೇ ಮೂಲ ದ್ರವ್ಯ. ಈ ಸಿದ್ಧಾಂತಕ್ಕೆ ವಚನಕಾರರೇ ದ್ರಷ್ಟಾರರು"[೨೨] ಎಂಬ ಅಭಿಪ್ರಾಯ ಸಮಂಜಸವಾಗಿದೆ.

ಈ ಹಿನ್ನೆಲೆಯಲ್ಲಿ – "ಚೆನ್ನಬಸವಣ್ಣನವರ ಪೂರ್ಣ ವಚನ ದೊರಕಿದಲ್ಲಿ ಅವರು ನೂರೊಂದು ಸ್ಥಲಗಳ ವಿವರವನ್ನು ನೀಡಿದ ಮೊದಲಿಗರು ಎಂದು ನಿಸ್ಸಂದಿಗ್ಧವಾಗಿ ಹೇಳಬಹುದು."[೨೩] ಆದರೆ, ಏಕೋತ್ತರ ಶತಸ್ಥಲದ ನಿರೂಪಣೆಯು ಶಿವಯೋಗಿ ಶಿವಾಚಾರ್ಯರು ರಚಿಸಿದ 'ಕ್ರಿಯಾಸಾರ'ದ ಮೇಲೆ ಸಿದ್ಧಾಂತ ಶಿಖಾಮಣಿಯ ಪ್ರಭಾವವಿದೆ ಎಂಬ ಕೆಲವು ವಿದ್ವಾಂಸರ ಅಭಿಪ್ರಾಯಗಳು ನಿಖರ ಆಧಾರವಿಲ್ಲದೇ ಬಿದ್ದುಹೋಗುತ್ತವೆ. ಕಾರಣ, ಬಸವಾದಿ ಶಿವಶರಣರಾಗಲಿ, ಮಹಾಲಿಂಗದೇವ, ಜಕ್ಕಣ್ಣ, ಶ್ರೀಗಿರೀಂದ್ರ, ಮಗ್ಗೆಯ ಮಾಯಿದೇವ ಏಕೋತ್ತರ ಶತಸ್ಥಲದ ಬಗ್ಗೆ ಪ್ರಸ್ತಾಪಿಸುವಾಗ ಎಲ್ಲಿಯೂ 'ಸಿದ್ಧಾಂತ ಶಿಖಾಮಣಿ'ಯ ಉಲ್ಲೇಖ ಹೇಳುವುದೇ ಇಲ್ಲ.

'ಸಿದ್ಧಾಂತ ಶಿಖಾಮಣಿ ಹಾಗೂ ಶ್ರೀಕರಭಾಷ್ಯ ನಿಜದ ನಿಲವು' ಗ್ರಂಥ ಬರೆದ ಮೈಸೂರಿನ ಇಮ್ಮಡಿ ಶಿವಬಸವಸ್ವಾಮೀಜಿ ಹೇಳುವಂತೆ– "ಏಕೋತ್ತರ ಶತಸ್ಥಲಿಯಲ್ಲಿ ಹಲವು ಸ್ಥಲಗಳಿಗೆ ಹೇಳುವ ನಿರ್ವಚನಗಳಿಗೂ ಸಿ.ಶಿ.ಯಲ್ಲಿ ಅವೇ ಸ್ಥಲಗಳಿಗೆ ಹೇಳುವ ನಿರ್ವಚನಗಳಿಗೂ ಸಾಕಷ್ಟು ಸಾದೃಶ್ಯ ವೈದೃಶ್ಯಗಳಿವೆ. ಏಕೋತ್ತರ ಶತಸ್ಥಲಿಯಲ್ಲಿ ಪ್ರತಿಯೊಂದು ಸ್ಥಲಕ್ಕೂ ನಿರ್ವಚನವಿದೆ. ಆದರೆ ಸಿ.ಶಿ.ಯಲ್ಲಿ ಪ್ರತಿಯೊಂದು ಸ್ಥಲಕ್ಕೂ ಇಲ್ಲ. ಜಕ್ಕಣ್ಣನ ಕೃತಿಯಲ್ಲಿ ನಲವತ್ತಕ್ಕಿಂತಲೂ ಹೆಚ್ಚಿನ ಗ್ರಂಥಗಳಿಂದ ಆರಿಸಿದ ೧೪೦೦ ಶ್ಲೋಕಗಳಿದ್ದರೆ, ಸಿ.ಶಿ.ಯಲ್ಲೂ ಸುಮಾರು ಅಷ್ಟೇ ಗ್ರಂಥಗಳಿಂದ ಆರಿಸಿದ ೧೧೫೦ ಶ್ಲೋಕಗಳು (ಕಥನಾತ್ಮಕ ಭಾಗ ಬಿಟ್ಟು) ಕಂಡುಬರುತ್ತವೆ. ಆದರೆ, ಇವೆರಡು ಗ್ರಂಥಗಳಲ್ಲಿರುವ

ಪ್ರಮುಖ ವ್ಯತ್ಯಾಸವೆಂದರೆ – "ಏಕೋತ್ತರ ಶತಸ್ಥಲಿಯಲ್ಲಿ ಜಕ್ಕಣ್ಣನು ತಾನು ಆರಿಸಿಕೊಂಡಿರುವ ಶ್ಲೋಕಗಳ ಮೂಲ ಆಕರಗಳನ್ನು ಹೆಸರಿಸಿದರೆ, ಶಿವಯೋಗಿಯು ಸಿ.ಶಿ.ಯಲ್ಲಿ ತಾನು ಆರಿಸಿಕೊಂಡಿರುವ ಶ್ಲೋಕಗಳ ಮೂಲ ಆಕರಗಳನ್ನು ಹೆಸರಿಸುವುದಿಲ್ಲ. ಸಿ.ಶಿ.ಗೂ ಹಾಗೂ ಇನ್ನಿತರ ಏಕೋತ್ತರ ಶತಸ್ಥಲಗಳನ್ನು ಹೇಳುವ ಗ್ರಂಥಗಳಿಗೂ ಇರುವ ಪ್ರಮುಖ ವ್ಯತ್ಯಾಸವೆಂದರೆ ಇದೆ! ಏಕೋತ್ತರ ಶತಸ್ಥಲಿಯಲ್ಲಿ ಕಂಡುಬರುವ ಸುಮಾರು ಹತ್ತು ಶ್ಲೋಕಗಳು ಮಾತ್ರ ಸಿ.ಶಿ.ಯಲ್ಲಿ ಕಂಡುಬರುತ್ತವೆ. ಜಕ್ಕಣ್ಣನು ಅವುಗಳಿಗೆ ಪುರಾಣಾಗಮಗಳ ಗ್ರಂಥಗಳನ್ನು ಮೂಲಗಳೆಂದು ತಿಳಿಸಿದ್ದಾನೆ. ಈ ಕಾರಣದಿಂದ ಇಲ್ಲಿ ಒಂದು ಸಂಭಾವ್ಯ ಊಹೆ ಮಾಡಬಹುದಾಗಿದೆ. ಜಕ್ಕಣ್ಣಾರ್ಯನ ಏಕೋತ್ತರ ಶತಸ್ಥಲಿಯಿಂದ ಸ್ಫೂರ್ತಿ ಪಡೆದು ಅವನು ಹೇಳುವ ಶ್ಲೋಕಗಳನ್ನು ಬಿಟ್ಟು ಇದರಂತೆಯೇ ಪುರಾಣಾಗಮಗಳಲ್ಲಿರುವ ಇನ್ನಿತರ ಉತ್ತಮ ಶ್ಲೋಕಗಳನ್ನು ಆರಿಸಿ ಶಿವಯೋಗಿ ಶಿವಾಚಾರ್ಯರು ಸಿ.ಶಿ.ಯನ್ನು ಸಂಕಲಿಸಿರಬಾರದೇಕೆ?"[೨೬೪] ಎಂಬ ಅಭಿಪ್ರಾಯಗಳು ಸಮಂಜಸವಾಗಿವೆ ಎನ್ನಬಹುದು. ಅಲ್ಲದೇ, ವಿದ್ವಾನ್ ಎಂ.ಎಸ್. ಬಸವರಾಜಯ್ಯನವರು– "ಶ್ರೀ ಮಹಾಲಿಂಗದೇವರು ಮತ್ತು ಜಕ್ಕಣ್ಣಾರ್ಯರಿಗೆ ಮುನ್ನ ಈ ವಿಶಿಷ್ಟ ಯತ್ನ ಸಾಗಿಬಂದಿರುವುದು ಕಾಣಬರುವುದಿಲ್ಲ"[೨೬೫] ಎಂದು ಸ್ಪಷ್ಟವಾಗಿ ಹೇಳಿದ್ದಾರೆ.

"೧೫ನೆಯ ಶತಮಾನದಲ್ಲಿ ಬಹುಶಃ ಆಂಧ್ರಪ್ರದೇಶದಲ್ಲಿ ಹುಟ್ಟಿದ ನೀಲಕಂಠ ಶಿವಾಚಾರ್ಯನ ಸಂಸ್ಕೃತ ಕ್ರಿಯಾಸಾರದಲ್ಲಿ ನೂರೊಂದು ಸ್ಥಲ ವಿಚಾರ ದೇಶಭಾಷೆ (ಕನ್ನಡ)ಯಲ್ಲಿ ಪ್ರತಿಪಾದಿತವಾಗಿದೆ" ಎಂದು ಹೇಳಲಾಗಿದೆ. ಬಹುಶಃ ಇದು ವಚನ ಸಾಹಿತ್ಯವನ್ನು ಇಲ್ಲವೆ ೧೫ನೆಯ ಶತಮಾನದ ಮಹಾಲಿಂಗದೇವನ ಏಕೋತ್ತರ ಶತಸ್ಥಲವನ್ನು ಸೂಚಿಸುತ್ತಿದ್ದು, ಕ್ರಿಯಾಸಾರ ಹುಟ್ಟಿದ ಸಂದರ್ಭದಲ್ಲಿ ಸಂಸ್ಕೃತ ಸಿದ್ಧಾಂತ ಶಿಖಾಮಣಿ ಸೃಷ್ಟಿಯಾಗಿರಲಿಲ್ಲವೆಂದು ಸ್ಪಷ್ಟಪಡಿಸುತ್ತದೆ"[೨೬೬] ಎನ್ನುತ್ತಾರೆ ಡಾ.ಎಂ.ಎಂ. ಕಲಬುರ್ಗಿಯವರು. ಅಲ್ಲದೇ, ಸಿದ್ಧಾಂತ ಶಿಖಾಮಣಿಗೆ ರಚನೆಯಾದ ಟೀಕಾ ಗ್ರಂಥಗಳು ಅಂದಾಜು ೧೬ನೇ ಶತಮಾನದ ಆರಂಭದ ವೇಳೆಗೆ ರಚನೆಯಾಗಿರುವುದರಿಂದ ಸಿದ್ಧಾಂತ ಶಿಖಾಮಣಿಯ ಪ್ರಾಚೀನತೆ ೧೨ನೇ ಶತಮಾನದ ಪೂರ್ವಕ್ಕೆ ರಚಿತವಾಗಿದೆ ಎಂಬುದು ಅರ್ಥವಿಲ್ಲದ್ದು ಹಾಗೂ ೧೫ನೇ ಶತಮಾನದ 'ಏಕೋತ್ತರ ಶತಸ್ಥಲ' ಗ್ರಂಥರಚನೆ ಟೀಕೆಯ ಕಾಲಕ್ಕೆ ಇದಿನ್ನು ರಚನೆಯಾಗಿರಲು ಸಾಧ್ಯವಿಲ್ಲವೆನ್ನಬಹುದು.

ನೂರೊಂದು ಸ್ಥಲಗಳ ಬಗ್ಗೆ ಡಾ.ಶಿ.ಶಿ.ನಂದಿಮಠರು – "ನೂರೊಂದು ಸ್ಥಲಗಳ ವಿಚಾರ ಹನ್ನೆರಡನೆಯ ಶತಮಾನದ ಅನಂತರ ಬೆಳೆದುದೆಂದು ಇಟ್ಟುಕೊಳ್ಳಬಹುದಾಗಿದೆ."[೨೬೭] ಆ ಶಿವಯೋಗಿ ಶಿವಾಚಾರ್ಯನ ಸಿದ್ಧಾಂತ ಶಿಖಾಮಣಿ ಕೃತಿ ವಿರೋಧಾಭಾಸಗಳ ಒಂದು ಕಂತೆಯಾಗಿದೆ ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಬಸವಾದಿ ಪ್ರಮಥರು 'ಏಕೋತ್ತರ ಶತಸ್ಥಲ'ದ ಸಿದ್ಧಾಂತ ಪ್ರತಿಪಾದನೆಯಲ್ಲಿ ಮೊದಲಿಗರೆಂಬುದರಲ್ಲಿ ಸಂದೇಹವಿಲ್ಲ.

‘ನೂರೊಂದು ಸ್ಥಲ’ಗಳ ಬಗೆಗಿನ ಸ್ಪಷ್ಟವಾದ ಪರಿಜ್ಞಾನ ೧೨ನೆಯ ಶತಮಾನದ ಶಿವಶರಣರಿಗೆ ಇತ್ತು ಎಂಬುದಕ್ಕೆ ಇವರ ವಚನಗಳಲ್ಲಿಬರುವ ಉಲ್ಲೇಖಗಳು ಸಾಕ್ಷಿಯಾಗಿವೆ. ಅದರಲ್ಲೂ ಚೆನ್ನಬಸವಣ್ಣನವರು ವಚನವೊಂದರಲ್ಲಿ ಸ್ಥಲಗಳ ವಿವರ ನೀಡಿದ್ದನ್ನು ಗಮನಿಸಿದರೆ ‘ನೂರೊಂದು ಸ್ಥಲದ ಬಗೆಗೆ ಶಿವಶರಣರು ಗಂಭೀರ ಚಿಂತನ–ಮಂಥನ ನಡೆಸಿರುವಂತೆ ತೋರುತ್ತದೆ. ಆದರೆ, ೧೫ನೆಯ ಶತಮಾನದ ಮಹಾಲಿಂಗದೇವ, ಜಕ್ಕಣ್ಣ, ಮಗ್ಗೆ ಮಾಯಿದೇವರಂತಹ ವೀರಶೈವ ಧರ್ಮದ ದಾರ್ಶನಿಕರು, ನೂರೊಂದು ವಿರಕ್ತರು ‘ನೂರೊಂದು ಸ್ಥಲ’ ಇಲ್ಲವೇ ‘ಏಕೋತ್ತರ ಶತಸ್ಥಲ’ದ ಸಾಹಿತ್ಯವು ಶರಣರ ವಚನಗಳನ್ನು ಆಧರಿಸಿ ಬೃಹತ್ ಪರಂಪರೆಯೇ ಬೆಳೆದು ಬಂದಿದೆ ಎನ್ನಬಹುದು.

ಡಾ.ಬಿ.ನಂ. ಚಂದ್ರಯ್ಯ ಹೇಳುವಂತೆ – ‘ಬಸವಾದಿ ಪ್ರಮಥರ ವಚನಗಳೆ ಏಕೋತ್ತರ ಶತಸ್ಥಲದ ಉಸಿರು. ಇವರ ವಚನಗಳನ್ನು ಸಂಕಲನ ಮಾಡಿ ಸ್ವಾನುಭವದಿಂದ ಅದಕ್ಕೊಂದು ವ್ಯವಸ್ಥೆ ನೀಡಿ, ಒಂದು ವಿಶೇಷ ಪರಂಪರೆಗೆ ಕಾರಣನಾದ ವ್ಯಕ್ತಿ ಮಹಾಲಿಂಗದೇವ.”[೨೮] ಅದೇ ರೀತಿ ಡಾ.ವಿ. ಶಿವಾನಂದರು – “ಇದು ಮಹಾಲಿಂಗದೇವನ ಪ್ರಪ್ರಥಮ ಸಾಹಸ. ಬಸವಾದಿ ಪ್ರಮಥರ ವಚನಗಳನ್ನೇ ಆಧರಿಸಿ ಏಕೋತ್ತರ ಶತಸ್ಥಲವನ್ನು ರಚಿಸಿರುವವರಲ್ಲಿ ಮಹಾಲಿಂಗದೇವನೇ ಮೊದಲಿಗನು, ಅವನನ್ನೇ ಅನುಸರಿಸಿ ವಚನ ಸಂಕಲನ ಮಾಡಿದವರು ಅನೇಕರು.....”[೨೯] ಎಂದು ಹೇಳಿರುವುದು ನೋಡಿದರೆ ‘ಏಕೋತ್ತರ ಶತಸ್ಥಲ’ ಸಾಹಿತ್ಯಕ್ಕೆ ಮಹಾಲಿಂಗದೇವ ಆದ್ಯನಾಗಿ ಸ್ಪಷ್ಟ ಸ್ವರೂಪ ನೀಡಿದ ಎಂಬುದರಲ್ಲಿ ಸಂದೇಹವಿಲ್ಲ.

ಆದರೆ ಏಕೋತ್ತರ ಶತಸ್ಥಲ ಸಿದ್ಧಾಂತದ ಪ್ರವರ್ತಕ ಯಾರು? ಎರಡು ವಾದಗಳು ಎಂಬ ಸಂಶೋಧನಾ ಲೇಖನ ಬರೆದಿರುವ ಡಾ.ಎಂ.ಎಂ. ಕಲಬುರ್ಗಿಯವರು ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ ಹಾಗೂ ಬೆಂಗಳೂರು ವಿಶ್ವವಿದ್ಯಾಲಯದ ಹಸ್ತಪ್ರತಿ ಭಂಡಾರದಲ್ಲಿಯ ವಚನ+ಸ್ವರವಚನಯುಕ್ತ ಏಕೋತ್ತರ ಶತಸ್ಥಲ. ಹಸ್ತಪ್ರತಿಯಲ್ಲಿಯ (ಸೂತ್ರ.೨೧೬) ಅಭಿಪ್ರಾಯ ಆಧರಿಸಿ – “ವಚನ+ಸ್ವರವಚನಯುಕ್ತ ಏಕೋತ್ತರ ಶತಸ್ಥಲವು ಈವರೆಗೆ ನಾವೆಲ್ಲಾ ನಂಬಿದಂತೆ ಮಹಾಲಿಂಗದೇವನದಲ್ಲ, ಜಕ್ಕಣಾರ್ಯನದೆಂದು ಒಪ್ಪಿಕೊಳ್ಳುವುದು ಅನಿವಾರ್ಯವಾಗುತ್ತದೆ.”[೩೦] ಎಂದು ಹೇಳಿರುವುದರಿಂದ ಅಪ್ರಕಟಿತ ಹಸ್ತಪ್ರತಿ ಹಾಗೂ ಪ್ರಕಟಿತ ಗ್ರಂಥಗಳ ಪುನರ್ ಪರಿಶೀಲನೆಯಿಂದ ಖಚಿತಪಡಿಸಬೇಕಾದ ಅಗತ್ಯವಿದೆ.

ಜಕ್ಕಣಾರ್ಯನ ಸ್ವರ ಏಕೋತ್ತರ ಶತಸ್ಥಲಕ್ಕೆ ಹುಟ್ಟಿರುವ ಮೂರು ಟೀಕೆಗಳು ಅನಾಮದೇಯವಾಗಿವೆ. “ಇವುಗಳಲ್ಲಿ ಒಂದು ಟೀಕೆಯನ್ನು ಅಜ್ಞಾತವ್ಯಕ್ತಿ, ಇನ್ನೊಂದು ಟೀಕೆಯನ್ನು ಮರಿಬಸವಲಿಂಗ ರಚಿಸಿದ್ದು, ಮೂರನೆಯ ಟೀಕೆಯನ್ನು ಮೇಲೆ ಹೇಳಿದಂತೆ ಜಕ್ಕಣಾರ್ಯನೇ ರಚಿಸಿರಬಹುದು.”[೩೧]

ಈ ಏಕೋತ್ತರ ಶತಸ್ಥಲ ಸಿದ್ಧಾಂತದ ಅನುಭಾವ ಕೇವಲ ಕನ್ನಡದವರಿಗೆ ಸೀಮಿತವಾಗಬಾರದೆಂಬ ಕಾರಣವೋ ಏನೋ ‘‘ಜಕ್ಕಣಾರ್ಯನು ಬೇರೆ ಬೇರೆ ಮೂಲಗಳಿಂದ ಶ್ಲೋಕಗಳನ್ನಾಯ್ದು

''ಏಕೋತ್ತರ ಶತಸ್ಥಲೀ' ಎಂಬ ಸಂಸ್ಕೃತ ಕೃತಿ ರಚಿಸಿ ಅದಕ್ಕೆ ಸಂಸ್ಕೃತ ವ್ಯಾಖ್ಯಾನವನ್ನು ಬರೆದಿರುವನು''[೨೨] ಎಂದು ಇಮ್ಮಡಿ ಶಿವಬಸವಸ್ವಾಮಿಗಳು ಹೇಳುತ್ತಾರೆ. ಅನಂತರ ಕಾಲದಲ್ಲಿ ವಾರಣಾಸೀಂದ್ರನ ಆದೇಶದಂತೆ ಶ್ರೀ ಗಿರೀಂದ್ರನು ಇದಕ್ಕೆ ಕನ್ನಡ ಟೀಕೆ ಬರೆದಿರುವನು. ಇದೇ ಟೀಕಾಯುಕ್ತ 'ಏಕೋತ್ತರ ಶತಸ್ಥಲೀ' ಕೃತಿಯನ್ನು ಪರ್ವತಶಿವಯೋಗಿಯು 'ಏಕೋತ್ತರ ಶತಸ್ಥಲೀ ಸಾರಚಿಂತಾಮಣಿ' ಹೆಸರಿನಲ್ಲಿ ರಚಿಸಿದ್ದು ಅದನ್ನು ಮೈಸೂರಿನ ವಿದ್ವಾನ್ ಎಂ.ಎಸ್. ಬಸವರಾಜಯ್ಯ (೨೦೦೫ರಲ್ಲಿ) ಸಂಪಾದಿಸಿ ಪ್ರಕಟಿಸಿದ್ದಾರೆ.

ಹೀಗೆ, ಮಹಾಲಿಂಗದೇವರು ಜಕ್ಕಣ್ಣನಿಂದ ಆರಂಭವಾಗಿರಬಹುದಾದ ಈ 'ಏಕೋತ್ತರ ಶತಸ್ಥಲ' ಸಂಪ್ರದಾಯವನ್ನು ಅನುಸರಿಸಿ (ಜಕ್ಕಣ್ಣನ - ೩ ಸೇರಿ) ಹುಟ್ಟಿದ ೯ ಏಕೋತ್ತರ ಶತಸ್ಥಲ ಸಿದ್ಧಾಂತ ಕೃತಿಗಳಲ್ಲಿ ಈ ಸಿದ್ಧಾಂತದ ಜನಕ ಬಸವಾದಿ ಪ್ರಮಥರೆಂದು ಸ್ಪಷ್ಟವಾಗಿ ಉಲ್ಲೇಖಿಸಿರುವುದನ್ನು ಗಮನಿಸಬೇಕಾಗುತ್ತದೆ.

'ಏಕೋತ್ತರ ಶತಸ್ಥಲ' ಸಿದ್ಧಾಂತ ಪ್ರತಿಪಾದನೆಯ ಸಮರ್ಥನೆಗಾಗಿ ಹುಟ್ಟಿಕೊಂಡ ಕೃತಿಗಳನ್ನು ಹೀಗೆ ಕ್ರೋಢೀಕರಿಸಬಹುದು.

1. ಏಕೋತ್ತರ ಶತಸ್ಥಲ (ವಚನ +ಸ್ವರವಚನ) 2. ಸ್ವರೇಕೋತ್ತರ ಶತಸ್ಥಲಟೀಕೆ 3. ಏಕೋತ್ತರ ಶತಸ್ಥಲೀ (ಸಂಸ್ಕೃತ)

೧. ಏಕೋತ್ತರ ಶತಸ್ಥಲಸಾರ (ಕಟ್ಟಿಗೆಹಳ್ಳಿ ಸಿದ್ಧಲಿಂಗ) ೨. ಏಕೋತ್ತರ ಶತಸ್ಥಲ ಟೀಕೆ-ಮರಿಬಸವಲಿಂಗ ೩. ಸ್ವರ ಏಕೋತ್ತರ ಶತಸ್ಥಲ ಟೀಕೆ -ಅನಾಮಧೇಯ ೪. ಏಕೋತ್ತರ ಶತಸ್ಥಲೀ ಟೀಕಾ (ಶ್ರೀಗಿರೀಂದ್ರ) ೫. ಏಕೋತ್ತರ ಶತಸ್ಥಲೀ ಸಾರ ಚಿಂತಾಮಣಿ (ಪರ್ವತಶಿವಯೋಗಿ) ೬.ಶಿವಜ್ಞಾನ ಪ್ರದೀಪಿಕೆಯ ೭ನೇ ಆಹ್ನಿಕ (ವೀರಣಾರ್ಯ)

ಹೀಗೆ, ಜಕ್ಕಣ್ಣನ ೩, ಇದನ್ನು ಅನುಸರಿಸಿ ಹುಟ್ಟಿದ ೬ ಸೇರಿ ಒಟ್ಟು ೯ ಏಕೋತ್ತರ ಶತಸ್ಥಲ ಗ್ರಂಥಗಳು ಒಂದೇ ಕುಟುಂಬದ ಸದಸ್ಯರಂತಿರುವುದನ್ನು ಕಾಣಬಹುದು. ಡಾ. ಎಂ. ಎಂ. ಕಲಬುರ್ಗಿಯವರು - ''ಒಂಬತ್ತು ಕೃತಿಗಳ ಈ ಕುಟುಂಬಕ್ಕೆ ಮಗ್ಗೆಯ ಮಾಯಿದೇವನ ಪದ್ಯೈಕೋತ್ತರ ಶತಸ್ಥಲ, ಡಾ. ಫ. ಗು. ಹಳಕಟ್ಟಿ ಪ್ರಕಟಿಸಿರುವ ಸಿದ್ಧಲಿಂಗನ ಏಕೋತ್ತರ ಶತಸ್ಥಲ, ಇಮ್ಮಡಿ ಮುರಿಗಾ ಗುರುಸಿದ್ಧರ ಕೈವಲ್ಯ ಸೋಪಾನ, ನಾಮೈಕೋತ್ತರ ಶತಸ್ಥಲಗಳನ್ನು ಸೇರಿಸಬಹುದು. ಈ ಪರಿವಾರದ ಮುಖ್ಯ ಕೃತಿ ಜಕ್ಕಣಾರ್ಯನ ಸಂಸ್ಕೃತ ಏಕೋತ್ತರ ಶತಸ್ಥಲೀ''[೨೩] ಎಂದು ಸ್ಪಷ್ಟಪಡಿಸಿದ್ದಾರೆ. ಅಲ್ಲದೇ, ಬಸವ, ಅಲ್ಲಮ, ಚನ್ನಬಸವರಾಜರೇ ಈ ಸಿದ್ಧಾಂತದ ಪ್ರವರ್ತಕರೆಂಬುದನ್ನು ಮೇಲ್ಕಂಡ ಕೃತಿಗಳು ಸಮರ್ಥಿಸುತ್ತವೆ.

ಆದರೆ, ಕ್ರಿ.ಶ.೧೪೫೦ರಲ್ಲಿದ್ದ ''ಶಿವಯೋಗಿ ಶಿವಾಚಾರ್ಯ'ನೆಂಬುವನು (ಪ್ರಕ್ಷಿಪ್ತ) ಸಂಸ್ಕೃತದಲ್ಲಿ 'ಸಿದ್ಧಾಂತ ಶಿಖಾಮಣಿ' ಹೆಸರಿನಲ್ಲಿ ಗ್ರಂಥ ರಚಿಸಿದನೆಂದು ತಿಳಿದುಬರುತ್ತದೆ. ಈ ಕೃತಿ ಹಾಗೂ

ಟೀಕೆಯನ್ನೊಳಗೊಂಡ ಒಟ್ಟು ೮ ಗ್ರಂಥಗಳು ಮೂಲ 'ಸಿದ್ಧಾಂತ ಶಿಖಾಮಣಿ' ಆಧರಿಸಿ ಸಂಸ್ಕೃತದಲ್ಲಿ ನಿರೂಪಗೊಂಡಿವೆ".[೨೮] ಈ ಎಂಟು ಗ್ರಂಥಗಳ ರಚನಾಕಾರರು ಅಥವಾ ವ್ಯಾಖ್ಯಾನಕಾರರು ಏಕೋತ್ತರ ಶತಸ್ಥಲ ಸಿದ್ಧಾಂತದ ಪ್ರವರ್ತಕನು ರೇಣುಕಾಚಾರ್ಯರು. ಇವರು ಇದನ್ನು ಅಗಸ್ತ್ಯನಿಗೆ ಬೋಧಿಸಿದರೆಂದು ಹೇಳುವ ಮೂಲಕ 'ಸಿದ್ಧಾಂತ ಶಿಖಾಮಣಿ' ರಚಿಸಿದ ಪ್ರಥಮ ವ್ಯಕ್ತಿ ಶಿವಯೋಗಿ ಶಿವಾಚಾರ್ಯರ ಅಭಿಪ್ರಾಯವನ್ನೇ ಮುಂದುವರೆಸಿದ್ದು ತಿಳಿದುಬರುತ್ತದೆ.

ಇಲ್ಲಿ ಈ ಸಿದ್ದಾಂತದ ಪ್ರವರ್ತಕರು ಯಾರೆಂಬುದರ ಬಗ್ಗೆ ನಾಡಿನ ವಿದ್ವಾಂಸರು ಸಾಕಷ್ಟು ಚರ್ಚಿಸಿ ಅಂತಿಮವಾಗಿ ಬಸವಾದಿ ಪ್ರಮಥರೇ ಆದ್ಯರು ಎಂಬುದನ್ನು ದೃಢಪಡಿಸಿರುವುದರಿಂದ ಇಲ್ಲಿ ಚರ್ಚೆ ಅನಗತ್ಯ. ಆದರೆ, ಏಕೋತ್ತರ ಶತಸ್ಥಲ ಸಿದ್ದಾಂತ ಪರಂಪರೆಯನ್ನು ಬಸವಾದಿಪ್ರಮಥರು ತೋರಿದ ಮಾರ್ಗದಲ್ಲಿ ಮಹಾಲಿಂಗದೇವ, ಜಕ್ಕಣ್ಣ ಇಬ್ಬರೂ ಮುಂದುವರಿಸಿದ ಪ್ರಮುಖರಾಗಿದ್ದಾರೆ. ಹೀಗಾಗಿ ಇವರಿಬ್ಬರಲ್ಲಿ ಯಾರು ಆದ್ಯರೂ ಎನ್ನುವದಕ್ಕಿಂತ ಗುರು ಶಿಷ್ಯರಾಗಿ ಒಂದೇ ಕಾಲಘಟ್ಟದಲ್ಲಿದ್ದು ಏಕೋತ್ತರ ಶತಸ್ಥಲ ಸಿದ್ದಾಂತ ಪರಂಪರೆಗೆ ಪುನರುಜ್ಜೀವನ ನೀಡಿದರೆಂದರೆ ತಪ್ಪಾಗದು. ಏಕೆಂದರೆ ಬಸವಾದಿ ಪ್ರಮಥರ ವಚನಗಳನ್ನೆ ಆದರಿಸಿ ಏಕೋತ್ತರ ಶತಸ್ಥಲವನ್ನು ರಚಿಸಿರುವವರಲ್ಲಿ ಮಹಾಲಿಂಗದೇವನೆ ಮೊದಲಿಗನು, ಅವನನ್ನೆ ಅನುಸರಿಸಿ ವಚನ ಸಂಕಲನ ಮಾಡಿದವರು ಅನೇಕ" ಎಂಬ ಡಾ.ವಿ. ಶಿವಾನಂದರ ಅಭಿಪ್ರಾಯ ಸರಿಯಾಗಿದೆ ಎನ್ನಬಹುದು.

೧೨ನೆಯ ಶತಮಾನವು ಸೃಜನಶೀಲ ವಚನಗಳ ರಚನೆಗೆ ಮಹತ್ವದ ಆಯಾಮ ನೀಡಿದರೆ, ೧೫ನೆಯ ಶತಮಾನವು ಈ ವಚನಗಳನ್ನು ಸಂಗ್ರಹಿಸಿ, ಸಂಕಲಿಸಿ, ಸಂಪಾದಿಸಿ, ಟೀಕೆ ವ್ಯಾಖ್ಯಾನ ಬರೆಯಲು ಪ್ರಾಮುಖ್ಯತ ನೀಡಿದ ಕಾಲವಾಗಿದೆ. ಅಂದರೆ ವಚನಕಾರರ ವಚನಗಳನ್ನು ಸ್ಥಲಗಳಡಿಯಲ್ಲಿ ಸಂಕಲಿಸಿ ಏಕೋತ್ತರ ಶತಸ್ಥಲ ಸಾಹಿತ್ಯವನ್ನು ರಚಿಸಿದರೆ, ಇನ್ನು ಕೆಲವರು ಇವನ್ನೇ ೧೦೧ ಸ್ಥಲಗಳ ಹೆಸರಿನಲ್ಲಿ ಸ್ವತಂತ್ರ ಕೃತಿ ರಚನೆ ಮಾಡಿದರು. ಹೀಗೆ, ಸೃಷ್ಟಿ-ಅನುಸೃಷ್ಟಿ ಕಾರ್ಯಗಳ ಜೊತೆಜೊತೆಗೆ ಏಕೋತ್ತರ ಶತಸ್ಥಲಗಳಿಗೆ ಟೀಕೆ ವ್ಯಾಖ್ಯಾನ ಬರೆದು ಈ ಸಿದ್ಧಾಂತವನ್ನು ಸಾರ್ವತ್ರೀಕರಣಗೊಳಿಸಲು ಮಾಡಿದ ಪ್ರಯತ್ನ ಸ್ಮರಣೀಯವಾದುದು. ಈ ಹಿನ್ನಲೆಯಲ್ಲಿ ಕನ್ನಡದಲ್ಲಿ ಲಭ್ಯವಾಗುವ ಏಕೋತ್ತರ ಶತಸ್ಥಲಗಳು ಕ್ರಮವಾಗಿ

೧. ಏಕೋತ್ತರ ಶತಸ್ಥಲ ಸಂಕಲನ ಸಂಗ್ರಹಗಳು.

೨. ಏಕೋತ್ತರ ಶತಸ್ಥಲ ಸ್ವತಂತ್ರ ಕೃತಿಗಳು.

೩. ಏಕೋತ್ತರ ಶತಸ್ಥಲ ಗ್ರಂಥೋಕ್ತ ಕೃತಿಗಳು.

೪. ಏಕೋತ್ತರ ಶತಸ್ಥಲ ಟೀಕೆ-ವ್ಯಾಖ್ಯಾನಗಳು ಎಂದು ವಿಂಗಡಿಸಬಹುದು. ಅವುಗಳನ್ನು ಕುರಿತು ಹೀಗೆ ಪರಿಚಯಿಸಬಹುದಾಗಿದೆ.

**೧. ಏಕೋತ್ತರ ಶತಸ್ಥಲ ಸಂಕಲನ - ಸಂಗ್ರಹಗಳು:**

**೧. ವಚನೈಕೋತ್ತರಶತಸ್ಥಲ** - ನೂರೊಂದು ಸ್ಥಲಗಳನ್ನು ಒಳಗೊಂಡ, ವಚನಗಳ ಸಂಗ್ರಹವಾದ ಈ ಕೃತಿಯನ್ನು ಚೆನ್ನದಣ್ಣಾಯಕರು ಬರೆದಿದ್ದಾರೆ. ಆದರೆ, ಚೆನ್ನದಣ್ಣಾಯಕರು ಯಾರು? ಎಂಬ ಪ್ರಶ್ನೆ ಇಂದಿಗೂ ವಿದ್ವಾಂಸರಿಗೆ ಕಗ್ಗಂಟಾಗಿಯೇ ಉಳಿದಿದೆ. ಏಕೆಂದರೆ, ಈ ಕೃತಿಯನ್ನು ೧೨ನೆಯ ಶತಮಾನದ ಚೆನ್ನಬಸವಣ್ಣನವರು ಸಂಗ್ರಹಿಸಿದರೆಂಬುದಕ್ಕೆ ಗದಗಿನ ತೋಂಟದಾರ್ಯ ಮಠದಿಂದ ಪ್ರಕಟವಾದ - ''ಚೆನ್ನಬಸವಣ್ಣನವರ ವಚನೈಕೋತ್ತರ ಶತಸ್ಥಲ'ವನ್ನು ಪ್ರೊ. ಜಿ. ಎ. ಶಿವಲಿಂಗಯ್ಯನವರು ಸಂಪಾದಿಸಿದ್ದಾರೆ. ಇಲ್ಲಿ ಚನ್ನಬಸವಣ್ಣನವರೇ ಏಕೋತ್ತರ ಶತಸ್ಥಲ ಸಂಕಲನಕಾರರಲ್ಲಿ ಮೊದಲಿಗರೆಂದು ಪ್ರಸ್ತಾಪಿಸಲಾಗಿದೆ. ಅಷ್ಟೇ ಏಕೆ, ಗ್ರಂಥಕ್ಕೆ ಚೆನ್ನದಣ್ಣಾಯಕನೆಂದರೆ ಚನ್ನಬಸವಣ್ಣನೇ ಎಂಬರ್ಥದಲ್ಲಿ ಶಿರ್ಷಿಕೆ ನೀಡಲಾಗಿದೆ.

ಡಾ. ಎಸ್. ವಿ. ಅಯ್ಯನಗೌಡರ ಹೇಳುವಂತೆ - 'ಇಲ್ಲಿ ಚನ್ನಬಸವಣ್ಣನವರೇ ಏಕೋತ್ತರ ಶತಸ್ಥಲ ಸಂಕಲನಕಾರರಲ್ಲಿ ಮೊದಲಿಗರು ಎಂದು ಹೇಳಿದುದನ್ನು ಒಪ್ಪುವಂತಿಲ್ಲ. ಏಕೆಂದರೆ, ಚನ್ನಬಸವಣ್ಣ-ಚೆನ್ನದಣ್ಣಾಯಕ ಅಲ್ಲ. ಚನ್ನಬಸವಣ್ಣನಿಂದ ಭಿನ್ನನಾದ ಚನ್ನದಣ್ಣಾಯಕ ಮಹಾಲಿಂಗದೇವರ ನಂತರದ ಸಂಗ್ರಹಕಾರನೆನ್ನಬೇಕಾಗುತ್ತದೆ'.[೨೭೫] ಇವರ ಅಭಿಪ್ರಾಯವೇ ಸರಿ ಎಂದಾದಲ್ಲಿ ವಚನ ಸಂಕಲನಗಳಲ್ಲಿ ಇದೇ ಮೊದಲ ಕೃತಿ, ಚನ್ನಬಸವಣ್ಣನವರೇ ಮೊದಲ ವಚನ ಸಂಕಲನಕಾರರು'[೨೭೬] ಎಂಬ ಡಾ. ಜಿ. ಎ. ಶಿವಲಿಂಗಯ್ಯನವರ ಅಭಿಪ್ರಾಯ ಸತ್ಯಕ್ಕೆ ದೂರವಾಗಿದೆ ಎನ್ನಬೇಕಾಗುತ್ತದೆ. ಏಕೆಂದರೆ, ಈ ಕೃತಿ ಆದಿಯಲ್ಲಿ - ''ಚೆನ್ನದಣ್ಣಾಯಕರು ನಿರೂಪಿಸಿದ ವಚನೈಕೋತ್ತರ ಶತಸ್ಥಲ, ಪ್ರಥಮದಲ್ಲಿ; ಪಿಂಡಜ್ಞಾನಸ್ಥಲ, ಸಂಸಾರಹೇಯಸ್ಥಲ, ಗುರುಕರುಣಸ್ಥಲ........ ಅಂತು ಭಕ್ತಸ್ಥಲ ಎಂದು'' ಉಲ್ಲೇಖವಾಗಿದೆ. ಈ ಹಿನ್ನಲೆಯಲ್ಲಿ, ಗ್ರಂಥದ ಸಂಕಲನಕಾರರು ಯಾರು? ಎಂಬುದು ಸ್ಪಷ್ಟವಾಗದಿರುವುದರಿಂದ ಸಂಶೋಧನೆಯ ಮೂಲಕ ಖಚಿತ ನಿರ್ಧಾರಕ್ಕೆ ಬರಬೇಕಾಗುತ್ತದೆ.

ಈ ಸಂಕಲನದಲ್ಲಿ ಬಸವಣ್ಣ, ಅಲ್ಲಮಪ್ರಭು, ಮಾಚಿದೇವ. ಅಕ್ಕಮಹಾದೇವಿ. ಉರಿಲಿಂಗದೇವ, ಸಕಳೇಶ ಮಾದರಸ, ಚಂದಿಮರಸ, ಘಟ್ಟಿವಾಳಯ್ಯ, ಹಾವಿನಹಾಳ ಕಲ್ಲಯ್ಯ ಮತ್ತಿತರ ವಚನಕಾರರ ಒಂದೊಂದು ವಚನವನ್ನು ಆಯಾ ಸ್ಥಲಕ್ಕೆ ಅನುಗುಣವಾಗಿ ಸೇರಿಸಿ ಸಂಕಲಿಸಲಾಗಿದೆ. ಒಟ್ಟು ನೂರೊಂದು ಸ್ಥಲಗಳ ಪ್ರಸ್ತಾಪವೂ ಇದರಲ್ಲಿದೆ.

**೨. ಮಹಾಲಿಂಗದೇವರ ಏಕೋತ್ತರ ಶತಸ್ಥಲ**

ಏಕೋತ್ತರ ಶತಸ್ಥಲ ಸಿದ್ಧಾಂತ ಪ್ರತಿಪಾದನೆಗೆ ೩೪ ಶಿವಶರಣರ ಸುಮಾರು ೬೩೧ ವಚನಗಳನ್ನು ಸಂಕಲಿಸಿಕೊಟ್ಟ ಕೃತಿಗಳಲ್ಲಿ ಇದು ಮಹತ್ವದ್ದಾಗಿದೆ.'ಏಕೋತ್ತರ ಶತಸ್ಥಲ' ವಚನ ಸಂಕಲನ ಕೃತಿಯನ್ನು ೧೯೭೪ರಲ್ಲಿ ಪ್ರಥಮಬಾರಿಗೆ ಪ್ರೊ. ಸಂ. ಶಿ. ಭೂಸನೂರಮಠರು ಸಂಪಾದಿಸಿ, ಪ್ರಕಟಿಸಿದರು.

'ಭಕ್ತಿ ಭಂಡಾರಿ ಜಕ್ಕಣ್ಣನು - ''ಎನ್ನ ಷಡಂಗವು ಲಿಂಗದಲ್ಲಿ ಲೀಯವಹ ಭೇದವ ನಿರೂಪವ ಕೊಟ್ಟು ಪಾಲಿಸುವುದು'' ಎಂದು ಕೇಳಿದಾಗ ಮಹಾಲಿಂಗದೇವರು ತಮ್ಮ ಪರಮ ಜ್ಞಾನಾನುಭವ

ಪ್ರಸನ್ನ ಪ್ರಕಾಶದಿಂದ.......... ಷಟ್‌ಸ್ಥಲವನ್ನು ಬಸವರಾಜದೇವರು, ಚೆನ್ನಬಸವರಾಜದೇವರು ಮುಖ್ಯವಾದ ವಚನಗಳಿಂದ ತಚ್ಛಿಷ್ಯ ಜಕ್ಕಣಾರ್ಯರಿಗೆ ಭೋದಿಸುತ್ತಿರಲು ಷಡುಸ್ಥಲದಲ್ಲಿ ಅಂಗಸ್ಥಲ - ೪೪, ಲಿಂಗಸ್ಥಲ - ೫೭, ಉಭಯಂ ಏಕೋತ್ತರ ಸ್ಥಲಂಗಳಾದವು'' ಎಂದು ಸ್ಪಷ್ಟವಾಗಿ ಹೇಳಲಾಗಿದೆ.

ಸಂಕಲನವು ಪಿಂಡಾದಿ ಜ್ಞಾನ ಶೂನ್ಯಾಂತ ೧೦೧ ಸ್ಥಲಗಳಡಿಯಲ್ಲಿ ಸ್ಥಲ - ಸ್ಥಲಸೂತ್ರ - ಸ್ಥಲವಚನ - ಸ್ಥಲ ನಿರ್ದೇಶನ ಪದ - ಹೀಗೆ ನಾಲ್ಕು ರೀತಿಯಲ್ಲಿ ನಿರೂಪಗೊಂಡಿದೆ. ಡಾ. ಸಂ. ಶಿ. ಭೂಸನೂರಮಠರು ಗ್ರಂಥ ಕುರಿತು ''ಲಿಂಗದತ್ತ ನಡೆದಿರುವ ಅಂಗದ, ಅಂಗದತ್ತ ನಡೆದು ಬರುತ್ತಿರುವ ಲಿಂಗದ ನೂರೊಂದು ಘಟ್ಟದ ಘಟನೆಗಳನ್ನು ಪ್ರತಿಪಾದಿಸುವ ಆರು ಅಂಗಾಂಗ ಆರು ಲಿಂಗಾಂಗದ ಮಾನವ ಮಹಾನಾಟಕ'' ಎಂದು ಪ್ರಸ್ತಾವನೆಯಲ್ಲಿ ಹೇಳಿರುವ ಮಾತುಗಳು ಅರ್ಥಪೂರ್ಣವಾಗಿವೆ.

**೩. ಜಕ್ಕಣಾರ್ಯನ 'ನೂರೊಂದು ಸ್ಥಲ' (ಸ್ವರವಚನಗಳು)**

ಬಸವಾದಿ ಪ್ರಮಥರು ರಚಿಸಿದ್ದ ಸ್ವರವಚನಗಳನ್ನು ಸಂಕಲಿಸಿ, ಅವಕ್ಕೆ ಅನುಗುಣವಾಗಿ ಸೂತ್ರವಿಟ್ಟು ಈ ಕೃತಿಯನ್ನು ಸಂಕಲಿಸಲಾಗಿದೆ. ಗುರು ಮಹಾಲಿಂಗದೇವನ ಮಾರ್ಗವನ್ನೇ ಜಕ್ಕಣ್ಣ ಅನುಸರಿಸಿದ್ದಾನೆ. ''ಜಕ್ಕಣಾರ್ಯರು ಸಾರಾಯವಾದ ನೂರೊಂದು ಸ್ಥಲ ವಚನಗಳಂ ತೆಗೆದುಕೊಂಡು ಸೂತ್ರವಿಟ್ಟು ಸಂಗ್ರಹಿಸಿದರು. ಅಂತು ಅಂಗಸ್ಥಲ ೪೪ಕ್ಕಂ ಸೇರಿಸಿದ ಪದನು ೨೫೩; ಲಿಂಗಸ್ಥಲ ೫೭ಕ್ಕಂ ಸೇರಿಸಿದ ಪದನು ೨೯೭. ಉಭಯಂ ೫೫೦'' ಎಂಬ ವಿವರಣೆಯಿಂದ ಇದೊಂದು ''ಸಂಕಲನ ಗ್ರಂಥವಾಗಿರದೆ ಸಂಗ್ರಹ ಕೃತಿಯೆಂಬುದನ್ನು ಸ್ಪಷ್ಟಪಡಿಸುತ್ತದೆ''.[೨೭] ಎಂಬ ಅಭಿಪ್ರಾಯ ಗಮನಿಸಬೇಕಾಗುತ್ತದೆ. ಹಾಡುಗಳನ್ನೇ ಹೆಚ್ಚು ಬಳಸಲಾಗಿರುವ ಈ ಕೃತಿಯನ್ನು ''ಏಕೋತ್ತರ ಶತಸ್ಥಲ ಸ್ವರಪದ'' ''ಏಕೋತ್ತರ ಶತಸ್ಥಲ ಸ್ವರವಚನ'' ಎಂದು ಕರೆದಿರುವುದಾಗಿ ಡಾ. ವಿ. ಶಿವಾನಂದರು ಹೇಳುವುದರಿಂದ ಜಕ್ಕಣಾರ್ಯನು ವಚನಗಳನ್ನು ಶತಸ್ಥಲಕ್ಕೆ ಪೂರಕವಾಗಿ ವಿಂಗಡಿಸುವುದರ ಜೊತೆಗೆ ಸ್ವರವಚನಗಳನ್ನು ಮೊಟ್ಟಮೊದಲ ಬಾರಿಗೆ ಗುರುತಿಸಿ ಜನಪ್ರಿಯಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿದನೆನ್ನಬಹುದು. ಜಕ್ಕಣನ ಈ ಕೃತಿಗೆ ಸು. ೧೪೩೦ರಲ್ಲಿದ್ದ ಶ್ರೀ ಗಿರೀಂದ್ರನು ಟೀಕೆ ಬರೆದಿದ್ದಾನೆ.

**೪. ಗಣಭಾಷಿತ ರತ್ನಮಾಲೆ:** ಸು. ೧೪೭೫ರ ಕಾಲಮಾನದ ಗುಬ್ಬಿ ಮಲ್ಲಣಾರ್ಯರು ಗಣಭಾಷಿತ ರತ್ನ ಮಾಲೆ ಹಾಗೂ ವಾತುಲ ತಂತ್ರ ಟೀಕೆ ಕೃತಿಗಳನ್ನು ರಚಿಸಿದ್ದಾರೆ. ಪ್ರಸ್ತುತ ಗಣಭಾಷಿತ ರತ್ನಮಾಲೆಯಲ್ಲಿ ೧೦೧ ಸ್ಥಲಗಳಿವೆ. ಇವನ್ನು ಅಂಗಸ್ಥಲ - ೪೪ ಲಿಂಗಸ್ಥಲ ೪೫. ನಿರಂಗಲಿಂಗಸ್ಥಲ -೧೨ಯೆಂದು ವಿಭಜಿಸಲಾಗಿದೆ.

ಮೇಲಿನ ಏಕೋತ್ತರ ಶತಸ್ಥಲ ಸಂಕಲನಗಳಿಂದ ಭಿನ್ನವಾದ ಸ್ಥಲನಾಮ ನಿರ್ದೇಶನ ಹೊಂದಿರುವ ಈ ಕೃತಿ "ವೇದಶಾಸ್ತ್ರ ಪುರಾಣಾಗಮೇತಿಹಾಸಾದಿ ನಾನಾ ಧರ್ಮ ಶಾಸ್ತ್ರೋಕ್ತ ಗ್ರಂಥಗಳಂ ಆದ್ಯರ ವಚನಗಳಿಂ ನೂರೊಂದು ಸ್ಥಲಮಾಗೆ ಸೇರಿಸಿದಂ" ಎಂದು ಹೇಳಿರುವುದರಿಂದ ಕೃತಿ ರಚನೆಯ ಉದ್ದೇಶ ಅರಿಯಬಹುದಾಗಿದೆ.

**೨. ಏಕೋತ್ತರ ಶತಸ್ಥಲ ಸ್ವತಂತ್ರ ಕೃತಿಗಳು.**

**೧. ಮಗ್ಗೆಮಾಯಿದೇವರ ಪದ್ಯೈಕೋತ್ತರ ಶತಸ್ಥಲ (ಸು. ೧೪೩೦)**

ಕನ್ನಡ-ಸಂಸ್ಕೃತ ಉಭಯ ಭಾಷಾ ಕೋವಿದನಾದ ಮಗ್ಗೆಯ ಮಾಯಿದೇವನು ಷಟ್ಥಲ ಸಿದ್ಧಾಂತ ಸ್ಥಾಪನಾಚಾರ್ಯ ನಿರ್ಣಾಯಕ, ಶಿವಾನುಭಾವಿ ಎಂಬ ಖ್ಯಾತಿ ಪಡೆದಿದ್ದಾನೆ. 'ಏಕೋತ್ತರ ಶತಸ್ಥಲ ಷಟ್ಪದಿ ಅಥವಾ ಪದ್ಯೈಕೋತ್ತರ ಶತಸ್ಥಲ' ಎಂಬ ಕೃತಿಯನ್ನು ಸ್ವತಂತ್ರವಾಗಿ ರಚಿಸಿದ್ದಾನೆ.

೧೦೧ ಸ್ಥಲಗಳ ವಿಭಜನೆಯಲ್ಲಿ ಸ್ಥಲನಾಮ ನಿರ್ದೇಶನದಲ್ಲಿ ಮಹಾಲಿಂಗದೇವನ ಸ್ಥಲಗಳನ್ನು ಹೋಲುತ್ತಿದ್ದರೂ ಅಲ್ಪ ಭಿನ್ನತೆ ಕಾಣಬಹುದು. ಲಿಂಗಸ್ಥಲದಲ್ಲಿಯ ಜಂಗಮಲಿಂಗದ ೧೨ ಸ್ಥಲಗಳು ಇಲ್ಲಿರದೆ ಮಹಾಲಿಂಗಸ್ಥಲವು ೧೨ ಅವಾಂತರ ಕುಲಸ್ಥಲಗಳನ್ನು ಒಳಗೊಂಡುದು ಇಲ್ಲಿನ ವಿಶೇಷವೆನ್ನಬಹುದು.

**೨. ಬಸವೇಶನ - ಪದ್ಯೈಕೋತ್ತರ ಶತಸ್ಥಲ (ಸು. ೧೬೦೦)**

ವಾರ್ಧಕ ಷಟ್ಪದಿಯಲ್ಲಿ ಬಸವೇಶನಿಂದ ರಚಿತವಾದ ಪದ್ಯೈಕೋತ್ತರ ಶತಸ್ಥಲ ಸ್ವತಂತ್ರ ಕೃತಿ. ಇದರಲ್ಲಿ ೧೧೨ ವಾರ್ದಕ ಷಟ್ಪದಿಯ ಪದ್ಯಗಳಿದ್ದು ಸ್ಥಲಕ್ಕೊಂದು ಷಟ್ಪದಿಯನ್ನು ರಚಿಸಿ ೧೦೧ ಸ್ಥಲಗಳನ್ನು ಅವುಗಳ ನಿಲುವನ್ನು ನಿರೂಪಿಸುವುದೇ ಈ ಕೃತಿಯ ವೈಶಿಷ್ಟ್ಯವೆನ್ನಬಹುದು.

ಏಕೋತ್ತರ ಶತಸ್ಥಲವನ್ನು ಶಿವನು ಪಾರ್ವತಿಗೆ, ಬಸವನು ಚನ್ನಬಸವಾದಿಗಳಿಗೆ ಹೇಳಿದಂತೆ ಕವಿಯು ಭಕ್ತಸಮೂಹಕ್ಕೆ ನಿರೂಪಿಸುವಂತಿದೆ.

**೩. ಇಮ್ಮಡಿ ಗುರುಸಿದ್ಧನ - ಕೈವಲ್ಯನಾಮೈಕೋತ್ತರ ಶತಸ್ಥಲ (ಸು. ೧೫೯೦)**

೨೦ಕ್ಕೂ ಹೆಚ್ಚು ಕೃತಿ ರಚನೆ ಮಾಡಿರುವ ಇಮ್ಮಡಿ ಮುರಿಗಾ ಗುರುಸಿದ್ದದೇವನು ಶಿವಮೊಗ್ಗ ಜಿಲ್ಲೆ ಆನಂದಪುರದ ಬಳಿ ಇರುವ ಮುರುಘಾಮಠದ ಸ್ವಾಮಿಯಾಗಿದ್ದನೆಂದು ತಿಳಿದುಬರುತ್ತದೆ. ಈತನ ಗದ್ದುಗೆಯು ಇಂದಿಗೂ ಈ ಮಠದಲ್ಲಿದೆ. ಕೈವಲ್ಯನಾಮೈಕೋತ್ತರ ಶತಸ್ಥಲ ಕೃತಿಯ - ಕುರಿತು "ಇದು ಸದಮಲ ಹೃದಯವಿದಿತ ವೀರಮಾಹೇಶ್ವರಾಂಗೀಕೃತ ಕೈವಲ್ಯಸೋಪಾನ ನಾಮೈಕೋತ್ತರ ಶತಸ್ಥಲ" ಎಂದು ಅಂತ್ಯದಲ್ಲಿ ಹೇಳಿರುವುದನ್ನು ಗಮನಿಸಬೇಕಾಗುತ್ತದೆ. 'ಶಿವಲಿಂಗ' ಅಂಕಿತದಿಂದ ಸ್ವರವಚನಗಳನ್ನು ಆಯಾಯ ಸ್ಥಲಗಳಲ್ಲಿ ಸೇರಿಸಲಾಗಿದೆ. ಪ್ರಮುಖ ಸ್ಥಲಗಳ ಅಂತ್ಯದಲ್ಲಿ ವಾತೂಲಾಗಮದ ವೃತ್ತ ಸೇರಿಸಲಾಗಿದೆ. ೧೦೧ ಸ್ಥಲಗಳನ್ನು ತತ್ವ-ಸಾಹಿತ್ಯ-ಸಂಗೀತಗಳ ಮುಪ್ಪುರಿಯಿಂದ ರಚಿಸಿ, ಸಂಯೋಜಿಸಲಾದ ಈ ಕೃತಿ ೪೨ ಸ್ಥಲಗಳ ಸ್ಥಲಕಟ್ಟಿನ ಕೃತಿಯೆಂದು ಕವಿಚರಿತ್ರೆಯಿಂದ ತಿಳಿದುಬರುತ್ತದೆ.

**೪. ಸಿದ್ದಲಿಂಗೇಶ್ವರ ಶತಕ (ವಿರಕ್ತ ತೋಂಟದಾರ‍್ಯರು?)**

ಎಡೆಯೂರು ತೋಂಟದಾರ್ಯ ಪರಂಪರೆಯ ಆದಿಗುರು ತೋಂಟದ ಸಿದ್ದಲಿಂಗೇಶ್ವರ ಅಂಕಿತದಲ್ಲಿ 'ಸಿದ್ದಲಿಂಗೇಶ್ವರ ಶತಕ'ವನ್ನು ರಚಿಸಿದ್ದಾರೆ. ನೂರೊಂದು ವೃತ್ತಗಳಿಂದ ಕೂಡಿದ ಈ ಶತಕವು ನೂರೊಂದು ಸ್ಥಲಗಳಿಗೆ ಅನುಸಾರವಾಗಿ ಸ್ವತಂತ್ರವಾಗಿ ರಚಿತವಾಗಿದೆ.

ಡಾ. ಫ.ಗು. ಹಳಕಟ್ಟಿಯವರಿಂದ ಸಂಪಾದನೆಗೊಂಡ ಈ ಕೃತಿಯ ಸಂಕಲನಕಾರರು ಯಾರೆಂಬುದು ತಿಳಿಯುವುದಿಲ್ಲ. ಆದರೆ, ಕೃತಿಯಲ್ಲಿ ಸ್ಥಲಕ್ಕೊಂದು "ಸಿದ್ದಲಿಂಗೇಶ್ವರ" ಅಂಕಿತದಿಂದ ಕೂಡಿದ ವೃತ್ತಗಳಿರುವದರಿಂದ ಇದನ್ನು "ಸಿದ್ಧಲಿಂಗೇಶ್ವರಾಂಕಿತ ಏಕೋತ್ತರ ಶತಸ್ಥಲ" ವೆಂದು ಕರೆಯಲಾಗಿದೆ. ಕೃತಿಯು ಸ್ಥಲಸೂತ್ರ, ವಚನ-ಸ್ಥಲಪದ-ವೃತ್ತ-ಗದ್ಯ ಹೀಗೆ ಸಂಯೋಜನೆಗೊಂಡಿರುವುದನ್ನು ಕಾಣಬಹುದು.

**೫. ನಿಃಕಲರ ವಚನ (ಚಿದಾನಂದ ಯೋಗಿ)**

ಈ ಕೃತಿಯು 'ನಿಃಕಲರ ವಚನ' ಹೆಸರಿನಲ್ಲಿ ೧೮೮೫ರಲ್ಲಿ ಬಳ್ಳಾರಿಯಲ್ಲಿ ಪ್ರಕಟವಾಗಿದೆ ಎಂದು ಪ್ರೊ.ಜಿ.ಎ. ಶಿವಲಿಂಗಯ್ಯ ಹೇಳುತ್ತಾರೆ. ಕರ್ತೃ ನಿಷ್ಕಳಂಕ ಚಿದಾನಂದಯೋಗಿ. ಸಾಂಗತ್ಯ ಛಂದಸ್ಸಿನಲ್ಲಿರುವ ಇದು "ಏಕೋತ್ತರ ಶತಸ್ಥಲ"ವೇ ಆಗಿರುತ್ತದೆಂದು ತಿಳಿದುಬರುತ್ತದೆ. ಕೃತಿಯ ಹಸ್ತಪ್ರತಿ ಪೂರ್ಣ ಲಭಿಸದ ಕಾರಣ ಕೇವಲ ಅಂಗಸ್ಥಲ ಮಾತ್ರ ಪ್ರಕಟಗೊಂಡಿದೆ. ೫೭೬ ಸಾಂಗತ್ಯಗಳಲ್ಲಿ ಅಂಗಸ್ಥಲ ನಿರೂಪಿಸಲಾಗಿದೆ. ಪ್ರೊ.ಜಿ.ಎ. ಶಿವಲಿಂಗಯ್ಯನವರು ಹೇಳುವಂತೆ - ಇದರಲ್ಲಿನ ಸೂತ್ರಗಳು ಜಕ್ಕಣಾರ್ಯನ ನೂರೊಂದು ಸ್ಥಲದ ಸೂತ್ರಗಳು ಆಗಿರುತ್ತವೆ. - ಉತ್ತಮ ರೀತಿಯಲ್ಲಿ ಸಂಪಾದಿತವಾದರೆ ಇದೊಂದು ಜನಪ್ರಿಯ ಕೃತಿಯಾಗುವುದರಲ್ಲಿ ಸಂಶಯವಿಲ್ಲ"[೨೮] ಎನ್ನುತ್ತಾರೆ.

**೩. ಏಕೋತ್ತರ ಶತಸ್ಥಲ ಗ್ರಂಥೋಕ್ತ ಕೃತಿಗಳು**

ಗುಬ್ಬಿಯ ಮಲ್ಲಣಾರ್ಯರ ವೀರಶೈವಾಮೃತ ಮಹಾಪುರಾಣ, ವಿರಕ್ತ ತೋಂಟದಾರ್ಯನ ಸಿದ್ದೇಶ್ವರ ಪುರಾಣ, ಸಿದ್ಧನಂಜೇಶನ ಗುರುರಾಜ ಚಾರಿತ್ರ, ದ್ಯಾಂಪುರ ಚನ್ನಕವಿಕೃತ ಪುರಾಣಗಳಲ್ಲಿ ಪುರಾಣಕಾರರು ಏಕೋತ್ತರ ಶತಸ್ಥಲದ ಸ್ಥಲನಾಮಗಳ ವಿವರಣೆ ನೀಡುತ್ತ, ವೀರಶೈವ ಸಿದ್ಧಾಂತವನ್ನು ಪೌರಾಣಿಕ ಹಿನ್ನಲೆಯಲ್ಲಿ ಸಮಾಜಮುಖಿಗೊಳಿಸಲು ಪ್ರಯತ್ನ ಮಾಡಿದ್ದಾರೆ. ಕ್ರಮವಾಗಿ ವೀರಶೈವಾಮೃತ ಮಹಾಪುರಾಣದ ಕಾಂಡ ೮ ಸಂಧಿ ೮–೧೦, ಸಿದ್ದೇಶ್ವರ ಪುರಾಣಸಂಧಿ ೨೪ ಪದ್ಯ ೨೬–೩೮, ಗುರುರಾಜ ಚಾರಿತ್ರ, ದ್ಯಾಂಪುರ ಚನ್ನಕವಿಯ ಪುರಾಣಗಳು ೧೦೧ ಸ್ಥಲಗಳ ಸೂಚನೆ - ವಿವರಣೆಯನ್ನು ಕಾಣಬಹುದಾಗಿದೆ. ಆದರೆ, ಪುರಾಣಕಾರರು ನೂರೊಂದು ಸ್ಥಲಗಳ ಅನುಸರಣೆಯಲ್ಲಿ ಸ್ವಪ್ರತಿಭೆಯನ್ನು ಧಾರೆಯೆರೆದಿರುವರೋ ಅಥವಾ ಹಿಂದಿನವರ ಸ್ಥಲವಿಭಜನೆಯನ್ನೇ ಆಧಾರವಾಗಿಟ್ಟುಕೊಂಡು ಈ ಪರಂಪರೆಯನ್ನು ಮುಂದುವರಿಸಿರುವರೋ ಎಂಬುದನ್ನು ಸಮಗ್ರ ಅಧ್ಯಯನದ ಮೂಲಕ ಖಚಿತ ಮಾಡಿಕೊಳ್ಳಬೇಕಾಗಿದೆ. ಇತ್ತೀಚೆಗೆ ಪ್ರೊ.ಬಿ.ಬಿ. ಕಡ್ಲಿಯವರು ದ್ಯಾಂಪುರ ಚನ್ನಕವಿಯ ನೂರೊಂದು ಸ್ಥಲದ ಷಟ್ಪದಿ ಪುರಾಣಕ್ಕೆ ಸರಳ ವ್ಯಾಖ್ಯಾನ ಬರೆದಿದ್ದು ಗಮನಿಸಬಹುದಾಗಿದೆ.

**೪. ಏಕೋತ್ತರ ಶತಸ್ಥಲ ಟೀಕೆ - ವ್ಯಾಖ್ಯಾನಗಳು**

೧. ಅನಾಮಧೇಯ ಏಕೋತ್ತರ ಶತಸ್ಥಲ ಸಾರಾಮೃತ ಟೀಕೆ (ಮಹಾಲಿಂಗದೇವ?)

೨. ಜಕ್ಕಣಾರ್ಯನ ಏಕೋತ್ತರ ಶತಸ್ಥಲ ಸ್ವರವಚನ - ಟೀಕೆ ಶ್ರೀಗಿರೀಂದ್ರ

೩. ಸಿದ್ಧಲಿಂಗೇಶ್ವರಾಂಕಿತ ಏಕೋತ್ತರ ಶತಸ್ಥಲ ವ್ಯಾಖ್ಯಾನ (ಸು. ೧೫೦೦) ಸಂಪಾದನೆ - ಫ.ಗು. ಹಳಕಟ್ಟಿ

೪. ಸಂಪಾದನೆ ಸಿದ್ಧವೀರನ ಏಕೋತ್ತರ ಸಾರ ಟೀಕೆ (ಸು. ೧೬೦೦) ಬ್ಯಾಡಗಿ ಮಠದ ಓಲೆ ಪ್ರತಿಯಲ್ಲಿ ಈತನ ಹೆಸರಿದೆ. ೩೯೬ ವಚನಗಳಿವೆ.

೫. ಕಟ್ಟಿಗೆಹಳ್ಳಿ ಸಿದ್ಧಲಿಂಗ ಸ್ವಾಮಿಯ ಏಕೋತ್ತರ ಸಾರ ಟೀಕೆ (ಸು. ೧೬೭೫)

೬. ಪರ್ವತಶಿವಯೋಗಿಯ ಏಕೋತ್ತರ ಶತಸ್ಥಲ ಟೀಕೆ (ಸು. ೧೭೦೦)

೭. ಏಕೋತ್ತರ ಶತಸ್ಥಲ ಹಾಗೂ ಷಟ್‌ಸ್ಥಲವುಳ್ಳ ಇತರೆ ಟೀಕಾಕೃತಿಗಳು, ಉದಾ- ಚನ್ನವೀರಾಚಾರ್ಯನ ವಿಶೇಷಾನುಭವ ಷಟ್‌ಸ್ಥಲಟೀಕೆ (ಸು. ೧೬೫೦) ಇದರಲ್ಲಿ ೧೬ ಸ್ಥಲಗಳಿವೆ, ೪೬ ಶಿವಶರಣರ ೭೪೨ ವಚನಗಳಿವೆ.

ಹೀಗೇ ೧೨ನೇ ಶತಮಾನದ ಬಸವಾದಿ ಶಿವಶರಣರ ವಚನಗಳನ್ನು ಕೆಲವರು ಷಟ್‌ಸ್ಥಲ ಮಾದರಿಯಲ್ಲಿ ವಿಂಗಡಿಸಿದರು. ಇವರೆಲ್ಲರ ಉದ್ದೇಶವೆಂದರೆ - ಶಿವರಶರಣರ ವಚನಗಳಿಗೆ ವೀರಶೈವ ಧರ್ಮದ ತಾತ್ವಿಕ ಸಿದ್ಧಾಂತದ ಸ್ಪಷ್ಟ ಸ್ವರೂಪ ನೀಡುವುದಾಗಿತ್ತೆನ್ನಬಹುದು. ಅಂದರೆ, ಒಂದು ಧರ್ಮ ಸ್ವತಂತ್ರ ಧರ್ಮವಾಗಿ, ವೇದಾಗಮ ಪ್ರಣೀತ ಧರ್ಮಕ್ಕೆ ಸರಿಸಾಟಿಯಾಗಿ ನೆಲೆನಿಂತು ಜನಪರವಾಗಿ ಬೆಳೆಯಬೇಕೆಂಬ ಸದುದ್ದೇಶದಿಂದ ೧೫ನೇ ಶತಮಾನದಲ್ಲಿ ಮಠ-ಮಂದಿರಗಳಲ್ಲಿ ತೆರೆಮರೆಯಲ್ಲಿದ್ದ ವಚನ ಸಾಹಿತ್ಯದ ಹಸ್ತಪ್ರತಿಗಳನ್ನು ಸಂಗ್ರಹಿಸುವ, ಸಂಗ್ರಹಿಸಿದ ವಚನಗಳನ್ನು ಸ್ಥಲಮಾದರಿಯಲ್ಲಿ ವಿಂಗಡಿಸಿ, ಸಂಪಾದಿಸುವ,ಆಯಾ ಸ್ಥಲದ ವಚನಗಳಿಗೆ ಸೂತ್ರ, ಶ್ಲೋಕಗಳನ್ನು ಜೋಡಿಸುತ್ತ ಸ್ಥಲದ ಕೊನೆಗೆ ಸ್ವರವಚನಗಳನ್ನು ಬರೆದು ಸಂಕಲಿಸುವ ಪ್ರಯತ್ನಗಳು ವ್ಯಾಪಕವಾಗಿ ನಡೆದವು.

ಅಂದರೆ, ಕನ್ನಡ ಏಕೋತ್ತರ ಶತಸ್ಥಲ ಸಾಹಿತ್ಯವು ಪ್ರಥಮವಾಗಿ ಅವರವರ ಸ್ವಪ್ರತಿಭೆ ಆಧರಿಸಿ ಸಂಗ್ರಹಗೊಂಡು ಸ್ಥಲಸ್ವರೂಪ ಪಡೆಯಿತು. ಎರಡನೇಯದಾಗಿ, ಶರಣರ ವಚನಗಳಿಗೆ ಸ್ವರವಚನಗಳನ್ನು ತಾಳ ಲಯ ಬದ್ಧವಾಗಿ ರಚಿಸಿ ಹಾಡಿನ ಸ್ವರೂಪ ನೀಡಲಾಯಿತು. ಅಂದರೆ ಷಟ್ಪದಿ, ಸಾಂಗತ್ಯ ಛಂದೋರೂಪದಲ್ಲಿ ವಚನಗಳನ್ನು ಮಾರ್ಪಡಿಸಿ ಜನಸಾಮಾನ್ಯರಿಗೆ, ಅಶಿಕ್ಷಿತ ಜನಪದರಿಗೆ ಹತ್ತಿರವಾಗುವಂತೆ ಪ್ರಯತ್ನಿಸಿದರು.

ಮೂರನೇಯದಾಗಿ, ಪುರಾಣ ಕಾವ್ಯಗಳಲ್ಲಿ ಶರಣರ ಸ್ಥಲಸಿದ್ಧಾಂತದ ಚೌಕಟ್ಟಿನಲ್ಲಿ ವೀರಶೈವ ಧರ್ಮವನ್ನು ಪ್ರತಿಪಾದಿಸುವ ಪ್ರಯತ್ನವನ್ನು (ವಚನಗಳನ್ನು ಆಧಾರವಾಗಿಟ್ಟುಕೊಂಡು) ಮಾಡಿದರು. ನಾಲ್ಕನೆಯದಾಗಿ, ಸ್ಥಲಾನುಗುಣವಾಗಿ ಸಂಕಲನಗೊಂಡ ವಚನ-ಸ್ವರವಚನ ಗ್ರಂಥಗಳಿಗೆ ಟೀಕೆ ವ್ಯಾಖ್ಯಾನಗಳನ್ನು ಬರೆಯಲಾಯಿತು. ವಚನಗಳಿಗೆ ವಿಶೇಷವಾಗಿ ಬೆಡಗಿನ ವಚನಗಳಿಗೆ ಪರಧರ್ಮಿಯರು ಅಪಾರ್ಥ ನೀಡಿ ವಿಡಂಬಿಸುವುದನ್ನು ತಪ್ಪಿಸಲು, ವಚನಾರ್ಥ ಅನರ್ಥಗೊಳ್ಳುವುದನ್ನು ತಡೆಯಲು, ಸ್ವಧರ್ಮಿಯರಲ್ಲಿ ವಚನಗಳ ಪರಮಾರ್ಥ ಬೋಧನೆ ಮಾಡಿ ಧರ್ಮಾಭಿಮಾನವನ್ನು ಹೆಚ್ಚಿಸಲು

ವಚನ ವ್ಯಾಖ್ಯಾನ ಪರಂಪರೆ ವ್ಯಾಪಕವಾಗಿ ಬೆಳೆಯಲು ಕಾರಣವಾಯಿತೆನ್ನಬಹುದು.

**ಏಕೋತ್ತರ ಶತಸ್ಥಲ - ಟೀಕೆಗಳ ಸ್ವರೂಪ**

ಸ್ಥಾವರಲಿಂಗ ಪೂಜಿತ ಶೈವಧರ್ಮದ ಸಿದ್ಧಾಂತವನ್ನು ಕಳಚಿಕೊಂಡು ಇಷ್ಟಲಿಂಗಪೂಜಿತ ವೀರಶೈವ (ಲಿಂಗಾಯತ) ಧರ್ಮವಾಗಿ ಅಷ್ಟಾವರಣ - ಪಂಚಾಚಾರ - ಷಟ್‌ಸ್ಥಲಾಚಾರ - ವಿಚಾರ ಪ್ರತಿಪಾದಿಸುತ್ತ ಅಂಗವನ್ನು ಲಿಂಗಮಯವಾಗಿಸಿಕೊಳ್ಳಲು ಅಗತ್ಯವಾದ "ಸ್ಥಲ" ವ್ಯವಸ್ಥೆ ರೂಪಿಸಿದ ಶ್ರೇಯಸ್ಸು ವಚನಕಾರರಿಗೆ ಸಲ್ಲುತ್ತದೆ.

"ಸ್ಥಲ" ಪದಕ್ಕೆ ಪರಬ್ರಹ್ಮ, ಪರಶಿವ, ಶಿವ, ಶೂನ್ಯ, ಪರವಸ್ತು, ಘನ, ನಿಜ, ಲಿಂಗ, ಪರ ಮುಂತಾಗಿ ಪಾರಿಭಾಷಿಕವಾಗಿ ಅರ್ಥೈಸಲಾಗುತ್ತದೆ. ಸಾಮಾನ್ಯಾರ್ಥವಾಗಿ - ಸ್ಥಾನ, ಮೆಟ್ಟಿಲು, ಜಾಗ, ಹಂತ, ಭಾಗ, ಆಶ್ವಾಸ - ಮುಂತಾಗಿ ಅರ್ಥೈಸಲಾಗುವುದು. ಹೀಗೆ ವೀರಶೈವ ಧರ್ಮದ ಪಾರಿಭಾಷಿಕ ಪದವಾದ 'ಸ್ಥಲ' ತತ್ವವು ಅಂಗಸ್ವರೂಪಿ (ಪಿಂಡಸ್ಥಲ) ಶರಣನು ಲಿಂಗಸ್ವರೂಪವಾಗಲು ಹಂತ ಹಂತವಾಗಿ ಮೇಲೆರುತ್ತ 'ಲಿಂಗಾಂಗ ಸಾಮರಸ್ಯ' (ಐಕ್ಯಸ್ಥಲ) ಹೊಂದಲು ಅಗತ್ಯವಾದ ಸಾಧನೆಯ ಮೈಲುಗಲ್ಲಾಗಿದೆ ಎನ್ನಬಹುದು. ಅಂದರೆ, ಸ್ಥಲತತ್ವವು ತ್ಯಾಗಾಂಗ,-ಭೋಗಾಂಗ-ಯೋಗಾಂಗವೆಂದು ತ್ರಿವಿಧ ಅಂಗವಾಗಿ; ಇಷ್ಟ-ಪ್ರಾಣ-ಭಾವವೆಂಬ ತ್ರಿವಿಧ ಲಿಂಗಗಳಾಗಿ, ಪುನಃ ಅಂಗನಲ್ಲಿಯ ತ್ಯಾಗಾಂಗವು ಭಕ್ತ-ಮಹೇಶ; ಭೋಗಾಂಗವು - ಪ್ರಸಾದಿ-ಪ್ರಾಣಲಿಂಗ; ಯೋಗಾಂಗವು-ಶರಣ-ಐಕ್ಯ ಎಂದು ಆರು ವಿಧವಾಗುವುದು. ಇಷ್ಟಲಿಂಗವು ಆಚಾರಾಲಿಂಗ-ಗುರುಲಿಂಗ; ಪ್ರಾಣಲಿಂಗವು-ಶಿವಲಿಂಗ - ಜಂಗಮಲಿಂಗ; ಭಾವಲಿಂಗವು-ಪ್ರಸಾದಲಿಂಗ-ಮಹಾಲಿಂಗವೆಂದು ಆರು ವಿಧವಾಗುತ್ತದೆ. ಇಲ್ಲಿ ಭಕ್ತನು (ಅಂಗ) ಭಕ್ತಿಯ ಶಕ್ತಿಯೊಂದಿಗೆ ಒಂದೊಂದೆ ಹಂತವನ್ನು ಮೇಲೆರುತ್ತ ಐಕ್ಯಸ್ಥಲ (ಲಿಂಗ) ದೊಳಗೆ ಲಿಂಗಾಂಗ ಸಮರಸಗೊಂಡ ಶಿವಯೋಗಿ (ಪರಶಿವ) ಯಾಗುತ್ತಾನೆಂಬ ವೀರಶೈವ ದರ್ಶನ ತತ್ವ ಅರ್ಥಪೂರ್ಣವಾಗಿ ಸಾಕಾರಗೊಂಡಿದೆ.

ಡಾ. ವಿ. ಎಸ್. ಕಂಬಿಯವರು - "ಈ ಸ್ಥಲಕಟ್ಟು ಸಾಹಿತ್ಯವು ಕನ್ನಡ ಸಾಹಿತ್ಯದಲ್ಲಿ ನವೀನ ಸೃಷ್ಟಿ. ಇದು ದರ್ಶನ ಸಾಹಿತ್ಯ. ಈ ಸಾಹಿತ್ಯ ಆಗಮ ಮೂಲವಾದುದು. ವಚನ ಸಾಹಿತ್ಯದ ಉಗಮದೊಡನೆ ಸ್ಥಲಕಟ್ಟಿನ ಸಾಹಿತ್ಯವು ಕನ್ನಡ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದ್ದು ದ್ವಿಮುಖವಾಗಿದೆ. ೧. ಷಟ್‌ಸ್ಥಲ ಕ್ರಮ ಸಮುಚ್ಚಯವು ಅದರ ಒಂದು ಮುಖ. ಇದು ನೂರೊಂದು ಸ್ಥಲ ರೂಪ. ಇದೇ ಏಕೋತ್ತರ ಶತಸ್ಥಲ.

೨. ಷಟ್‌ಸ್ಥಲ ಸಮುಚ್ಚಯವು ಅದರ ಇನ್ನೊಂದು ಮುಖ. ಇದು ೨೧೬ ಸ್ಥಲಕಟ್ಟು ಸಾಹಿತ್ಯದಲ್ಲಿ ಮೂರು ಹಂತಗಳನ್ನು ಕಾಣುತ್ತೇವೆ.

೧. ಪರಂಪರೆಯಂತೆ ಬೆಳೆದು ಬಂದ ಸ್ಥಲಕಟ್ಟು ಸಾಹಿತ್ಯ

೨. ಪರಂಪರೆ ಮತ್ತು ಸ್ವತಂತ್ರ ಪ್ರಜ್ಞೆಗಳ ಸಾಮರಸ್ಯದಿಂದ ಬೆಳೆದ ಸಾಹಿತ್ಯ.

೩. ಪರಂಪರೆಗೆ ವಿರೋಧಿಯಾಗಿಯಲ್ಲದಿದ್ದರೂ ಸ್ವತಂತ್ರ ವಿಚಾರಕ್ಕನುಗುಣವಾಗಿ ಬೆಳೆದು ಬಂದ ಸ್ಥಲಕಟ್ಟು ಸಾಹಿತ್ಯ''[೨೭೯] ಎಂದು ವಿಭಜಿಸಿದ್ದಾರೆ.

ಇಲ್ಲಿ ಏಕೋತ್ತರ ಶತಸ್ಥಲ ಇಲ್ಲವೇ ನೂರೊಂದು ಸ್ಥಲಗಳನ್ನು ಅನುಸರಿಸಿ ಸೃಷ್ಟಿಯಾದ ಟೀಕಾಸಹಿತ ಹಸ್ತಪ್ರತಿಗಳು, ಪ್ರಕಟಿತ ಸಟೀಕ ಗ್ರಂಥಗಳ ಟೀಕಾ ಸ್ವರೂಪ ಕುರಿತು ವಿಶ್ಲೇಷಿಸಬೇಕಾಗಿದೆ. ಫ.ಗು. ಹಳಕಟ್ಟಿಯವರು ಹೇಳುವಂತೆ - ''ವೀರಶೈವನ ಧಾರ್ಮಿಕ ಆಚಾರ ವಿಷಯಗಳೂ, ಸಾಮಾಜಿಕ ವಿಚಾರಗಳೂ ಈ ಸ್ಥಲಗಳಲ್ಲಿ ವಿಶೇಷವಾಗಿ ನಿರೂಪಿಸಲ್ಪಡುವುದುಂಟು. ಏಕೋತ್ತರ ಶತಸ್ಥಲವು ಷಟ್ಸ್ಥಲಗಳ ತಾತ್ವಿಕ ಜ್ಞಾನಕ್ಕೂ ಆಚಾರ ವಿಷಯಕ್ಕೂ ಸಂಬಂಧಪಡುವ ಒಂದು ಸೇತುವೆಯಂತಿದೆ. ಇದರ ಸಹಾಯದಿಂದ ಮನುಷ್ಯನು ಲಿಂಗ ವಿಷಯಕ ಜ್ಞಾನವನ್ನು, ಪ್ರಗತಿಯನ್ನು ಉಂಟುಮಾಡಿಕೊಳ್ಳತಕ್ಕದ್ದು. ಅಂಗಸ್ಥಲಗಳಲ್ಲಿ ಭಕ್ತನು ಯಾವ ರೀತಿಯಾಗಿ ಆಚರಿಸಬೇಕೆಂಬುದರ ವಿವರಣೆ ಇದೆ. ಲಿಂಗಸ್ಥಲಗಳಲ್ಲಿ ಈ ಆಚರಣೆಗಳಿಂದ ಯಾವ ವಿಧದ ಪರಿಣಾಮಗಳು ಮನುಷ್ಯನ ಮೇಲೆ ಉಂಟಾಗುತ್ತವೆಂಬುದರ ವಿವರಣೆ ಇದೆ''.[೨೮೦]

ಈ ಹಿನ್ನೆಲೆಯಲ್ಲಿ ಏಕೋತ್ತರ ಶತಸ್ಥಲ ಹಸ್ತಪ್ರತಿಗಳು ಹಲವು ರೀತಿಯಲ್ಲಿ ಲಭ್ಯವಾಗಿವೆ. ನಾಡಿನ ವಿಶ್ವವಿದ್ಯಾಲಯಗಳು, ಮಠಗಳು ಪ್ರಕಟಿಸಿದ ಹಸ್ತಪ್ರತಿ ಸೂಚಿಗಳಿಂದ ಶತಸ್ಥಲ ಪರಂಪರೆ ಬಹುಮುಖವಾಗಿ ಬೆಳೆದು ಬಂದಿದೆ ಎಂಬುದು ತಿಳಿಯುತ್ತದೆ. ಆದರೆ, ಶತಸ್ಥಲವುಳ್ಳ ಎಲ್ಲ ಹಸ್ತಪ್ರತಿ ಸಂಗ್ರಹಿಸಿ, ಇವುಗಳಲ್ಲಿ ಮೂಲಪ್ರತಿ ಯಾವುದೆಂಬುದನ್ನು ಗುರುತಿಸಬೇಕಾದ ಅಗತ್ಯವಿದೆ. ಪ್ರಸ್ತುತ ಅಧ್ಯಾಯದಲ್ಲಿ ಪ್ರಮುಖವಾದ ಏಕೋತ್ತರ ಶತಸ್ಥಲ ವಚನಟೀಕು ಕೃತಿಗಳನ್ನು ಪರಾಮರ್ಶಿಸಲಾಗುವುದು.

### i. ಮಹಾಲಿಂಗದೇವರ ಏಕೋತ್ತರ ಶತಸ್ಥಲ ಸಾರಾಮೃತ ಟೀಕೆ:

ಮಹಾಲಿಂಗದೇವರ 'ಏಕೋತ್ತರ ಶತಸ್ಥಲ ತುಂಬಾ ಮಹತ್ವದ ಕೃತಿ. ಈ ಕೃತಿಯು ಹಲವು ಹಂತಗಳಲ್ಲಿ ಪರಿಷ್ಕರಣೆಯಾಗುತ್ತ ಬಂದಿರುವುದನ್ನು ವಿದ್ವಾಂಸರಾದ ಡಾ.ಬಿ.ವಿ. ಶಿರೂರರು ಗುರುತಿಸಿದ್ದಾರೆ. 'ಮಹಾಲಿಂಗದೇವರ ಏಕೋತ್ತರ ಶತಸ್ಥಲ ಪರಿಷ್ಕರಣೆಗಳು' ಲೇಖನದಲ್ಲಿ - ''- - - - ಇದ್ದ ವಿಷಯವನ್ನು ಇನ್ನಷ್ಟು ವಿವರಿಸಲು, ಮೂಲವಿಷಯವನ್ನು ಇನ್ನಷ್ಟು ತಿಳಿಯಾಗಿಸಲು ಆಗಾಗ ಪರಿಷ್ಕಾರವಾಗುತ್ತ ಬಂದಿದೆ. ಇದಕ್ಕೆ ಆಧಾರ, ಈಗ ದೊರೆಯುತ್ತಿರುವ ಇದರ ಭಿನ್ನ ಭಿನ್ನ ಪ್ರತಿಗಳು. ಪ್ರೊ. ಭೂಸನೂರಮಠರು ಸಂಪಾದಿಸಿ ಬೆಳಗಾವಿ ನಾಗನೂರ ಮಠದಿಂದ ಪ್ರಕಟವಾಗಿರುವ ಏಕೋತ್ತರ ಶತಸ್ಥಲ ಗ್ರಂಥದ ಕೊನೆಯಲ್ಲಿಯೇ 'ಅ' ಪ್ರತಿಯ ಹೆಚ್ಚಿನ ವಚನಗಳನ್ನು ಕೊಡಲಾಗಿದೆ. ಇಲ್ಲಿ ಮೂಲ ಪ್ರತಿಯ ವಚನಗಳಿಗಿಂತ ೧೮೩ ಹೆಚ್ಚಿನ ವಚನಗಳಿದ್ದು, ಇದನ್ನು ಏಕೋತ್ತರ ಶತಸ್ಥಲದ ಪರಿಷ್ಕರಣ ಕಾರ್ಯದ ಮೊದಲಹಂತ ಎಂದು ಹೇಳಬಹುದು. ಈಗ ಮೂಲಪ್ರತಿಯಿಂದ ಮತ್ತು 'ಅ' ಪ್ರತಿಯಿಂದ ಭಿನ್ನವಾದ ಇನ್ನೊಂದು ಪ್ರತಿ ದೊರಕಿದೆ.[೨೮೧] ಆದರೆ, ಇದಕ್ಕೆ ಯಾವ ತಲೆಬರಹವೂ ಇಲ್ಲ. ಕರ್ತೃವಿನ ಹೆಸರೂ ತಿಳಿಯದು. ಇಲ್ಲಿ ಏಕೋತ್ತರ ಶತಸ್ಥಲದಿಂದ ಐವತ್ತು ಸ್ಥಲಗಳನ್ನು ಮಾತ್ರ ಆಯ್ದುಕೊಳ್ಳಲಾಗಿದೆ ........'' ''.........ಇದೇ ಕಾಲದ ಶೂನ್ಯ ಸಂಪಾದನೆಯ ಪರಿಷ್ಕರಣೆಗೆ 'ಸಿದ್ಧರಾಮಲಿಂಗಧಾರಣೆ'

ಮೊದಲಾದ ನಿರ್ಧಿಷ್ಟಕಾರಣಗಳು ಇರುವಂತೆ ಏಕೋತ್ತರ ಶತಸ್ಥಲದ ಈ ಪರಿಷ್ಕರಣೆಗಳಿಗೆ ಅಂಥ ನಿರ್ದಿಷ್ಟ ಕಾರಣಗಳಾವುವೂ ತೋರಿಬರವು"[೨೮] ಎಂದು ಡಾ. ಶಿರೂರ ಅವರು ಅಭಿಪ್ರಾಯಪಡುತ್ತಾರೆ. ಅಂದರೆ ಸ್ಥಲಗಳನ್ನು ಆಯ್ದುಕೊಳ್ಳುವಲ್ಲಿ ಅಥವಾ ಕೈಬಿಡುವಲ್ಲಿ ಯಾವುದಾದರೂ ಮಾನದಂಡವೇನಾದರೂ ಇತ್ತೇ ಇಲ್ಲವೇ ಎಂಬುದಕ್ಕೆ ಎಲ್ಲಿಯೂ ಉತ್ತರ ಸಿಗುವದಿಲ್ಲ.

ಈ ಹಿನ್ನೆಲೆಯಲ್ಲಿ ಏಕೋತ್ತರ ಶತಸ್ಥಲ ಇಲ್ಲವೇ ನೂರೊಂದು ಸ್ಥಲಗಳನ್ನು ಒಳಗೊಂಡಿರುವ ಮೂಲಪ್ರತಿ ಯಾವುದು? ಎಷ್ಟಿವೆ? ನಂತರ ಸ್ಥಲಗಳ ವಿಂಗಡನೆಯಲ್ಲಿ, ಆಯ್ದುಕೊಂಡಿರುವ ವಚನಗಳ ಸಂಖ್ಯೆಯಲ್ಲಿ ಕ್ರಮಬದ್ಧತೆ ಇರುವ ಹಸ್ತಪ್ರತಿಗಳು ಯಾವುವು? ಸ್ಥಲವಿಂಗಡನೆಯಲ್ಲಿ ಸ್ವತಂತ್ರವಾದ ಪೀಳಿಗೆಯ ಅಧ್ಯಯನ ಕೈಗೊಂಡಲ್ಲಿ ಆ ಕಾಲದ ಪಂಡಿತರ ಮನೋಇಂಗಿತದ ಆಂತರಿಕ ಶೋಧದ ಜೊತೆಗೆ ಅವರ ನಿಲುವುಗಳೇನಿದ್ದವೆಂಬುದನ್ನು ಅರಿಯಲು ಸಾಧ್ಯವಿದೆ. ಹಾಗೆಯೇ ವಿಶೇಷಾನುಭವ ಷಟ್‌ಸ್ಥಲ ಮಾದರಿಯನ್ನೊಳಗೊಂಡ ಲಭ್ಯ ಹಸ್ತಪ್ರತಿಗಳು, ಪ್ರಕಟಿತ ಗ್ರಂಥಗಳು, ಅಪ್ರಕಟಿತ ಹಸ್ತಪ್ರತಿಗಳನ್ನು ಆಧಾರವಾಗಿಟ್ಟುಕೊಂಡು ಸ್ಥಲಕಟ್ಟಿನ ಹಿಂದೆ ಅಂದಿನವರು ಇಟ್ಟುಕೊಂಡ ಆಶಯವನ್ನು ಗುರುತಿಸಬಹುದಾಗಿದೆ.

ಅಲ್ಲದೆ, ಕನ್ನಡ ಏಕೋತ್ತರ ಶತಸ್ಥಲ ಸಾಹಿತ್ಯ ಸೃಷ್ಟಿಗೆ ಬಸವಾದಿ ಶಿವಶರಣರ ವಚನಗಳನ್ನು ಆಧಾರಾಗಿಟ್ಟುಕೊಳ್ಳಲಾಗಿದೆ. ಆಯಾ ಸ್ಥಲ ವಿಭಜನೆಯ ವಚನಗಳಿಗೆ ನಂತರದಲ್ಲಿ ಟೀಕು ಇಲ್ಲವೇ ವ್ಯಾಖ್ಯಾನವನ್ನು ಬರೆದಿದ್ದು ಟೀಕಾಕೃತಿಗಳ ಪರಂಪರೆಯೇ ಕಾಲಾಂತರದಲ್ಲಿ ಬೆಳೆದುಬಂದಿದೆ. ಅಂದರೆ ಕನ್ನಡ ಏಕೋತ್ತರ ಶತಸ್ಥಲದ ವಚನಗಳಿಗೆ ಟೀಕೆ ಬರೆದಂತಹ ಅಪ್ರಕಟಿತ ಹಸ್ತಪ್ರತಿಗಳು, ಪ್ರಕಟಿತ ಟೀಕಾಕೃತಿಗಳನ್ನು ಆಧಾರವಾಗಿಟ್ಟುಕೊಂಡು ಇಲ್ಲಿ ಅಧ್ಯಯನ ಮಾಡಲಾಗುವುದು. ಅನಾಮಧೇಯ ಏಕೋತ್ತರ ಶತಸ್ಥಲ ಸಾರಾಮೃತ ಹೆಸರಿನ ಹಸ್ತಪ್ರತಿಯೊಂದು ದೊರೆತಿದ್ದು ಕೃತಿಯ ಆರಂಭದಲ್ಲಿ ತನ್ನಸ್ಥಳ, ಆರಾಧ್ಯದೈವ, ಪ್ರಶಿಷ್ಯ ಜಕ್ಕಣ್ಣನವರೆಗಿನ ೨೨ ಜನ ಗುರುಪರಂಪರೆಯನ್ನು ಹೇಳಿಕೊಂಡಿದ್ದಾನೆ. ಉಲ್ಲೇಖಿತ ೨೨ ಜನರಲ್ಲಿ ಮಹಲಿಂಗದೇವ ೨೦ನೆಯವನಾಗಿದ್ದಾನೆ. ಈತನ ನಂತರ ಕುಮಾರ ಬಂಕನಾಥ, ಜಕ್ಕಣಾರ್ಯ ಎಂಬ ಉಭಯ ಶಿಷ್ಯರು ಗುರುವಿನ ಮಾರ್ಗವನ್ನೇ ಅನುಸರಿಸುವುದನ್ನು ಕಾಣುತ್ತೇವೆ. 'ಏಕೋತ್ತರ ಶತಸ್ಥಲ'ದಲ್ಲಿ ೯೩೨ ವಚನಗಳು, ೧೦೧ ಹಾಡುಗಳು ಇವೆ. ಇಲ್ಲಿಯ ಹಾಡುಗಳನ್ನೇ ಆಯ್ದುಕೊಂಡು ಜಕ್ಕಣಾರ್ಯ "ನೂರೊಂದು ಸ್ಥಲ" ಅಥವಾ "ಸ್ವರ ಏಕೋತ್ತರ ಶತಸ್ಥಲ" ಕೃತಿ ರಚಿಸಿರುವುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಈ ಕೃತಿಯಲ್ಲಿಯ ೪೨೫ ವಚನಗಳನ್ನು ಆಯ್ದುಕೊಂಡು ಅನಾಮಧೇಯನೊಬ್ಬ "**ಏಕೋತ್ತರ ಶತಸ್ಥಲ ಸಾರಾಮೃತ**" ಹೆಸರಿನಲ್ಲಿ ಟೀಕೆ ಬರೆದಿದ್ದಾನೆ. ಪ್ರಸ್ತುತ ಟೀಕಾಕೃತಿಯಲ್ಲಿ ಮಹಾಲಿಂಗದೇವ ಅಳವಡಿಸಿದ ಅಂಗಸ್ಥಲ, ಲಿಂಗಸ್ಥಲಗಳೆಂಬ ಸ್ಥಲ ನಿರ್ದೇಶನದಂತೆ ವಿಭಜಿಸಲಾಗಿದೆ. ಈತನ ಟೀಕಾಕೃತಿಯ ಅಂತ್ಯದಲ್ಲಿ - "ಅಂಗಸ್ಥಲಕ್ಕೆ ವಚನ ೧೯೩ಕ್ಕಂ, ಲಿಂಗಸ್ಥಲಕ್ಕೆ ವಚನ ೨೩೨ಕ್ಕಂ, ಅಂತು ಉಭಯ ವಚನ ೪೨೫ಕ್ಕಂ ಏಕೋತ್ತರ ಶತಸ್ಥಲ ಸಾರಾಮೃತ" ಸಮಸ್ತ ಮಂಗಳ ಮಹಾ ಶ್ರೀ ಶ್ರೀ ಶ್ರೀ - ಎಂದು ಬರೆದಿರುವುದೇ ಸಾಕ್ಷಿ ಎನ್ನಬಹುದು.

ಈ ಟೀಕಾ ಕೃತಿಯು ಪ್ರಥಮದಲ್ಲಿ ಪಿಂಡಸ್ಥಲವೆಂದು ಪ್ರಾರಂಭವಾಗುತ್ತದೆ. ಕೃತಿಯ ಆರಂಭ ಮತ್ತು ಅಂತ್ಯದಲ್ಲಿ ಟೀಕಾಕಾರನ ಇಲ್ಲವೇ ಲಿಪಿಕಾರನ ವೈಯಕ್ತಿಕ ವಿಷಯಗಳು ಬರುವುದಿಲ್ಲ. ಹೀಗಾಗಿ ಅನಾಮಧೇಯ ಬರೆದ ಟೀಕಾಕೃತಿ ಎಂದು ವಿದ್ವಾಂಸರು ಹೆಸರಿಸಿದ್ದಾರೆ. ಆದರೆ ಮಹಾಲಿಂಗದೇವನೆ ತನ್ನ ಕೃತಿಯನ್ನಾಧರಿಸಿ ಟೀಕೆ ಬರೆದಿರಬಹುದೆಂಬ ಊಹೆ ಮಾಡಿದರೆ ತಪ್ಪಾಗಲಿಕ್ಕಿಲ್ಲ. ಡಾ. ಎಫ್.ಟಿ. ಹಳ್ಳಿಕೇರಿಯವರು - ''......... ಸ್ಥಲಕಟ್ಟು ಸಾಹಿತ್ಯ ರಚನೆಗೆ ಈತ ಮೊದಲಿಗನಾದಂತೆ ಪ್ರಭುದೇವರ ವಚನಗಳಿಗೆ ಟೀಕೆ ಬರೆದು ವೀರಶೈವ ಟೀಕಾ ಸಾಹಿತ್ಯಕ್ಕೆ ಶ್ರೀಕಾರ ಹಾಕಿದ್ದಾನೆಂಬ........[೨೮೩] ಅಭಿಪ್ರಾಯದಿಂದ ಈ ಕೃತಿಗೂ ಈತನೇ ಟೀಕೆ ಬರೆದಿರಬಹುದಾದ ಸಾಧ್ಯತೆಗಳಿವೆ ಎನ್ನಬಹುದು.

ಧಾರವಾಡ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರದ ತಾಳೆಗರಿ ಸಂಖ್ಯೆ ೭೬/೨ನ್ನು ಪರಿಶೀಲಿಸಿದ ಡಾ.ಎಸ್.ಎಸ್.ಭಗವತಿ, ಡಾ.ಎಚ್.ಎಸ್. ಮೇಲಿನಮನಿ ಅವರು 'ಏಕೋತ್ತರಶತಸ್ಥಲಸಾರಾಮೃತ ಟೀಕೆ'ಯ ವ್ಯಾಖ್ಯಾನದ ಮಾದರಿ ಕುರಿತು- ''.......ಪ್ರತಿಯೊಂದು ಪದಕ್ಕೆ ಅರ್ಥ ಬರೆಯದೇ, ಒಂದೊಂದು ವಾಕ್ಯದ ಭಾಗವನ್ನು ಮಾತ್ರ ವಿವರಿಸಿದ್ದಾನೆ. ಮಹಾಲಿಂಗದೇವ ಸಂಕಲಿಸಿದ ಏಕೋತ್ತರ ಶತಸ್ಥಲದ ಎಲ್ಲ ವಚನಗಳಿಗೂ ಈತ ಟೀಕು ಬರೆಯಲು ಹೋಗಿಲ್ಲ. ಇದಕ್ಕೆ ಕಾರಣವು ತಿಳಿಯುವುದಿಲ್ಲ. ಆದರೆ, ಟೀಕಾಕಾರ ಆಯ್ದುಕೊಂಡ ವಚನಗಳು ಮಾತ್ರ ಬಹಳ ಅರ್ಥವತ್ತಾದವುಗಳಾಗಿವೆ. ಅವು ಆಧ್ಯಾತ್ಮಿಕ ದೃಷ್ಟಿಯಿಂದ ಬಹು ಮೌಲ್ಯಯುತವಾಗಿವೆ''[೨೮೪] ಎಂದು ಅಭಿಪ್ರಾಯಪಟ್ಟಿದ್ದಾರೆ.

ಪ್ರಸ್ತುತ ಟೀಕಾಕಾರ ಕೆಲವು ವಚನಗಳಿಗೆ ಸಂಕ್ಷಿಪ್ತವಾದ, ಇನ್ನು ಕೆಲವಕ್ಕೆ ಸುದೀರ್ಘವಾದ ಟೀಕೆ ಬರೆದಿದ್ದಾನೆ. ಕೆಲವೊಮ್ಮೆ ಸರಳವಾದ ವಚನಗಳಿಗೆ ಗಹನವಾದ ತಾತ್ವಿಕಾರ್ಥ ಬರೆದು ಪಾಂಡಿತ್ಯ ಪ್ರದರ್ಶನ ಮಾಡಿದಂತಿದೆ. ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ಸಾರರೂಪದ ಸಂಕ್ಷಿಪ್ತ ಟೀಕೆಗೆ ಉದಾಹರಣೆ

**ವಚನ:** ಕಲ್ಲೊಳಗಣ ಕಿಚ್ಚು ಉರಿಯಬಲ್ಲದೆ?
ಬೀಜದೊಳಗಣ ವೃಕ್ಷ ಉಲಿಯಬಲ್ಲದೆ/
ತೋರಲಿಲ್ಲಾರಿಗೆಯೂ, ಗೂಹೇಶ್ವರನಿಂದ ನಿಲವ ಅನುಭಾವಸುಖಿಬಲ್ಲ

**ಟೀಕು:** ''ಶಿಲೆಯೊಳಗಿಪ್ಪಗ್ನಿ ಸ್ಫುರಿಸದಂತೆ ಪರಬ್ರಹ್ಮವು ಪಿಂಡಸ್ಥಲವಾಗಿ ಆ ಪಿಂಡದಿಂದ ವ್ಯತಿರಿಕ್ತವಾಗಿ ತೋರಲರಿಯದೆಂಬುದೀಗ ಕಲ್ಲೊಳಗಣ ಕಿಚ್ಚು ಉರಿಯಬಲ್ಲುದೆಯೆಂಬುದಕ್ಕರ್ಥ| ಬೀಜದೊಳಡಗಿಪ್ಪ ವೃಕ್ಷದಂತೆ ಆ ಪರಬ್ರಹ್ಮವು ಪಿಂಡಸ್ಥಲವಾಗಿರ್ದು ಮೈದೋರದಿಪ್ಪುದೀಗ ಬೀಜದೊಳಗಣ ವೃಕ್ಷಉಲಿಯಬಲ್ಲುದೆ ಯೆಂಬುದಕ್ಕರ್ಥ| ಇಂತಪ್ಪ ಪರಬ್ರಹ್ಮವು ತಾನೊಂದಕ್ಕೆಯು ತೋರಲಿಲ್ಲಾಗಿ ಬೀರಲಿಲ್ಲಾರಿಗೆಯುಯೆಂಬುದಕ್ಕರ್ಥ| ಈ ನಿಲವನಾರುಬಲ್ಲರೆಂದರೆ ಇದೇಹಂ ಎಂಬ ಉಭಯವಳಿದ ಮಹಾನುಭಾವಿಬಲ್ಲನೆಂಬುದೀಗ ಅನುಭಾವಸುಖಿ ಬಲ್ಲನೆಂಬುದಕ್ಕರ್ಥ|".[೨೮೫] ಕೆಲವು ಪದ ಹಾಗೂ ವಾಕ್ಯಗಳನ್ನು ಹಿಮ್ಮೆಟ್ಟಿಸಿ ಬರೆದ ಸಾರರೂಪದ ಟೀಕೆಗೆ ಉದಾಹರಣೆ.

**ವಚನ:-** ಅಯ್ಯಾ, ನೀನು ನಿರಾಳ ನಿರ್ಮಾಯನಾಗಿರ್ಪೆಯಾಗಿ, ಆಕಾಶ, ಪ್ರಕಾಶವಿಲ್ಲದಂದು, ಸಾಕ್ಷಿ ಸಭೆಗಳಿಲ್ಲದಂದು, ಸಚರಾಚರಂಗಳೆಲ್ಲಾ ರಚನೆಗೆ ಬಾರದಂದು, ಆಧಾರದೊಳಗಣ ವಿಭೂತಿಯನೆ ತೆಗೆದು ಭೂಮಿಯ ನೆಲೆಗೊಳಿಸಿ, ಪಂಚಾಶತ್‌ಕೋಟಿ ವಿಸ್ತೀರ್ಣ ಭೂಮಂಡಲಕ್ಕೆ ಸುತ್ತಿ ಹರಿದವು ಸಪ್ತಸಾಗರಂಗಳು. ಎಂಬತ್ತಾರುಕೋಟಿಯು ತೊಂಬತ್ತೇಳುಲಕ್ಷ ಕಾಲಭೂವನಮಂಡಲಕ್ಕೆ ಉದಯ ಬ್ರಹ್ಮಾಂಡವರುವತ್ತಾರು ಕೋಟಿ ತಾರಾಮಂಡಲವೆಂದರೆ, ಬೆಳಗಿ ತೋರದ ಹನ್ನೆರಡು ಜ್ಯೋತಿಯ ನಿಲಿಸಿ ತೋರಿದ ಹದಿನಾಲ್ಕು ಭುವನದ ಈ ಜಗದ ಜಂಗುಳಿಯ ಕಾವಗೋವಳ ತಾನಾಗಿ, ಚೌರಾಸಿಲಕ್ಷ ಜೀವರಾಶಿಗಳಿಗೆ ರಾಸಿವಾಳ ತಾನಾಗಿ, ಸಕಳದ ಅಳಿವಿನ ಉಳಿವಿನ ನಿಂದ ನಿಲವ ನೋಡಿ ಕಂಡೆ ಗೋಹೇಶ್ವರಾ ನಿಮ್ಮ ಶ್ರೀಪಾದಕ್ಕೆ ನಮೋನಮೋ ಎನ್ನುತ್ತಿರ್ದೆನು.

**ಟೀಕೆ:-** ''ನಿರಾಳ ನಿರ್ಮಾಯನಾಗುತ್ತ ಪರಶಿವನು ಪ್ರಕಾಶಿಸದಂದು ನಿಜವಾಗಿದ್ದಿತೆಂಬುದು ಕಾಣಬಂದರ್ಥ| ತನ್ನ ನಿಜವನುಸುರಿಹೆನೆಂದೊಡೆ ತನ್ನಿಂದನ್ಯವಾದರುಯಿಲ್ಲವೆಂಬುದೀಗ ಸಾಕ್ಷಿ ಸಭೆಗಳಿಲ್ಲದಂದುಯೆಂಬುದಕ್ಕರ್ಥ. ಯಿಂತಿವಾವವುಯಿಲ್ಲದಂದು ಜಗತ್ಕೃತಾರ್ಥ ಕಾರಣವಾಗಿ ತನ್ನ ಮಹದಹಂಕಾರಭೂಷಣವಪ್ಪ ಚಿದ್ವಿಭೂತಿಯನು ಆತ್ಮಗತಸ್ಥಾನವೆಂಬಹಿರ್ಗತವ ಮಾಡಲು ಅದೇ ಚಿಚ್ಛಕ್ತಿಸ್ವರೂಪವಾಗಿ 'ಚಿತ್ತಾಯತೇ ಧಾತುಬದ್ದಂ ಶರೀರರಸ್ತಂಯೆನಿಸಿಕೊಂಡಿತ್ತಾಗಿ ಆಧಾರದೊಳಗಣ ವಿಭೂತಿಯೆನೆ ತೆಗೆದು ಭೂಮಿಯ ನೆಲೆಗೊಳಿಸಿದನೆಂಬುದಕ್ಕರ್ಥ.

ಆ ಚಿತ್ತಿನಿಂದ ಪಂಚಸಾದಾಕ್ಯತತ್ವಂಗಳುದೈಸಿದವು| ಆ ಸಾದಾಖ್ಯತತ್ವಂಗಳಿದಪ್ಪ ತನುಗಳುದೈಸಿದವು| ಆ ಸಾದಾಯತತತ್ವಂಗಳಿಂದಪ್ಪ ತನುಗಳುದೈಸಿದವು ಆ ಅಪ್ಪುತನುಗಳಿಂದೆ ಬ್ರಹ್ಮಾಂಡವಾದಿಯಾದ ನಾನಾ ಪ್ರಪಂಚಗಳುದೈಸಿದವೆಂಬುದರೊಳಗೆ ಬುಧರೊಳಗೆ ಬ್ರಹ್ಮಾಂಡವಳಿಯ ಸೂರ್ಯಮಂಡಲ ತಾರಾಮಂಡಲ ಚತುರ್ದಶಭುವನ ಕಾಲಕಲ್ಪಿತ ಪ್ರಮಾಣಗಳೆಲ್ಲವುದೈಸಿದವೆಂಬುದು ಕಾಣಬಂದರ್ಥ|.

ಚೌರಾಸಿಲಕ್ಷ ಜೀವರಾಶಿಗಳಿಗೆ ಆ ಪರವಸ್ತುವೆ ಕರ್ತೃವೆಂಬುದಿದು ಕಾಣಬಂದರ್ಥ. ಇಂತುದೈಸಿದ ಸಮಸ್ತ ಪ್ರಪಂಚಗಳಲ್ಲಿ ಅಡಗಿದವೆಂದರೆ 'ಯದೃಷ್ಟಂ ತನ್ನಷ್ಟಂ' ಎಂಬುದಾಗಿ, ಆ ಮಹಂತಿನೊಳಡಗಿದ್ದವೆಂಬುದೀಗ ಸಕಳದಅಳಿವಿನುಳುವಿನ ನಿಂದನಿಲವೆಂಬುದಕ್ಕರ್ಥ. ಆ ಉಳುಮೆಯನು ಜ್ಞಾನದೀಪ್ತಿಯಿಂದ ಕಂಡೆನೆಂಬುದೀಗ ನೋಡಿಕಂಡೆನೆಂಬುದಕ್ಕರ್ಥ''[೨೮] ಹೀಗೆ, ಕೆಲವೊಮ್ಮೆ ಸಾರರೂಪದಲ್ಲಿ ವ್ಯಾಖ್ಯಾನ ಮಾಡುವ ಟೀಕಾಕಾರನು ಸರಳವಾದ ವಾಕ್ಯಗಳಿಗೆ ಟೀಕೆಬರೆಯದೇ ಕಾಣಬಂದರ್ಥ ಎಂದು ಹೇಳುತ್ತಾನೆ. ಕೆಲವೊಮ್ಮೆ ವಾಕ್ಯದೀರ್ಘವಿದ್ದಾಗ ಅವಕ್ಕೆ ತುಂಬ ಸಂಕ್ಷೇಪದ ವ್ಯಾಖ್ಯೆ ಬರೆದು ವಚನ ಓದುಗರಿಗೆ ಸರಳವಾಗಿ ಅರ್ಥೈಸಿಕೊಳ್ಳಲು ಟೀಕಾಕಾರ ನೆರವಾಗಿದ್ದಾನೆ. ಕೆಲಮೊಮ್ಮೆ ಕಠಿಣ ಪದಗಳಿಗೆ ಅರ್ಥ ವಿವರಣೆಯನ್ನು ನೀಡಿದ್ದಾನೆ.

**ವಚನ:-** ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಸಿರ್ದೆನೋಡಾ| ಹಸೆಯ ಮೇಲಣ ಮಾತ ಬೆಸಗೊಳಲಟ್ಟಿದರೆ, ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮವರು. ಭಸ್ಮವನೆ ಪೂಸಿ, ಕಂಕಣವನೆ ಕಟ್ಟಿದರು ಚೆನ್ನಮಲ್ಲಿಕಾರ್ಜುನ ತನಗೆ ನಾನಾಗಬೇಕೆಂದು.

**ಟೀಕು:-** ''ಹಸೆ ಎಂದರೆ ಸದಾಚಾರ ಸಂಪತ್ತು| ಮಾತು - ಎಂದರೆ ಮಹಾಜ್ಞಾನವೆಂಬುದಕ್ಕರ್ಥ"|[೨೮೭] ಹೀಗೆ, ನೇರ ಅರ್ಥ ಹೇಳುವ ಟೀಕಾಕಾರನು ಮುಂದುವರಿದು ಇಡೀ ವಚನ ವಾಕ್ಯಕ್ಕೆ ಸಾರರೂಪದಲ್ಲಿ ಟೀಕೆ ಬರೆಯುವ ಮೂಲಕ ವಚನದ ಒಟ್ಟು ಅರ್ಥಅರಿಯಲು ನೆರವಾಗುತ್ತಾನೆ. ವಚನವಾಕ್ಯ ಹಿಮ್ಮೆಟ್ಟಿಸಿಬರೆದ ಸಾರರೂಪದ ಟೀಕೆಯನ್ನು ಇಲ್ಲಿ ಗುರುತಿಸಬಹುದು.

**ವಚನ:-** ನಾದದಿಂದಾದ ಸಂಗ ವಿನೋದ ಸಂಗ. ಬಿಂದುವಿನಿಂದಾದ ಸಂಗಬದ್ಧಕ್ರೀ. ತ್ರಿಮೂರ್ತಿಯಿಂದಾದ ಸಂಗ ಶರೀರಸಂಗ. ..............ಕಂದುಕ ಚಂದಗೆಡದ ಮುನ್ನ ಬೇಗ ಮಾಡಿ ತಿಳಿದಿರಾದಡೆ ಬಸವನಂತೆ ಭಾವ, ಬಸವನಂತೆ ಗಮನ, ಬಸವನ ಪದವಿಡಿದರೆ ಇದೆ ಪಥ ಕಾಣಾ ಕೂಡಲಚೆನ್ನ ಸಂಗಮದೇವಾ.

**ಟೀಕು:-** ''ಉಪನಿಷದ್ವಾಕ್ಯಂಗಳಲ್ಲಿ ಹೇಳಲ್ಪಟ್ಟ ವೇದಾಂತಜ್ಞಾನವಿಡಿದು ಆಚರಿಸುವ ವಾಗದ್ವೈತಿಗಳೆಲ್ಲ ದೇಹ ಕರಣ ಇಂದ್ರೀಯ ವಿಷಯಂಗಳು ಮೊದಲಾದ ಮಾಯಾಸಂಗ ಸುಖದೊಡನೆ ಕೂಡಿ ವಿಷಯಾನಂದಿಗಳಾಗಿಪರೆಂಬುದೀಗ ನಾದದಿಂದಾದ ಸಂಗವಿನೋಧ ಸಂಗವೆಂಬುದಕ್ಕರ್ಥ.

ಮಾಂಸಬಿಂದು ರೂಪಾದ ದೇಹವಿಡಿದಾಚರಿಸುವ ದ್ವೈತಭಾವದ ಶೈವಸಿದ್ಧಾಂತಿಗಳೆಲ್ಲರೂ ಭಿನ್ನ ಕ್ರಿಯಾನಾಚರಿಸಿ ಫಲಪದಂಗಳ ಪಡದು ಬದ್ಧ ಜೀವಿಗಳಾದರೆಂಬುದೀಗ ಬಿಂದುವಿನಿಂದಾದ ಸಂಗಬದ್ದ ಕ್ರೀಯೆಂಬುದಕ್ಕರ್ಥ''[೨೮೮]

ಈ ವಚನದಲ್ಲಿ - ''ನಾದದಿಂದಾದ ಸಂಗ ವಿನೋಧ ಸಂಗ ಎಂಬುದನ್ನು ಉಪನಿಷತ್ತಿನ ವಾಕ್ಯಗಳಲ್ಲಿ ಹೇಳಿರುವ ವೇದಾಂತ ಜ್ಞಾನವನ್ನು ಹಿಡಿದು ಆಚರಿಸುವ ವಾಗದ್ವೈತಿಗಳೆಲ್ಲ ದೇಹ, ಕರಣ, ಇಂದ್ರಿಯ ವಿಷಯ ಮೊದಲಾದ ಮಾಯಾಸಂಗ ವಿಷಯದೊಡನೆ ಕೂಡಿ ವಿಷಯಾನಂದಿಗಳಾಗಿದ್ದುದೆ ಎಂದು ಅರ್ಥೈಸಲಾಗಿದೆ. ಹೀಗೆ, ಕೆಲವು ವಚನಗಳಿಗೆ ಸಂಪೂರ್ಣವಾದ ಟೀಕೆ ಬರೆದಿರುವಂತೆ ಇಲ್ಲಿಯ ಕೆಲವು ಪದಗಳಿಗೆ ಅನುಭಾವದ ಅರ್ಥವನ್ನು ಸರಳ ರೀತಿಯಲ್ಲಿ ವಿವರಿಸುವ ಟೀಕಾಕಾರನ ಜಾಣ್ಮೆ ಮೆಚ್ಚುವಂತಹದು.

ಅಲ್ಲದೇ ಆತ್ಮದ ನಿಲುವನ್ನು ಅರ್ಥೈಸುವ ವಚನಕ್ಕೆ ಟೀಕನ್ನು ತುಂಬಾ ಅರ್ಥಪೂಣವಾಗಿ ಬರೆದಿದ್ದು ಹೀಗಿದೆ:

**ವಚನ:-** ''ಆತ್ಮೋಹಂ ಎಂಬರು, ತಾವಾತ್ಮವಿತ್ತುಗಳೆಲ್ಲಾ,
ಆತ್ಮನಂಥವನಿಂಥವನೆಂದು ಕಂಡವರುಂಟೆ ಅಯ್ಯಾ?
ಆತ್ಮಜ್ಞಾತಾಹಂ ಎಂಬುದಕ್ಕೆ ಶ್ರುತಿ ಪ್ರಮಾಣವುಂಟೆ?
ಆತ್ಮವಾಙ್ಮನಕ್ಕಗೋಚರನಯ್ಯಾ ಆತ್ಮ ತತ್ತ್ವಮಸಿ
ವಾಕ್ಯದಿಂದತ್ತತ್ತ, ಆತ್ಮನನಜಿದೆನೆಂಬುದು ಅಜಿಮರುಳಲ್ಲವೆ ಅಯ್ಯಾ?
ಆತ್ಮ ತಾನಾದವಸ್ಥೆ ನೀರ ನೀರ ಕೂಡಿದಂತೆ.

ಆತ್ಮನ ಕಾಬಡೆ, ಕಾಯವಿಡಿದು ಕಾಣಬಹುದೆ ಅಯ್ಯಾ?
ಆತ್ಮ ಪ್ರಾಣೇಶಲಿಂಗ, ಪ್ರಸಾದಕಾಯ, ಆತ್ಮನೆಂಬಾತ
ನಮ್ಮ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರ''

**ಟೀಕು:-** ''ವೇದಾಗಮಶಾಸ್ತ್ರಂಗಳ ಶ್ರುತಿಪ್ರಮಾಣಿಂದ ಬ್ರಹ್ಮೋಹಂ ಎಂದು ನುಡಿವುತ್ತಿಹರು ಅದ್ವೈತ ಜ್ಞಾನಿಗಳೆಂಬುದೀಗ ಆತ್ಮೋಹಂ ಎಂಬರು ತಾವಾತ್ಮವಿತ್ತುಗಳೆಲ್ಲಾ ಎಂಬುದಕ್ಕರ್ಥ! ಅಂತಪ್ಪ ವಾಗದ್ವೈತಿಗಳಿಗೆ ಅಂಗ ಮನಂಗಳಲ್ಲಿ ಪರಬ್ರಹ್ಮನ ಕಂಡು ಅರಿವ ನಿಜಜ್ಞಾನವಿಲ್ಲೆಂಬುದೀಗ ಆತ್ಮನಂತವನಿಂತವನೆಂದು ಕಂಡವರುಂಟೆ ಅಯ್ಯಾ ಎಂಬುದಕ್ಕರ್ಥ! ವೇದಾಗಮಶಾಸ್ತ್ರಂಗಳರಿವಿಂಗೆ ಅಗೋಚರವಾದ ಪರಬ್ರಹ್ಮವು ವಾಗದ್ವೈತಿಗಳಜಿವಿಂಗೆ ಅಸಾಧ್ಯವಾಗಿರ್ಪುದೆಂಬುದೀಗ ಆತ್ಮಜ್ಞಾತೋಹಂ ಎಂಬುದಕ್ಕೆ ಶೃತಿ ಪ್ರಮಾಣವುಂಟೆ ಎಂಬುದರ್ಥ! ಅಂತಪ್ಪ ಪರಬ್ರಹ್ಮವು ಭಿನ್ನ ಜ್ಞಾನಿಗಳ ಮನಭಾವಂಗಳ ಮೀರಿ ತೋರುತ್ತಿಹುದೆಂಬುದೀಗ ಆತ್ಮವಾಙ್ಮನಕ್ಕಗೋಚರನಯ್ಯಾ ಎಂಬುದಕ್ಕರ್ಥ! ಅಂತಪ್ಪ ಪರಬ್ರಹ್ಮವು ವಾಗದ್ವೈತಿಗಳ ತ್ರಿಪುಟಿಜ್ಞಾನಕ್ಕೆ ಅಸಾಧ್ಯವಾಗಿಪ್ಪುದೆಂಬುದೀಗ ಆತ್ಮತತ್ವಮಸಿ ವಾಕ್ಯದಿಂದತ್ತತ್ತಯೆಂಬುದಕ್ಕರ್ಥ! ಅಂತಪ್ಪ ನಿರವಯ ಬ್ರಹ್ಮವ ಶ್ರುತಜ್ಞಾನದಿಂದರಿದೆನೆಂಬುವರೆಲ್ಲಾ ಅಜ್ಞಾನಿಗಳೆಂಬುದೀಗ ಆತ್ಮನನರಿದೆನೆಂಬವನರೆಮರುಳಲ್ಲವೆ ಅಯ್ಯಾ ಎಂಬುದಕ್ಕರ್ಥ. ಅಂತಪ್ಪ ಭಿನ್ನಜ್ಞಾನವಳಿದು ಸಮ್ಯಜ್ಞಾನಿಯಾದ ಶರಣ ತೂರ್ಯಾವಸ್ಥೆಯಿಂದ ಲಿಂಗದಲ್ಲಿ ಬೆರದು ಲಿಂಗವೆಯಾಗಿರ್ಪನೆಂಬುದೀಗ ಆತ್ಮ ತಾನಾದವಸ್ಥೆ, ನೀರು ನೀರು ಕೂಡಿದಂತೆ ಎಂಬುದಕ್ಕರ್ಥ! ಅಂತಪ್ಪ ಪರಬ್ರಹ್ಮವು ಜಡದೇಹಿಗಳರಿವಿಂಗೆ ಸಾಧ್ಯವಲ್ಲವೆಂಬುದೀಗ ಆತ್ಮನ ಕಾಯವಿಡಿದು ಕಾಣಬಹುದೆ ಅಯ್ಯಾ ಎಂಬುದಕ್ಕರ್ಥ! ಸಮ್ಯಜ್ಞಾನಿಯಾದ ಶರಣನತನುಮನಂಗಳಿಗೆ ಲಿಂಗಕರ್ತೃವೆಂಬುದೀಗ ಆತ್ಮ ಪ್ರಾಣೇಶ ಲಿಂಗಪ್ರಸಾದ ಕಾಯವೆಂಬುದಕ್ಕರ್ಥ! ಅಂತಪ್ಪ ಲಿಂಗಸಂಗಿಯಾದ ಶರಣನೆ ಪರವಸ್ತುವೆಂಬುದೀಗ ಆತ್ಮನೆಂಬಾತ ನಮ್ಮ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರ ಎಂಬುದಕ್ಕರ್ಥ!''[೨೮] ಎಂದು ವಾಕ್ಯ ಹಿಮ್ಮೆಟ್ಟಿಸಿ ಬರೆದ ಸಾರಾರ್ಥ ಟೀಕೆ ಓದುಗರ ಗಮನ ಸೆಳೆಯುವಂತಿದೆ.

**ii. ಜಕ್ಕಣಾರ್ಯರ ಸ್ವರ ಏಕೋತ್ತರ ಶತಸ್ಥಲ ಟೀಕೆ:**

ಕನ್ನಡದಲ್ಲಿ ಶೂನ್ಯಸಂಪಾದನೆಗಳಂತೆ ಏಕೋತ್ತರಶತಸ್ಥಲ ಪೀಳಿಗೆ ವ್ಯಾಪಕವಾಗಿ ಬೆಳೆದಿದೆ. ಆದರೆ, ಈ ಬಗೆಗೆ ವ್ಯಾಪಕವಾದ ಅಧ್ಯಯನ ಮಾತ್ರ ನಡೆದಿಲ್ಲ. ೧೨ನೇ ಶತಮಾನದಲ್ಲಿ ತುಂಬಾ ಹುಲುಸಾಗಿ ಬೆಳೆದ ವಚನ ಸಾಹಿತ್ಯ ೧೩-೧೪ನೇ ಶತಮಾನದ ವೇಳೆಗೆ ಸಮಕಾಲೀನ ವಿಪ್ಲವಗಳಿಂದಾಗಿ ಸಾಹಿತ್ಯ ರಕ್ಷಣೆ ಹಾಗೂ ಪುನರುಜ್ಜೀವನದ ಸವಾಲುಗಳನ್ನು ಎದುರಿಸಬೇಕಾಯಿತು. ಇಂತಹ ಪರಿಸ್ಥಿತಿಯಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಯಿತಲ್ಲದೇ, ಪ್ರೌಢದೇವರಾಯನಂತಹ ಸಾಂಸ್ಕೃತಿಕ ಕಾಳಜಿಯುಳ್ಳ ಅರಸನ ಪ್ರೋತ್ಸಾಹದಿಂದಾಗಿ ದ್ವಿತೀಯ ಘಟ್ಟದ ವಚನ ಚಳುವಳಿಗೆ ಉತ್ತೇಜನ ಲಭಿಸಿತು.

ಹೀಗೆ ಪ್ರೌಢದೇವರಾಯನ ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ಕಾಳಜಿಗಳಿಗೆ ಹಿನ್ನೆಲೆಯಾಗಿದ್ದುಕೊಂಡು ಶ್ರದ್ಧೆಯಿಂದ ಕಾರ್ಯ ಮಾಡಿದವರೆಂದರೆ ಆಸ್ಥಾನದಲ್ಲಿ ದಂಡಾಧಿಕಾರಿಯಾಗಿದ್ದ ಜಕ್ಕಣಾರ್ಯರು.

'ಭಕ್ತಿ ಭಂಡಾರಿ' ಎಂದೇ ಹೆಸರಾಗಿದ್ದ ಈತನಿಗೆ ಜಕ್ಕಣ್ಣ, ಜಕ್ಕಪ್ಪ, ಜಕ್ಕಣಾಚಾರ್ಯ ಎಂದು ಕರೆಯಲಾಗಿದೆ. ಶಿಷ್ಯ ಜಕ್ಕಣ್ಣನ ಭಿನ್ನಹದ ಮೇರೆಗೆ ಗುರುವಿನ ಗುರುವಾದ ಮಹಾಲಿಂಗದೇವನು ಏಕೋತ್ತರಶತಸ್ಥಲವನ್ನು ಬೋಧಿಸಿದನು. ಹೀಗೆ, ಗುರುಮುಖದಿಂದ ಆಲಿಸಿದ ಏಕೋತ್ತರ ಶತಸ್ಥಲಕ್ಕೆ ''ಸೂತ್ರಗಳನ್ನು ಇಟ್ಟು ರಮಣೀಯವಾಗಿ ವರ್ಣಕ ವಸ್ತುಕಗಳಿಂದ ಜಕ್ಕಣ್ಣನು ವ್ಯಾಖ್ಯಾನ ಮಾಡಿದ''ನೆಂದು ಪ್ರೌಢದೇವರಾಯನ ಕಾವ್ಯ (೧-೧೪)ದಿಂದ ತಿಳಿಯುತ್ತದೆ. ಅಲ್ಲದೆ, ಪ್ರೌಢದೇವರಾಯನ ಕಾಲದಲ್ಲಿದ್ದ ನೂರೊಂದು ವಿರಕ್ತರಲ್ಲಿ ಜಕ್ಕಣ್ಣನು ಒಬ್ಬನಾಗಿದ್ದನೆಂಬುದು 'ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ'ದಿಂದ ತಿಳಿದುಬರುತ್ತದೆ.

ಏಕೋತ್ತರ ಶತಸ್ಥಲ ಸಂಕಲನಕಾರ ಗುರು ಮಹಾಲಿಂಗದೇವನನ್ನು ಮಾದರಿಯಾಗಿಟ್ಟುಕೊಂಡ ಜಕ್ಕಣ್ಣನು ಆತನಂತೆ ವಚನಗಳನ್ನು ಬಳಸದೇ ಹಾಡುಗಳನ್ನು ತೆಗೆದುಕೊಂಡು, ಒಂದೊಂದು ಹಾಡನ್ನು ಒಂದೊಂದು ಸ್ಥಲಕ್ಕೆ ಮೀಸಲಾಗಿಸಿದ್ದಾನೆ. ಆ ಸ್ಥಲದ ಲಕ್ಷಣ ತಿಳಿಸಲು ಸೂತ್ರವನ್ನು ಕೊಟ್ಟು, ಷಟ್‌ಸ್ಥಲ ಸಿದ್ಧಾಂತವನ್ನು ಅರ್ಥಪೂರ್ಣವಾಗಿ ಪ್ರತಿಪಾದಿಸಲು ಜಕ್ಕಣ್ಣನು ಪ್ರಯತ್ನಿಸಿದ್ದಾನೆ.

''ಈ ಗ್ರಂಥದಲ್ಲಿ ಸಂಗ್ರಹಗೊಂಡಿರುವ ಹಾಡುಗಳನ್ನು ಒಂದು ಓಲೆಪ್ರತಿಯಲ್ಲಿ 'ಸ್ವರಪದ' ಎಂದೂ ಮತ್ತು 'ಏಕೋತ್ತರ ಶತಸ್ಥಲ'ವನ್ನು 'ಏಕೋತ್ತರ ಶತಸ್ಥಲ ಸ್ವರವಚನ' ಎಂದೂ ಕರೆದಿರುವದರಿಂದ, ಶರಣರ ವಚನಗಳನ್ನಾಗಲಿ, ಹಾಡುಗಳನ್ನಾಗಲಿ 'ವಚನ' ಎಂಬ ಮಾತಿನಿಂದ ವ್ಯವಹರಿಸುವ ಸಂಪ್ರದಾಯವಿತ್ತೆಂದೂ ಆ ವಚನ ಎಂಬ ಪದದಿಂದ ಗಮ್ಯವಾಗುವ ಹಾಡುಗಳನ್ನು 'ಸ್ವರವಚನ', 'ಸ್ವರಪದ' ಎಂದು ವ್ಯವಹರಿಸುವ ರೂಢಿಯಿತ್ತೆಂದೂ ತಿಳಿಯುವುದು.........''[೨೦]

ಈ ಹಿನ್ನೆಲೆಯಲ್ಲಿ ನೂರೊಂದು ಸ್ಥಲ ಇಲ್ಲವೇ ಏಕೋತ್ತರಶತಸ್ಥಲಗಳ ದರ್ಶನ ಆದ್ಯವಚನಕಾರ 'ದೇವರ ದಾಸಿಮಯ್ಯ'ನವರ................'' ಒಂದಂಗದೊಳಡಗಿದ ನೂರೊಂದರ ಪರಿ ರಾಮನಾಥ'' ಎಂದು ಹೇಳಿರುವುದರಿಂದ ಹಾಗೂ ಚೆನ್ನಬಸವಣ್ಣನವರು ''ವಚನೈಕೋತ್ತರಶತಸ್ಥಲ''ವೆಂಬ ಕೃತಿ ರಚಿಸಿರುವುದರಿಂದ ವಚನಕಾರರೇ 'ನೂರೊಂದು ಸ್ಥಲ'ಗಳನ್ನು ಕಂಡುಕೊಂಡ ದಾರ್ಶನಿಕರೆನ್ನಬಹುದು.

ಅದೇ ರೀತಿ 'ಸ್ವರವಚನ'ಗಳೆಂದು ಕರೆಯಲ್ಪಡುವ ರಾಗ-ತಾಳ-ಲಯಬದ್ಧವಾದ 'ಹಾಡು'ಗಳನ್ನು ಕೂಡಾ ವಚನಕಾರರು ಬಳಕೆಗೆ ತಂದರೆನ್ನಬಹುದು. ಉದಾಹರಣೆಗೆ-

ಬಸವಣ್ಣನವರ - ''ಕೂಡಲಸಂಗಮದೇವಾ ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ''. ನೀಲಲೋಚನೆಯ - ''ನೋಡು ನೋಡು ಲಿಂಗವೇ''. ಚನ್ನಬಸವಣ್ಣನವರ ಪದಮಂತ್ರಗೋಪ್ಯ (ಸ್ವತಂತ್ರ ಸ್ವರ ವಚನ ಕೃತಿ); ಹರಿಹರನ ರಗಳೆಗಳಲ್ಲಿ - ''ಆಗಳಾಗಳಿನ ಸಂಗತಿಗೆ ಗೀತಂಗಳಂ ಪಾಡುತ್ತಂ'' - ಹೀಗೆ ಸಿದ್ಧರಾಮ, ಅಕ್ಕಮಹಾದೇವಿ ಅಲ್ಲಮಪ್ರಭು, ಸೊಡ್ಡಳ ಬಾಚರಸ ಮತ್ತಿತರ ವಚನಕಾರರು ಸ್ವರವಚನ - ಸಾಹಿತ್ಯಕ್ಕೆ ಪ್ರೇರಕರಾಗಿದ್ದರೆಂಬುದನ್ನು ಮೇಲಿನ ಅಂಶಗಳು ಖಚಿತಪಡಿಸುತ್ತವೆ.

ಒಟ್ಟಿನಲ್ಲಿ, ವಚನಸಾಹಿತ್ಯ ಸಂಕಲನ, ವ್ಯಾಖ್ಯಾನ ಪರಂಪರೆಯು ಆರಂಭವಾಗುವ ಮೊದಲೇ 'ಏಕೋತ್ತರಶತಸ್ಥಲ' (ನೂರೊಂದು ಸ್ಥಲ) ಹಾಗೂ 'ಸ್ವರವಚನ' ಸಾಹಿತ್ಯ ಪರಂಪರೆಯು ಮೊದಲ

ಘಟ್ಟದ ವಚನಕಾರರಿಂದ ಆರಂಭಗೊಂಡಿತ್ತು. ಆದರೆ, ಮಹಾಲಿಂಗದೇವ, ಕುಮಾರ ಬಂಕನಾಥ, ಜಕ್ಕಣಾರ್ಯ ಮತ್ತಿತರರು ಶರಣಧರ್ಮದ ತಾತ್ವಿಕ ಸಿದ್ಧಾಂತವನ್ನು ಘಟ್ಟಿಗೊಳಿಸುವುದರ ಜೊತೆಜೊತೆಗೆ ಆ ತತ್ವಗಳನ್ನು ಜನಸಾಮಾನ್ಯರಿಗೆ ರುಚಿಸುವಂತೆ ಮಾಡಲು, ಅರ್ಥೈಸಲು ಸ್ವರ ಏಕೋತ್ತರ ಶತಸ್ಥಲ ಸಂಕಲನಗಳನ್ನು, ಅವಕ್ಕೆ ವ್ಯಾಖ್ಯಾನಗಳನ್ನು ಬರೆಯುವ ಪ್ರಾಮಾಣಿಕ ಪ್ರಯತ್ನ ಮಾಡಿದರು. ಈ ದಿಶೆಯಲ್ಲಿ ಜಕ್ಕಾಣಾರ್ಯರ ಪ್ರಯತ್ನ ಶ್ಲಾಘನೀಯವಾದುದು.

ಜಕ್ಕಣಾರ್ಯರ ಏಕೋತ್ತರಶತಸ್ಥಲಕ್ಕೆ ಮೂರು ವಿಧದ ಟೀಕೆಗಳು ಲಭ್ಯವಾಗಿವೆ. ಮೈಸೂರು ವಿಶ್ವವಿದ್ಯಾಲಯದ ಹಸ್ತಪ್ರತಿ ಕೆ.೬೬೦/೫ ರಲ್ಲಿ ಮರಿಬಸವಲಿಂಗದೇವರು ಟೀಕೆಯನ್ನು ರಚಿಸಿದ್ದಾರೆಂದು ಉಲ್ಲೇಖಿಸಲಾಗಿದೆ. ಉಳಿದ ಎರಡು ಹಸ್ತಪ್ರತಿಯ ಟೀಕಾಕೃತಿಗಳು ಅನಾಮಧೇಯವಾಗಿ ಲಭಿಸಿವೆ.

ಡಾ. ಬಿ.ವಿ. ಶಿರೂರ ಅವರು ಈ ಟೀಕಾಕೃತಿಗಳಿಗೆ **ಅಬಕ** ಸಂಕೇತ ಕೊಟ್ಟಿದ್ದು ಅವು ಕೆಳಗಿನಂತಿವೆ.[೨೯೧]

ಅ. ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಪೀಠದ ತಾಪ್ರ ೨೬, ಕಾಪ್ರ ೨೬೬ ಮತ್ತು ಮೈಸೂರು ವಿಶ್ವವಿದ್ಯಾಲಯದ ಹಸ್ತಪ್ರತಿ ಸೂಚಿ (೫)ಯ ೨೭೯ (ಕೆ.೧೫೬೧/೬), ೨೭೭ (ಕೆ. ೧೨೦೩/೧) ನೆಯ ಪ್ರತಿಗಳು ಒಂದೇ ವಿಧದ ಟೀಕೆಯನ್ನೊಳಗೊಂಡಿವೆ.

ಬ. ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಪೀಠದ ತಾಪ್ರ ೫೮೯, ೫೮೫, ೭೭೧, ೨೮೪೬; ಕಾಪ್ರ ೩೫೫೯ ಮತ್ತು ಮೈಸೂರು ವಿಶ್ವವಿದ್ಯಾಲಯದ ಹಸ್ತಪ್ರತಿಸೂಚಿ (೧) ನಂ.೧೭೪ (ಕೆ.೧೮೮/೧೧).

ಕ. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠದ ಕಾಗದ ಪ್ರತಿ ೨೬೭ರಲ್ಲಿಯು ಏಕೋತ್ತರ ಶತಸ್ಥಲಕ್ಕೆ ಟೀಕೆ ಬರೆಯಲಾಗಿದೆ.

''ಸ್ವರ ಏಕೋತ್ತರ ಶತಸ್ಥಲಕ್ಕೆ ಸಿಗುವ ಮೂರು ಟೀಕೆಗಳಲ್ಲಿ ಒಂದನ್ನು ಮರಿಬಸವಲಿಂಗ ರಚಿಸಿದ್ದು ಮಿಕ್ಕ ಅನಾಮಧೇಯ ಟೀಕೆಗಳಲ್ಲಿ ಒಂದು ಟೀಕೆಯನ್ನು ಬಹುಶಃ ಜಕ್ಕಣಾರ್ಯ ಬರೆದಿರುವನೆಂದು ಭಾವಿಸುವ ಮೂಲಕ ಒಂದಿಷ್ಟು ವಿಶೇಷತೆಯನ್ನು ಆರೋಪಿಸಿ, ಈತನು ಟೀಕಾಯುಕ್ತ ಸ್ವರ ಏಕೋತ್ತರ ಶತಸ್ಥಲ ಬರೆದಿರುವನೆಂದೂ''[೨೯೨] ಇಮ್ಮಡಿ ಶಿವಬಸವ ಸ್ವಾಮಿಗಳು ಹೇಳುತ್ತಾರೆ.

ಪ್ರೊ. ಸಿ. ಮಹಾದೇವಪ್ಪ ಅವರು ಮಹಲಿಂಗದೇವನ ಏಕೋತ್ತರ ಶತಸ್ಥಲದ ೫೫೦ ವಚನಗಳಿಗೆ (ಪದಗಳಿಗೆ) ಜಕ್ಕಣಾರ್ಯರು ಟೀಕೆ ಬರೆದಿರುವರೆಂಬ ಸಂಗತಿಯನ್ನು Research Corner Series No. 2 ಗ್ರಂಥದಲ್ಲಿ ಉಲ್ಲೇಖಿಸುತ್ತಾರೆ."[೨೯೩]

ಈ ಹಿನ್ನೆಲೆಯಲ್ಲಿ 'ಏಕೋತ್ತರ ಶತಸ್ಥಲ ಸಾರಾಮೃತ' ಸಂಕಲನವನ್ನು ಮಹಾಲಿಂಗದೇವ ರೂಪಿಸಿದರೆ ಅಲ್ಲಿಯ ವಚನಗಳನ್ನು ಬಿಟ್ಟು ಉಳಿದ ಸೂತ್ರ - ಸ್ವರವಚನಗಳನ್ನು (ಒಟ್ಟು ೫೫೦ ಪದಗಳಿವೆ. ಟೀಕೆ ಇದೆ) ಜಕ್ಕಣಾರ್ಯನು ಸಂಗ್ರಹಿಸಿ ಅವಕ್ಕೆ ಟೀಕೆಯನ್ನು ಬರೆದಿರಬಹುದಾಗಿದೆ.

ಏಕೆಂದರೆ, ಕನ್ನಡದಂತೆ ಸಂಸ್ಕೃತಭಾಷೆಯಲ್ಲೂ ಪಂಡಿತರಾಗಿದ್ದ ಜಕ್ಕಣಾರ್ಯರು "ಏಕೋತ್ತರ ಶತಸ್ಥಲೀ" ಸಂಸ್ಕೃತ ಟೀಕಾ ಕೃತಿಯನ್ನು ರಚಿಸಿದ್ದಾರೆ. ಇದಕ್ಕೆ ಶ್ರೀ ಗಿರೀಂದ್ರರು ಕನ್ನಡ ಟೀಕೆ ಬರೆದಿದ್ದಾರೆ. ಇದಕ್ಕೆ ಕಾರಣ ಏಕೋತ್ತರ ಶತಸ್ಥಲೀ ಸಿದ್ಧಾಂತಕ್ಕೆ "ರಾಷ್ಟ್ರವ್ಯಾಪ್ತಿ ಪ್ರಸಿದ್ಧಿ ಸಿಗಲೆಂಬ ಉದ್ದೇಶ............"[೨೪] ಜಕ್ಕಣಾರ್ಯನದಾಗಿತ್ತು ಎಂಬ ಅಭಿಪ್ರಾಯವನ್ನು ಸಂದೇಹಗಳಿಲ್ಲದೇ ಸ್ವೀಕರಿಸಬೇಕಾಗುತ್ತದೆ.

**ಟೀಕಾ ಸ್ವರೂಪ:**

ಜಕ್ಕಣಾರ್ಯರ ಈ ಕೃತಿಗೆ ಮೂರುವಿಧವಾದ ಟೀಕೆಗಳು ಲಬಿಸಿವೆ. ಈ ಮೂರು ಟೀಕೆಗಳನ್ನು ಪರಿಶೀಲಿಸದ ವಿದ್ವಾಂಸರಾದ ಡಾ. ಬಿ.ವಿ. ಶಿರೂರ ಅವರು 'ಕ' ಸಂಕೇತದ ಕನ್ನಡ ಅಧ್ಯಯನ ಪೀಠದ ಕಾಗದ ಪ್ರತಿ ೨೬೦ನ್ನು ಅಂದರೆ ಈ ಹಸ್ತಪ್ರತಿ ಶುದ್ಧ ಮತ್ತು ಸಮಗ್ರವಾಗಿದೆ ಎಂದು ಟೀಕಾಕೃತಿ ಸಂಪಾದನೆಗೆ ಮೂಲವಾಗಿಟ್ಟುಕೊಂಡಿದ್ದಾರೆ. ಇದನ್ನು ಆಧಾರವಾಗಿಟ್ಟುಕೊಂಡು ಕೃತಿಯ ಟೀಕಾಸ್ವರೂಪವನ್ನು ಗಮನಿಸಲಾಗುವುದು.

೧. ಪ್ರತಿ ಸ್ಥಲದ ಆರಂಭದಲ್ಲಿ ಸೂತ್ರವಿದ್ದು ಆ ಸ್ಥಲದ ನಿರ್ದೇಶನವನ್ನು ತಿಳಿಸುತ್ತದೆ. ಅಲ್ಲದೇ ಟೀಕಾಕಾರ ಸರಳವಾಗಿ ಅರ್ಥವಾಗುವ ಗದ್ಯವನ್ನು ಇಲ್ಲಿ ಬಳಸುತ್ತಾನೆ. ಉದಾಹರಣೆಗೆ -

**ಸಂಸಾರಹೇಯ ಸ್ಥಲದ ಸೂತ್ರ** - "ಇಂತು ಪಿಂಡಜ್ಞಾನ ಉದಯವಾದ ಮಹಾ ಮಹಂತನು ನಿತ್ಯಾನಿತ್ಯವಸ್ತುವಿವೇಕವರಿದು, ಅನಿತ್ಯವಾದ ಸಂಸಾರಹೇಯೋಪಾಯಮಂ ಕಂಡು ತಾ ನಿರಸನಮಂ ಮಾಡುತ್ತಿರಲು, ಮುಂದೆ ಸಂಸಾರ ಹೇಯಸ್ಥಲವಾದುದು. ಹೀಗೇ ತುಂಬಾ ಸರಳವಾಗಿರುವ ಸೂತ್ರಕ್ಕೆ ಟೀಕಾಕಾರ ಟೀಕೆಯನ್ನು ಬರೆದಿದ್ದು ಹೀಗಿದೆ:

**ಟೀಕೆ ಸೂತ್ರ** : ಸೂಚನೆಮುಚ್ಯತೆ ಎಂದು, ಹಿಂದಲ ಸ್ಥಲದರ್ಥವನ್ನು ಮುಂದಳ ಸ್ಥಲಕ್ಕೆ ಕೋದ ಮಣಿಗಣಸೂತ್ರದ ಹಾಂಗೆ ಸೂತ್ರ ಹರಕಿಲ್ಲದೆ ಸೂಚಿಸಿಕೊಡಲ್ಪಟ್ಟುದೆ.

**ಇಂತು:** ಈ ಪ್ರಕಾರದಲ್ಲಿ, ಪಿಂಡಜ್ಞಾನೋದಯವಾದ ಮಹಾಮಹಾಂತನು - ಪಿಂಡದಲ್ಲಿ ಜ್ಞಾನೋತ್ಪನ್ನವಾದ ಮಹಿಮನು, ನಿತ್ಯಾನಿತ್ಯವಸ್ತುವಿವೇಕವನ್ನರಿದು - ಜಗತ್ತೋರಿಕೆ ಮಯಾಪ್ರಪಂಚೆಲ್ಲವು ಅನಿತ್ಯವಸ್ತು, ನಿತ್ಯವಸ್ತುವೇ ಶಿವತತ್ವವೆಂಬ ವಿಚಾರವನ್ನು ತಿಳಿದು; ಅನಿತ್ಯವಾದ - ಅಸ್ಥಿರವಾದ, ಸಂಸಾರ - ಧನ ದಾರ ಧರಿತ್ರಿಯೆಂಬ ಸಂಸೃತಿಯ, ಹೇಯೋಪಾಯಂಕಂಡು ಜಿಗುಪ್ಸೆಯ - ತೊಲಗಿಸುವಂಥ ತಂತ್ರಭಾಗಿಯನು ನೋಡಿ, ತಾ ನಿರಸನಮಂ ಮಾಡುತ್ತಿರಲು - ಆ ಜ್ಞಾನಕಲಾತ್ಮನು ತಿರಸ್ಕಾರವ ಮಾಡುತ್ತಿರಲು, ಮುಂದೆ ಸಂಸಾರಹೇಯಸ್ಥಲವಾದುದು.

ಸಂಸಾರಹೇಯಸ್ಥಲ-ರಾಗ; ಧನ್ಯಾಸಿ ತಾಳ: ದರು ಪಲ್ಲವ
ಏವೆ ಸಂಸಾರ ಮಾಯಾಮಯದ ಭಯ ತನುವ
ನಾವರಿಸಿ ನುಂಗುತಿದೆ ನಾನಾ ಭವದ ದುಃಖ
ಧಾವತಿಗೆ ಹೇವರಿಸಿ ಮರೆಹೊಕ್ಕೆ ಮದನಾರಿ ಕಾಯಿ ಕಾರುಣ್ಯನಿಧಿಯೇ

**ಟೀಕು** : ಸಂಸಾರ ಮಾಯಾಮಯದ ಭಯ ತನುವನಾವರಿಸಿ ನುಂಗುತಿದೆ. ಏವೆ - ಸಂಸಾರ - ಹೊನ್ನು ಹೆಣ್ಣು ಮಣ್ಣೆಂಬ ಸಂಸ್ಕೃತಿಯನ್ನುಳ್ಳ **ಮಾಯಾಮಯದ ಭಯ** - ಅವಿದ್ಯಾಸಂಬಂಧವಾದ ಭವರೋಗದ ಭೀತಿಯು, **ತನುವನಾವರಿಸಿ** - ಅಂಗವನು ಮುಸುಕಿ, ನುಂಗುತಿದೆ - ಗೀಳನಂಗೆಯುತಿದೆ, **ಏವೆ** - ಇನ್ನೇನು ಜಪತಪ ಧ್ಯಾನ ಮೌನಕೃತ್ಯೋಪವಾಸ ಕ್ರೀಗಳ ಮಾಡಲೋ ಎಂದು ಜ್ಞಾನಕಲಾತ್ಮನು ಚಿಂತಿಸುತ್ತಿಹನೆಂಬುದರ್ಥ.

ನಾನಾಭವದ - ಹಲವು ಜನ್ಮಂಗಳ, **ದುಃಖದ** - ದುಗುಡದ, **ಧಾವತಿಗೆ**–ವ್ಯತಿಯ ಓಡಾಟಕ್ಕೆ, **ಹೇವರಿಸಿ** -ಜಿಗುಪ್ಸೆವಡೆದು, **ಮರೆಹೊಕ್ಕೆ** - ಶರಣಾಗತನಾದೆನು, **ಮದನಾರಿ** - ಮನ್ಮಥಸಂಹಾರಿಯಾದಂಥ, **ಕಾರುಣ್ಯ ನಿಧಿಯೇ** - ದಯಕ್ಕೆ ಸ್ಥಾನವಾದ ಎಲೇ ಪರಮೇಶ್ವರನೇ, **ಕಾಯಿ** - ಅಂತರಂಗದಲ್ಲಿ ಜ್ಞಾನೋದಯವಿತ್ತು ಬಹಿರಂಗದಲ್ಲಿ ಕ್ರಿಯಾಘನಗುರುವಾಗಿ ಬಂದು ವೇದಮಂತ್ರಕ್ರೀಗಳೆಂಬ ದೀಕ್ಷತ್ರಯವನು ಕರುಣಿಸಿ ಈ ಮಾಯಾಪ್ರಪಂಚೆಲ್ಲವ ಕಳೆದು ನಿನ್ನ ಪಾದೋದಕ ಪ್ರಸಾದವನು ಕೊಟ್ಟು ರಕ್ಷಿಸೂದೆಂಬುದರ್ಥ ||೧||"[೨೯]

ಹೀಗೆ ಟೀಕಾಕಾರನು ಸೂತ್ರ, ಪದ (ಹಾಡು) ಗಳಿಗೂ ಕೂಡಾ ಟೀಕನ್ನು ಬರೆಯುವ ಮೂಲಕ ಕನ್ನಡ ಗದ್ಯ ಸಾಹಿತ್ಯದ ಭಾಷೆ, ಸಮಕಾಲೀನ ಜನರ ಆಶೋತ್ತರಗಳ ಬಗೆಗೆ ತನ್ಮೂಲಕ ಅರಿವನ್ನುಂಟು ಮಾಡಲು ಪರೋಕ್ಷವಾಗಿ ನೆರವಾಗಿದ್ದಾನೆಂದರೆ ತಪ್ಪಾಗದು.

**ಸುದೀರ್ಘವಾದ ಟೀಕೆಗೆ ಉದಾಹರಣೆ:**

**ಪದ** - ಪಂಚಬ್ರಹ್ಮಾತ್ಮಕದಿಂದುದಯವಾದ / ಪಂಚಗವ್ಯ ಗೋಮಯವನು ಆಗಮ ಮತದಿಂದ ದಹಿಸಿ ಸಮಸ್ತ / ಮುನಿಜನಂಗಳು ಧರಿಸುವ ಭಸಿತ

**ಟೀಕು** - ಪಂಚಬ್ರಹ್ಮಾತ್ಮಕದಿಂದುದಯವಾದ ಪಂಚಗವ್ಯ ಗೋಮಯವನು ಸದ್ಯೋದಿ ಪಂಚಬ್ರಹ್ಮರೂಪವಾದ ಪರಮೇಶ್ವರನ ಪಂಚಮುಖಗಳಿಂದ ಪುಟ್ಟಿದ ಕಪಿಲವರ್ಣದ ನಂದೆ, ಕಪ್ಪುವರ್ಣದ ಭದ್ರೆ, ಕೆಂಪುವರ್ಣದ ಸುಮನೆ, ಧವಳವರ್ಣದ ಸುಶೀಲೆ, ಚಿತ್ರವರ್ಣದ ಸುರಭಿಯರೆಂಬ ಐದು ಧೇನುಗಳ ತೊಪ್ಪಿಯನ್ನು, **ಆಗಮಮತದಿಂದ** - ಶಿವಾಗಮಂಗಳ ಮಾರ್ಗದಿಂದೆ ದಹಿಸಿ - ದಹನವ ಮಾಡಿ,

**ಸಮಸ್ತ ಮುನಿಜನಂಗಳು ಧರಿಸುವ ಭಸಿತ** - ಅಗಸ್ತ್ಯ ಕಾಶ್ಯಪ ಭಾರದ್ವಾಜ ಮಾಂಡವ್ಯ ಗೌತಮ ಮೊದಲಾದ ಎಲ್ಲಾ ಮುನಿಜನಂಗಳು ಮಂತ್ರೋದಕ ಸಮ್ಮಿಶ್ರದಿಂ ಕ್ರೀಯಿಟ್ಟು ಮಾಡಿ ಧಾರಣೆಗೈದು ಮುಕ್ತಿಯನೆಯ್ದುವ ಚಿದ್ಭಸಿತವೆಂಬುದರ್ಥ. || ಮತ್ತಂ || ಸಕಲ ಋಷಿಗಳು ಶಿವನ ಕುರಿತು ಜಪತಪ ಆರಾಧನೆಗಳಂ ಮಾಡಿ, ನಂದೆ ಭದ್ರೆ ಸುಮನೆ ಸುಶೀಲೆ ಸುರಭಿ ಎಂಬ ಐದು ಗೋವನು ಪಡೆದು, ಚಿತ್ರಕುಠಾರಣ್ಯ ಭದ್ರಕುಠಾರಣ್ಯ ದಂಡಕಾರಣ್ಯ ಮೂಸುಕಾರಣ್ಯವೆಂಬ ಅರಣ್ಯಂಗಳಲ್ಲಿ ಆಶ್ರಯವ ಮಾಡಿಕೊಂಡು, ಆ ಗೋವುಗಳ ರಕ್ಷಿಸುತ್ತಿದ್ದು ಆ ಗೋವುಗಳು ಗೋಮಯವನ್ನಿಕ್ಕುವಾಗ ನೆಲನ ಸೋಂಕಲಿಯದೇ ಗ್ರಹಣವೆಂದು ಸುವರ್ಣಭಾಜನದಿಂದಾಂತು ಪಿಡಿದುಕೊಂಡು, ಪಿಂಡೀಕರಣವೆಂದು

ಮುದ್ದಿಗಟ್ಟಿ, ಶೋಷಣವೆಂದು ಒಣಗಿಸಿ, ದಹನವೆಂದು ಮಂತ್ರಕ್ರಮದಿಂದಂತರ್ದಹನಗೈದು, ಸೂದನವೆಂದು ಸೋದಿಸಿ, ಬಿಲ್ವ ಶಿಲಾಪಂಚಲೋಹ ಶ್ರೀಕಂಡದ ಕರಂಡಿಗೆಯೋಳುಂಬಿಕೊಂಡು ವಿಶ್ವಾಸಪೂರಕವಾಗಿ ಧರಿಸಿ, ಅನಂತ ಆಯುರಾರೋಗ್ಯ ಕುಲಪರಾಕ್ರಮ ಭೋಗಭಕ್ತಿಗಳಂ ಪಡೆದನುಭವಿಸಿ ಸುಕದಿಂದಿರ್ಪರು. ಇದು ಕಲ್ಪವೆನಿಸುವುದು.

ಪೂರ್ವಪ್ರಕಾರದಲ್ಲಿಯೆ ಸುಕ್ಷೇತ್ರ ವಾಸಂಗಳಲ್ಲಿಯಾಗಲೀ ಅರಣ್ಯಾಶ್ರಮದಲ್ಲಿಯಾಗಲೀ ವಾಳಿವದ ಕುಳಿಗೊಡ್ಡು ಅಪವಿತ್ರ ಪಶುವಲ್ಲದ ಸುಪವಿತ್ರವಾದ ಗೋವನು ಸಲಹಿ ಪೂರ್ವಪ್ರಪಂಚಕ್ರೀಪರಿವಿಡಿಯಲ್ಲಿ ಕ್ರೀ ಯಿಟ್ಟು ಮಾಡಿ ಧರಿಸೂದೇ ಉಪಕಲ್ಪವೆನಿಸೂದು.

ಪೇರಡವಿಯೊಳಾಡಾಕಳು ಹಟ್ಟಿಯ ಜೀವದನಗಳು ಗೋಮಯವನಿಕ್ಕಲು ಅದು ಒಣಗಿ ಬೆರಣಿಯಹುದು. ಅದಕ್ಕೆ ಕಾಡ ಬೇಗೆಯೆದ್ದು ಸುಡಲು ಬೂದಿಯಹುದು. ಆ ಬೂದಿಯನೆ ಗೋಮುತ್ರದಿಂ ಸಮ್ಮಿಶ್ರಂಗೆಯ್ದು ಪುನರಪಿ ಮಂತ್ರೋಕ್ತಕ್ರಮದಿಂ ದಹಿಸಿ ತಮ್ಮಾಧಾರಗಳ ತುಂಬಿಕೊಂಡು ಧರಿಸೂದೆ ಅನುಕಲ್ಪವೆನಿಸೂದು.

ಸಂತೆ ಪೇಟೆ ಬೀದಿ ಬಾಜಾರಂಗಳಲ್ಲಿ ಬಿಲಿತು ಭಕ್ತಾದಿಗಳ ಮುಖದಿಂದ ಬಂದ ಬೂದಿಯನು ಗೋಮುತ್ರದಿಂ ಸಮ್ಮಿಶ್ರಂಗೆಯ್ದು ಪುನರಪಿ ಮಂತ್ರೋಕ್ತಕ್ರಮದಿಂದ ಸೋದಿಸಿ ಕ್ರೀಯಿಟ್ಟು ಆಧಾರವ ತುಂಬಿಕೊಂಡು ದಜಿಸೂದೆ ಅಕಲ್ಪವೆನಿಸೂದು. ಹೀಂಗೆ ದೇವ ದಾನವ ಮಾನವರುಗಳೆಲ್ಲರು ಧರಿಸಿ ಮುಕ್ತಿಯ ಹಡೆದಂಥ ಚಿದ್ಭಸಿತವೆಂಬುದರ್ಥ".೨೯೬

ಹೀಗಿದೆ :

ತುಂಬ ಸರಳವಾದ ಪದಕ್ಕೂ ಟೀಕು ಬರೆದಿದ್ದು

**ಪದ:** ಅಣುಮಾತ್ರ ವಿಭೂತಿಯ ಹಣೆಯೊಳಿಡಲು
ಎಣಿಕೆಯಿಲ್ಲದ ಭವಪಾಶವ ಹರಿವುದು
ತ್ರಿಣಯನೊಲಿದು ಧರಿಸಿದನೆಂದೆನೆ
ಆನು ಧರಿಸಿ ಬದುಕಿದೆನು ಕೂಡಲಸಂಗಯ್ಯ

**ಟೀಕು** - **ಅಣು ಮಾತ್ರ** - ಸೂಕ್ಷ್ಮತರವಾದ, **ವಿಭೂತಿಯು** - ಚಿದ್ವಿಭೂತಿಯನು, **ಹಣೆಯೊಳಿಡಲು** - ಲಲಾಟದಲ್ಲಿ ಧರಿಸಲು, **ಎಣಿಕೆಯಿಲ್ಲದ** - ಗಣನೆಯಿಲ್ಲದ, **ಭವಪಾಶವಂ** - ಜನ್ಮಸಂಸಾರವೆಂಬ ಹಗ್ಗವನು, **ಪರಿವುದು** - ಛೇಧಿಸೂದು, **ತ್ರಿಣಯಂ** - ಮೂರುಲೋಚನವನುಳ್ಳ ಪರಮೇಶ್ವರನು, **ಒಲಿದು** - ಪ್ರೀತಿಯಿಂದ, **ಧರಿಸಿದನೆಂದೆನೆ** - ತಳಿದುಕೊಂಡನೆಂದು ವೇದ ಶಾಸ್ತ್ರಾಗಮ ಪುರಾಣ ಇತಿಹಾಸಾದಿ ನಾನಾ ಶಾಸ್ತ್ರಂಗಳಲ್ಲಿ ಹೇಳಲಾಗಿ, **ಕೂಡಲಸಂಗಯ್ಯ** - ಎಲೆ ಲಿಂಗವೆ, **ಆನು** - ನಿನ್ನಂಶಿಭೂತವಾದ ಶರಣನು, **ಧರಿಸಿ** - ತಳೆದುಕೊಂಡು, **ಬದುಕಿದೆನು** - ಬಾಳುತ್ತಲೆ ನಿಜ ಮೋಕ್ಷರೂಪವಾದೆನೆಂಬುದರ್ಥ"೨೯೭ ಎನ್ನುವಲ್ಲಿ ಸರಳವಾದ ಪದಗಳಿಗೂ ಟೀಕು ಬರೆದಿರುವುದನ್ನು ಗಮನಿಸಬಹುದು.

ಹೀಗೆ, ಸ್ವರ ಏಕೋತ್ತರ ಶತಸ್ಥಲ ಟೀಕೆ ಗ್ರಂಥದಲ್ಲಿ ಟೀಕಾಕಾರನು ಕೇವಲ ಪದಗಳಲ್ಲಿಯ ಶಬ್ಧಗಳಿಗೆ ಮಾತ್ರ ಅರ್ಥ ನೀಡದೇ ಅದಕ್ಕೆ ಪೂರಕವೆನ್ನಬಹುದಾದ ಹಲವಾರು ವಿಷಯಗಳನ್ನು ಪ್ರಸ್ತಾಪಿಸುವ ಮೂಲಕ ತನ್ನ ಪಾಂಡಿತ್ಯದ ಹಿರಿಮೆಯನ್ನು ತೋರಿಸಲು ಪ್ರಯತ್ನಿಸಿದ್ದಾನೆ. ಇನ್ನು ಕೆಲವೊಮ್ಮೆ ನೇರವಾಗಿ, ಸಂಕ್ಷೇಪದಲ್ಲಿ ವ್ಯಾಖ್ಯಾನ ಮಾಡಿದ್ದಾನೆ.

**ವ್ಯಾಖಾನದ ಕೆಲವು ವಿಶೇಷ ಉದಾಹರಣೆಗಳು:** ಅಂಗಸ್ಥಲದಲ್ಲಿ ಬರುವ ವಿಭೂತಿಸ್ಥಲದ ಪುಟ ೩೧ ರಲ್ಲಿಯ ಪದದ ಸಕಲವಶ್ಯ - ಎಂಬುದಕ್ಕೆ ಟೀಕಾಕಾರನು ಈ ರೀತಿ ಹೇಳಿದ್ದಾನೆ.

**ಟೀಕು** ''ಈ ವಿಭೂತಿಯೆ ಸ್ತ್ರೀವಶ್ಯ ರಾಜವಶ್ಯ ಸರ್ವಜನವಶ್ಯ ಮೊದಲಾದ ಸಮಸ್ತ ವಶೀಕರಣಂಗಳಿಗೆ ಮಾಂಗಲ್ಯ ಲಲಾಮಯವಾಗಿಹುದು'' ಎಂದು ವ್ಯಾಖ್ಯಾನಿಸುತ್ತಾನೆ.

**ತ್ರಿಪುಂಡ್ರ** - ಶಕ್ತಿತ್ರಯ, ವೇಧಾತ್ರಯ ಅಕ್ಷರತ್ರಯವೆಂಬ ತ್ರಿಕ್ರಿಯಕ್ಕಾಗಿ ಧರಿಸುವಂಥ ವಿಭೂತಿಯು''[೨೯೮]

ಸಿದ್ಧಿ- ಅಂಜನಾಸಿದ್ದಿ, ಮೂಲಕಸಿದ್ದಿ, ಘಟಿಕಾಸಿದ್ಧಿ, ಕಾಯಸಿದ್ಧಿ, ಜೀವಸಿದ್ಧಿ, ದೂರದೃಷ್ಟಿ, ದೂರಶ್ರವಣ, ಪರಕಾಯ ಪ್ರವೇಶವೆಂಬ ಅಷ್ಟಮಹಾಸಿದ್ಧಿಗಳ ಕಲಿವಲ್ಲಿ ಈ ಪಂಚಾಕ್ಷರಿ ಮಂತ್ರವೇ ಅಧಿಕವು.''[೨೯೯]

**ಗುರು** - ನಕಾರ ಮಕಾರವೇ ಗುರುಸ್ವರೂಪು,

**ದೈವ** - ಶಿಖಾರ ವಕಾರವೇ ಲಿಂಗಸ್ವರೂಪು,

**ತಂದೆ** - ಓಂಕಾರವೆ ತಂದೆ, ತಾಯಿ–ಯಕಾರವೆ ತಾಯಿ,

**ಪೊರೆವ** - ರಕ್ಷಿಸುವ''[೩೦೦]

ಹೀಗೆ 'ನಮಃ ಶಿವಾಯ' ವೆಂಬ ಪಂಚಾಕ್ಷರಿ ಮಂತ್ರದ ವಿಶಿಷ್ಟತೆಯನ್ನು ಇಲ್ಲಿ ಟೀಕಾಕಾರ ಬಿಡಿಬಿಡಿಸಿ ಹೇಳುವುದು ಕಂಡುಬರುತ್ತದೆ.

**ಕುಣಿಕುಣಿದು** - ''ಎಡಗಿವಿಯ ಬಲಗೈಯಲ್ಲಿ ಬಲಗಿವಿಯ ಎಡಗೈಯಲ್ಲಿ ಪಿಡಿದುಕೊಂಡು ಕೋಡಂಗಿಯಾಟವನಾಡಿ

**ಸ್ಥಾವರ** - ಸ್ವಸ್ಥಾನದಲ್ಲಿ ಭಕ್ತಿಗೃಹವ ಕಟ್ಟಿಕೊಂಡು ಸಕಲ ಸಾಮಗ್ರಿ ವಸ್ತುಗಳ ಕೂಡಲಿಕ್ಕಿಕೊಂಡು ವಂಚನೆ ಇಲ್ಲದೆ ನಿರ್ವಂಚನೆಯಿಂದ ಭಕ್ತಿಯ ಮಾಡುವಂಥ ಭಕ್ತ.

**ಜಂಗಮ** - ಆ ಭಕ್ತಿಗೆ ಊನ್ಯವ ತಾರದಂತೆ ಆ ಭಕ್ತ ಮಾಡುವ ಭಕ್ತಿ ಪದಾರ್ಥವನು ಕೈಕೊಂಡು ಮುಕ್ತಿಯನ್ನೈದಿಸುವಂಥ ಚರಮೂರ್ತಿಯ''.[೩೦೧]

ಹೀಗೆ ಟೀಕಾಕಾರನು ಪ್ರಸ್ತುತ ಟೀಕೆಯಲ್ಲಿ 'ಮತ್ತಂ' ಎಂದು ಹೇಳಿ ಇದೇ ಶಬ್ದಗಳಿಗೆ ಬೇರೆ ಅರ್ಥ ನೀಡಿದ್ದು ಹೀಗಿದೆ -

**ಸ್ಥಾವರಂ** - ಗುರುಮುಖದಿಂದಂಗದಲ್ಲಿ ನೆಲೆಗೊಂಡು ಅಷ್ಟವಿದಾರ್ಚನೆ ಷೋಡಶೋಪಚಾರ ಪೂಜಾಕ್ರೀಗಳಿಂ ಕೈಗೊಂಡೊಪ್ಪುವಂಥ ಇಷ್ಟಲಿಂಗದ.

**ಜಂಗಮ** - ಆ ಇಷ್ಟಲಿಂಗದ ಚಿತ್ಕಲೆಯೆ ಅಂತರಂಗದಲ್ಲಿ ನೆಲೆಗೊಂಡು ಮಂತ್ರ ಜ್ಞಾನ ಧ್ಯಾನ ಜಪಸ್ತೋತ್ರ ಪೂಜಾ ಕ್ರಿಗಳಂ ಕೈಕೊಂಡು ಸುಜ್ಞಾನ ಜಂಘಯಿಟ್ಟು ಚರಿಸುವಂಥ ಪ್ರಾಣಲಿಂಗದ (ಪುಟ - ೪೮)

**ಸಪ್ತಸಾಗರಪರಿಯಂತರ** - ಏಳು ಸಮುದ್ರತನಕ ತೀರ್ಥಸ್ನಾನದ ಫಲ, ಗಂಗೆ, ಗೋದಾವರೆ ತುಂಗಭದ್ರೆ ಧನುಸ್ಕೋಟಿ ಕಪಿಲೆ ಕಾವೇರಿ ಮೊದಲಾದ ಅರವತ್ತೆಂಟು ಕೋಟಿ ತೀರ್ಥಂಗಳಿಗೆ ಹೋಗಿ ಸ್ನಾನ ಪಾನಾದಿಗಳಿಂದ ಶುದ್ಧತಿಯ ಮಾಡಿಕೊಂಡ ಫಲವು (ಪುಟ - ೬೧)

ಇಲ್ಲಿ ಕೂಡಾ 'ಮತ್ತಂ' ಎಂದು ಪ್ರತಿಪದಾರ್ಥ ಟೀಕೆ ಬರೆದಿದ್ದಾನೆ.

**ಖ್ಯಾತಿಯ ಲಾಭದ** - ''ಜಾಡರ ದಾಸಮಯ್ಯ ಹನ್ನೆರಡು ವರುಷ ನೇಯ್ದು ದಿವ್ಯಾಂಬರವನು ಕೊಟ್ಟುದೆ ಖ್ಯಾತಿ, ಅದರಿಂದ ತವನಿಧಿ ಪ್ರಸಾದವ ಪಡೆದುದೆ ಲಾಭ, ಸಿಂಧು ಬಲ್ಲಾಳ ತನ್ನ ವಧುಕೊಟ್ಟುದೆ ಖ್ಯಾತಿ, ಅದರಿಂದ ಸ್ವಯಂಲಿಂಗ ಪದವಿಯ ಪಡೆದುದೆ ಲಾಭ. ಸಿರಿಯಾಳ ಶೆಟ್ಟಿ ತನ್ನ ಮಗನ ಕೊಟ್ಟುದೆ ಖ್ಯಾತಿ. ಅದರಿಂದ ಕಂಚಿಯ ಪುರವ ಕೈಲಾಸಕ್ಕೆ ಒಯ್ದುದೆ ಲಾಭ''.[೩೦೨]

**ಜಾತನಲ್ಲ** - ನೂರೊಂದು ಕುಲ ಹದಿನೆಂಟು ಜಾತಿಗಳೊಳಗೊಬ್ಬನಲ್ಲ

**ಅಜಾತ** - ಹುಟ್ಟಿಲ್ಲದಾತ್ಮನು,

**ಜನಿತನಲ್ಲ** - ಶುಕ್ಲಶೋಣಿತಾತ್ಮ ಸಂಗದಿಂದ ಹುಟ್ಟುವಾತನಲ್ಲ.

**ಖೇಚರನಲ್ಲ** - ಆಕಾಶದಲ್ಲಿ ಚರಿಸುವ ಪಕ್ಷಿಗಳೊಳಗೊಬ್ಬಾತನಲ್ಲವೆಂಬ ಹಾಂಗೆ,............. (ಪುಟ - ೧೧೨)

**ಪಂಚಮಹಾಯಜ್ಞಕ್ಕೆ ಸಲುವುದೆ** - ''ಭೂತಬಲಿರೂಪಾದ ಭೂತಯಜ್ಞ, ವೇದಾಧ್ಯಯನ ರೂಪಾದ ಬ್ರಹ್ಮಯಜ್ಞ, ಅಶ್ವಮೇಧರೂಪಾದ ದೇವಯಜ್ಞ, ಪಿತೃತರ್ಪಣರೂಪಾದ ಪಿತೃಯಜ್ಞ, ಅಗ್ನಿಹೋತ್ರರೂಪವಾದ ರಾಜಯಜ್ಞವೆಂಬ ಐದು ಯಜ್ಞಂಗಳಿಗೆ ಯೋಗ್ಯವೇ? ಯೋಗ್ಯವಲ್ಲ.''[೩೦೩]

**ಜಡೆಗಟ್ಟಿ** - ''ಅತ್ತಿಹಾಲ ಆಲದ ಹಾಲನು ಹೊಯಿದು ಬೂದಿಯ ಹಚ್ಚಿ ನಾಯಬಾಲದ ಹಾಂಗೆ ಕತ್ತೆಬಾಲದ ಹಾಂಗೆ ಕೂದಲಗಳ ಬತ್ತಿಯ ಹೊಸಕೊಂಡು.............''[೩೦೪]

**ಪ್ರಮಥರು** - ಬಸವಣ್ಣ ಮೊದಲಾದ ಪೂರ್ವಾಚಾರ್ಯರು (ಪುಟ-೨೨೮)

**ನಿಶಬ್ಧ ಗಂಭೀರ** - ನಿರ್ವಚನ ರಹಸ್ಯವಾದಂಥ;

**ಶಬ್ದ ನಿಶ್ಯಬ್ದವಾಗಿ** - ವಚನ ನಿರ್ವಚನವಾಗಿ;

**ನಿಶ್ಯಬ್ದವನಾಹತವಾಗಿ** - ನಿರ್ವಚನವು ನಿತ್ಯವಾಗಿ,

**ಶಬ್ದನಿಶ್ಯಬ್ದವೆಂಬ ಬುದ್ಧಿಯ ನಿರ್ವಯಲಾಗಿ** - ವಚನ ನಿರ್ವಚನವೆಂಬ ವಿವೇಕವು ನಿಷ್ಪತ್ತಿಯಾಗಿ''[೩೦೫]

ಹೀಗೆ ಜಕ್ಕಣಾರ್ಯರ ಸ್ವರ ಏಕೋತ್ತರ ಶತಸ್ಥಲ ಟೀಕೆಯು ಕನ್ನಡ ಟೀಕಾ ಸಾಹಿತ್ಯದಲ್ಲಿ ತುಂಬಾ ಪ್ರಮುಖವಾದ ಟೀಕಾ ಗ್ರಂಥಗಳಲ್ಲಿ ಒಂದಾಗಿದೆ ಎಂದರೆ ತಪ್ಪಾಗದು. ''ಗದ್ಯಮಾದರಿಯಲ್ಲಿದ್ದ

ವಚನಗಳೆಂಬ ವಸ್ತುಕ ರೂಪಗಳಿಗೆ, ಶುದ್ಧಗೇಯತೆಯ ವರ್ಣಕ ಜಾತಿಗೆ ಸೇರಿದ ಹಾಡುಗಳನ್ನು ನಿರೂಪಿಸುವುದು ಈತನ ನೂರೊಂದು ಸ್ಥಲ ಗ್ರಂಥದ ವಿಶೇಷತೆಯಾಗಿದೆ. ಈ ವಚನಗಳಿಗೆ ಸ್ವರ-ರಾಗ-ತಾಳ ಭಾವಗಳೆಂಬ ನಾಲ್ಕು ಬಂಧಗಳನ್ನು ಬಿಗಿದು ಗೇಯಕೃತಿಗಳನ್ನಾಗಿರಿಸಿ, ಕೀರ್ತನೆಗಳಂತೆ ಪ್ರಚೂರಪಡಿಸಿದ ಹೆಗ್ಗಳಿಕೆ ಜಕ್ಕಣಾರ್ಯನಂಥ ನೂರೊಂದುಸ್ಥಲ ಕೃತಿಗಳಿಗೆ ಲಭಿಸುತ್ತದೆ."[೩೦೬] ಎಂಬ ಡಾ. ಕೆ. ರವೀಂದ್ರನಾಥರ ಅಭಿಪ್ರಾಯ ಪ್ರಸ್ತುತ ಟೀಕಾಕೃತಿಯ ಮಹತ್ವಕ್ಕೆ ಕೈಗನ್ನಡಿಯಂತಿದೆ.

ಜಕ್ಕಣಾರ್ಯರು ಶಿವಶರಣರ ವಚನಗಳನ್ನು ಸ್ವರವಚನಗಳನ್ನಾಗಿ ಸಂಯೋಜಿಸುವಲ್ಲಿ ನಿರ್ವಹಿಸಿದ ಪಾತ್ರ ಪ್ರಮುಖವಾದುದು.ಜೊತೆಗೆ, ಸ್ವರವಚನಗಳಿಗೆ ಟೀಕೆ ಬರೆದು ಸಮಕಾಲೀನ ಸಂದರ್ಭದ ಪರಧರ್ಮದ ಸವಾಲುಗಳಿಗೆ, ಶರಣಧರ್ಮದ ತಾತ್ವಿಕಸಿದ್ಧಾಂತವನ್ನು ಸಮಾಜಮುಖಿಗೊಳಿಸಲು ವೇದಾಗಗಮಪ್ರಣೀತನೆಲೆಯಲ್ಲಿ ವ್ಯಾಖ್ಯಾನ ಬರೆದು ತೋರ್ಪಡಿಸಿದ ಸಾಹಸ ಅಸಾಮಾನ್ಯವಾದುದು.

ಡಾ. ಕೆ. ರವೀದ್ರನಾಥರು ಹೇಳುವಂತೆ - ''ನೂರೊಂದು ಸ್ಥಲ''ಕೃತಿ ವಚನಗಳಿಗೆ ಬರೆದ ಟೀಕಾಗ್ರಂಥವಲ್ಲ. ವಚನಗಳಿಂದ ಉಪ-ಉತ್ಪಾದನೆಗಳಾದ ಸ್ವರವಚನಗಳಿಗೆ ಬರೆದ ಟೀಕಾಕೃತಿ. ಒಟ್ಟಿನಲ್ಲಿ ಸ್ಥಲನಿರ್ದೇಶನದಿಂದ ಶಾಸ್ತ್ರಗುಣವನ್ನು, ಗೇಯಾತ್ಮ ಹಾಡುಗಳಿಂದ ಸಂಗೀತ ಗುಣವನ್ನು ಹೊಂದಿರುವ ಈ ಕೃತಿ ಶಬ್ಧಾರ್ಥ- ಭಾವಾರ್ಥಗಳಿಂದ ಮೀಮಾಂಸೆ ಹಾಗೂ ವಿಮರ್ಶಾಗುಣಗಳನ್ನು ಪಡೆದುಕೊಂಡಿರುವುದರಲ್ಲಿ ಯಾವುದೇ ಅತಿಶಯೋಕ್ತಿಯಿಲ್ಲ.''[೩೦೭]

### iii. ಕಟ್ಟಿಗೆಹಳ್ಳಿ ಸಿದ್ಧಲಿಂಗರ ಏಕೋತ್ತರ ಸಾರ ಸಟೀಕಾ:

ತೋಂಟದ ಸಿದ್ಧಲಿಂಗಯತಿಗಳ ಪರಂಪರೆಯ ಇವರು ಶೂನ್ಯಸಿಂಹಾಸನಾಧೀಶ್ವರರಾಗಿದ್ದರು. ಕಟ್ಟಿಗೆಹಳ್ಳಿಯು ತಿಪಟೂರು ತಾಲೂಕಿನ ಕಿಬ್ಬನಹಳ್ಳಿ ಅಡ್ಡರಸ್ತೆಗೆ ಹತ್ತಿರವಿದೆ. ಇವರ ಶಿಷ್ಯ ಮುರಿಗಾ ಶಾಂತವೀರನು 'ಕಟ್ಟಿಗೆ ತಾರಾವಳಿ'ಯಲ್ಲಿ ಗುರುವನ್ನು ಸ್ತುತಿಸಿದ್ದಾನೆ. ಅನೇಕ ಶಿಷ್ಯರು ಈತನನ್ನು ಸ್ತುತಿಸಿರುವುದು ಮಾತ್ರವಲ್ಲ ಬೈಚಣ್ಣೊಡೆಯರೆಂಬವರು ''ವ್ಯಯಸಂವತ್ಸರದ ಆಶ್ವೀಜ ಶುದ್ಧ ೨ ರಲ್ಲು ಕಟ್ಟಿಗೆಹಳ್ಳಿ ದೇವರಿಗೆ ಬೈಚಣ್ಣೊಡೆಯರು ಮಹಾಲಿಂಗದೇವನ ಏಕೋತ್ತರ ಶತಸ್ಥಲವನ್ನು ಬರೆದು ಅರ್ಪಿಸಿದ್ದಾರೆ''.[೩೦೮] ಅದರಂತೆ ''ಬೆಳ್ನಡುಗವಿಯ ಸಂಗಪ್ಪಯ್ಯನವರು 'ಬಸವೇಶ್ವರ ವಚನ' ಹಾಗೂ ತೋಂಟದ ಸಿದ್ಧಲಿಂಗರ ಕೃತಿಗಳನ್ನು ಬರೆಸಿ ಅರ್ಪಿಸಿದ್ದಾರೆ''.[೩೦೯] ಇವರ ಸಮಾಧಿ ತಿಳಿವಳ್ಳಿಯಲ್ಲಿದೆ. ಅಂದರೆ, ಹಾನಗಲ್ಲು ಸೀಮೆಯ ವರದಾನದಿಯ ಹತ್ತಿರ ಈ ಗ್ರಾಮವಿದೆ.

ಕಟ್ಟಿಗೆಹಳ್ಳಿ ಸಿದ್ಧಲಿಂಗರು ಬರೆದ ಕೃತಿಗಳೆಂದರೆ ೧. ಏಕೋತ್ತರ ಸಾರ ಸಟೀಕಾ ಕೃತಿ, ಇದರಲ್ಲಿ ೨೪ ಶಿವಶರಣರ ೩೯೨ ವಚನಗಳಿವೆ, ೨. ಸಂಪಾದನೆಯ ವಚನದ ಸಾರಾಮೃತ ಟೀಕಾಕೃತಿ ೧೫೨ ವಚನಗಳಿವೆ. ಇದರ ಮೂಲ ಗೂಳೂರ ಸಿದ್ಧವೀರರ ಶೂನ್ಯಸಂಪಾದನೆ, ೩. ಮಡಿವಾಳಯ್ಯನ ಚರಿತ್ರೆ ಯಕ್ಷಗಾನ

**ಕೃತಿಸ್ವರೂಪ:** ೨೪ ಶರಣ ಶರಣೆಯರ ೩೯೨ ವಚನಗಳಿರುವ ಏಕೋತ್ತರ ಸಾರ ಸಟೀಕಾಕೃತಿ[೩೧೦]ಯು ಚನ್ನಬಸವಣ್ಣನವರ ವಚನದಿಂದ ಆರಂಭವಾಗಿ ಗಜೇಶ ಮಸಣಯ್ಯನವರ ವಚನದಿಂದ ಮುಕ್ತಾಯವಾಗಿದೆ. ಇಲ್ಲಿಯ ಎಲ್ಲ ವಚನಗಳಿಗೂ ಟೀಕೆ ಇದೆ. ''ಇಲ್ಲಿರುವ 'ಕೂಡಲಸಂಗಮದೇವಾಂಕಿತ' ಕೆಲವು ಟೀಕಾವಚನಗಳು ಬಸವವಚನ ಸಾರಾಮೃತದ ಸಂಕಲನಕಾರನಾದ ಗುರುಬಸವರಾಜದೇವರು ಉದಾಹರಿಸಿರುವ ಸಂಗತಿಯನ್ನು ಡಾ. ಎಂ.ಎಂ. ಕಲಬುರ್ಗಿ ಅವರು ಈಗಾಗಲೇ ಗಮನಿಸಿದ್ದಾರೆ''[೩೧೧] ಎಂದು ಡಾ. ಬಿ. ನಂಜುಂಡಸ್ವಾಮಿ ಹೇಳಿದ್ದಾರೆ. ಅಲ್ಲದೇ ''ಏಕೋತ್ತರಸಾರದಲ್ಲಿ ಬಸವಾದಿಗಳ ಹಿರಿಯ ಸಮಕಾಲೀನರಾದ ಜೇಡರ ದಾಸಿಮಯ್ಯ (೧೧೪೦)., ಸಕಲೇಶ ಮಾದರಸ (೧೧೪೦) ಇವರ ವಚನಗಳಲ್ಲದೆ ಬಸವಾದಿಗಳ ಹಾಗೂ ಅವರ ಸಮಕಾಲೀನರ ವಚನಗಳೇ ವಿಪುಲವಾಗಿವೆ. ಆದರೆ, ಬಸವಾದಿಗಳ ಉತ್ತರಕಾಲೀನ ವಚನಕಾರರ ಯಾವ ವಚನಗಳೂ ಇಲ್ಲಿ ಸಮಾವೇಶಗೊಳ್ಳದಿರುವುದು ಗಮನಾರ್ಹ ಅಂಶವಾಗಿದೆ. ಇಂತಹ ಅಮೂಲ್ಯ ಕೃತಿ ಇನ್ನೂ ಅಚ್ಚಾಗಿಲ್ಲ''[೩೧೨] ಎಂದು ಹೇಳಿದ್ದಾರೆ. ಆದರೆ ಡಾ. ಎಂ.ಎಂ. ಕಲಬುರ್ಗಿ ಸಂಪಾದಿತ 'ಬಸವಣ್ಣನವರ ಟೀಕಿನ ವಚನಗಳು' ಕೃತಿಯ ವಚನ ೧೦೦೩ ರಿಂದ ೧೦೧೯ ರವರೆಗೆ ಏಕೋತ್ತರಶತಸ್ಥಲಸಾರದ ವಚನಗಳಿವೆ. ಈ ಕೃತಿ ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಿಂದ ೧೯೭೭ರಲ್ಲಿ ಪ್ರಕಟವಾಗಿದ್ದನ್ನು ಗಮನಿಸಬೇಕಾಗುತ್ತದೆ. ಡಾ. ಬಿ.ವಿ. ಮಲ್ಲಾಪೂರ ಅವರು "ಮಹಾಲಿಂಗದೇವನ (ಸು ೧೪೨೫)" ಏಕೋತ್ತರಶತಸ್ಥಲವನ್ನು ಆದರಿಸಿ ಹುಟ್ಟಿದ ಪ್ರಸ್ತುತ ಕೃತಿಯಲ್ಲಿ ಬಸವಣ್ಣನವರ ಸುಮಾರು ಹದಿನೇಳು ವಚನಗಳಿವೆ. ಅವುಗಳಿಗೆ ಟೀಕೆಯೂ ಇದೆ. ಆದರೆ ಪ್ರತಿಪದಾರ್ಥದ ಟೀಕೆ ಯಾವುದಕ್ಕೂ ಇಲ್ಲ. ಬಹುತೇಕ ಎಲ್ಲವೂ ಸಾರರೂಪದ ಇಲ್ಲವೇ ತಾತ್ಪರ್ಯರೂಪದ ಟೀಕುಗಳಾಗಿವೆ ಮತ್ತು ಸಂಕ್ಷಿಪ್ತವಾಗಿವೆ."[೩೧೩] ಎಂದು ಅಭಿಪ್ರಾಯಪಟ್ಟಿದ್ದಾರೆ.

ಉದಾಹರಣೆಗೆ - ''ಅನ್ನವನಿಕ್ಕಿದರೆ ಪುಣ್ಯವಹುದು, ವಸ್ತ್ರವಕೊಟ್ಟರೆ ಧರ್ಮವಹುದು
ಹಿರಣ್ಯವಕೊಟ್ಟರೆ ಕ್ರೀಯಹುದು ತ್ರಿಕರಣ ಶುದ್ಧವಾಗಿ
ನಡೆದರೆ ಮುಕ್ತಿಯಹುದು ಕೂಡಲಸಂಗಮದೇವ''

**ಟೀಕು** - "ಅನ್ನವಸ್ತ್ರಮಾಣವ ಕೊಟ್ಟರೆ ಸ್ತ್ರೀಪುತ್ರ ಧನದಿಂದ ಸುಖವಹುದು, ಮುಕ್ತಿಯಿಲ್ಲ. ಮನವು ಮಹಾಬ್ರಹ್ಮದಲ್ಲಡಗಿದರೆ ನಿತ್ಯಹನೆಂಬುದೀ ವಚನಕ್ಕೆ ಅರ್ಥ."[೩೧೪] ಎಂಬ ಟೀಕೆಯಿದೆ. ಇಲ್ಲಿ ಟೀಕಾಕಾರ ವಚನದ ಸಾರವನ್ನು ಸಂಕ್ಷೇಪದಲ್ಲಿ ಹೇಳಿದ್ದಾನೆ.

**ವಚನ** - ಅರ್ಪಿಸಿದ ಸುಖ ತಪ್ಪದೆ ಇಂಬುಗೊಂಡಂತಾಗಿ ಅಲ್ಲಿಯೇ ಅರ್ಪಿತವಾಗಿತ್ತಯ್ಯ (ಬ.ಷ.ವ ಸಂಖ್ಯೆ ೧೦೧೬)

**ಟೀಕು** - ''ಜೀವಾತ್ಮನೆಂಬಂಗವ ಮಹಾಘನಲಿಂಗಕ್ಕೆ ಸಂಬಂಧವ ಮಾಡಿ ಅರ್ಪಿಸಿ ಲಿಂಗಮುಖವನರಿದು ಹಿಂಗದಿರ್ಪ ಶರಣನ ದೇಹೇಂದ್ರಿಯ ಸುಖಂಗಳೆಲ್ಲ ಲಿಂಗಾರ್ಪಿತವಾದವೆಂಬುದೀಗ

ಅರ್ಪಿಸಿದ ಸುಖ ತಪ್ಪದೆ ಇಂಬುಗೊಂಡಿತ್ತಾಗಿ ಅಲ್ಲಿಯೇ ಅರ್ಪಿತವಾಯಿತ್ತಯ್ಯ ಎಂಬುದರ್ಥ''[೬೧೫] ಎಂದು ವ್ಯಾಖ್ಯಾನಿಸಲಾಗಿದೆ.

ಹೀಗೆ ಬೆಡಗಿನ ವಚನಗಳಿಗೆ ಟೀಕೆ ಬರೆಯುವ ಸಂದರ್ಭದಲ್ಲಿ ಬಹುತೇಕ ಟೀಕಾಕಾರರು 'ಎಂಬುದರ್ಥ' ಎಂದು ಹೇಳುವ ಮೂಲಕ ಸಂಪ್ರದಾಯವನ್ನು ಪರಂಪರೆಯಿಂದ ಪರಂಪರೆಗೆ ಮುಂದುವರಿಸಿದರೆಂಬುದು ತಿಳಿದುಬರುತ್ತದೆ. ಇನ್ನು ವಚನಗಳ ಮಧ್ಯೆ ಬರುವ ಸಾಕ್ಷಿರೂಪದ ಸಂಸ್ಕೃತ ಶ್ಲೋಕಗಳಿಗೆ ಪ್ರತಿಪದಾರ್ಥವಿದೆ.

**ವಚನ** - ''ಅಂಗದಲ್ಲಿ ಲಿಂಗಪ್ರತಿಷ್ಠೆ ಮಾಡಿದ ಬಳಿಕ'' (ಬ.ಟೀ.ವ.ಸಂ.೧೦೦೮)

**ಶ್ಲೋಕ** - ''ಅಗ್ನಿದಗ್ಧಘಟಂ ಪ್ರಾಹುರ್ನ ಭೂಯೋಮೃತ್ತಿಕಾಯತೇ'' ಎಂಬ ಸಾಕ್ಷಿರೂಪದ ಶ್ಲೋಕವಿದ್ದು ಅದಕ್ಕೆ ಶಬ್ದಾರ್ಥ ಟೀಕೆ ಬರೆಯಲಾಗಿದೆ.

**ಟೀಕು** - ಅಗ್ನಿ - ಅಗ್ನಿಯಿಂದ, ದಗ್ಧ - ಸುಡಲ್ಪಟ್ಟ, ಘಟಂ - ಮಡಕೆಯು, ಭೂಯ: ಮರಳಿ (ಪ್ರತಿಪದಕ್ಕೆ ಅರ್ಥ)ಕೊಡಲಾಗಿದೆ.

ಹೀಗೆ ಸಾಂಪ್ರದಾಯಿಕ ಟೀಕಾಸ್ವರೂಪ ಹೊಂದಿರುವ ಟೀಕಾಕೃತಿಯಲ್ಲದೇ ''ಏಕೋತ್ತರ ಶತಸ್ಥಲ ಸಾರಾಮೃತ'' (ನಂಜುಂಡ) ಮತ್ತು ಇನ್ನೂ ಇಬ್ಬರೂ ಅನಾಮಧೇಯರು ಏಕೋತ್ತರ ಶತಸ್ಥಲಕ್ಕೆ ಬರೆದ ವ್ಯಾಖ್ಯಾನಗಳು ಸಿಗುತ್ತವೆ''[೬೧೬] ಎಂದು ಡಾ. ಬಿ.ವಿ.ಮಲ್ಲಾಪೂರ ಅವರು ಹೇಳುವ ಅಭಿಪ್ರಾಯ ಗಮನಿಸಿದರೆ 'ಏಕೋತ್ತರ ಶತಸ್ಥಲ' ಕುರಿತು ಬೆಳೆದ ಟೀಕಾಪರಂಪರೆಯ ಬಹುಮುಖತೆಯ ಅರಿವು ನಮಗಾಗುತ್ತದೆ.

iv. **ಚೆನ್ನವೀರಾಚಾರ್ಯನ ವಿಶೇಷಾನುಭವ ಷಟ್‌ಸ್ಥಲ ಟೀಕೆ:**

ತೋಂಟದ ಸಿದ್ಧಲಿಂಗರ ಪರಂಪರೆಯ ಈತನು 'ವಿಶೇಷಾನುಭವ ಷಟ್‌ಸ್ಥಲ' ಹಾಗೂ 'ಶಿವಯೋಗ ಪ್ರದೀಪಿಕೆ'ಗಳ ಸಂಕಲನಕಾರನಾಗಿದ್ದಾನೆ. ಈ ಎರಡೂ ಕೃತಿಗಳು ಶಿಷ್ಯ ಶಿವಲಿಂಗದೇವನಿಗೆ ನಿರೂಪಿಸಿದಂತೆ ರಚನೆಗೊಂಡಿವೆ. ಈತನ ಕಾಲ ಸು. ೧೬೫೦

ಪ್ರಸ್ತುತ ಕೃತಿಯೂ ಲಿಂಗಾಂಗ ಸಾಮರಸ್ಯದ ವಿವರಣೆಯನ್ನು ಪ್ರಮುಖವಾಗಿ ಒಳಗೊಂಡಿದೆ. ''ಲಿಂಗದಿಂದ ಜನಿಸಿ ಲಿಂಗವೇ ಆಗುವ ಪರಿವರ್ತನ ಕ್ರಮವನ್ನು (transformation system) ಇಲ್ಲಿ ಶರಣರ ವಚನಗಳ ಮೂಲಕವೇ ಪರಿಚಯ ಮಾಡಿಕೊಡಲಾಗಿದೆ.''[೬೧೭] ಇಲ್ಲಿ ೩೮ ವಚನಕಾರರ ೭೪೨ ವಚನಗಳಿವೆ. ವಚನಗಳಿಗೆ ಸರಳವಾದ ಟೀಕೆಯಿದೆ. ಅಂದರೆ ಮೋಳಿಗೆ ಮಾರಯ್ಯನ ೧೯೬, ಚನ್ನಬಸವಣ್ಣನ ೧೪೦, ಸಿದ್ಧರಾಮಯ್ಯನ ೯೫, ಅಲ್ಲಮಪ್ರಭುವಿನ ೫೧ ಹೀಗೆ ಭಂಡಾರಿ ಶಾಂತಯ್ಯ, ನಗೆಯ ಮಾರಿತಂದೆ, ಹೊಡೆಹುಲ್ಲ ಬಂಕಣ್ಣ, ಗಜೇಶ ಮಸಣಯ್ಯ, ಅನಾಮಿಕನಾಚಯ್ಯ ನಿಜಗುಣಶಿವಯೋಗಿ, ಪುರದ ಮಲ್ಲಯ್ಯ, ಜೋದರ ಮಾಯಣ್ಣ ಮುಂತಾದ ವಚನಕಾರರ ಒಂದೊಂದು ವಚನಗಳನ್ನು ಬಳಸಿಕೊಂಡಿದ್ದಾನೆ.

**ಟೀಕಾ ಸ್ವರೂಪ :** ಟೀಕಾಕಾರನು ವಚನಗಳಿಗೆ ಸರಳ ರೀತಿಯಲ್ಲಿ ಅರ್ಥವಾಗುವಂತೆ, ಸಂಕ್ಷೇಪದಲ್ಲಿ ಟೀಕು ಬರೆದಿದ್ದಾನೆ. ಪ್ರತಿಪದಾರ್ಥ ಮಾದರಿಯಲ್ಲಿ ಟೀಕು ಬರೆಯದೇ ಇಡೀ ವಚನದ ಸಾರಾರ್ಥವನ್ನು ಬರೆಯಲಾಗಿದೆ. ಇಲ್ಲಿಯ ಎಲ್ಲಾ ವಚನಗಳಿಗೂ ಟೀಕೆ ಬರೆದಿಲ್ಲ. ಒಂದೇ ವಾಕ್ಯದಲ್ಲಿ ವಚನದ ಸಾರಾರ್ಥ ನೀಡಿದ ಸಂಕ್ಷೇಪ ಟೀಕೆಗೆ ನಿದರ್ಶನ.

**ವಚನ** - ಸಾವಿರ ನೋಂಪಿಯ ನೋತು<br>
ನೂಲೆಳೆಯ ಹರಿದಂತಾಯಿತ್ತೆನ್ನ ಭಕ್ತಿ<br>
ಭಾವದಲ್ಲಿ ಬಲಕೆಯಿಲ್ಲ, ಜ್ಞಾನದಲ್ಲಿ ಶುದ್ದವಿಲ್ಲ<br>
ಮಾಟದಲ್ಲಿ ಕೂಟವಿಲ್ಲ; ಈ ವ್ಯವಹಾರ ಸಾಕು<br>
ಖ್ಯಾತಿಯ ಬಿಡಿಸಾ ನಿಷ್ಕಳಂಕಮಲ್ಲಿಕಾರ್ಜುನಾ"

**ಟೀಕು:** ಭಾವದಲ್ಲಿ ನಿಷ್ಠೆ, ಜ್ಞಾನದ ನಿಶ್ಚಯ, ದಾಸೋಹದ ನಿರಿಗೆ ಇಲ್ಲದೆ ಖ್ಯಾತಿ ಲಾಭಕ್ಕೆ ಮಾಡುವ ಭಕ್ತಿ ಅಪ್ರಯೋಜನವೆಂಬುದೀ ವಚನದ ತಾತ್ಪರ್ಯಾರ್ಥ".[೩೧೮]

"ಪ್ರಥಮದಲ್ಲಿ ಸ್ಪರ್ಶನವೆಂಬ ಸ್ಪರ್ಶಗುಣದಿಂದ ಪಾದೋದಕ - - -" ಎಂಬ ಚೆನ್ನಬಸವಣ್ಣನವರ ದೀರ್ಘ ವಚನಕ್ಕೆ ಟೀಕು ಬರೆಯುವಾಗ - "ಈ ವಚನ ವ್ಯಾಖ್ಯಾನರೂಪವಾಗಿರ್ಪುದರಿಂದ ಪದಚ್ಛೇದನವ ಮಾಡಲಿಲ್ಲವೆಂಬುದಭಿಪ್ರಾಯ" ಎಂದು ಹೇಳಲಾಗಿದೆ. ಆದರೆ, ಮೋಳಿಗೆ ಮಾರಯ್ಯನ - "ಒಂದು ಬಾಲೆ ಕಂದನ ಹೊತ್ತು ಬಂದಿತ್ತು"[೩೧೯] ಎನ್ನುವ ಬೆಡಗಿನ ವಚನಕ್ಕೆ ಎರಡು ಪುಟದಷ್ಟು ಟೀಕೆ ಬರೆಯುವ ಮೂಲಕ ಟೀಕಾಕಾರ ಬಹುಮಾದರಿಯ ಟೀಕೆಗೆ ಪ್ರಾಧಾನ್ಯತೆ ನೀಡಿರುವುದು ತಿಳಿಯುತ್ತದೆ.

ಬಸವಣ್ಣನವರ ಪ್ರಸಿದ್ಧವಾದ ಸರಳವಾದ ವಚನವೊಂದಕ್ಕೆ ಟೀಕಾಕಾರ ಕಠಿಣವಾದ ತಾತ್ವಿಕ ಟೀಕೆ ಬರೆದಿರುವುದನ್ನು ಕಾಣುತ್ತೇವೆ.

**ವಚನ** - "ಒಡನಿರ್ದ ಸತಿಯೆಂದು ನಂಬಿದೆ ನಂಬಿದೆ<br>
ಕೈವಿಡಿದ ಸಜ್ಜನ ಸತಿಯೆಂದು ನಂಬಿದೆ, ನಂಬಿದೆ ನಿನ್ನ<br>
ಅಯ್ಯೋ ನಮ್ಮಯ್ಯನ ಕೈ ನೊಂದಿತ್ತು<br>
ಕಳೆದುಕೊಡಾ ಎಲೆ ಚಂಡಾಲಗಿತ್ತಿ<br>
ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದಡೆ<br>
ಕೂಡಲಸಂಗಯ್ಯನಲ್ಲದಾರೂ ಇಲ್ಲ."

**ಟೀಕು** - "ಚಿಚ್ಛಕ್ತಿ ಸಮೇತವಾದ ಅವಿರಳ ಶಿವತತ್ವ ಸ್ವರೂಪ ತಾನೆಂದರಿದು ಆಕೆಯ ಕೈವಿಡಿದು ಶ್ರದ್ಧಾಭಾವಿಯಾಗಿರ್ದ ಶರಣನೆಂಬುದೀಗ 'ಒಡನಿರ್ದ ಸತಿಯೆಂದು ನಂಬಿದೆ ಕೈವಿಡಿದ ಸಜ್ಜನಸತಿಯೆಂದು ನಂಬಿದೆ ನಂಬಿದೆ ನಿನ್ನ' ಎಂಬ ಶಬ್ದಕ್ಕರ್ಥ. ಇತೀ ಸರ್ವ ಸೂತಕ ದೋಷರಹಿತನಾದ ಚಿಚ್ಛಕ್ತಿಯ

ಕೈಹಿಡಿದ ಸೇವ್ಯ ಗುಣದಿಂ ಶರಣ ತನ್ನಂಗದಲ್ಲಿ ಲಿಂಗ ಬಂದು ಸ್ವಾಯತವಾಗಲು ದೃಢಬುದ್ಧಿಯಿಂದಾ ಶಿವಭಾವ ಅಂತಃಕರಣಂಗಳ ಬಂಧನಕ್ಕೊಳಗಾಗದಂತೆ ಸಮ್ಯಕ್ ಜ್ಞಾನದ ಪ್ರಭಾವಿಸಿಸುತ್ತಿರ್ದನೆಂಬುದೀ ವಚನಾರ್ಥ.''[೩೦] ಹೀಗೆ ಟೀಕೆಯ ಅಗತ್ಯವಿಲ್ಲದ ಸರಳ ವಚನಗಳಿಗೆ ಟೀಕೆ ಬರೆದು ವಚನ ಓದುಗರಲ್ಲಿ ಗೊಂದಲವುಂಟುಮಾಡಿರುವುದನ್ನು ಕಾಣುತ್ತೇವೆ. ಅಲ್ಲಮಪ್ರಭುದೇವರ ಬೆಡಗಿನ ವಚನಕ್ಕೆ ಅರ್ಥಪೂರ್ಣವಾದ ಟೀಕೆ ಬರೆದಿರುವುದಕ್ಕೆ ಉದಾಹರಣೆ

**ವಚನ -** ''ಅಂಡವ ಮೇಲು ಮಾಡಿ ಪಿಂಡಡಿಯಾಗಿ
ಆ ಅಂಡದೊಳಗೆ ನಾಲ್ಕು ಕೈಕರಣ ಅನೇಕ ಉದ್ದವಾದವು
ಆ ಕೈಕರಣದೊಳಗೊಬ್ಬ ಶರಣ ದಾಸೋಹಮೆನಲು
ಆ ಕ್ಷಣ ಒಂದು ಸೋಜಿಗ ಮೂಡಿತ್ತ ಕಂಡೆ ಗುಹೇಶ್ವರಾ''

**ಟೀಕು -** ''ಆತ್ಮತತ್ವಕ್ಕೆ ದೇಹವೇ ಆಧಾರವಾಗಿರ್ಪುದೆಂಬುದೀಗ 'ಅಂಡವ ಮೇಲು ಮಾಡಿ ಪಿಂಡಡಿಯಾಗಿ ಎಂಬ ಶಬ್ಬಕ್ಕರ್ಥ. ಆ ಆತ್ಮದಲ್ಲಿ ಅಂತಃಕರಣದ ಚತುಷ್ಟಯಂಗಳು ಸರ್ವಪ್ರಪಂಚವ ಗ್ರಹಿಸುವಲ್ಲಿ ಅತ್ಯುನ್ನತವಾದ ಕಾರಣ 'ಆ ಅಂಡದೊಳಗೆ ನಾಲ್ಕು ಕೈಕರಣ ಅನೇಕ ಉದ್ದವಾದವು'- ಎಂಬ ಶಬ್ಧಕ್ಕರ್ಥ. ಆ ಅಂತಕರಣಂಗಳಲ್ಲಿ ಮಥನ ಗುಣವಳಿದ ದಾಸೋಹಂಭಾವವ ಮುಂದುಗೊಂಡಿರ್ಪ ಶರಣನಲ್ಲಿ ಮಹಾಘನವಸ್ತು ಪ್ರಭಾವಿಸಿ ಪರಮಕಾರಣವಾಗಿರಲದೀಗ, ಆ ಕೈಕರಣದೊಳಗೊಬ್ಬ ಶರಣ ದಾಸೋಹಮೆನಲು ಆ ಕ್ಷಣ ಒಂದು ಸೋಜಿಗ ಮೂಡಿತ್ತಕಂಡೆನೆಂಬ ಶಬ್ಧಕ್ಕರ್ಥ''.[೩೧]

ಹೀಗೆ ಚೆನ್ನವೀರಾಚಾರ್ಯನ 'ವಿಶೇಷಾನುಭವ ಷಟಸ್ಥಲ' ಟೀಕಾ ಕೃತಿಯು ಸಂಕ್ಷಿಪ್ತ ಹಾಗೂ ದೀರ್ಘವಾದ ವ್ಯಾಖ್ಯಾನವನ್ನು ಒಳಗೊಂಡಿದೆ. ಡಾ. ವೈ.ಸಿ. ಬಾನುಮತಿಯವರು ಇಲ್ಲಿಯ ಟೀಕಾ ಸ್ವರೂಪ ಕುರಿತು ''ಇಲ್ಲಿ ಎರಡು ಬಗೆಯ ಅರ್ಥಗಳು ಕಂಡುಬರುತ್ತವೆ. ಒಂದು ವಚನಾರ್ಥ ಇನ್ನೊಂದು ಶಬ್ಧಾರ್ಥ. ಶಬ್ಧಾರ್ಥವು ವಾಕ್ಯ ಘಟಕಗಳನ್ನಿಟ್ಟುಕೊಂಡು ರೂಪಿತವಾದುದು, ವಚನಾರ್ಥವು ಇಡೀ ವಚನವನ್ನು ಒಂದು ದೊಡ್ಡ ಘಟಕವಾಗಿಟ್ಟುಕೊಂಡು ರಚಿತವಾದುದು. ವಚನಗಳಲ್ಲಿ ಬಾಹ್ಯಾರ್ಥ ಶಾಬ್ಧಿಕ ನೆಲೆಯದು. ಗೂಢಾರ್ಥವು ಬುದ್ಧಿಭಾವಗಳ ನೆಲೆಯಿಂದ ವ್ಯಕ್ತವಾದುದು. ಒಟ್ಟಾರೆ, ಚೆನ್ನವೀರನದು ತಾತ್ವಿಕದೃಷ್ಟಿ''[೩೨] ಎಂದು ಹೇಳಿರುವುದು ಸೂಕ್ತವೇ ಆಗಿದೆ. ಅಂದರೆ, ವೀರಶೈವ ತತ್ವಗಳನ್ನು ಪ್ರತಿಪಾದಿಸುವ ತಾತ್ವಿಕ ವಿವರಣೆಗೆ ಪ್ರಾಮುಖ್ಯತೆ ನೀಡಿದ ಟೀಕಾಕೃತಿಯನ್ನು ರಚಿಸಿದ ಚೆನ್ನವೀರಾರ್ಯನು ಎಲ್ಲರ ಗಮನ ಸೆಳೆಯುತ್ತಾನೆ.

### v. ಸಟೀಕ ಏಕೋತ್ತರ ಶತಸ್ಥಲ:

ಜಕ್ಕಣಾರ್ಯರ ಸ್ವರಯೇಕೋತ್ತರ ಶತಸ್ಥಲ ಅಥವಾ ನೂರೊಂದರ ಹಾಡುಗಳಿಗೆ ಬರೆದ ಪ್ರಾಚೀನ ಟೀಕೆಯುಳ್ಳ ಈ ಕೃತಿ ಅಪೂರ್ಣವಾಗಿ ಪ್ರಕಟವಾಗಿದೆ. ಡಾ. ಫ.ಗು. ಹಳಕಟ್ಟಿಯವರು ೧೯೪೨ರಲ್ಲಿ ಶಿವಾನುಭವ ಪತ್ರಿಕೆಯ ಸಂಪುಟ ೧೫, ಸಂಚಿಕೆ ೧೦, ೧೧, ೧೨ರಲ್ಲಿ ಮತ್ತು ಸಂಪುಟ ೧೬, ಸಂಚಿಕೆ ೧, ೧೦ರಲ್ಲಿ ಪ್ರಕಟಿಸಿದ್ದಾರೆ.

ಇಲ್ಲಿ ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರಹೇಯಸ್ಥಲ, ಗುರುಕರುಣಸ್ಥಲ, ಲಿಂಗಧಾರಣಸ್ಥಲ, ವಿಭೂತಿಸ್ಥಲ, ರುದ್ರಾಕ್ಷಿಸ್ಥಲ, ಪಂಚಾಕ್ಷರಿಸ್ಥಲ ಹೀಗೆ ಎಂಟು ಸ್ಥಲಗಳ ಪಠ್ಯಮಾತ್ರ ಪ್ರಕಟವಾಗಿದೆ. ಇನ್ನುಳಿದ ೯೩ ಸ್ಥಲಗಳಿಲ್ಲದ ಕಾರಣ ಅಪೂರ್ಣ ಟೀಕಾ ಕೃತಿಯಾಗಿದೆ. ''ಇಲ್ಲಿ ಜೀವಾತ್ಮಪರಮಾತ್ಮರ ಪರಿಕಲ್ಪನೆಗೆ ಬಿಂಬ, ಪ್ರತಿಬಿಂಬದ ಪರಿಕಲ್ಪನೆಯನ್ನು ಸಮೀಕರಿಸುತ್ತ, ಅವು ಮರಳಿ ಸೇರುವ ಪರಿಕ್ರಮವನ್ನು ಬೋಧಿಸಲಾಗಿದೆ''.[೩೩] ಎಂದು ಬಾಳಣ್ಣ ಸೀಗಿಹಳ್ಳಿ ಹೇಳುತ್ತಾರೆ. ಈ ಹಿನ್ನೆಲೆಯಲ್ಲಿ ಪ್ರಕಟಗೊಂಡ ಟೀಕಾಕೃತಿಯ ಟೀಕೆಯ ಸ್ವರೂಪವನ್ನು ಒಂದೆರಡು ಉದಾಹರಣೆಗಳ ಮೂಲಕ ವಿವರಿಸಲಾಗುವುದು.

**ಮೂಲ:** ಆದಿ, ಮಧ್ಯ, ಅಂತ್ಯವೆಂಬ ಭೇದವಾಕ್ಯದೊಳಗೆ ಪುಗದ
ನಾದಿ ಸಂಸಿದ್ಧವಾಗಿ ತನ್ನ ತಾನೆ ಕಂಡು ಅ
ಭೇದ್ಯಪದವನೆಯ್ದಿ ಕೂಡಲ ಚೆನ್ನಸಂಗಯ್ಯನಲ್ಲಿ
ಭೇದವಿಲ್ಲದಿಪ್ಪ ದಿವ್ಯಜ್ಞಾನಿ ನೋಡಾ.

**ಟೀಕು:** ''ಆದಿ, ಮಧ್ಯ, ಅಂತ್ಯವೆಂಬ - ಪಶುಪದಾರ್ಥ, ಪಾಶುಪದಾರ್ಥ, ಪತಿಪದಾರ್ಥ ಜೀವನು, ಮಾಯೆ, ಶಿವನು ಆದಿಯಲ್ಲಿ ಉಂಟು, ಅಂತ್ಯದಲ್ಲಿ ಉಂಟೆಂಬ, ಭೇದವಾಕ್ಯದೊಳಗೆ - ಭಿನ್ನಾಗಮದ ವರ್ಚಸ್ಸಿನಲ್ಲಿ, ಪೊಗದ–ಪ್ರದೇಶವಾಗದ, ಅನಾದಿ ಸಂಸಿದ್ಧವಾಗಿ–ಅನಾದಿ ವಸ್ತುವಿನಲ್ಲಿ, ಸಂಸಿದ್ದವಾಗಿ ಎಂಬುದು ಅರ್ಥ. ಅಂತುಮಲ್ಲದೆ ಎಲ್ಲಕ್ಕೂ ಮೊದಲಿಗನಾದ ವಸ್ತುವೇ ತನುಮನಾತ್ಮನಲ್ಲಿ ಪ್ರಸಿದ್ಧವಾಗಿ, ತನ್ನ ತಾನೇ ಕಂಡು ತನ್ನ ನಿಜ ಸ್ವರೂಪವಾದ ವಸ್ತುವೇ ತಾನೆಂದು ನಿರೀಕ್ಷಿಸಿ, ಅಭೇದ್ಯ ಪದವನೆಯ್ದಿ–ದ್ವೈತಾ-ದ್ವೈತ ಹಠ ಕರ್ಮಯೋಗಿಗಳಿಗೆ ಭೇದಿಸಬಾರದಿರ್ದಂಥ ಚಿದ್ಘನಲಿಂಗಪದ ಸ್ವರೂಪವಾದ ಮೋಕ್ಷಪದದಲ್ಲಿ ಕೂಡಿ, ಕೂಡಲ ಚನ್ನಸಂಗನಲ್ಲಿ - ಪರಶಿವಲಿಂಗದಲ್ಲಿ, ಭೇದವಿಲ್ಲದಿಪ್ಪ - ಲಿಂಗಕ್ಕೆ, ತನಗು ಇಂಬು ಇಲ್ಲದಿರ್ದಂಥ, ದಿವ್ಯಜ್ಞಾನಿ ನೋಡಾ–ಸಮ್ಯಜ್ಞಾನಿ ಕಂಡಾ''[೩೪] ಎಂದು ಅರ್ಥಪೂರ್ಣವಾಗಿ ಶಬ್ದಾರ್ಥ ಮಾದರಿಯ ಟೀಕು ಬರೆಯಲಾಗಿದೆ.

**ಮೂಲ :** ಓದುವಾದಿನಲಿ ಸುರರಾದರಿಪ ಧರ್ಮದಲಿ
ಸಾಧಿಸುವ ತಪಸಿದ್ಧಿ ವಿದ್ಯೆಗಳಲಿ ||
ವೇದದಲಿ ಹಿರಿದು ಹೆಸರಾದ ಹೆಪ್ಪುಳ್ಳ ಶಿವ
ನಾದಿನಾಮವ ನೋಡು ಪಂಚಾಕ್ಷರಿ ||

**ಟೀಕು:** ''ಓದುವಾದಿನಲಿ - ಓದು ಪಠಣೆಯಿಂದು ಅಕ್ಷರಭ್ಯಾಸವ ಕಲಿವಲ್ಲಿ ಈ ಪಂಚಾಕ್ಷರಿ ಮಂತ್ರವೇ ಅಧಿಕವು. ಸುರರು–ದೇವತೆಗಳು, ಆದರೀಪ - ಆಚರಿಸುವ, ಧರ್ಮದಲ್ಲಿ ಅವರು ಮಾಡುವ ಯಜ್ಞಕರ್ಮದಲ್ಲಿ, ಓಂ ಭರ್ಗೋ ದೇವಸ್ಯ ಧೀಮಹಿ ಎಂಬಲ್ಲಿ ಈ ಪಂಚಾಕ್ಷರೀ ಮಂತ್ರವೇ ಅಧಿಕವು. ಸಾಧಿಸುವ - ಅಭ್ಯಾಸಿಸುವ, ತಪ - ತನುದಂಡನೆಯ, ಮಾಡುವಲ್ಲಿ ಸಿದ್ದಿ - ಅಂಜನಾ ಸಿದ್ದಿ, ಮೂಲಿಕಾ ಸಿದ್ದಿ, ಘಟಿಕಾ ಸಿದ್ಧಿ, ಕಾಯ ಸಿದ್ಧಿ, ಜೀವಸಿದ್ಧಿ, ದೂರದೃಷ್ಟಿ, ದೂರ ಶ್ರವಣ ಇಂಥ ಅಷ್ಟ

ಮಹಾಸಿದ್ಧಿಗಳನು ಕಲಿವಲ್ಲಿ ಈ ಪಂಚಾಕ್ಷರಿ ಮಂತ್ರವೇ ಮುಖ್ಯವು. ವಿದ್ಯೆಗಳಲ್ಲಿ - ಚೌಷಷ್ಠಿ ಕಳಾವಿದ್ಯೆಯಲ್ಲಿ, ವೇದದಲ್ಲಿ - ನಾಲ್ಕು ವೇದಂಗಳಲ್ಲಿ, ಹಿರಿದು ಹೆಸರಾದ–ಮಿಗೆ ಪೆಸರ್ವಡೆದ, ಹೆಪ್ಪುಳ್ಳ-ಹೆಚ್ಚುಗಾರಿಕೆಯನುಳ್ಳ ಶಿವ, ನಾದಿ-ನಾಮವ ನೋಡು, ಪಂಚಾಕ್ಷರೀ- ಆ ಪರಮೇಶ್ವರನಿಗೆ 'ಊರ್ಧ್ವರೇತೋ ವಿರೂಪಾಕ್ಷ ವಿಶ್ವರೂಪಾಯ ವೈ ನಮಃ' ಎಂದು ಅನೇಕ ನಾಮಗಳುಂಟು, ಆ ನಾಮಂಗಳೊಳಗೆ ಮುಖ್ಯವಾದ ಪಂಚಾಕ್ಷರೀ ಮಂತ್ರವೆಂದೇ ನಿರೀಕ್ಷಿಸು''೨೫ ಎಂದು ಶಬ್ದಾರ್ಥ ಸಹಿತ ಟೀಕು ಬರೆಯಲಾಗಿದೆಯಲ್ಲದೇ ಸಂಸ್ಕೃತದ ಶ್ಲೋಕ ಉಲ್ಲೇಖಿಸುತ್ತ ಸ್ಪಷ್ಟಪಡಿಸಲು ಟೀಕಾಕಾರನು ಪ್ರಯತ್ನಿಸಿದ್ದಾನೆ.

ಪ್ರತಿಸ್ಥಲದ ಆರಂಭದಲ್ಲಿ ಗದ್ಯವನ್ನು ಬಳಸುವ ಟೀಕಾಕಾರ ಸ್ವರವಚನ (ಹಾಡು)ಕ್ಕೆ 'ಮೂಲ'ವೆಂದು ಹೇಳಿ ಟೀಕೆ ಬರೆದಿದ್ದಾನಲ್ಲದೇ, ಕೆಲವೆಡೆ ಸೂತ್ರಗಳನ್ನು ಕೊಟ್ಟು ಇದಕ್ಕೂ ಕೂಡಾ ಟೀಕೆ ಬರೆದು ಸಾಮಾನ್ಯರು ಅರ್ಥಮಾಡಿಕೊಳ್ಳಲು ಸಹಾಯಕನಾಗಿದ್ದಾನೆ. ಗದ್ಯ ಪ್ರಕಾರದ ಬೆಳವಣಿಗೆ ಗುರುತಿಸಲು ಪೂರಕವಾಗಿದೆ.

### vi. ಸಿದ್ಧಲಿಂಗೇಶ್ವರಾಂಕಿತ ಏಕೋತ್ತರ ಶತಸ್ಥಲಂ :

ಇದು ಕೂಡಾ ಡಾ. ಫ.ಗು. ಹಳಕಟ್ಟಿಯವರಿಂದ ಸಂಪಾದನೆಗೊಂಡಿದೆ. ಈ ಕೃತಿಯಲ್ಲಿ ಪ್ರತಿಸ್ಥಲಕ್ಕೂ 'ಸಿದ್ಧಲಿಂಗೇಶ್ವರ' ಅಂಕಿತವು ವೃತ್ತಗಳಲ್ಲಿರುವುದರಿಂದ ಸಿದ್ಧಲಿಂಗೇಶ್ವರಾಂಕಿತ ಏಕೋತ್ತರ ಶತಸ್ಥಲವೆಂದು ಕರೆಯಲಾಗಿದೆ. ''ಇದು ಮಹಾಲಿಂಗದೇವರ ಸಂಕಲನದ ವಿಧಾನವನ್ನು ಸಂಪೂರ್ಣವಾಗಿ ಹೋಲುವುದಿಲ್ಲ. ಸ್ಥಲಸೂತ್ರ–ವಚನ–ಸ್ಥಲಪದ–ವೃತ್ತ–ಗದ್ಯ ಹೀಗೆ ಇದರ ಸಂಯೋಜನೆಯ ವ್ಯವಸ್ಥೆಯಿದೆ. ಈ ಕೃತಿಯಲ್ಲಿ ಆಯ್ದುಕೊಂಡ ವಚನಗಳಿಗೂ ಚೆನ್ನದಣ್ಣಾಯಕರು (ಮಹಾಲಿಂಗದೇವನನ್ನು ಅನುಸರಿಸಿದ) ಸಂಗ್ರಹಿಸಿದ ವಚನಗಳಿಗೂ ಭಿನ್ನತೆಯಿದೆ ಎಂಬುದನ್ನು ಮರೆಯುವಂತಿಲ್ಲ.''೨೬ ಎಂಬ ಡಾ. ಎಸ್.ವಿ. ಅಯ್ಯನಗೌಡರ ಅಭಿಪ್ರಾಯದಿಂದ ಈ ಟೀಕಾ ಕೃತಿಯ ಸ್ವರೂಪದ ಬಗ್ಗೆ ತಿಳಿಯಲು ಅವಕಾಶವಿದೆ.

### vii. ಸಂಪಾದನೆ ಸಿದ್ಧವೀರರ ಏಕೋತ್ತರಸಾರ ಟೀಕೆ:

ಸಿದ್ಧನಂಜೇಶ (೧೬೦೦)ನು 'ರಾಘವಾಂಕ ಚರಿತ್ರೆ'ಯಲ್ಲಿ (೧೯-೯೫); ಸಂಪದಾನೆ ಗುರುಲಿಂಗದೇವ (ಸು.೧೬೭೦)ನು 'ಶೀಲವಂತಯ್ಯನ ತ್ರಿವಿಧಿ' ವ್ಯಾಖ್ಯಾನದಲ್ಲಿ; ಸಂಪಾದನೆ ಪರ್ವತೇಶ (೧೬೯೮)ನು 'ಚತುರಾಚಾರ್ಯ ಚಾರಿತ್ರ'ದಲ್ಲಿ; ಈತನ ಶಿಷ್ಯ ವೀರಸಂಗಯ್ಯ 'ಶಿವನ ಮಹಿಮಾ ಸ್ತೋತ್ರ'ದಲ್ಲಿ ಸಂಪಾದನೆ ಸಿದ್ಧವೀರನನ್ನು ಹೆಸರಿಸಿರುವುದರಿಂದ ಈತನ ಕಾಲ ಸು. ೧೬೦೦ ಎಂದು ತಿಳಿಯಬಹುದು.

ಈತನು ೧೨ನೇ ಶತಮಾನದ ಶಿವಶರಣರ ವಚನಗಳನ್ನು ಸಂಕಲಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದಾನೆ. ಶಿವಶರಣರ ವಚನಗಳನ್ನು ಮೂಲವಾಗಿಟ್ಟುಕೊಂಡು ಅವುಗಳನ್ನು ತ್ರಿವಿಧಿ, ಕಂದ, ಷಟ್ಪದಿ, ಮಿಶ್ರ ಸ್ತೋತ್ರ ಹೀಗೆ ಹಲವು ಪ್ರಕಾರಗಳಲ್ಲಿ ೧೫ಕ್ಕೂ ಹೆಚ್ಚು ಕೃತಿ ರಚಿಸಿದ್ದಾನೆ. ಜೊತೆಗೆ ಏಕೋತ್ತರ ಸಾರ ಟೀಕೆ (ಸಂಕಲನ), ಜಂಗಮ ಮಹಾತ್ಮ್ಯೆ ಸ್ಥಲಟೀಕೆ, ಸಿದ್ಧಲಿಂಗ ಸ್ತೋತ್ರ ಷಟ್ಪದಿ ಟೀಕೆ (ಸಂಕಲನ) ಹೆಸರಿನ ಮೂರು ಟೀಕಾಕೃತಿ ರಚಿಸಿರುವುದು ತಿಳಿಯುತ್ತವೆ.

''ಪ್ರಸ್ತುತ ಏಕೋತ್ತರಸಾರ ಟೀಕೆ (ಸಂಕಲನ) ಬ್ಯಾಡಗಿ ಮಠದ ಓಲೆ ಪ್ರತಿಯ ಅಂತ್ಯದಲ್ಲಿ ಸಂಪಾದನೆ ಸಿದ್ದವೀರನನ್ನು ಹೆಸರಿಸಿದೆ. ೩೯೬ ವಚನಗಳಿವೆ''[೨೭] ಎಂದು ಎಸ್. ಶಿವಣ್ಣನವರು ಉಲ್ಲೇಖಿಸಿದ್ದಾರೆ. ಅಂದರೆ, ಮೇಲ್ಕಂಡ ಓಲೆಪ್ರತಿಯ ಅಂತ್ಯದಲ್ಲಿ ಸಂಪಾದನೆ ಸಿದ್ಧವೀರನ ಹೆಸರಿರುವುದರಿಂದ 'ಏಕೋತ್ತರ ಸಾರ ಟೀಕೆ'ಯನ್ನು ಸಿದ್ಧವೀರರು ಸಂಕಲಸಿದರೆಂದು ತಿಳಿಯಲು ಅವಕಾಶವಿದೆ. ಆದರೆ, ಕೃತಿಯ ಟೀಕಾ ಸ್ವರೂಪದ ಬಗ್ಗೆ ಯಾವುದೇ ವಿವರಗಳು ಲಭ್ಯವಾಗಿಲ್ಲ.

**viii. ಪರ್ವತಶಿವಯೋಗಿಯ ಏಕೋತ್ತರ ಶತಸ್ಥಲಟೀಕೆ:**

ತುರುವೇಕೆರೆ ತಾಲೂಕಿನ ಸಂಪಗೆ ಗ್ರಾಮದ ಪರ್ವತಶಿವಯೋಗಿಯು (ಸು. ೧೭೫೦) ವೀರಶೈವ ಸಿದ್ಧಾಂತಗಳನ್ನು ಮೈಗೂಡಿಸಿಕೊಂಡಿದ್ದ ಈ ಕಾಲದ ಪ್ರಮುಖ ಟೀಕಾಕಾರರಲ್ಲಿ ಒಬ್ಬನು. ಕವಿಚರಿತೆಕಾರರು ಉಲ್ಲೇಖಿಸಿರುವಂತೆ ಈತನ ಕೃತಿಗಳು ಕೆಳಗಿನಂತಿವೆ.

೧. ಕರಸ್ಥಲದ ನಾಗಲಿಂಗನ ತ್ರಿಪದಿಯ ಟೀಕೆ.

೨. ಗುರುಸ್ತೋತ್ರದ ತ್ರಿಪದಿ (ಚೆನ್ನಮಲ್ಲ) ಟೀಕೆ.

೩. ಚೆನ್ನಬಸವನ ಕರಣಹಸುಗೆ ಟೀಕೆ.

೪. ಚೆನ್ನಬಸವನ ಮಿಶ್ರಾರ್ಪಣ ಟೀಕೆ.

೫. ಬಸವೇಶ್ವರ ದೇವರ ವಚನಸಾರಾರ್ಥ.

೬. ಮುರಿಗೆ ಶಾಂತವೀರರ ಪ್ರಭುಲಿಂಗಕಂದದ ಟೀಕೆ. ಶ್ರೀ ಎನ್. ಆರ್. ಕರಿಬಸವಶಾಸ್ತ್ರೀಗಳು ಈ ಕೆಳಗಿನ ಕೃತಿಗಳನ್ನು ರಚಿಸಿರುವುದಾಗಿ ತಿಳಿಸಿದ್ದಾರೆ.

೭. ಏಕೋತ್ತರ ಶತಸ್ಥಲ ಟೀಕೆ.

೮. ಮರುಳದೇವರ ಕಂದ ಟೀಕೆ.

೯. ಷಡ್ಷಕ್ರ ಸ್ತೋತ್ರದ ಟೀಕೆ.

೧೦. ಸಂಗಮೇಶ್ವರಾಂಕಿತ ಗುರುಸ್ತೋತ್ರದ ತ್ರಿಪದಿ ಟೀಕೆ.

೧೧. ತ್ರಿವಿಧಿ ಮೂರರಸಾರದ ಟೀಕೆ.

೧೨. ವಚನಗಳು. ಅಂಕಿತ-ಶಾಂತವೀರೇಶ್ವರಾ.

ಪರ್ವತಶಿವಯೋಗಿಯು ಬಸವೇಶ್ವರ ದೇವರ ವಚನಸಾರಾರ್ಥ ಟೀಕಾ ಕೃತಿ ಸೇರಿದಂತೆ 'ಏಕೋತ್ತರ ಶತಸ್ಥಲೀ ಟೀಕೆ, ಏಕೋತ್ತರ ಶತಸ್ಥಲಸಾರ ಚಿಂತಾಮಣಿಯಂತಹ ಪ್ರಮುಖ ಟೀಕಾಕೃತಿ ರಚಿಸಿದ್ದಾರೆ. ''೧೯೦೮ರಲ್ಲಿ ಶ್ರೀ ಎನ್.ಆರ್. ಕರಿಬಸವಶಾಸ್ತ್ರಿಗಳು ತತ್ತ್ವಪ್ರಕಾಶಿಕೆ ಪೀಠಿಕೆಯಲ್ಲಿ ಎಳಂದೂರಿನಲ್ಲಿದ್ದ ಶ್ರೀ ಹರಿಶ್ವರ ಶಾಂತವೀರಸ್ವಾಮಿಗಳ ಶಿಷ್ಯರಾದ ಪರ್ವತಶಿವಯೋಗಿಗಳು ''ಏಕೋತ್ತರ ಶತಸ್ಥಲೀ ಟೀಕೆ'' ರಚಿಸಿದ್ದನ್ನು ಪ್ರಸ್ತಾಪಿಸಿದ್ದಾರೆ. ಕಾಲಗರ್ಭದಲ್ಲಿ ಅಡಿಗಿರುವ ಹಸ್ತಪ್ರತಿಯನ್ನು ಹುಡುಕಬೇಕಾಗಿದೆ''[೨೮] ಎಂದು ಹೇಳಿದ್ದಾರೆ. ಇಲ್ಲಿಯ 'ಏಕೋತ್ತರ ಶತಸ್ಥಲಿಸಾರ ಚಿಂತಾಮಣಿ'

ಕೃತಿಯು ಜಕ್ಕಣಾರ್ಯರ ಏಕೋತ್ತರಶತಸ್ಥಲೀ ಗ್ರಂಥದ ಸಂಗ್ರಹವೇ ಆಗಿರುವುದರಿಂದ ಇದೇ ಕೃತಿ 'ಏಕೋತ್ತರ ಶತಸ್ಥಲೀ ಟೀಕೆ' ಹೆಸರಿನಲ್ಲಿ ಪ್ರಕಟವಾಗಿರಬಹುದೆ? ಎಂಬ ಸಂದೇಹವುಂಟಾಗುತ್ತದೆ.

ಎಸ್. ಶಿವಣ್ಣನವರಿಂದ ರಚನೆಗೊಂಡ ''ವೀರಶೈವ ಅಪ್ರಕಟಿತ ಗ್ರಂಥಸೂಚಿ''ಯು ೧೯೮೨ರಲ್ಲಿ ಗದುಗಿನ ತೋಂಟದಾರ್ಯ ಶ್ರೀಮಠದಿಂದ ಪ್ರಕಟವಾಗಿದ್ದು ಅದರಲ್ಲಿ ಏಕೋತ್ತರ ಶತಸ್ಥಲೀಕೃತಿ ಮತ್ತು ಸಂಗ್ರಹದ ಬಗೆಗೆ ಹೀಗೆ ಹೇಳಿದ್ದಾರೆ: ೧೬೮- ಏಕೋತ್ತರಶತಸ್ಥಲಸಾರ ಚಿಂತಾಮಣಿ (ಜಕ್ಕಣ್ಣ, ಶ್ರೀಗಿರೀಂದ್ರ) ಸಂಗ್ರಹಕಾರ ಪರ್ವತ ಶಿವಯೋಗಿ. ಹಸ್ತಪ್ರತಿ ಎಂ.ಎಸ್.ಬಸವರಾಜಯ್ಯ (ತಿಪಟೂರ) ೧೭೨-ಏಕೋತ್ತರ ಶತಸ್ಥಲೀ (ಜಕ್ಕಣ್ಣ) ಟೀಕೆ, ಶ್ರೀ ಗಿರೀಂದ್ರ, ಕಾಲ.೧೪೩೦ ಮೈಸೂರು ಕನ್ನಡ ಅಧ್ಯಯನ ಸಂಸ್ಥೆ ಕೆ.ಎ.೭೭, ೧೭೩-ಏಕೋತ್ತರ ಶತಸ್ಥಲೀ (ಜಕ್ಕಣ) ಟೀಕೆ, ಪರ್ವತಶಿವಯೋಗಿ, ಕಾಲ ೧೭೨೫, ಕ.ಸಾ.ಪ ಸಂಪುಟ ೬೧ ಸಂಚಿಕೆ ೧, ಪುಟ-೮೭.

ಪ್ರಸ್ತುತ ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ಪ್ರಕಟಿಸಿರುವ ಕೃತಿಯ ಆದಿಯಲ್ಲಿಯ ಗದ್ಯದಲ್ಲಿ ...... ''......ಚೆನ್ನವೀರೇಶ್ವರ ಗುರುವಿನ ಶ್ರೀಕರಜಾತ ಪುನೀತಾಂತಃಕರಣರಾದ ಪರ್ವತವರಶಿವಯೋಗೀಶ್ವರನು ''ಮುನ್ನ ಜಕ್ಕಣಾಚಾರ್ಯರಿಂ ಸಂಗ್ರಹಿಸಿದ ಗ್ರಂಥ ಏಕೋತ್ತರ 'ಶತಸ್ಥಲ'ವನು ಸುವಿಚಾರಂಗೈದು ಇದು ಸಾಧಕರಾದ ಮುಮಕ್ಷುಗಳಿಗೆ ಸ್ಥಲಕುಳಂಗಳನಱಿವುದಕ್ಕೆ ಗ್ರಂಥಬಾಹುಲ್ಯಮಾಗಿರಲತ್ಯಾಯಾ ಸಮಾದಪುದೆಂದುನಿರಾಯಾಸದಿಂದಱಿಯಲೋಸುಗ ನೂಱೊಂದು ಸ್ಥಲಂಗಳೊಂದೊಂದು ಸ್ಥಲಂಗಳಲ್ಲಿ ಮೂಱು ಮೂಱು ಗ್ರಂಥರತ್ನಂಗಳಂ ವ್ಯಾಖ್ಯಾನ ಸಮೇತವಾಗಿ ತೆಗೆದು 'ನಿಜಸೂತ್ರದಿಂದತಿರಮ್ಯ'ಮಪ್ಪಂತೆ ನೂಱೊಂದು ಸ್ಥಲಕ್ಕೆ ಸೇರಿಸಿದೆವು. ಶರಣಾಳಿ ಹೃತ್ಕಂಠಕರ್ಣಾಭರಣಮಾಗಲತಿಮುದದಿಂದವಧರಿ ಪುದದೆಂತೆಂದೊಡೆ; ಶ್ರೀ ಗುರು ಮಹಾಲಿಂಗದೇವರಿಗೆ ಜಕ್ಕಣಾರ್ಯರು ಭಯಭಕ್ತಿಯಿಂ ಕರಕಮಲವಂ ಮುಗಿದು 'ಅಂಗ-ಲಿಂಗ-ಸ್ಥಲಂಗಳ' ಸ್ವರೂಪಮಂ ನಿರೂಪಿಸಬೇಕೆಂದು ಭಿನ್ನಯಿಸುತ್ತಿದ್ದರು''[೨೯] ಎಂದು ಉಲ್ಲೇಖಗೊಂಡಿರುವುದರಿಂದ ಗ್ರಂಥಬಾಹುಳ್ಯ ಕಾರಣವಾಗಿ ಪರ್ವತಶಿವಯೋಗಿಯು ಜಕ್ಕಣಾರ್ಯರ 'ಏಕೋತ್ತರ ಶತಸ್ಥಲೀ' ಟೀಕೆಯನ್ನು 'ಏಕೋತ್ತರ ಶತಸ್ಥಲಸಾರ ಚಿಂತಾಮಣಿ' ಮತ್ತು 'ಏಕೋತ್ತರಶತಸ್ಥಲೀ' ಎಂದು ವಿಭಿನ್ನ ಹೆಸರಿನಲ್ಲಿ ಪ್ರಕಟಿಸಿದ್ದು, ಇವೆರಡೂ ಒಂದೇ ಕೃತಿಯ ಮೂಲವನ್ನೊಳಗೊಂಡು ಬರೆಯಲ್ಪಟ್ಟಿರಬಹುದೇ? ಎಂಬ ಪ್ರಶ್ನೆಗೆ ಪರ್ವತಶಿವಯೋಗಿ ರಚಿತ ಮೂಲಹಸ್ತಪ್ರತಿಗಳ ಶೋಧ ಮತ್ತು ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಪ್ರಕಟಗೊಂಡ ಮಾಹಿತಿಯನ್ನು ಆದರಿಸಿ ಒಂದು ನಿರ್ಣಯಕ್ಕೆ ಬರಬೇಕಾದ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ''ಏಕೋತ್ತರ ಶತಸ್ಥಲಸಾರಚಿಂತಾಮಣಿ'ಯನ್ನು ಮುದ್ರಿಸಿ 'ಏಕೋತ್ತರ ಶತಸ್ಥಲೀ' ಎಂದು ಕರೆದರೆ, ಈ ಎಲ್ಲಾ ವಿಷಯ ಸ್ಪಷ್ಟವಾಗಬೇಕಾದರೆ ಮುದ್ರಿತ ಪುಸ್ತಕವನ್ನು ಸಂಶೋಧನೆ ಮಾಡಬೇಕು''[೩೦] ಎಂಬ ಡಾ. ಬಿ. ನಂಜುಂಡಸ್ವಾಮಿಯವರ ಅಭಿಮತಕ್ಕೆ ಪುಷ್ಟಿ ನೀಡುವ ಕೆಲಸ ನಡೆಯಬೇಕಾಗಿದೆ.

**ಅಡಿಟಿಪ್ಪಣಿ**

೧. ಬಸವ ವಚನಸಾರಾಮೃತ - ಡಾ ವೀರಣ್ಣ ರಾಜೂರ, ಪುಟ–ix.

೨. ಶಿವಸಂಗಮ, ಸಂ. ಡಾ.ಬಿ.ವಿ. ಶಿರೂರ, ಪುಟ-೪೯.

೩. ಬಸವಣ್ಣನವರ ಟೀಕಿನ ವಚನಗಳು - ಸಂ., ಡಾ.ಎಂ.ಎಂ.ಕಲಬುರ್ಗಿ, ಸಂಪುಟ - ೧,೨, ಪ್ರಸ್ತಾವನೆ, ಪುಟ- v

೪. ಬಸವ ವಚನ ಸಾರಾಮೃತ - ಡಾ. ವೀರಣ್ಣ ರಾಜೂರ, ಪುಟ - ix.

೫. ಬಸವಣ್ಣನವರ ಟೀಕಿನ ವಚನಗಳು - ಸಂಪಾದಕರು, ಡಾ.ಎಂ.ಎಂ.ಕಲಬುರ್ಗಿ, ಸಂಪುಟ ೧, ೨, ಪು.v

೬. ಅದೇ ಪ್ರಸ್ತಾವನೆ, ಪುಟ - xi.

೭. ಬಸವ ವಚನ ಸಾರಾಮೃತ - ಡಾ.ವೀರಣ್ಣ ರಾಜೂರ, ಪ್ರಸ್ತಾವನೆ - x.

೮. ಬಸವಣ್ಣನವರ ಟೀಕಿನ ವಚನಗಳು - (ಸಂ) ಡಾ. ಎಂ.ಎಂ.ಕಲಬುರ್ಗಿ, ಪ್ರಸ್ತಾವನೆ- x.

೯. ಬಸವವಚನ ಸಾರಾಮೃತ - ಡಾ.ವೀರಣ್ಣ ರಾಜೂರ, ಪ್ರಸ್ತಾವನೆ - xi

೧೦. ಮೂಲಪ್ರತಿಯಲ್ಲಿ ೩೭೪ ವಚನಗಳಿವೆ. ತಾಪ್ರ ೧೬೨೫ರಲ್ಲಿ ಒಂದು ವಚನ ಹೆಚ್ಚಾಗಿದೆ, ಅದು ಸೇರಿ ಈ ಸಂಖ್ಯೆ ೩೭೫ ಆಗಿದೆ.

೧೧. ಬಸವವಚನ ಸಾರಾಮೃತ - ಡಾ.ವೀರಣ್ಣ ರಾಜೂರ, ಪ್ರಸ್ತಾವನೆ - xi.

೧೨. ಶಿವಸಂಗಮ ಸಂ. ಡಾ. ಬಿ.ವಿ. ಶಿರೂರ, ಪುಟ - ೬೭

೧೩. ಬಸವಣ್ಣನವರ ಟೀಕಿನ ವಚನಗಳು - ಸಂ., ಡಾ. ಎಂ.ಎಂ.ಕಲಬುರ್ಗಿ, ಪ್ರಸ್ತಾವನೆ - ಪುಟ - xi

೧೪. ಅದೇ ಪ್ರಸ್ತಾವನೆ - ಪುಟ - xi

೧೫. ಅದೇ ಪ್ರಸ್ತಾವನೆ - ಪುಟ - xi

೧೬. ಶಿವಸಂಗಮ - ಸಂ., ಡಾ. ಬಿ.ವಿ. ಶಿರೂರ, ಪುಟ- ೬೮.

೧೭. ಬಸವಣ್ಣನವರ ಟೀಕಿನ ವಚನಗಳು - ಸಂ., ಡಾ. ಎಂ.ಎಂ.ಕಲಬುರ್ಗಿ, ಪ್ರಸ್ತಾವನೆ, ಪುಟ - x

೧೮. ಶಿವಸಂಗಮ - ಸಂ., ಡಾ.ಬಿ.ವಿ. ಶಿರೂರ, ಪುಟ - ೬೫

೧೯. ಬಸವಣ್ಣನವರ ಟೀಕಿನ ವಚನಗಳು - ಸಂ., ಡಾ. ಎಂ.ಎಂ.ಕಲಬುರ್ಗಿ, ಪ್ರಸ್ತಾವನೆ, ಪುಟ - v, vi

೨೦. ಅದೇ ಪ್ರಸ್ತಾವನೆ, ಪುಟ - vi

೨೧. ಅದೇ ಪ್ರಸ್ತಾವನೆ, ಪುಟ - vi

೨೨. ಅದೇ ಪ್ರಸ್ತಾವನೆ, ಪುಟ - vi

೨೩. ಅದೇ ಪ್ರಸ್ತಾವನೆ, ಪುಟ - vi

೨೪. ಅದೇ ಪ್ರಸ್ತಾವನೆ, ಪುಟ - vii

೨೫. ಅದೇ ಟೀಕು - ೧೩೧, ಪುಟ - ೧೨೧

೨೬. ಅದೇ ಟೀಕು - ೧೩೨, ಪುಟ-೧೨೧, ೧೨೨

೨೭. ಅದೇ ಪ್ರಸ್ತಾವನೆ, ಪುಟ - vii

೨೮. ಅದೇ ಪ್ರಸ್ತಾವನೆ, ಪುಟ - viii

೨೯. ಅದೇ ಪ್ರಸ್ತಾವನೆ, ಪುಟ - viii

೩೦. ಅದೇ ಪ್ರಸ್ತಾವನೆ, ಪುಟ - viii

೩೧. ಅದೇ ಪ್ರಸ್ತಾವನೆ, ಪುಟ - viii

೩೨. ಅದೇ ಪ್ರಸ್ತಾವನೆ, ಪುಟ - xxi

೩೩. ಅದೇ ಟೀಕು - ೧೩೩, ಪುಟ - ೧೨೩

೩೪. ಅದೇ ಟೀಕು - ೧೯೭, ಪುಟ ೧೫೮,೧೫೯

೩೫. ಅದೇ ಟೀಕು - ೧೮೯, ಪುಟ - ೧೫೪

೩೬. ಅದೇ ಪ್ರಸ್ತಾವನೆ, ಪುಟ - ix

೩೭. ಅದೇ ಪ್ರಸ್ತಾವನೆ, ಪುಟ - xii

೩೮. ಅದೇ ಪ್ರಸ್ತಾವನೆ, ಪುಟ - xii

೩೯. ಅದೇ ಪ್ರಸ್ತಾವನೆ, ಪುಟ - xii

೪೦. ಅದೇ ಪ್ರಸ್ತಾವನೆ, ಪುಟ - xvii

೪೧. ವಚನಸಾಹಿತ್ಯ ದ್ವಿತಿಯ ಘಟ್ಟ - ಸಂ. ಎಸ್. ವಿದ್ಯಾಶಂಕರ, - ಪುಟ-೧೫೧

೪೨. ಬಸವಣ್ಣನವರ ಷಟ್‌ಸ್ಥಲದ ವಚನಗಳು, ಸಂ. ಪ್ರೊ. ಶಿ.ಶಿ. ಬಸವನಾಳ, ಪ್ರಸ್ತಾವನೆ, ಪುಟ - xivii

೪೩. ಶಿವತತ್ವ ಚಿಂತಾಮಣಿ - ಲಕ್ಕಣ್ಣ ದಂಡೇಶ (೨೯-೧೯)

೪೪. ಪ್ರಭುಲಿಂಗಲೀಲೆ - ಚಾಮರಸ (೬-೭)

೪೫. ಸಿಂಗಿರಾಜ ಪುರಾಣ : ಸಿಂಗರಾರ್ಯ (೪-೩)

೪೬. ಅಲ್ಲಮನ ವಚನ ಚಂದ್ರಿಕೆ - ಎಲ್.ಬಸವರಾಜ, ಪೀಠಿಕೆ – ಪುಟ-೪೪,

೪೭. ಅಲ್ಲಮನ ವಚನಗಳು-ಸಾಂಸ್ಕೃತಿಕ ಮುಖಾಮುಖಿ, ಸಂ., ಅಮರೇಶ ನುಗಡೋಣಿ. ಪುಟ.೮೨

೪೮. ಅಲ್ಲಮನ ವಚನಗಳು-ಸಾಂಸ್ಕೃತಿಕ ಮುಖಾಮುಖಿ, ಸಂ., ಅಮರೇಶ ನುಗಡೋಣಿ. ಪುಟ.೪೪

೪೯. ಗೌರವ - ಪ್ರೊ ಎಸ್.ಎಸ್ ಭೂಸನೂರಮಠ, ಅಭಿನಂದನ ಗ್ರಂಥ, ಸಂ., ಡಾ. ಬಿ.ವಿ. ಶಿರೂರ, ಲೇಖನ - ಬೆಡಗಿನ ವಚನ ಸಾಹಿತ್ಯ, ಪ್ರೊ. ಆರ್. ರಾಚಪ್ಪ, ಪುಟ - ೩೪೦.

೫೦. ಡಾ. ಎಲ್. ಬಸವರಾಜು, ಸಂಪಾದಿಸಿರುವ 'ಅಲ್ಲಮನ ವಚನಗಳು' ಗ್ರಂಥದ ವಚನಗಳ ಸಂಖ್ಯೆಯನ್ನು ಕೆಳಗಿನ ವಚನಗಳು ಸೂಚಿಸುತ್ತವೆ.

೫೧. ಬೆಡಗಿನ ವಚನ ಪರಂಪರೆ - ಪ್ರಕಟನೆ - ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೪, ಲೇಖನ - ಅಲ್ಲಮನ ಬೆಡಗಿನ ವಚನಗಳಲ್ಲಿ ಬಂಡಾಯದ ಅಂಶಗಳು - ಚಂದ್ರಶೇಖರ ನಂಗಲಿ, ಪು -೪೧

೫೨. ಡಾ. ಬಿ.ಆರ್. ಹಿರೇಮಠ, ಸಾಹಿತ್ಯ ಪರಿಶೋಧನ, ಪುಟ–೧೩೩.

೫೩. ಬೆಡಗಿನ ವಚನ ಪರಂಪರೆ - ವಿವಿಧ ಲೇಖಕರು, ಕನ್ನಡ ಸಾಹಿತ್ಯ ಅಕಾಡೆಮಿ, ಪುಟ - ೪೨

೫೪. ಅಲ್ಲಮನ ವಚನಗಳು : ಪೀಠಿಕೆ, ಪುಟ–೫೯,

೫೫. ಘನಶ್ರೀ - ಅಭಿನಂದನ ಗ್ರಂಥ - ಬೆಡಗಿನ ವಚನಗಳು - ಒಂದು ವಿವೇಚನೆ, ಡಾ. ಜಯಶ್ರೀ ದಂಡೆ, ಪುಟ - ೩೪೬

೫೬. ಸಕಲಪುರಾತನರ ಬೆಡಗಿನ ವಚನಗಳು ಸಂ. ಡಾ.ಎಂ.ಎಸ್. ಸುಂಕಾಪೂರ, ಪುಟ-೫, ೬.

೫೭. ಅಲ್ಲಮ ಪ್ರಭುದೇವರ ವಚನ ನಿರ್ವಚನ - ಶ್ರೀ ಸಿದ್ದೇಶ್ವರ ಶ್ರೀಗಳು, ಪ್ರಸ್ತಾವನೆ, ಪುಟ-೧೭.

೫೮. ಜನಪದ ಬೆಡಗಿನ ವಚನಗಳು - ಸಂ., ಪ್ರೊ. ಸುಧಾಕರ, ಪ್ರಸ್ತಾವನೆ, ಪುಟ-೧೯,೨೧.

೫೯. ಬೆಡಗಿನ ವಚನ ಪರಂಪರೆ - ವಿವಿಧ ಲೇಖಕರು, ಕನ್ನಡ ಸಾಹಿತ್ಯ ಅಕಾಡೆಮಿ – ೧೯೯೪, ಪುಟ–೪೩

೬೦. ಸ್ವಪ್ನಲೋಕ-ಎಪ್ರಿಲ್-೨೦೦೯, ಲೇಖನ-ಬೆಡಗಿನ ಬೆಳಕು: ಅಲ್ಲಮಪ್ರಭು, ಡಾ. ರಘುಶಂಖ ಭಾತಂಬ್ರಾ, ಪುಟ-೨೭

೬೧. ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ - ಎಚ್.ಎಸ್. ಶಿವಪ್ರಕಾಶ್, ಪುಟ.೮೮.

೬೨. ಶಿವಸಂಗಮ - ಸಂ., ಡಾ. ಬಿ.ವಿ. ಶಿರೂರ, ಪ್ರಭುದೇವರ ವಚನ ಟೀಕು, ಪುಟ-೭೪,

೬೩. ಅಲ್ಲಮಪ್ರಭುವಿನ ಟೀಕಿನ ವಚನಗಳು - ಸಂ., ಇಮ್ಮಡಿ ಶಿವಬಸವಸ್ವಾಮಿಗಳು ಪುಟ.೫

೬೪. ಪ್ರಭುದೇವರ ಷಟ್‌ಸ್ಥಲದ ವಚನಗಳು - ವ್ಯಾಖ್ಯಾನ, ಎಲ್. ಬಸವರಾಜು, ಪುಟ - ೮೩.

೬೫. ಶಿವಸಂಗಮ - ಸಂ., ಡಾ. ಬಿ.ವಿ. ಶೀರೂರ, ಅಲ್ಲಮ ಪ್ರಭುದೇವರ ವಚನಟೀಕು, ಡಾ.ಎಫ್.ಟಿ. ಹಳ್ಳಿಕೇರಿ ಪುಟ ೭೬,

೬೬. ಪ್ರಭುದೇವರ ಷಟ್‌ಸ್ಥಲ ವಚನಗಳು: ಡಾ.ಎಲ್. ಬಸವರಾಜು, ಪುಟ-೮೪

೬೭. ಅಲ್ಲಮಪ್ರಭುವಿನ ಟೀಕಿನ ವಚನಗಳು - ಸಂ., ಇಮ್ಮಡಿಶಿವಬಸವಸ್ವಾಮೀಜಿ, ಪುಟ - ೩೫.

೬೮. ಅದೇ ಪುಟ - ೩೧.

೬೯. ಅದೇ ಪುಟ-೩೯ ವಚನ-೫೯.

೭೦. ಅದೇ ಪುಟ-೪೪ ವಚನ-೬೬.

೭೧. ಅದೇ ಪುಟ-೨೪೨ ವಚನ-೫೨೭.

೭೨. ಶಿವಸಂಗಮ, ಸಂ., ಡಾ. ಬಿ.ವಿ. ಶಿರೂರ, ಪುಟ - ೭೧

೭೩. ಅಲ್ಲಮನ ವಚನ ಚಂದ್ರಿಕೆ - ಸಂ. ಡಾ. ಎಲ್. ಬಸವರಾಜು, ಪುಟ–೨೯.

೭೪. ಪ್ರೌಢರಾಯನ ಕಾವ್ಯ - ಸಂ. ಶಿ. ಭೂಸನೂರಮಠ, ಸಂ-೧. ಪುಟ-೪೦,

೭೫. ಶಿವಸಂಗಮ, ಸಂ., ಡಾ. ಬಿ.ವಿ. ಶಿರೂರ, ೨೦೦೬, ಪುಟ-೭೮.

೭೬. ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ - ಡಾ.ವಿ. ಶಿವಾನಂದ, ಪುಟ ೨೬೬.

೭೭. ಕನ್ನಡ ವಿಶ್ವವಿದ್ಯಾಲಯ, ಹಂಪಿ., ಹಸ್ತಪ್ರತಿಭಂಡಾರದ ತಾಡೋಲೆ, ಸಂಖ್ಯೆ-೩೫೮.

೭೮. ಶಿವಸಂಗಮ, ಸಂ., ಡಾ. ಬಿ.ವಿ. ಶಿರೂರ ಪುಟ - ೭೮.

೭೯. ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಡಾ. ವಿ. ಶಿವಾನಂದ, ಪುಟ - ೨೬೭, ಅಡಿಟಿಪ್ಪಣೆ - ೧೨ - ಕಲ್ಲಪ್ಪ ರೇಶ್ಮಿ ಚಿತಾಪೂರರಲ್ಲಿ ದೊರಕಿದ ಪ್ರಭುದೇವರ ಟೀಕಿನ ವಚನಗಳ ಹಸ್ತಪ್ರತಿ.

೮೦. ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಡಾ. ವಿ. ಶಿವಾನಂದ, ಪುಟ - ೨೭೦.

೮೧. ಶಿವಸಂಗಮ, ಸಂ., ಡಾ. ಬಿ.ವಿ. ಶಿರೂರ, ಪುಟ-೮೦.

೮೨. ಕನ್ನಡ ಸಾಹಿತ್ಯ ಚರಿತ್ರೆ - ಸಂ., ಡಾ. ರಾಮೇಗೌಡ, ೫ನೇ ಸಂಪುಟ, ೨ನೇ ಭಾಗ, ಕುಮಾರ ಬಂಕನಾಥ, ಲೇ., ಜಿ.ಎ. ಶಿವಲಿಂಗಯ್ಯ, ಪುಟ-೪೪.

೮೩. ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ - ಡಾ. ವಿ. ಶಿವಾನಂದ, ಪುಟ ೨೭೫.

೮೪. ತೋಂಟದ ಸಿದ್ಧಲಿಂಗ ಯತಿಗಳ ಷಟ್ಸ್ಥಲ ಜ್ಞಾನಸಾರಾಮೃತ ವ್ಯಾಖ್ಯಾನ - ಡಾ. ಎನ್. ಜಿ. ಮಹಾದೇವಪ್ಪ, ಪುಟ - x

೮೫. ತೋಂಟದ ಸಿದ್ಧಲಿಂಗೇಶ್ವರ ಸಮಗ್ರ ಸಾಹಿತ್ಯ-ಸಂಪುಟ-೧, ಸಂ., ಡಾ.ವೀರಣ್ಣ ರಾಜೂರ, ಪುಟ.xix

೮೬. ಬಸವ ಪಥ - ಎಪ್ರಿಲ್-೨೦೧೦, ತೋಂಟದ ಸಿದ್ಧಲಿಂಗೇಶ್ವರರು, ಲೇ. ಡಾ. ವೀರಣ್ಣ ರಾಜೂರ ಪುಟ - ೧೭.

೮೭. ಬಸವ ಪಥ - ಎಪ್ರಿಲ್-೨೦೧೦, ತೋಂಟದ ಸಿದ್ಧಲಿಂಗೇಶ್ವರರು, ಲೇ. ಡಾ. ವೀರಣ್ಣ ರಾಜೂರ ಪುಟ-೧೮.

೮೮. ವಿವರಗಳಿಗೆ ಈ ಗ್ರಂಥಗಳನ್ನು ನೋಡಬಹುದು - ಎಸ್. ಶಿವಣ್ಣ, ಬಿಡಿ ಮುತ್ತು, ಕನ್ನಡ ಸಾಹಿತ್ಯ ಪರಿಷತ್, ೨೦೦೪, ಪುಟ-೧೭ ರಿಂದ ೩೦,

- ಎಸ್. ಶಿವಣ್ಣ, ಶ್ರೀಕಂಠತೀರ್ಥ, ಪುಟ-೩೦೮, (ಕಾಲವಿಚಾರ - ಮರು ಪರಿಶೀಲನೆ)
- ಡಾ.ಎಂ.ಎಂ. ಕಲಬುರ್ಗಿ, ತೋಂಟದ ಸಿದ್ಧಲಿಂಗರ ಕಾಲ, ಕ.ಸಾ. ಪರಿಷತ್ಪತ್ರಿಕೆ - ಸಂಚಿಕೆ-೬೩, ಸಂಪುಟ-೧, ಜೂನ್-೧೯೭೮.
- ಡಾ. ವೀರಣ್ಣ ರಾಜೂರ, ಸಂ., ತೋಂಟದ ಸಿದ್ಧಲಿಂಗರ ಸಮಗ್ರ ಸಾಹಿತ್ಯ, ಸಂಪುಟ.೧,

೮೯. ಡಾ. ಡಿ.ವಿ. ಪರಶಿವಮೂರ್ತಿ - ತೋಂಟದ ಸಿದ್ಧಲಿಂಗಯತಿಗಳ ಖಚಿತಕಾಲ : ಶಾಸನ ಪತ್ತೆ, ಲಿಂಗಾಯತ, ಸಂಪುಟ-೪, ಸಂಚಿಕೆ-೫, ಆಗಷ್ಟ-೨೦೦೯, ಪುಟ-೩೩.

೯೦. ತೋಂಟದ ಸಿದ್ಧಲಿಂಗೇಶ್ವರ ಸಮಗ್ರ ಸಾಹಿತ್ಯ - ಸಂಪುಟ-೧, ಸಂ., ಡಾ. ವೀರಣ್ಣ ರಾಜೂರ, ಪುಟ-xxxix.

೯೧. ತೋಂಟದ ಸಿದ್ಧಲಿಂಗ ಶಿವಯೋಗಿಗಳ ಷಟ್‌ಸ್ಥಲ ಜ್ಞಾನಸಾರಾಮೃತ - ಸಂ., ಡಾ. ಆರ್.ಸಿ. ಹಿರೇಮಠ, ಪುಟ-೧೭೩.

೯೨. ತೋಂಟದ ಸಿದ್ಧಲಿಂಗೇಶ್ವರ ಸಮಗ್ರ ಸಾಹಿತ್ಯ - ಸಂಪುಟ-೧, ಸಂ., ಡಾ. ವೀರಣ್ಣ ರಾಜೂರ, ಪುಟ- xli.

೯೩. ತೋಂಟದ ಸಿದ್ಧಲಿಂಗೇಶ್ವರ ಸಮಗ್ರ ಸಾಹಿತ್ಯ - ಸಂಪುಟ-೧, (ಸಂ.) ಡಾ. ವೀರಣ್ಣ ರಾಜೂರ, ಪುಟ - xlii.

೯೪. ತೋಂಟದ ಸಿದ್ಧಲಿಂಗೇಶ್ವರ ಸಮಗ್ರ ಸಾಹಿತ್ಯ - ಸಂಪುಟ-೧, (ಸಂ.) ಡಾ. ವೀರಣ್ಣ ರಾಜೂರ, ಪುಟ - xlvii.

೯೫. ಸಿದ್ಧಲಿಂಗಯತಿ ವಚನಗಳ ಸಾಹಿತ್ಯಿಕ ವಿವೇಚನೆ - ಡಾ. ಜಿ. ಎಸ್. ಶಿವರುದ್ರಪ್ಪ, ಕೃತಿ-ವಚನಕಾರ ಸಿದ್ಧಲಿಂಗಯತಿ, ಬೆಂಗಳೂರು ವಿಶ್ವವಿದ್ಯಾಲಯ, ಪುಟ-೯೨.

೯೬. ಬಸವೋತ್ತರ ಯುಗದ ವಚನ ಸಾಹಿತ್ಯ, ಸಂ. ಡಾ. ಗುರುಪಾದ ಮರೆಗುದ್ದಿ ಪುಟ-೭೨.

೯೭. ಶಿವಸಂಗಮ - ಸಂ. ಡಾ. ಬಿ.ವಿ. ಶಿರೂರ, ಪುಟ-೨೭೪, ೨೭೫.

೯೮. ಇದು ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರದಲ್ಲಿದೆ, ತಾಳೋಲೇ, ಪ್ರತಿ-೬೬೩.

೯೯. ತೋಂಟದ ಸಿದ್ಧಲಿಂಗೇಶ್ವರರ ಸಮಗ್ರ ಸಾಹಿತ್ಯ - ಸಂಪುಟ-೧, (ಸಂ.) ಡಾ. ವೀರಣ್ಣ ರಾಜೂರ, ಪುಟ-Lii.

೧೦೦. ಶಿವಸಂಗಮ - ಸಂ. ಡಾ. ಬಿ.ವಿ. ಶಿರೂರ, ಪುಟ–೨೭೬

೧೦೧. ಶಿವಸಂಗಮ - ಸಂ. ಡಾ. ಬಿ.ವಿ. ಶಿರೂರ, ಪುಟ-೬೪.

೧೦೨. ಷಟ್‌ಸ್ಥಲ ಜ್ಞಾನಸಾರಾಮೃತ ಟೀಕೆ - ಸಂ. ಡಾ. ಎಸ್. ವಿದ್ಯಾಶಂಕರ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೮೭ ಪ್ರಸ್ತಾವನೆ ಪುಟ-v.

೧೦೩. ತೋಂಟದ ಸಿದ್ಧಲಿಂಗೇಶ್ವರರ ಸಮಗ್ರ ಸಾಹಿತ್ಯ - ಸಂಪುಟ-೧, ಸಂ. ಡಾ. ವೀರಣ್ಣ ರಾಜೂರ, ಪುಟ - xc.

* ಬಸವಣ್ಣನವರ ಟೀಕಿನ ವಚನಗಳು, ಸಂ. ಡಾ. ಎಂ.ಎಂ. ಕಲಬುರ್ಗಿ, ಪ್ರಸ್ತಾವನೆ, ಪುಟ - ix

೧೦೪. ವಚನ ಸಾಹಿತ್ಯ ದ್ವಿತೀಯ ಘಟ್ಟ - ಸಂ. ಡಾ. ಎಸ್. ವಿದ್ಯಾಶಂಕರ, ಲೇ. ಸೋಮಶೇಖರ ಶಿವಯೋಗಿಯ ಬೆಡಗಿನ ವಚನ ಟೀಕೆ - ಪ್ರೊ. ಅ.ರಾ. ಮಿತ್ರ, ಪುಟ-೧೪೩.

೧೦೫. ಶಿವಸಂಗಮ - ಸಂ. ಡಾ. ಬಿ.ವಿ. ಶಿರೂರ, ಪುಟ-೬೪,೬೫.

೧೦೬. ಷಟ್‌ಸ್ಥಲ ಜ್ಞಾನಸಾರಾಮೃತ ಟೀಕೆ - ಸಂ. ಡಾ. ಎಸ್. ವಿದ್ಯಾಶಂಕರ, ಪುಟ - v.

೧೦೭. ಪೂರ್ವೋಕ್ತ - ಪ್ರಸ್ತಾವನೆ ಪುಟ - v.

೧೦೮. ಬಸವಣ್ಣನವರ ಟೀಕಿನ ವಚನಗಳು - ಸಂ. ಡಾ. ಎಂ.ಎಂ. ಕಲಬುರ್ಗಿ, ಪುಟ-x

೧೦೯. ತೋಂಟದ ಸಿದ್ಧಲಿಂಗೇಶ್ವರರ ಸಮಗ್ರ ಸಾಹಿತ್ಯ - ಸಂಪುಟ-೧, ಸಂ. ಡಾ. ವೀರಣ್ಣ ರಾಜೂರ, ಪುಟ - xcii

೧೧೦. ತೋಂಟದ ಸಿದ್ಧಲಿಂಗೇಶ್ವರ ಕೃತ - ಷಟ್‌ಸ್ಥಲಜ್ಞಾನ ಸಾರಾಮೃತ ಟೀಕೆಗಳು, ಸಂ. ಡಾ. ವೀರಣ್ಣ ರಾಜೂರ, ಪುಟ - xci, xcii,

೧೧೧. ಡಾ. ಬಿ.ವಿ. ಶಿರೂರ ಅವರು ಪ್ರಕಟಿಸಿದ ಸೋಮಶೇಖರ ಶಿವಯೋಗಿ ಕೃತ ಷಟಸ್ಥಲ ಜ್ಞಾನ ಸಾರಾಮೃತ, ಬೆಡಗಿನ ವಚನ ಟೀಕೆ ಮತ್ತು ಕನ್ನಡ ಅಧ್ಯಯನ ಪೀಠದ ತಾಪ್ರ ೫೯ (ಸಂಕೇತ: IV - ಈ, IV- ಋ). ಹಾಗೂ ಡಾ. ವೀರಣ್ಣ ರಾಜೂರ ಅವರ ಸಂಪುಟ-೧ರ ಪ್ರಸ್ತಾವನೆ ಬಳಸಿಕೊಳ್ಳಲಾಗಿದೆ.

೧೧೨. ತೋಂಟದ ಸಿದ್ಧಲಿಂಗೇಶ್ವರರ ಸಮಗ್ರ ಸಾಹಿತ್ಯ - ಸಂಪುಟ-೧, ಸಂ. ಡಾ. ವೀರಣ್ಣ ರಾಜೂರ, ಪುಟ - Liii.

೧೧೩. ತೋಂಟದಾರ್ಯ ವಚನ ವ್ಯಾಖ್ಯೆ - ಸಂ. ಡಾ. ಸಾ. ಶಿ. ಮರುಳಯ್ಯ, ಪುಟ - viii-ix.

೧೧೪. ತೋಂಟದ ಸಿದ್ಧಲಿಂಗೇಶ್ವರ ಸಮಗ್ರ ಸಾಹಿತ್ಯ - ಸಂಪುಟ-೧, ಸಂ. ಡಾ. ವೀರಣ್ಣ ರಾಜೂರ, ಪುಟ

- Ciii.

೧೧೫. ಅದೇ ಪುಟ - Lvi-Lvii.

೧೧೬. ಅದೇ ಪುಟ - Lviii.

೧೧೭. ತೋಂಟದ ಸಿದ್ಧಲಿಂಗೇಶ್ವರ ಸಮಗ್ರ ಸಾಹಿತ್ಯ - ಸಂಪುಟ-೧, ಸಂ. ಡಾ. ವೀರಣ್ಣ ರಾಜೂರ, ಪುಟ - Lviii-Lix

೧೧೮. ಅದೇ ಪುಟ - Lxii.

೧೧೯. ಅದೇ ಪುಟ - Liii.

೧೨೦. ಅಜ್ಞಾತದೇವರು ಸಂಗ್ರಹಿಸಿ ನಿರ್ವಚಿಸಿದ ತೋಂಟದ ಸಿದ್ದೇಶ್ವರದೇವರ ಷಟ್‌ಸ್ಥಲಜ್ಞಾನಸಾರಾಮೃತ ವಚನಗಳು - ಪಿ.ಎಂ.ಗಿರಿರಾಜು, ಬಸವಪಥ ೮, ೯, ಪುಟ - ೫೩.

೧೨೧. ಪೂರ್ವೋಕ್ತ - ಡಾ. ವೀರಣ್ಣ ರಾಜೂರ, ಪ್ರಸ್ತಾವನೆ, ಪುಟ - Lxxxii.

೧೨೨. ಪೂರ್ವೋಕ್ತ - ಪ್ರಸ್ತಾವನೆಯ, ಅಡಿಟಿಪ್ಪಣಿ, ಪುಟ - Lxxxii.

೧೨೩. ಷಟ್‌ಸ್ಥಲಜ್ಞಾನಸಾರಾಮೃತ ಟೀಕೆ - ಸಂ. ಡಾ. ಎಸ್.ವಿದ್ಯಾಶಂಕರ, ಪುಟ - ix-x.

೧೨೪. ಪೂರ್ವೋಕ್ತ - ಸಂ. ಡಾ. ವೀರಣ್ಣ ರಾಜೂರ, ಪುಟ - Lxxxiii.

೧೨೫. ಷಟ್‌ಸ್ಥಲಜ್ಞಾನಸಾರಾಮೃತ ಟೀಕೆ - ಸಂ. ಡಾ.ಎಸ್. ವಿದ್ಯಾಶಂಕರ, ಪುಟ-೧.

೧೨೬. ಅದೇ ಪುಟ - xv.

೧೨೭. ಅದೇ ವಚನ, ೫೬೬. ಪುಟ - ೧೫೩.

೧೨೮. ಅದೇ ಸಂಸ್ಕೃತ ಶ್ಲೋಕದ ಟೀಕು, ಪುಟ-೭೦.

೧೨೯. ಅದೇ ಪುಟ - ೮೭.

೧೩೦. ಅದೇ ವಚನ - ೫೯೬, ಪುಟ-೧೬೮, ೧೬೯.

೧೩೧. ಅದೇ ವಚನ - ೫೯೫. ಪುಟ-೧೬೭, ೧೬೮.

೧೩೨. ಅದೇ ವಚನ - ೭೭, ಪುಟ - ೯.

೧೩೩. ಅದೇ ವಚನ - ೧೫೫, ಪುಟ - ೨೯.

೧೩೪. ಅದೇ ವಚನ - ೧೯೧, ಪುಟ - ೩೩.

೧೩೫. ಅದೇ ವಚನ - ೩೫೩, ಪುಟ - ೬೭.

೧೩೬. ಅದೇ ವಚನ - ೧೫೭, ಪುಟ - ೩೧.

೧೩೭. ತೋಂಟದ ಸಿದ್ಧಲಿಂಗೇಶ್ವರರ ಸಮಗ್ರ ಸಾಹಿತ್ಯ - ಸಂಪುಟ-೧, ಸಂ. ಡಾ. ವೀರಣ್ಣ ರಾಜೂರ, ಪುಟ - Cvii

೧೩೮. ಅದೇ ಪ್ರಸ್ತಾವನೆಯ ಅಡಿಟಿಪ್ಪಣಿ, ಪುಟ - Lxi

೧೩೯. ಅದೇ ಪುಟ - Lxi, Lxii

೧೪೦. ಅದೇ ಪುಟ - Lxii

೧೪೧. ಅದೇ ಪುಟ - Lxii

೧೪೨. ಅದೇ ಪುಟ - Lxii

೧೪೩. ಅದೇ ಪುಟ - Lxii, Lxiii

೧೪೪. ಅದೇ ಪುಟ - Lxiii

೧೪೫. ಅದೇ ಪುಟ - Lxiii

೧೪೬. ಅದೇ ಪುಟ - Lxiv

೧೪೭. ಅದೇ ಪುಟ - Lxiv, Lxv

೧೪೮. ಅದೇ ಪುಟ - Lxvi

೧೪೯. ಅದೇ ಪುಟ - Lxv

೧೫೦. ಅದೇ ಪುಟ - Lxvii

೧೫೧. ಅದೇ ಪುಟ - Lxviii

೧೫೨. ಅದೇ ಪುಟ - Lxix

೧೫೩. ಅದೇ ಪುಟ - Lxxi, Lxxii - Lxxiii

೧೫೪. ಅದೇ ಪುಟ - Lxvi, Lxxvii

೧೫೫. ಅದೇ ಪುಟ - Lxxvi

೧೫೬. ಅದೇ ಪುಟ - Lxxvii

೧೫೭. ಅದೇ ಪುಟ - Lxxvii, Lxxviii

೧೫೮. ಅದೇ ಪುಟ - Lxxviii, Lxxix

೧೫೯. ಅದೇ ಪುಟ - Lxxx

೧೬೦. ಅದೇ ಪುಟ - Lxxxi

೧೬೧. ಅದೇ ಪುಟ - Lxxxii

೧೬೨. ಶಿವಸಂಗಮ - ಸಂ. ಡಾ. ಬಿ.ವಿ. ಶಿರೂರ, ಪುಟ - ೩೧೩.

೧೬೩. ಅದೇ ಕೃತಿ, ಪುಟ - ೩೧೪.

೧೬೪. ತೋಂಟದ ಸಿದ್ಧಲಿಂಗೇಶ್ವರರ ಸಮಗ್ರ ಸಾಹಿತ್ಯ - ಸಂಪುಟ-೧, ಸಂ. ಡಾ. ವೀರಣ್ಣ ರಾಜೂರ, ಪುಟ - Lii

೧೬೫. ಅದೇ ಪುಟ - Lii

೧೬೬. ಅದೇ ಪುಟ - Lii

೧೬೭. ಅದೇ ಪುಟ - xcvii, xcviii

೧೬೮. ಕಾಡಸಿದ್ದೇಶ್ವರ ವಚನಗಳು ಸಂ. ಎ. ಎಲ್. ಹಿರೇಮಠ ಪೀಠಿಕೆ. ಪುಟ - xxi

೧೬೯. ಅದೇ ಅದೇ ಪುಟ - xxi

೧೭೦. ಅದೇ ಪುಟ - xxviii

೧೭೧. ಅದೇ ಪುಟ - ii

೧೭೨. ಸಂಕೀರ್ಣ ವಚನ ಸಂಪುಟ - ಐದು, ಸಂ. ಡಾ. ವೀರಣ್ಣ ರಾಜೂರ, ಪುಟ - xxv

೧೭೩. ಬಸವೋತ್ತರ ಯುಗದ ವಚನ ಸಾಹಿತ್ಯ - ಸಂ. ಡಾ. ಗುರುಪಾದ ಮರೆಗುದ್ದಿ, ಪುಟ.೧೭

೧೭೪. ಅದೇ ಪುಟ - ೨೨

೧೭೫. ತ್ರೈಲೋಕ್ಯ - ಚಾಲುಕ್ಯ ಉತ್ಸವ ಸಮಿತಿ ೨೦೦೮, ಲೇಖನ : ವಚನಕಾರರು. ಪುಟ.೧೦೬

೧೭೬. ಬಸವೋತ್ತರ ಯುಗದ ವಚನ ಸಾಹಿತ್ಯ ಒಂದು ಅಧ್ಯಯನ - ಡಾ. ವಿ.ಎಸ್. ಕಟಗಿಹಳ್ಳಿಮಠ, ಪುಟ-೮೦

೧೭೭. ಶಿವಸಂಗಮ - ಸಂ. ಡಾ. ಬಿ.ವಿ. ಶಿರೂರ, ಪುಟ - ೨೫೮

೧೭೮. ಅದೇ ಪುಟ - ೨೫೮

೧೭೯. ಅದೇ ಪುಟ - ೨೫೮

೧೮೦. ಸಮಗ್ರ ವಚನ ಸಂಪುಟ - ೧೦, ಪುಟ - XXVII

೧೮೧. ಶಿವಸಂಗಮ - ಸಂ. ಡಾ. ಬಿ.ವಿ. ಶಿರೂರ, ಪುಟ - ೨೬೧, ೨೬೨.

೧೮೨. ಅದೇ ಪುಟ - ೨೬೨

೧೮೩. ಕಾಡಸಿದ್ದೇಶ್ವರ ವಚನಗಳು, ಸಂ. ಎ.ಎಲ್. ಹಿರೇಮಠ, ಪುಟ - ೩೬೨

೧೮೪. ವಚನ ಸಾಹಿತ್ಯ ದ್ವಿತಿಯ ಘಟ್ಟ - ಸಂ. ಡಾ. ಎಸ್. ವಿದ್ಯಾಶಂಕರ, ಪುಟ - ೪೧

೧೮೫. ಶಿವಸಂಗಮ - ಸಂ. ಡಾ. ಬಿ.ವಿ. ಶಿರೂರ, ಪುಟ - ೨೬೪

೧೮೬. ಶ್ರೀ ಕಾಡಸಿದ್ಧೇಶ್ವರ ವಚನಗಳು, ಸಂ. ಎ.ಎಲ್. ಹಿರೇಮಠ, ಪುಟ -೩,೪

೧೮೭. ಅದೇ ಪುಟ - ೬೨, ೬೩

೧೮೮. ಅದೇ ಪುಟ - ೨೨

೧೮೯. ಅದೇ ಪುಟ - ೪೦

೧೯೦. ಅದೇ ಪುಟ - ೨೪

೧೯೧. ಅದೇ ಪುಟ - ೧೮೪

೧೯೨. ಅದೇ ಪುಟ - ೨೭೭

೧೯೩. ಅದೇ ಪುಟ - ೩೨೪

೧೯೪. ಅದೇ ಪುಟ - ೧೨೫

೧೯೫. ಅದೇ ಪುಟ - ೧೯೦, ೧೯೧

೧೯೬. ಅದೇ ಪುಟ - ೩೭೮

೧೯೭. ಅದೇ ಪುಟ - ೩೬೨

೧೯೮. ಅದೇ ಪುಟ - ೧೫

೧೯೯. ಅದೇ ಪುಟ - ೧೬

೨೦೦. ಅದೇ ಪುಟ - ೧೯

೨೦೧. ಅದೇ ಪುಟ - ೨೪

೨೦೨. ಅದೇ ಪುಟ - ೩೩

೨೦೩. ಅದೇ ಪುಟ - ೩೫

೨೦೪. ಅದೇ ಪುಟ - ೩೩೦

೨೦೫. ಶೂನ್ಯ ಸಂಪಾದನೆ ಕುರಿತು - ತೃತಿಯ ಮುದ್ರಣ - ೧೯೯೦, ಪುಟ - ೧೭, ೧೮.

೨೦೬. ನಿರಂಜನವಂಶ ರತ್ನಾಕರ - ಸಂ. ಫ.ಗು. ಹಳಕಟ್ಟಿ, ಪುಟ - ೩೧

೨೦೭. ತೋಂಟದ ಸಿದ್ಧಲಿಂಗ ಶಿವಯೋಗಿಗಳ ಷಟ್‌ಸ್ಥಲ ಜ್ಞಾನಸಾರಾಮೃತ ಚಾರಿತ್ರಿಕ ವಿವೇಚನೆ - ೧೯೬೪, ಪುಟ - ೮

೨೦೮. ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ - ಡಾ. ಶಿವಾನಂದ ವಿರಕ್ತಮಠ, ಪುಟ.೨೮೧.

೨೦೯. ಲಿಂಗಲೀಲಾ ವಿಲಾಸ ಚಾರಿತ್ರ - ಸಂ. ಎಸ್.ಎಸ್. ಭೂಸನೂರಮಠ, ಪುಟ-೩

೨೧೦. ಅದೇ ಪುಟ - ೪೧೯.

೨೧೧. ಬೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ - ಸಂ. ಆರ್.ಸಿ. ಹಿರೇಮಠ, ಎಂ.ಎಸ್ ಸುಂಕಾಪೂರ, ಪುಟ - ೫೭, ೫೮, ೬೦.

೨೧೨. ಕರ್ನಾಟಕ ಕವಿ ಚರಿತೆ, ಆರ್. ನರಸಿಂಹಾಚಾರ, ಪುಟ - ೬೧, ೬೨.

೨೧೩. ಅದೇ ಪುಟ - ೫೬.

೨೧೪. ಲಿಂಗಲೀಲಾ ವಿಲಾಸ ಚಾರಿತ್ರ, ಸಂ. ಎಸ್.ಎಸ್. ಭೂಸನೂರಮಠ, ಪುಟ - ೧೧

೨೧೫. ಅದೇ ಪುಟ - ೧೧.

೨೧೬. ಕನ್ನಡ ಸಾಹಿತ್ಯ ಚರಿತ್ರೆ - ಮೈಸೂರು ವಿಶ್ವವಿದ್ಯಾಲಯ, ೫ನೇ ಸಂಪುಟ-೨ನೇ ಭಾಗ ೨೦೦೮, ಪುಟ-೧೨೪

೨೧೭. ಶಿವಸಂಗಮ - ಸಂ. ಡಾ. ಬಿ.ವಿ. ಶಿರೂರ, ಪುಟ - ೧೦೭.

೨೧೮. ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ - ಡಾ. ಶಿವಾನಂದ ವಿರಕ್ತಮಠ, ಪುಟ - ೧೯೩.

೨೧೯. ೧೧ನೇ ಅಡಿಟಿಪ್ಪಣಿ - ಅದೇ ಪುಟ - ೪೧೮.

೨೨೦. ಜಂಗಮದಿಂದ ಸ್ಥಾವರಕ್ಕೆ - ಸಂ. ಡಾ. ಮೃತ್ಯುಂಜಯ ರುಮಾಲೆ, ಪುಟ - ೨೧೦

೨೨೧. ಲಿಂಗಲೀಲಾ ವಿಲಾಸ ಚಾರಿತ್ರ - ಸಂ. ಎಸ್.ಎಸ್. ಭೂಸನೂರಮಠ, ಪುಟ - ೪೧೯.

೨೨೨. ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ - ಡಾ. ಶಿವಾನಂದ ವಿರಕ್ತಮಠ, ಪುಟ - ೨೮೪.

೨೨೩. ಲಿಂಗಲೀಲಾ ವಿಲಾಸ ಚಾರಿತ್ರ - ಸಂ. ಎಸ್.ಎಸ್. ಭೂಸನೂರಮಠ, ಪುಟ - ೬

೨೨೪ ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ - ಡಾ.ವಿ.ಶಿವಾನಂದ, ಪುಟ - ೨೮೯.

೨೨೫. ಶಿವಸಂಗಮ - ಸಂ. ಡಾ. ಬಿ.ವಿ. ಶಿರೂರ, ಪುಟ - ೧೦೮.

೨೨೬. ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ - ಡಾ. ವಿ. ಶಿವಾನಂದ, ಪುಟ - ೨೮೯.

೨೨೭. ಲಿಂಗಲೀಲಾ ವಿಲಾಸ ಚಾರಿತ್ರ, ಸಂ. ಶಿ. ಶಿ. ಭೂಸನೂರಮಠ, ಪುಟ - ೪೦, ೪೫.

೨೨೮. ಬಸವಣ್ಣನವರ ಟೀಕಿನ ವಚನಗಳು, ಸಂ. ಡಾ. ಎಂ. ಎಂ. ಕಲಬುರ್ಗಿ, ಸಂಪುಟ–೨, ಪು - xi.

೨೨೯. ಲಿಂಗಲೀಲಾವಿಲಾಸ ಚಾರಿತ್ರ - ಸಂ. ಶಿ. ಶಿ. ಭೂಸನೂರುಮಠ, ಪುಟ - ೩೬.

೨೩೦. ಅಲ್ಲಮಪ್ರಭುವಿನ ಟೀಕಿನ ವಚನಗಳು, ಇಮ್ಮಡಿ ಶಿವಬಸವಸ್ವಾಮೀಜಿ, ಪುಟ - ೨.

೨೩೧. ಬಸವಣ್ಣನವರ ಟೀಕಿನ ವಚನಗಳು, ಸಂ. ಡಾ.ಎಂ.ಎಂ. ಕಲಬುರ್ಗಿ, ಸಂ-೧, ಪುಟ.೧೩೦.

೨೩೨. ಲಿಂಗಲೀಲಾವಿಲಾಸ ಚಾರಿತ್ರ, ಇಮ್ಮಡಿ ಶಿವಬಸವಸ್ವಾಮೀಜಿ, ಪುಟ - ೩೯೮.

೨೩೩. ಅಲ್ಲಮಪ್ರಭುವಿನ ಟೀಕಿನ ವಚನಗಳು - ಇಮ್ಮಡಿ ಶಿವಬಸವಸ್ವಾಮಿಗಳು, ಪುಟ - ೨೮೭.

೨೩೪. ಶಿವಸಂಗಮ, ಸಂ. ಡಾ. ಬಿ. ವಿ.ಶಿರೂರ, ಪುಟ - ೧೧೦.

೨೩೫. ಲಿಂಗಲೀಲಾವಿಲಾಸ ಚಾರಿತ್ರ, ಸಂ. ಸಂ.ಶಿ.ಭೂಸನೂರಮಠ, ಪುಟ - ೯೭.

೨೩೬. ಅದೇ ಪುಟ - ೯೮.

೨೩೭. ಲಿಂಗಲೀಲಾವಿಲಾಸ ಚಾರಿತ್ರ - ಸಂ. ಸಂ.ಶಿ. ಭೂಸನೂರಮಠ, ಪುಟ-೩.

೨೩೮. ವಚನ ಸಾಹಿತ್ಯ ದ್ವಿತಿಯ ಘಟ್ಟ - ಸಂ. ಡಾ. ಎಸ್. ವಿದ್ಯಾಶಂಕರ, ಪುಟ - ೧೧೧.

೨೩೯. ಅದೇ ಸಂ. ಡಾ. ಎಸ್.ವಿದ್ಯಾಶಂಕರ. ಲೇಖನ - ಲಿಂಗಲೀಲಾವಿಲಾಸ ಚಾರಿತ್ರ, ಲೇಖಕ - ಎನ್. ಬಸವಾರಾಧ್ಯ ಪುಟ - ೧೧೯.

೨೪೦. ಅದೇ ಪುಟ ೧೧೯.

೨೪೧. ವಿಶೇಷಾನುಭವ ಷಟ್ಸ್ಥಲ - ಸಂ. ಡಾ. ಆರ್.ಸಿ. ಹಿರೇಮಠ, ಪುಟ-೩೦.

೨೪೨. ವಚನ ಸಾಹಿತ್ಯ ದ್ವಿತಿಯ ಘಟ್ಟ - ಸಂ. ಡಾ. ಎಸ್. ವಿದ್ಯಾಶಂಕರ, ಪುಟ-೧೧೬

೨೪೩. ಶಿವಸಂಗಮ - ಸಂ. ಡಾ. ಬಿ. ವಿ. ಶಿರೂರ, ಪುಟ-೮೨.

೨೪೪. ವಚನ ಸಾಹಿತ್ಯ ದ್ವಿತಿಯ ಘಟ್ಟ - ಸಂ. ಡಾ. ಎಸ್. ವಿದ್ಯಾಶಂಕರ, ಪುಟ-೧೧೭

೨೪೫. ಶಿವಸಂಗಮ - ಸಂ. ಡಾ. ಬಿ. ವಿ. ಶಿರೂರ, ಪುಟ - ೮೩.

೨೪೬. ಸಿಂಗಳದ ಸಿದ್ಧಬಸವರಾಜದೇವರ ಸಕಲಪುರಾತನರ ಬೆಡಗಿನ ವಚನಗಳು ಸ.ಂ ಡಾ. ಎಂ.ಎಸ್. ಸುಂಕಾಪೂರ, ಪುಟ – ix

೨೪೭. ಅದೇ ಪುಟ – x

೨೪೮. ವಚನ ಸಾಹಿತ್ಯ ದ್ವಿತಿಯ ಘಟ್ಟ – ಸಂ. ಡಾ. ಎಸ್. ವಿದ್ಯಾಶಂಕರ, ಪುಟ–೨೦

೨೪೯. ವಚನ ಸಾಹಿತ್ಯ, ಎಂ. ಚಿದಾನಂದಮೂರ್ತಿ, ಪುಟ–೨೦೧.

೨೫೦. ವಚನ ಸಾಹಿತ್ಯ ದ್ವಿತೀಯ ಘಟ್ಟ ಸಂ. ಡಾ. ಎಸ್. ವಿದ್ಯಾಶಂಕರ, ಪುಟ–೧೬೫.

೨೫೧. ಶಿವಸಂಗಮ, ಸಂ. ಡಾ.ಬಿ.ವಿ. ಶಿರೂರ, ಪುಟ–೨೧೩

೨೫೨. ಸಾಹಿತ್ಯ ಪರಿಶೋಧನ– ಡಾ.ಬಿ.ಆರ್. ಹಿರೇಮಠ, ಪುಟ–೧೨೬

೨೫೩. ಅದೇ, ಪುಟ–೧೨೭

೨೫೪. ಅದೇ, ಪುಟ–೧೨೭

೨೫೫. ಶಿವಸಂಗಮ, ಸಂ.ಡಾ.ಬಿ.ವಿ. ಶಿರೂರ, ಪುಟ–೨೧೩

೨೫೬. ಅದೇ, ಪುಟ–೨೧೬, ೨೧೭

೨೫೭. ಸಾಹಿತ್ಯ ಪರಿಶೋಧನ, ಡಾ.ಬಿ.ಆರ್. ಹಿರೇಮಠ, ಪುಟ–೧೨೬

೨೫೮. ಶರಣ ಸಂಪದ – ಡಾ.ಬಿ.ಆರ್. ಹಿರೇಮಠ, ೨ನೇ ಅ.ಭಾ. ಶರಣಸಾಹಿತ್ಯ ಸಮ್ಮೇಳನದ ನೆನಪಿನ ಸಂಚಿಕೆ, ೧೯೮೮, ಪುಟ–೧೯,೨೬.

೨೫೯. ಪ್ರಸಾದ ಸಂಪದ - ಸಂ. ಮಲೆಯೂರು ಗುರುಸ್ವಾಮಿ, ಪುಟ-೪೩೨

* ವಚನಪರಿಭಾಷಾಕೋಶ - ಸಂ. ಡಾ. ಎನ್.ಜಿ. ಮಹಾದೇವಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೩, ಈ ಗ್ರಂಥದ ಪುಟ-೭, ಮತ್ತು ೪೧೯ನ್ನು ಗಮನಿಸಬಹುದು.

೨೬೦. ಮಹಾಲಿಂಗದೇವರ ಏಕೋತ್ತರ ಶತಸ್ಥಲ, ಸಂ. ಪ್ರೊ. ಸಂ.ಶಿ. ಭೂಸನೂರಮಠ, ೧೯೭೪, ಸರ್ವಾಚಾರ ಸಂಪತ್ತು ಸ್ಥಲದ ೨೧ನೇ ವಚನ.

೨೬೧. ಮಹಾಲಿಂಗದೇವನ ಏಕೋತ್ತರ ಶತಸ್ಥಲ - ಸಂ. ಪ್ರೊ. ಸಂ.ಶಿ. ಭೂಸನೂರಮಠ, ಪುಟ - ೪೩೨.

೨೬೨. ಗೌರವ, ಶಿ.ಶಿ. ಭೂಸನೂರಮಠರ ಅಭಿನಂದನ ಗ್ರಂಥ, ಸಂ. ಡಾ. ಬಿ.ವಿ. ಶಿರೂರ, ಪುಟ - ೩೦೪.

೨೬೩. ಸಿದ್ಧಾಂತ ಶಿಖಾಮಣಿ ಹಾಗೂ ಶ್ರೀಕರಭಾಷ್ಯ : ನಿಜದ ನಿಲುವು - ಲೇ. ಇಮ್ಮಡಿ ಶಿವಬಸವಸ್ವಾಮಿ, ಪುಟ - ೪೭.

೨೬೪. ನೂರೊಂದು ಸ್ಥಲಗಳು ಹಾಗೂ ಸಿದ್ಧಾಂತ ಶಿಖಾಮಣಿ - ಲೇ. ಇಮ್ಮಡಿ ಶಿವಬಸವಸ್ವಾಮಿ, ಪುಟ - ೫೦.

೨೬೫. ಪರ್ವತಶಿವಯೋಗಿಯ, "ಏಕೋತ್ತರ ಶತಸ್ಥಲೀಸಾರ ಚಿಂತಾಮಣೀ", ಸಂ. ಎಂ.ಎಸ್. ಬಸವರಾಜಯ್ಯ - ಪ್ರಸ್ತಾವನೆ ನೋಡಬಹುದು.

೨೬೬. ಜಂಗಮದಿಂದ ಸ್ಥಾವರಕ್ಕೆ - ಸಂ. ಡಾ. ಮೃತ್ಯುಂಜಯ ರುಮಾಲೆ, ಪುಟ-೧೧೮

೨೬೭. ವೀರಶೈವ ಧರ್ಮ ಕೈಪಿಡಿ - ಡಾ. ಸಿ.ಚ. ನಂದಿಮಠ, ಪುಟ-೧೭೩, ೧೯೧.

೨೬೮. ಮಹಾಲಿಂಗದೇವರ ಏಕೋತ್ತರ ಶತಸ್ಥಲ - ಬಿ. ನಂ. ಚಂದ್ರಯ್ಯ, ಕನ್ನಡ ಸಾಹಿತ್ಯ ಚರಿತ್ರೆ, ೫ನೇ ಸಂಪುಟ, ೨ನೇ ಭಾಗ, ಮೈಸೂರು ವಿಶ್ವವಿದ್ಯಾಲಯ, ಪುಟ-೫.

೨೬೯. ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ - ಡಾ. ವಿ. ಶಿವಾನಂದ, ಪುಟ - ೨೧೮, ೨೧೯.

೨೭೦. ಜಂಗಮದಿಂದ ಸ್ಥಾವರಕ್ಕೆ ಸಂ. ಡಾ. ಮೃತ್ಯುಂಜಯ ರುಮಾಲೆ, ಪುಟ - ೧೧೦.

೨೭೧. ಪೂರ್ವೋಕ್ತ, ಪುಟ - ೧೧೧.

೨೭೨. ಜಕ್ಕಣಾರ್ಯ ವಿರಚಿತ ಏಕೋತ್ತರ ಶತಸ್ಥಲೀ, ಡಾ. ಇಮ್ಮಡಿ ಶಿವಬಸವಸ್ವಾಮೀಜಿ, ಪುಟ - xviii.

೨೭೩. ಜಂಗಮದಿಂದ ಸ್ಥಾವರಕ್ಕೆ, ಸಂ. ಡಾ. ಮೃತ್ಯುಂಜಯ ರುಮಾಲೆ, ಪುಟ - ೧೧೨.

೨೭೪. ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಡಾ.ವಿ. ಶಿವಾನಂದ, ಪುಟ - ೨೧೮, ೨೧೯.

೨೭೫. ವಚನ ಸಾಹಿತ್ಯ ದ್ವಿತಿಯ ಘಟ್ಟ - ಸಂ. ಡಾ. ಎಸ್. ವಿದ್ಯಾಶಂಕರ, ಪುಟ ೧೩೪. ಹೆಚ್ಚಿನ ವಿವರಕ್ಕೆ ಬಸವ ಪಥ, ಜುಲೈ-೧೯೮೫, ಪುಟ-೭, ಸಂಚಿಕೆ-೪ರ ಲೇಖನ ಗಮನಿಸಬಹುದು.

೨೭೬. ಗೌರವ - ಡಾ. ಎಸ್.ಎಸ್. ಭೂಸನೂರಮಠ ಅಭಿನಂದನ ಗ್ರಂಥ, - ಸಂ. ಡಾ. ಬಿ.ವಿ. ಶಿರೂರ, ೧೯೮೬, ಪುಟ - ೩೦೨.

೨೭೭. ಅದೇ ಪುಟ - ೩೦೩.

೨೭೮. ಗೌರವ - ಭೂಸನೂರಮಠ ಅಭಿನಂದ ಗ್ರಂಥ, ಸಂ. ಡಾ.ಬಿ.ವಿ. ಶಿರೂರ, ಪುಟ - ೩೧೩.

೨೭೯. ವೀರಶೈವ ದರ್ಶನ ಮಿಮಾಂಸೆ - ಡಾ. ವಿ.ಎಸ್. ಕಂಬಿ, ಭಾಗ - ೨, ಪುಟ - ೭೩.

೨೮೦. ವಚನಶಾಸ್ತ್ರಸಾರ, ಭಾಗ-೨, ಫ.ಗು. ಹಳಕಟ್ಟಿ, ಪುಟ - ೩೪೩, ೧೯೩೮.

೨೮೧. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದ ಕನ್ನಡ ಅಧ್ಯಯನ ಪೀಠ ಸಂಶೋಧನ ಶಾಖೆ ನಂ. ೨೫೩ ರಲ್ಲಿಯ ತಾಡೋಲೆಪ್ರತಿ ಚೆನ್ನಬಸವಣ್ಣನ ಕರಣ ಹಸುಗೆಯಿಂದ ಪ್ರಾರಂಭವಾಗಿ, ಅಕ್ಕಗಳ ಸೃಷ್ಠಿಯ ವಚನ ಮೊದಲಾದವುಗಳನ್ನು ಒಳಗೊಂಡು ಕೊನೆಯಲ್ಲಿ ಈ ಭಾಗ ಹೊಂದಿದೆ - ಅಡಿಟಿಪ್ಪಣೆ - ಸಂಶೋಧನ, ಚತುರ್ಮುಖ - ಡಾ. ಬಿ.ವಿ. ಶಿರೂರ, ಪುಟ - ೩೫೬.

೨೮೨. ಮಹಾಲಿಂಗದೇವರ ಏಕೋತ್ತರ ಶತಸ್ಥಲ ಪರಿಷ್ಕರಣೆಗಳು - ಸಂಶೋಧನ ಚತುರ್ಮುಖ, ಡಾ. ಬಿ.ವಿ.ಶಿರೂರ, ಪುಟ - ೩೫೬, ೩೫೭.

೨೮೩. ಶಿವಸಂಗಮ - ಸಂ. ಡಾ.ಬಿ.ವಿ. ಶಿರೂರ, ಪುಟ-೭೫.

೨೮೪. ಶಿವಸಂಗಮ - ಸಂ. ಡಾ.ಬಿ.ವಿ. ಶಿರೂರ, ಪುಟ-೧೫೮.

೨೮೫. ಏಕೋತ್ತರ ಶತಸ್ಥಲಸಾರಾಮೃತ - ಕನ್ನಡ ಅಧ್ಯಯನ ಪೀಠ, ಹಸ್ತಪ್ರತಿ, ತಾಳೆಗರಿ ಸಂಖ್ಯೆ: ೭೬/೨ ಗರಿ ೧, ವಚನ: ೪ ಪಿಂಡಸ್ಥಲ.

೨೮೬. ಏಕೋತ್ತರ ಶತಸ್ಥಲಸಾರಾಮೃತ - ಕನ್ನಡ ಅಧ್ಯಯನ ಪೀಠ, ಹಸ್ತಪ್ರತಿ, ತಾಳೆಗರಿ ಸಂಖ್ಯೆ: ೭೬/೨ ಗರಿ ೨, ವಚನ: ೧ ಪಿಂಡಜ್ಞಾನಸ್ಥಲ.

೨೮೭. ಏಕೋತ್ತರ ಶತಸ್ಥಲಸಾರಾಮೃತ - ಕನ್ನಡ ಅಧ್ಯಯನ ಪೀಠ, ಹಸ್ತಪ್ರತಿ, ತಾಳೆಗರಿ ಸಂಖ್ಯೆ: ೭೬/೨ ಗರಿ ೪, ವಚನ: ೧ ಲಿಂಗಧಾರಣಸ್ಥಲ.

೨೮೮. ಏಕೋತ್ತರ ಶತಸ್ಥಲಸಾರಾಮೃತ - ಕನ್ನಡ ಅಧ್ಯಯನ ಪೀಠ, ಹಸ್ತಪ್ರತಿ, ತಾಳೆಗರಿ ಸಂಖ್ಯೆ: ೭೬/೨ ಗರಿ ೨೮, ವಚನ: ೧ ಜ್ಞಾನಾಗಮಸ್ಥಲ.

೨೮೯. ಸಂ. ಡಾ. ಬಿ.ವಿ. ಶಿರೂರ, ಪುಟ ೧೫೭

೨೯೦. ಕನ್ನಡ ಸಾಹಿತ್ಯ ಚರಿತ್ರೆ - ಮೈಸೂರು ವಿಶ್ವವಿದ್ಯಾಲಯ, ೫ನೇ ಸಂಪುಟ ಭಾಗ-೨, ಸಂ. ಡಾ. ರಾಮೇಗೌಡ, ಪುಟ - ೬೦.

೨೯೧. ಸ್ವರ ಏಕೋತ್ತರ ಶತಸ್ಥಲ ಟೀಕೆ - ಸಂ. ಡಾ.ಬಿ.ವಿ. ಶಿರೂರ, ಪುಟ - xix.

೨೯೨. ಜಕ್ಕಣಾರ್ಯ ವಿರಚಿತ ಏಕೋತ್ತರ ಶತಸ್ಥಲೀ, ಸಂ. ಇಮ್ಮಡಿ ಶಿವಬಸವಸ್ವಾಮಿಗಳು, ಪುಟ - xviii.

೨೯೩. Research Corner Series No-2, ೧೯೬೦, ಪ್ರೊ.ಸಿ. ಮಹದೇವಪ್ಪ, ಪುಟ - ೩, ೪.

೨೯೪. ಜಕ್ಕಣಾರ್ಯ ವಿರಚಿತ ಏಕೋತ್ತರ ಶತಸ್ಥಲೀ- ಸಂ. ಇಮ್ಮಡಿ ಶಿವಬಸವಸ್ವಾಮಿಗಳು, ಪುಟ- xviii.

೨೯೫. ಸ್ವರ ಏಕೋತ್ತರ ಶತಸ್ಥಲಟೀಕೆ - ಸಂ. ಡಾ. ಬಿ.ವಿ. ಶಿರೂರ, ಪುಟ - ೧೩

೨೯೬. ಅದೇ ಪುಟ - ೨೯

೨೯೭. ಅದೇ ಪುಟ - ೩೧, ೩೨.

೨೯೮. ಅದೇ ಪುಟ - ೩೧

೨೯೯. ಅದೇ ಪುಟ - ೩೮

೩೦೦. ಅದೇ ಪುಟ - ೪೨

೩೦೧. ಅದೇ ಪುಟ - ೪೫, ೪೮.

೩೦೨. ಅದೇ ಪುಟ - ೬೮, ೬೯.

೩೦೩. ಅದೇ ಪುಟ - ೧೨೮.

೩೦೪. ಅದೇ ಪುಟ - ೧೫೭.

೩೦೫. ಅದೇ ಪುಟ - ೩೬೩.

೩೦೬. ಶಿವಸಂಗಮ - ಸಂ. ಡಾ.ಬಿ.ವಿ. ಶಿರೂರ, ಪುಟ - ೧೨೯

೩೦೭. ಅದೇ ಪುಟ - ೧೩೨

೩೦೮. (ಓಲೆ) ೧೬೨೯/೨ (೯೧-೧೩೫) ವ.ವಾ. ಭಾಂ. ಧಾರವಾಡ.

೩೦೯. (ಓಲೆ) ಕೊಟ್ಟೂರು ಮಠದ ಸಂಗ್ರಹ, ಹೊಸಪೇಟೆ.

೩೧೦. ಆಸ್ವಾದ - ಪ್ರೊ. ಎಂ.ವಿ. ಸೀತಾರಾಮಯ್ಯನವರ ಅಭಿನಂದನ ಗ್ರಂಥ ೧೯೮೩, ಲೇ. ಎಸ್. ಶಿವಾನಂದ, ಪುಟ - ೪೩೩, ೪೪೦.

೩೧೧. ಶಿವಸಂಗಮ - ಸಂ. ಡಾ. ಬಿ.ವಿ. ಶಿರೂರ, ಪುಟ - ೧೩೭.

೩೧೨. ಅದೇ ಪುಟ - ೧೩೮.

೩೧೩. ಅದೇ ಪುಟ - ೫೫, ೫೬.

೩೧೪. ಅದೇ ಪುಟ - ೫೬.

೩೧೫. ಅದೇ ಪುಟ - ೫೬.

೩೧೬. ಅದೇ ಪುಟ - ೫೬.

೩೧೭. ವಚನ ಸಾಹಿತ್ಯ ದ್ವಿತೀಯ ಘಟ್ಟ - ಸಂ. ಡಾ.ಎಸ್. ವಿದ್ಯಾಶಂಕರ, ಪುಟ-೧೧೬.

೩೧೮. ಅದೇ ಪುಟ - ೧೧೭.

೩೧೯. ಅದೇ ಪುಟ - ೧೧೭.

೩೨೦. ಅದೇ ಪುಟ - ೧೧೮.

೩೨೧. ಅದೇ ಪುಟ - ೧೧೭, ೧೧೮.

೩೨೨. ಶಿವಸಂಗಮ - ಸಂ. ಡಾ. ಬಿ.ವಿ. ಶಿರೂರ, ಪುಟ - ೨೦೨.

೩೨೩. ಫ.ಗು. ಹಳಕಟ್ಟಿ ಸಮಗ್ರ ಸಾಹಿತ್ಯ ಸಂಪುಟ - ೯: ಕಾವ್ಯ ಸಾಹಿತ್ಯ ಭಾಗ-೨, ಸಂ. ಡಾ. ಬಾಳಣ್ಣ ಸೀಗಿಹಳ್ಳಿ, ಪುಟ - **xxxi**

೩೨೪. ಅದೇ ಪುಟ - ೧೩೦.

೩೨೫. ಅದೇ ಪುಟ - ೧೫೨.

೩೨೬. ವಚನ ಸಾಹಿತ್ಯ ದ್ವಿತೀಯ ಘಟ್ಟ - ಸಂ. ಡಾ.ಎಸ್. ವಿದ್ಯಾಶಂಕರ, ಪುಟ - ೧೩೪.

೩೨೭. ಅದೇ ಪುಟ - ೨೧

೩೨೮. ಶಿವಸಂಗಮ - ಸಂ. ಡಾ. ಬಿ.ವಿ. ಶಿರೂರ, ಪುಟ - ೧೫೦

೩೨೯. ಅದೇ ಪುಟ - ೧೪೫

೩೩೦. ಅದೇ ಪುಟ - ೧೫೧

***

ಅಧ್ಯಾಯ ಆರು

# ಕನ್ನಡ ಟೀಕಿನ ವಚನಗಳು : ಸಾಂಸ್ಕೃತಿಕ ಅಧ್ಯಯನ

೧. ಧಾರ್ಮಿಕ ಅಧ್ಯಯನ
೨. ಸಾಮಾಜಿಕ ಅಧ್ಯಯನ
೩. ಆರ್ಥಿಕ ಅಧ್ಯಯನ
೪. ರಾಜಕೀಯ ಅಧ್ಯಯನ
೫. ಸಾಹಿತ್ಯಿಕ ಅಧ್ಯಯನ
೬. ಭಾಷಿಕ ಅಧ್ಯಯನ

೬

## ಕನ್ನಡ ಟೀಕಿನ ವಚನಗಳು: ಸಾಂಸ್ಕೃತಿಕ ಅಧ್ಯಯನ

೧೦ನೇ ಶತಮಾನದಿಂದ ಆರಂಭಗೊಂಡು ಅನಂತರದ ಮಧ್ಯಕಾಲೀನ ಕಾಲಘಟ್ಟದವರೆಗೂ ವಿಶೇಷವಾಗಿ ಮತ-ಧರ್ಮ-ಭಕ್ತಿಯನ್ನು ಅಭಿವ್ಯಕ್ತಿ ಮಾಧ್ಯಮವನ್ನಾಗಿಸಿಕೊಂಡು ಬಂದ ಕನ್ನಡ ಸಾಹಿತ್ಯ ಹಲವಾರು ಪ್ರಕಾರಗಳಲ್ಲಿ ವಿಪುಲವಾಗಿ ಬೆಳೆದುಬಂದಿದೆ. ಚಂಪೂ ಪ್ರಕಾರದಿಂದ ಆರಂಭಗೊಂಡು ವಚನ, ರಗಳೆ, ಷಟ್ಪದಿ, ತ್ರಿಪದಿ, ಸಾಂಗತ್ಯ, ಕೀರ್ತನೆ ಹೀಗೆ ಹಲವು ಪ್ರಕಾರಗಳಲ್ಲಿ ಕನ್ನಡ ಸಾಹಿತ್ಯ ಮೈದಾಳಿ ನಿಂತಿದೆ. ಅದರಲ್ಲೂ ರಾಜಾಶ್ರಯದಲ್ಲಿ ಬೆಳೆದು ಬಂದ ಮಾರ್ಗ ಸಾಹಿತ್ಯವನ್ನು ಜನಾಭಿಮುಖಿಗೊಳಿಸಲು ಸ್ವತಂತ್ರ ಸಾಹಿತ್ಯ ಪ್ರಕಾರವಾಗಿ ಮೈದಾಳಿದ 'ವಚನ ಸಾಹಿತ್ಯ' ಈ ನೆಲದ ಮಣ್ಣಿನ ವಾಸನೆಯನ್ನು, ಧರ್ಮ ಸಂಸ್ಕೃತಿಯ ಸಂಘರ್ಷಗಳನ್ನು ನೈಜವಾಗಿ ದಾಖಲಿಸಲು ಪ್ರಯತ್ನಿಸಿದೆ. ವೈದಿಕ ಮತ್ತು ಜೈನಧರ್ಮಗಳಲ್ಲಿಯ ಕಂದಾಚಾರ, ತಾತ್ವಿಕ ಭಿನ್ನಾಭಿಪ್ರಾಯ ಮತ್ತು ಅಸಮಾನತೆಯ ವಿರುದ್ಧ ವಚನಗಳನ್ನು ಅಸ್ತ್ರಗಳನ್ನಾಗಿ ಬಳಸಿದ ಮೊದಲ ಬಂಡಾಯಗಾರರೆಂದರೆ ವಚನಕಾರರು. ಪ್ರಾಚೀನ ವೇದಾಗಮ-ಉಪನಿಷತ್ತುಗಳ ಅಧ್ಯಯನ-ಅನುಸಂಧಾನದ ಮೂಲಕ ಜನಭಾಷೆ ಕನ್ನಡದಲ್ಲಿ ಬರೆದ ವಚನಗಳನ್ನು 'ವಚನಾಗಮ'ಗಳೆಂದು ಹೆಸರಿಸಿ ಸಮಾಜೋ ಧಾರ್ಮಿಕ ಜಾಗೃತಿಗಾಗಿ ನಡೆಸಿದ ವಚನಕಾರರ ಸಂಘಟಿತ ಹೋರಾಟ ಜಗತ್ತಿನ ಸಾಹಿತ್ಯಿಕ ಇತಿಹಾಸದಲ್ಲಿಯೇ ಸ್ಮರಣೀಯವಾದ ಘಟನೆಯಾಗಿದೆ.

ಬಸವಾದಿ ಶಿವಶರಣರ ಮಾತೃಭಾಷೆ ಮತ್ತು ಧರ್ಮ ಭಾಷೆಯು ಕನ್ನಡವೇ ಆದುದರಿಂದ ರಾಜಾಶ್ರಯ ಪ್ರಣೀತ ಸಂಸ್ಕೃತ ಭಾಷೆಗೆ, ಅದನ್ನು ನಂಬಿದ್ದ ಮೇಲ್ವರ್ಗದವರಿಗೆ ತಮ್ಮ ಅಸ್ತಿತ್ವವೇ ಅಲುಗಾಡಿದಂತಾಯಿತು. ಕಾರಣ ಸಮಕಾಲೀನ ರಾಜರನ್ನು, ಅವರು ನಂಬಿದ್ದ ಭಾಷೆ-ಸಿದ್ಧಾಂತಗಳನ್ನು ತೊಡೆದು ಹಾಕಿದ ವಚನಕಾರರು ಜಾತಿರಹಿತವಾದ ಸಮಾನತೆಯ ಸಮಾಜವನ್ನು ಕಟ್ಟಲು ಟೊಂಕಕಟ್ಟಿ ನಿಂತರು. ಮೌಢ್ಯ-ಕಂದಾಚಾರಗಳನ್ನು ತೊಡೆದುಹಾಕಿ, ವೈಚಾರಿಕ ತಳಹದಿಯ 'ದಯವೇ ಧರ್ಮದ

ಮೂಲವಯ್ಯ' ಎಂದು ಬ್ರಹ್ಮಾಂಡದ ಕುರುಹಾದ ಇಷ್ಟಲಿಂಗಾಧಾರಿತ ಲಿಂಗಾಯತ ಧರ್ಮವನ್ನು ಪ್ರತಿಪಾದಿಸಿದ ಹರಿಕಾರರು ಈ ನಾಡಿನ ಶಿವಶರಣರು.

ಈ ಹಿನ್ನೆಲೆಯಲ್ಲಿ ನಾಡಿನ ಸಂಸ್ಕೃತಿ, ಆಚಾರ–ವಿಚಾರ, ದೇವರು–ಧರ್ಮ, ಭಾಷೆ–ಸಾಹಿತ್ಯದೊಂದಿಗೆ ಸಮಕಾಲೀನ ಸಮಾಜದ ಬಹುಮುಖ ವಿಚಾರಗಳು ಶಿವಶರಣರ ವಚನಗಳಲ್ಲಿ ದಾಖಲಾದವು. ಇದೇ ವಚನಗಳಿಗೆ ಅನಂತರದ ಕಾಲಘಟ್ಟಗಳಲ್ಲಿ ಟೀಕಾಕಾರರು ಬರೆದ ಟೀಕುಗಳು ಅಂದಿನ ಸಂಸ್ಕೃತಿಯ ಅಧ್ಯಯನಕ್ಕೆ ಆಕರಗಳಾಗಿವೆ ಎನ್ನಬಹುದು. ೧೨ನೇ ಶತಮಾನದಲ್ಲಿ ರಚನೆಯಾದ ವಚನಗಳು ಆ ಕಾಲದ ಸಾಂಸ್ಕೃತಿಕ ಜೀವನದ ಎಳೆಗಳನ್ನು ಸಹಜವಾಗಿ ಮೈಗೂಡಿಸಿಕೊಂಡದ್ದು ಮೊದಲ ಹಂತ. ೧೫ನೆಯ ಶತಮಾನದ ವೇಳೆಗೆ ಈ ವಚನಗಳಿಗೆ ಬರೆಯಲಾದ ಟೀಕು ಕೃತಿಗಳಲ್ಲಿ ಟೀಕಾಕಾರರು ಪರಂಪರೆಯೊಂದಿಗೆ ಸಮಕಾಲೀನ ಜೀವನದ ಸಾಂಸ್ಕೃತಿಕ ವಿಚಾರಗಳನ್ನು ದಾಖಲಿಸಿರುವುದು ಎರಡನೇ ಹಂತ. ಪ್ರಸ್ತುತ ಸಾಂಸ್ಕೃತಿಕ ಅಧ್ಯಯನದಲ್ಲಿ ವಚನಗಳಿಗೆ ಟೀಕಾಕಾರರು ಬರೆದ ಟೀಕುಗಳನ್ನು ಪ್ರಧಾನ ಆಕರಗಳಾಗಿಟ್ಟುಕೊಂಡು ಈ ಅಧ್ಯಯನವನ್ನು ಮಾಡಲಾಗಿದೆ.

ಡಾ. ರಾಜೇಂದ್ರ ಚೆನ್ನಿ ಅವರು ಹೇಳುವಂತೆ – "ವಚನಗಳು ಹಾಗೂ ವಚನಕಾರರ ಬಗೆಗಿನ ನಮ್ಮ ಗ್ರಹಿಕೆಗಳು ಬಹುಪಾಲು ಸಾಹಿತ್ಯಿಕವಾಗಿವೆ; ಆರಾಧಕ ನಿಲುವುಗಳಿಂದ ಪ್ರೇರಿತವಾಗಿವೆ; ಸೈದ್ಧಾಂತಿಕವಾಗಿ ಬಲಿಷ್ಠವಾಗಿಲ್ಲವೆನ್ನುವುದು ನಿಜವಾಗಿದೆ. ಹೀಗಾಗಿ ವಚನಗಳ ಒಂದು ವ್ಯಾಖ್ಯಾನ ಪರಂಪರೆ ಬೆಳೆದು ಬಂದಿದೆಯೇ ಹೊರತು, ಚಾರಿತ್ರಿಕವಾದ ಅಥವಾ ತಾತ್ವಿಕವಾದ ಚರ್ಚೆಗಳಲ್ಲ..... ಈ ವ್ಯಾಖ್ಯಾನ ಪರಂಪರೆಯಲ್ಲಿ ವಚನಕಾರರು ವಿವಿಧ ವಿಷಯಗಳ ಬಗ್ಗೆ ಏನು ಹೇಳಿದ್ದಾರೆ ಎನ್ನುವ ಸೋದಾಹರಣ ವಿವರಣೆ ಇರುತ್ತದೆ. ಈ ವಿವರಣೆ ಕೂಡಾ ಒಂದು ಸಾರ್ವತ್ರಿಕವಾದ (Universal) ಚೌಕಟ್ಟಿನಲ್ಲಿ ನಡೆಯುತ್ತದೆ. ಇದಕ್ಕೆ ಚಾರಿತ್ರಿಕವಾದ ನಿರ್ದಿಷ್ಟತೆ ಇರುವುದಿಲ್ಲ. ಕೊನೆಗೂ ಈ ವಿವರಣೆಯು ಆದರ್ಶಪರವಾದ ಮಾನವತಾವಾದಿ ನಿಲುವಿನಿಂದ ವಚನಕಾರರ ಬಗ್ಗೆ ಮೆಚ್ಚುಗೆ ತೋರುವುದರಲ್ಲಿ ಮುಕ್ತಾಯವಾಗುತ್ತದೆ. ಅಥವಾ ವಚನಗಳ ಮೂಲಕವೇ ಅಂದಿನ ಚರಿತ್ರೆ ಅಥವಾ ಸಮಾಜದ ಸಮಾಜಶಾಸ್ತ್ರೀಯ ವಿವರಣೆಯಲ್ಲಿ ತೊಡಗುತ್ತದೆ. ಹೀಗಾಗುವುದಕ್ಕೆ ಮುಖ್ಯ ಕಾರಣವೆಂದರೆ ವಚನಕಾರರ ಯುಗದ ಬಗೆಗಿನ ಚರಿತ್ರೆಯ ಗೈರುಹಾಜರಿ. ಜಗತ್ತಿನ ಯಾವುದೇ ಮಹತ್ವಪೂರ್ಣ ಸಂಗತಿಯೊಂದರ ಬಗ್ಗೆ ಈ ಪ್ರಮಾಣದ ಅಜ್ಞಾನವಿದ್ದುದು ನನಗೆ ಗೊತ್ತಿಲ್ಲ. ಲಭ್ಯವಿರುವ ಚರಿತ್ರೆ ಕೂಡಾ ವೈಚಾರಿಕ ದಾರಿದ್ರ್ಯದಿಂದ ಕೂಡಿದೆ. ಇದರಿಂದಾಗಿ ನಾವು ವ್ಯಾಖ್ಯಾನ ಪರಂಪರೆಯಿಂದ ಹೊರಬಂದಿಲ್ಲ. ಅದರಿಂದಾಗಿಯೇ ನಾನು ಈ ಹಿಂದೆ ಪ್ರಸ್ತಾಪಿಸಿದ ನವಬ್ರಾಹ್ಮಣಶಾಹಿ ಸಂಕಥನಗಳು ವಚನ ಸಂಪ್ರದಾಯವನ್ನು ಅದರ ನೆಲೆಗಳಿಂದ ಪಲ್ಲಟಗೊಳಿಸುವ ಅಪಾಯಗಳು ಹೆಚ್ಚಾಗಿವೆ."[೧] ಎಂದು ಹೇಳಿರುವ ಅಭಿಪ್ರಾಯಗಳು ಮಹತ್ವಪೂರ್ಣವೆನಿಸುತ್ತವೆ. ಏಕೆಂದರೆ, ಅಚ್ಚಗನ್ನಡದ ಬೇಸಾಯಗಾರರಾದ ಶಿವಶರಣರ ವಚನಗಳನ್ನು ಚಾರಿತ್ರಿಕ ಹಾಗೂ ವೈಚಾರಿಕ ನೆಲೆಯಲ್ಲಿ ನಾಡಿನ ಅನೇಕ ವಿದ್ವಾಂಸರು ಚರ್ಚಿಸಿದ್ದಾರೆ. ಬಹುತೇಕ ಚರ್ಚೆಗಳು ಕೇವಲ ಸಮಾಜಶಾಸ್ತ್ರೀಯ ಇಲ್ಲವೇ ಅರ್ಥಶಾಸ್ತ್ರೀಯ ನೆಲೆಗೆ

ಸೀಮಿತಗೊಳ್ಳುತ್ತವೆ. ವಚನಕಾರರ ಕಾಲದ ಇತಿಹಾಸ ಮತ್ತು ಸಂಸ್ಕೃತಿಯ ಒಳನೋಟಗಳ ಕೊರತೆಯ ಕಾರಣವೋ ಏನೋ ವಾಸ್ತವ ಸತ್ಯಗಳು ಅಗೋಚರವಾಗಿ ಉಳಿದು; ಅನಂತರ ಕಾಲಘಟ್ಟದವರ ಅವಾಸ್ತವ ಊಹೆ, ಅಸತ್ಯಗಳೇ ಸತ್ಯವೆಂದು ತಿಳಿದಿರುವುದನ್ನು ಅಲ್ಲಗಳೆಯಲಾಗದು.

ಅದರಂತೆ ೧೫ನೆಯ ಶತಮಾನದ ನಂತರದಲ್ಲಿ ವಚನಗಳಿಗೆ ಬರೆಯಲಾದ ಟೀಕುಗಳು ಕೂಡಾ ಸಾಂಪ್ರದಾಯಿಕವಾದ ಚೌಕಟ್ಟಿನಲ್ಲಿಯೇ ಹೆಜ್ಜೆ ಹಾಕಿರುವುದು ಸ್ಪಷ್ಟವಾಗಿದೆ. ಬಹುತೇಕ ಟೀಕಾಕಾರರು ವಚನಗಳ ಧಾರ್ಮಿಕ ಸಿದ್ಧಾಂತದ ಪರಿಮಿತಿಯಲ್ಲಿಯೇ ವಚನಗಳಿಗೆ ಟೀಕು ಬರೆದಿದ್ದಾರೆ. ಇವರಿಗೆ ಧರ್ಮ ಪ್ರಮುಖವಾಯಿತೆ ವಿನಃ ವಚನಗಳಲ್ಲಿಯ ಭಾಷಿಕ, ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ರಾಜಕೀಯ ಮತ್ತು ಸಂಸ್ಕೃತಿಯ ಒಳನೋಟಗಳು ಮುಖ್ಯವಾಗಲಿಲ್ಲವೆನಿಸುತ್ತದೆ. ಇದರಿಂದ ವಚನಕ್ಕೆ ಬರೆದ ಟೀಕುಗಳು ವೈಚಾರಿಕ ದಾರಿದ್ರ್ಯದಿಂದ ಬಳಲಿದವಲ್ಲದೆ ಸಮಕಾಲೀನ ಜೀವನದ ನಿಷ್ಠುರ ಸತ್ಯಗಳು ನಿಗೂಢವಾಗಿ ಉಳಿದವು. ಕಾರಣ, ಬಸವಾದಿ ಶಿವಶರಣರ ಸಮಗ್ರ ವಚನಗಳಿಗೆ ಟೀಕು ಬರೆಯುವ ಪ್ರಯತ್ನ ಮಾಡದ ಟೀಕಾಕಾರರು, ಲಿಂಗಾಯತ ಧರ್ಮದ ತಾತ್ವಿಕ ಪರಿಮಿತಿಯ ವಚನಗಳಿಗೆ ಸೀಮಿತರಾದರು. ಅಂದರೆ ವಚನಗಳ 'ಆಚಾರ' ಸಂಸ್ಕೃತಿಗೆ ಒತ್ತು ನೀಡಿದರೆ ಹೊರತು ವಚನಗಳ 'ವಿಚಾರ' ಸಂಸ್ಕೃತಿಯನ್ನು ಮೂಲೆಗುಂಪು ಮಾಡಿದರು. ಇಂತಹ ಸಾಂಪ್ರದಾಯಿಕವಾದ ಟೀಕಾಪರಂಪರೆಯ ಪರಿಣಾಮವಾಗಿ ವಚನಕಾರರ ವೈಚಾರಿಕ ಮತ್ತು ಸಾಂಸ್ಕೃತಿಕ ಕಳಕಳಿ ನೆಲದ ಮರೆಯ ನಿಧಾನವಾಗಿ ಉಳಿಯುವಂತಾಯಿತು. ಪ್ರಸ್ತುತ ಅಧ್ಯಯನದಲ್ಲಿ ಬಸವಣ್ಣ, ಅಲ್ಲಮಪ್ರಭು, ಸಮಕಾಲೀನ ಶಿವಶರಣರು, ತೋಂಟದ ಸಿದ್ಧಲಿಂಗ ಯತಿಗಳು, ಕಾಡಸಿದ್ಧೇಶ್ವರರು ಮುಂತಾದವರ ವಚನಗಳಿಗೆ ಬರೆಯಲಾದ ಟೀಕೆಗಳನ್ನು ಆಧಾರವಾಗಿಟ್ಟುಕೊಂಡು ಸಾಂಸ್ಕೃತಿಕ ಅಧ್ಯಯನಕ್ಕೊಳಪಡಿಸಲಾಗುವುದು. ತನ್ಮೂಲಕ ಟೀಕಿನ ವಚನಗಳಲ್ಲಿಯ ಸಂಸ್ಕೃತಿಯ ಒಳನೋಟದ ಮಹತ್ವದ ವಿಚಾರಗಳನ್ನು ಸ್ಥೂಲವಾಗಿ ಚರ್ಚಿಸುವ ಮೂಲಕ ಶರಣರ ಇತಿಹಾಸದ ಮೇಲೆ ಪಾರದರ್ಶಕವಾದ ಬೆಳಕನ್ನು ಚೆಲ್ಲಲು ಪ್ರಯತ್ನಿಸಲಾಗುವುದು.

**೧. ಧಾರ್ಮಿಕ ಅಧ್ಯಯನ**

೧೨ನೇ ಶತಮಾನದ ಶಿವಶರಣರ ವಚನಗಳಿಗೆ ೧೫ನೇ ಶತಮಾನದ ನಂತರ ಸಾಮೂಹಿಕ ಚಳುವಳಿಯ ಸ್ವರೂಪದಲ್ಲಿ ಟೀಕೆಗಳು ರಚನೆಯಾದವು. ವಿಶ್ವಧರ್ಮಕ್ಕೆ ಅಗತ್ಯವಾದ ದೂರದೃಷ್ಟಿಯುಳ್ಳ ಸಿದ್ಧಾಂತಗಳಾಗಿದ್ದವು. ಆದರೆ, ಶರಣಧರ್ಮವನ್ನು ಸರಿಯಾಗಿ ಅರ್ಥೈಸದ ಮುಂದಿನ ಕವಿಗಳು ಶೈವಸಂಪ್ರದಾಯಕ್ಕೆ ಜೋತುಬಿದ್ದಂತೆ ತೋರುತ್ತದೆ. ಅದೇ ರೀತಿ ಅನೇಕ ವಿದ್ವಾಂಸರು ಶರಣಸಿದ್ಧಾಂತವನ್ನು ದಾರಿತಪ್ಪಿಸುವ ಕಾರ್ಯ ಮಾಡಿದರು. ಈ ಹಿನ್ನೆಲೆಯಲ್ಲಿ ಪ್ರಕ್ಷಿಪ್ತ ವಚನಗಳನ್ನು ಬರೆದು ಶರಣರ ವಚನಗಳಲ್ಲಿ ಸೇರಿಸಿ ಸಂಕಲಿಸುವ, ಸಂಪಾದಿಸುವ ಕಾರ್ಯವನ್ನು ಮಾಡಿದರು. ವಿಕೃತ ಮನಸ್ಸಿನ ಧರ್ಮದ್ರೋಹಿಗಳು ಜಾತಿರಹಿತ ಸಮಾನತೆಯ ಸಿದ್ಧಾಂತವುಳ್ಳ ಚಲನಶೀಲ ಸಂಸ್ಕೃತಿಯ ಇಷ್ಟಲಿಂಗಾಧಾರಿತ ಧರ್ಮವನ್ನು ಸ್ಥಾವರಗೊಳಿಸುವ ಪ್ರಯತ್ನ ಮಾಡಿದರು. ಪರಿಣಾಮ 'ಜಂಗಮ' ತತ್ವ 'ಜಾತಿ'ಯಾಗಿ

ಮಾರ್ಪಾಡು ತಾಳಿತಲ್ಲದೇ ಭಕ್ತಸಮುದಾಯದವನ್ನು ಗೊಂದಲಕ್ಕೀಡು ಮಾಡಲು ಕಾರಣವಾಯಿತು. ಸಮಾಜ ಪರಿವರ್ತನೆಯ ಜೊತೆಗೆ ಸಮಾಜದ ದುರ್ಬಲರ, ಅಸಹಾಯಕರ ಧ್ವನಿಯಾಗಿ ಅವರಲ್ಲಿಯ ಅಜ್ಞಾನ ಅಂಧಕಾರವನ್ನು ತೊಡೆಯಲೆತ್ನಿಸಬೇಕಾದ ಗುರುಸ್ಥಾನದಲ್ಲಿದ್ದ ಜಂಗಮರು ಜನರ ಮೌಢ್ಯತೆ–ಅಜ್ಞಾನವನ್ನೇ ಬಂಡವಾಳ ಮಾಡಿಕೊಂಡು ಕಾಯಕವಿಲ್ಲದೇ ಹೊಟ್ಟೆತುಂಬಿಕೊಳ್ಳುವಂತಾದುದು ಈ ನಾಡಿನ ದುರಂತ. ಇದರಿಂದ "ಜಂಗಮರಲ್ಲಿಯೇ ಪಟ್ಟದ ದೇವರು, ಚರಂತಿದೇವರು ಅತೀತದೇವರು, ಆರಾಧ್ಯದೇವರು ಎಂಬ ಪ್ರಕಾರಗಳಾದವು. ಹಚ್ಚಡ ಕೊಡುತ್ತೇವೆ, ಪಾದಪೂಜೆ ಮಾಡಿಸುತ್ತೇವೆ. ಸಾವಿರ ಜನರಿಗೆ ಊಟ ಹಾಕಿಸುತ್ತಿದ್ದೇವೆಂದು ಹೇಳಿ ಜನರಿಂದ ಹಣ ಪಡೆದು, ಸ್ವಲ್ಪ ಹಣ ಅದಕ್ಕಾಗಿ ಖರ್ಚು ಮಾಡಿ ಉಳಿದ ಹಣವನ್ನು ಜೇಬಿಗೆ ಇಳಿಸುವ ಕಪಟ ವ್ಯಕ್ತಿಗಳೂ ಇದ್ದರೆಂಬುದು ವ್ಯಾಖ್ಯಾನಗಳಿಂದ ತಿಳಿದುಬರುತ್ತದೆ.[೨] ಈ ಬಗ್ಗೆ ಕೆಲವು ಉದಾಹರಣೆಗಳನ್ನು ಇಲ್ಲಿ ಗಮನಿಸಲಾಗುವುದು.

**ವಚನ :** "ಹಸಿದು ಎಕ್ಕೆಯ ಕಾಯಿ ಮೆಲಬಹುದೆ?
ನೀರಡಿಸಿ ವಿಷವ ಕುಡಿಯಬಹುದೆ?
ಸಜ್ಜನರಲ್ಲದವರನೊಲ್ಲ ಕೂಡಲಸಂಗಮದೇವ"

**ಟೀಕು :** "ಹಸಿದು ಎಕ್ಕೆಯ ಕಾಯಿ ಮೆಲಬಹುದೇ? ಎಂಬುದಕ್ಕೆ ಜಂಗಮಮೂರ್ತಿಗಳು ಕ್ಷುಧೆಯಡಿಸಿ ಭಕ್ತರ ಮನೆಗೆ ಲಿಂಗಾರ್ಪಿತ ಭಿಕ್ಷಕ್ಕೆ ಹೋದಲ್ಲಿ ಅಂಬಲಿಯಾಗಲಿ ಅಮೃತವಾಗಲಿ ತಂಗುಳಾಗಲಿ ಬಿಸಿಯಾಗಲಿ ಲಿಂಗಾಣತಿಯಿಂದ ಬಂದ ಪದಾರ್ಥವ ಕೈಗೊಂಡನುಭವಿಸಬೇಕಲ್ಲದೇ ಅವರನು ಕಾಡಿ, ಬೇಡಿ ಕರಕರಿಸಿ ಅವರನು ಭಂಡಮಾಡಿ ತಾನೂ ಭಂಡನಾಗಿ ಘಟರಕ್ಷಣ್ಯವ ಮಾಡಿಕೊಂಬಂಥವನ ಸ್ಥಿತಿಯು ಹಸಿದು ಎಕ್ಕೆಯ ಕಾಯಿ ಮೆಲುವಾತನ ಸ್ಥಿತಿಯೂ ಒಂದೆಯಾಗಿಪ್ಪುದು. ನೀರಡಿಸಿ ವಿಷವ ಕುಡಿಯಬಹುದೇ ಎಂಬುದಕ್ಕೆ ಜಂಗಮಮೂರ್ತಿಗಳು ತಮಗೆ ವಿದ್ಯೆಯಾಪೇಕ್ಷೆ ತಲೆದೋರಿದ್ದೇ ಉಂಟಾದರೆ ಬಸವಣ್ಣ, ಚೆನ್ನಬಸವಣ್ಣ, ಮೋಳಿಗೆ ಮಾರಯ್ಯ, ಕಕ್ಕಯ್ಯ, ಚಿಕ್ಕಯ್ಯ, ಮೊದಲಾದ ಪೂರ್ವ ಪ್ರಮಥಗಣಂಗಳು ಹಾಡಿದಂಥ ವಚನ ಶಾಸ್ತ್ರಂಗಳನೆ ಓದಿ ಹಾಡಿ ಪರಿಣಾಮಿಸಬೇಕಲ್ಲದೇ ಭವಿಗಳ ಮೇಲೆ ಮಾಡಿದ ರಾಮಾಯಣ ಭಾರತ ಛಂದಸ್ಸು ತರ್ಕ ವ್ಯಾಕರಣ ಮೊದಲಾದ ಭಿನ್ನ ಶಾಸ್ತ್ರಂಗಳನೆ ಓದಿ ಹಾಡಿ ಪರಿಣಾಮಿಸುವಂಥವನ ಇರಸ್ಥಿತಿಯೂ ನೀರಡಿಸಿ ವಿಷವ ಕುಡಿವಂಥವನ ಇರಸ್ಥಿತಿಯೂ ಒಂದೇಯಾಗಿಪ್ಪುದು"[೩] ಎಂದು ಅತ್ಯಂತ ನಿಷ್ಠುರವಾಗಿ ಹೇಳಿರುವುದನ್ನು ಗಮನಿಸಿ ಶರಣಧರ್ಮದ ತಾತ್ವಿಕ ಮೌಲ್ಯಗಳ ಧಾರ್ಮಿಕ ಶೋಷಣೆಯಾಗಿರುವುದನ್ನು ಟೀಕಾಕಾರರು ಖಂಡಿಸಿರುವುದು ತಿಳಿಯುತ್ತದೆ. ಅಲ್ಲದೇ ಟೀಕಾಕಾರರ ವೈಚಾರಿಕ ಮನೋಭಾವ ಇಲ್ಲಿ ಅಭಿವ್ಯಕ್ತವಾಗಿದೆ. ಅಂದರೆ, ಜಂಗಮಮೂರ್ತಿಗಳು ವಿದ್ಯೆ ಪಡೆಯಬೇಕೆಂದರೆ ವಚನ ಶಾಸ್ತ್ರಗಳನ್ನು ಓದಿ ಹಾಡಬೆಕು. ಟೀಕಾಕಾರರು ವಚನಗಳಿಗೆ ಶಾಸ್ತ್ರ ಸಮಾನವಾದ ಸ್ಥಾನಮಾನ ನೀಡುತ್ತ ಇವುಗಳನ್ನು ಓದುವ ಇಲ್ಲವೇ ಹಾಡುವ ಮೂಲಕ ವಿದ್ಯೆ ಸಂಪಾದಿಸಬೇಕೆಂದು ಸೂಚ್ಯವಾಗಿ ಹೇಳುತ್ತಾರೆ.

ಶಿವಶರಣರ ವಚನಗಳಿಗೆ ಲಿಂಗಾಯತ ಧರ್ಮದ ತಾತ್ವಿಕ ಸ್ವರೂಪ ನೀಡಲು ಪ್ರಯತ್ನಿಸಿದ ಟೀಕಾಕಾರರು ರಾಮಾಯಣ, ಭಾರತ, ಛಂದಸ್ಸು, ತರ್ಕ, ವ್ಯಾಕರಣ ಮೊದಲಾದ ಶಾಸ್ತ್ರಗಳನ್ನು ಓದಿ ಹಾಡುವುದನ್ನು ನೀರಡಿಸಿದವನು ವಿಷವನ್ನು ಕುಡಿದು ಪರಿತಪಿಸುವ ರೀತಿಯಾಗುತ್ತದೆಂದು ಸ್ಪಷ್ಟಪಡಿಸುತ್ತಾರೆ. ಜೊತೆಗೆ, ವಚನಶಾಸ್ತ್ರಗಳು ಪೂರ್ವದ ಪ್ರಮಥಗಣಂಗಳು ಹಾಡಿದವುಗಳು. ದೈವಸ್ವರೂಪ ಹೊಂದಿದವುಗಳಾದುದರಿಂದ ಇಲ್ಲಿ ಜೀವನ ಮುಕ್ತಿ ಲಭಿಸುತ್ತದೆ. ಆದರೆ, ರಾಮಾಯಣ, ಮಹಾಭಾರತಗಳು ಕೇವಲ ಭವಿಗಳ ಮೇಲೆ ಲೌಕಿಕರು ಬರೆದವುಗಳಾಗಿರುವುದರಿಂದ ಇವನ್ನು ಓದುವದಾಗಲಿ, ಹಾಡುವುದಾಗಲಿ ಸರಿಯಾದ ಕ್ರಮವಲ್ಲವೆಂದು ಟೀಕಾಕಾರರು ಸ್ಪಷ್ಟವಾಗಿ ಹೇಳುತ್ತಾರೆ. ತನ್ಮೂಲಕ ೧೨ನೇ ಶತಮಾನದ ವಚನಗಳ ಅಧ್ಯಯನದ ಜೊತೆಗೆ ಲಿಂಗಾಯತ ಧರ್ಮಕ್ಕೆ ಸಾಂಸ್ಥಿಕ ಸ್ವರೂಪ ನೀಡಲು ಟೀಕಾಕಾರರು ಪ್ರಯತ್ನಪಟ್ಟಿರುವುದನ್ನು ಮನಗಾಣಬಹುದಾಗಿದೆ.

ಬಸವಣ್ಣನವನರದು ಭಕ್ತಿ ಪಕ್ಷ. ಅದಕ್ಕೆ ಜಾತಿ–ಮತ–ಭೇದಗಳಿಲ್ಲ. "ಕಂಡಭಕ್ತರಿಗೆ ಕೈ ಮುಗಿವಾತನೇ ಭಕ್ತ" "ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ" "ಅರಿತರೆ ಶರಣ ಮರೆತರೆ ಮಾನವ" ಹೀಗೆ ಹಲವಾರು ವಚನಗಳಲ್ಲಿ ಶಿವಭಕ್ತರು, ಶಿವಶರಣರು, ಗುರುಗಳು, ಜಂಗಮರು ಹೇಗಿರಬೇಕೆಂಬುದನ್ನು ತುಂಬಾ ಅರ್ಥಪೂರ್ಣವಾಗಿ ಹೇಳಿದ್ದಾರೆ. ವಚನಗಳ ಅಂತರಂಗದಲ್ಲಿರುವ ಉದ್ದೇಶವನ್ನು ಟೀಕಾಕಾರರು ಕೆಲವೊಮ್ಮೆ ನಿಖರವಾಗಿ ಹೇಳದೇ ಹೋಗಿದ್ದರೆ ಜಾತಿವಾದಿಗಳು ಸೃಷ್ಟಿಸಿದ ಕೆಸರಿನಿಂದ ಹೊರಬರುವುದು ತುಂಬಾ ಕಠಿಣವಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ವಚನವೊಂದನ್ನು, ಅದಕ್ಕೆ ಬರೆದ ಟೀಕೆಯನ್ನು ಗಮನಿಸಬಹುದು.

**ವಚನ:** "ಎನ್ನವಾಮಕ್ಷೇಮ ನಿಮ್ಮದಯ್ಯ, ಎನ್ನ ಹಾನಿವೃದ್ಧಿ ನಿಮ್ಮದಯ್ಯ
ಎನ್ನ ಮಾನಾಪಮಾನ ನಿಮ್ಮದಯ್ಯ, ಬಳ್ಳಿಗೆ ಕಾಯಿ ದಿಮ್ಮಿತ್ತೆ
ಕೂಡಲಸಂಗಮದೇವಾ?

**ಟೀಕು:** "ಎನ್ನ ವಾಮ ಎಂದರೆ ದುಃಖ, ಕ್ಷೇಮ ವೆಂದರೆ ಸುಖವು, ನಿಮ್ಮದಯ್ಯ – ಎನ್ನ ಸುಖದುಃಖಗಳು ನಿಮ್ಮವಯ್ಯ, ಜಂಗಮಮೂರ್ತಿಗಳದಯ್ಯ, ಎನ್ನ ಹಾನಿ ವೃದ್ಧಿ ನಿಮ್ಮದಯ್ಯ ಹಾನಿ ಎಂದರೆ ಕಿರಿದು ವೃದ್ಧಿಯೆಂದರೆ ಹಿರಿದು..."[೪] ಎಂದು ಬರೆದಿರುವ ಟೀಕೆಯಲ್ಲಿ ವಾಮ, ಕ್ಷೇಮ, ಹಾನಿ, ವೃದ್ಧಿ ಶಬ್ಧಗಳ ಅರ್ಥವನ್ನು ನೀಡಿರುವುದರಿಂದ ಟೀಕಾಕಾರರು ಕನ್ನಡ ನಿಘಂಟು ರಚನಾ ಪ್ರಾವೀಣ್ಯತೆಯುಳ್ಳವರಾಗಿದ್ದರೆಂಬುದರಲ್ಲಿ ಸಂಶಯವಿಲ್ಲ. "ನಿಮ್ಮವಯ್ಯ" ಎಂಬುದಕ್ಕೆ ದೇವರು, ಶಿವ, ಈಶ್ವರ ಎಂದರ್ಥ ನೀಡದೇ "ಜಂಗಮಮೂರ್ತಿಗಳದಯ್ಯ" ಎಂದು ಶಬ್ಧದೊಳಗಿನ ಧ್ವನಿಯನ್ನು ವಾಚ್ಯಾರ್ಥಗೊಳಿಸುವ ಮೂಲಕ ವಚನ ಓದುಗರ ಗೊಂದಲವನ್ನು ಪರಿಹರಿಸುತ್ತಾರೆ. ಅಂದರೆ, ಜಂಗಮ ವ್ಯಕ್ತಿವಾಚಕ ಇಲ್ಲವೇ ಜಾತಿವಾಚಕವಾಗದೇ ಸಮಷ್ಟಿ ಸಮಾಜವಾಗಿ, ದೈವಸ್ವರೂಪವಾಗಿ ಶರಣರು ಬಳಸಿದರೆಂಬುದಕ್ಕೆ ಈ ಟೀಕೆ ಉತ್ತರ ನೀಡುತ್ತದೆ. ಅಂದರೆ, ಶರಣಧರ್ಮ ತನ್ನ ಮೂಲಸ್ವರೂಪವನ್ನು ಕಳಚಿಕೊಂಡು ಹೋಗದಂತೆ ಟೀಕಾಕಾರರು ಯತ್ನಿಸಿರುವುದು ತಿಳಿಯುತ್ತದೆ.

ಈ ಬಗ್ಗೆ ಡಾ. ಬಿ.ಆರ್. ಹಿರೇಮಠರು ಬಸವಣ್ಣನವರ ಟೀಕಿನ ವಚನಗಳ ಕುರಿತಾಗಿ ಬರೆಯುತ್ತಾ "ವೀರಶೈವವು ಮತೀಯ ಹಾಗೂ ಜಾತಿವಾಚಕ ಕೂಪಕ್ಕೆ ಬಿದ್ದ ಸಮಯದಲ್ಲಿ ಈ ಟೀಕೆಗಳು ಹುಟ್ಟಿಕೊಂಡಿವೆ. ಕಾರಣ 'ಜಂಗಮ' ಎನ್ನುವುದು ಜಾತಿವಾಚಿಯಾಗಿ, ಆಚಾರ್ಯವಾಚಿಯಾಗಿ ಬಳಕೆಯಾಗಿರುವುದನ್ನು ಇಲ್ಲಿ ಕಾಣುತ್ತೇವೆ"[೫] ಎಂದಿದ್ದಾರೆ. ಅಂದರೆ, ವಿಚಾರವಾದಿಗಳಿಂದ ಕೂಡಿದ್ದ ವೀರಶೈವಧರ್ಮ ಆಚಾರ್ಯ ಸಂಪ್ರದಾಯದ ಮೂಲಭೂತವಾದಿಗಳಿಂದ 'ಜಂಗಮ' ತತ್ವ ಮಸುಕಾಗಿ 'ಜಂಗಮ' ವ್ಯಕ್ತಿವಾಚಕ ಇಲ್ಲವೇ ಜಾತಿವಾಚಕವಾಗಿ ರೂಢಿಯಲ್ಲಿ ಬರುವಂತಾಯಿತು ಎಂಬ ಡಾ. ಹಿರೇಮಠರ ಹೇಳಿಕೆಯಲ್ಲಿ ಅತಿಶಯೋಕ್ತಿ ಇಲ್ಲ. ಏಕೆಂದರೆ, ಶಿವಶರಣರ ಕಾಲದಲ್ಲಿ ಗುರು-ಲಿಂಗ-ಜಂಗಮ ತತ್ವಗಳಿಗೆ ನೀಡಿದ್ದ ಮಹತ್ವ ಕಾಲಾಂತರದಲ್ಲಿ ಅಳಿಸಲಾರಂಭಿಸಿತು. ದೇಹವನ್ನೇ ದೇವಾಲಯವೆಂದು, ಲಿಂಗಸ್ವರೂಪವೆಂದು ಭಾವಿಸಿ ಹೆಜ್ಜೆ ಹಾಕಬೇಕಾದ 'ಗುರು' ವರ್ಗವು ಸಂಪ್ರದಾಯಗಳಿಗೆ ಜೋತುಬಿದ್ದು ಗುಡಿಗುಂಡಾರಗಳಲ್ಲಿ ಪುರೋಹಿತರಾದರು. ಬ್ರಹ್ಮಾಂಡದ ಚಿತ್ಕಳೆಯಾದ 'ಇಷ್ಟಲಿಂಗ'ವೂ ಗುಡಿಗುಂಡಾರದ ಸ್ಥಾವರಲಿಂಗಗಳಾಗಿ ಜೀವವೇ ಬೇರೆ, ಪರಮಾತ್ಮ ಬೇರೆ ಎಂಬ ದ್ವೈತ ಸಿದ್ಧಾಂತದತ್ತ ಸಂಪ್ರದಾಯವಾದಿಗಳು ಮುಖಮಾಡಿದರು. ವೀರಶೈವ ಧರ್ಮದ ಪ್ರಗತಿಪರ ವಿಚಾರಗಳನ್ನು ನಾಡಿನ ಮನೆಮನೆಗೆ ತಲುಪಿಸಿ ಅವರಲ್ಲಿ ಜಾಗೃತಿಯುಂಟುಮಾಡಬೇಕಾದ 'ಜಂಗಮ'ರು ವೇಷಾಡಂಬರಿಗಳಾಗಿ ಸಮಾಜದ ಮುಗ್ಧರನ್ನು ಶೋಷಣೆಗೆ ಒಳಗು ಮಾಡಿದರು. ಇದರಿಂದಾಗಿ ಲಿಂಗಾಯತ ಧರ್ಮದ ಸಿದ್ಧಾಂತ ಮತ್ತು ಸಾಂಸ್ಕೃತಿಕ ಚರಿತ್ರೆಯ ಚಾರಿತ್ರ್ಯಕ್ಕೆ ಸ್ವಧರ್ಮಿಯರಿಂದಲೇ ದೊಡ್ಡ ಅಪಾಯ ಎದುರಾದುದು ಟೀಕಿನ ವಚನಗಳಿಂದ ತಿಳಿದುಬರುತ್ತದೆ. ಈ ಬಗ್ಗೆ ವಚನವೊಂದಕ್ಕೆ ಬರೆದ ಟೀಕೆಯನ್ನು ಗಮನಿಸೋಣ.

**ವಚನ:** "ವಚನದ ಹುಸಿಯ ನುಸುಳೆಂತು ಮಾಂಬುದೊ?
ಎನ್ನ ಮನದ ಮರ್ಕಟತನವೆಂತು ಮಾಂಬುದೊ?
ಎನ್ನ ಹೃದಯದ ಕಲ್ಮಷವೆಂತು ಮಾಂಬುದೊ?
ಎನ್ನ ಕಾಯ ವಿಕಾರಕ್ಕೆ ತಜಿಸಲು ಹೋದೆನು
ಎನಗಿದು ವಿಧಿಯೇ ಕೂಡಲಸಂಗಮದೇವಾ?"

**ಟೀಕು:** "ಶಿವಾನುಭಾವಿಗಳು, ಒಂಟಿಗಾರ ವಿರಕ್ತರು ಪ್ಯಾಟಿಮನೆಪುರ ಪಟ್ಟಣ ಸ್ಥಾನಂಗಳಲ್ಲಿಗೆ ಹೋಗಿ ಚೌಕಿಮಠಂಗಳಲ್ಲಿ ಹಾಸಿಕೊಂಡು ಓದುತ್ತ ಹಾಡುತ್ತ ಶಿವಾನುಭಾವವನು ಮಾಡುತ್ತಿರ್ದಲ್ಲಿ ಅಲ್ಲಿಗೊಬ್ಬ ಉಪಾಧಿಕನು ಬಂದು ಅವರ ಶಿವಾನುಭಾವವನ್ನು ಬೆಸಗೊಂಡು ಕೇಳಿ ಸ್ವಾಮಿ ಇಷ್ಟು ದಿವಸಂತೂ ತನುಮನಧನಂಗಳನು ವಂಚಿಸಿಕೊಂಡದ್ದು ಹೋಗಲಿ..... ತನುಮನಧನ ನಿಮ್ಮದು ನಾನು ನಿಮ್ಮ ತೊತ್ತು ತೊಂಡ ಸೇವಕನೆಂದು ಹೇಳಿಕೊಂಡಲ್ಲಿ ಅದರೊಳಗೊಬ್ಬ ಜಂಗಮಮೂರ್ತಿಯು ಇವ ಬಹು ಹೇಳಿಕೊಂಬುತ್ತೈದಾನೆ... ಎಂದು ಈತನಿಂದ ತಪ್ಪಿಸಿಕೊಳ್ಳಲು ಸಂದಿಗೊಂದಿಗಳನ್ನು

ತಿರುಗುವದನ್ನು ಟೀಕಾಕಾರನು ಹೇಳುವುದರಿಂದ"[೬] ಜಂಗಮರು ಚೌಕಿಮಠಗಳಲ್ಲಿ ಓದುವ, ಹಾಡುವ ಮತ್ತು ಶಿವಾನುಭವ ನಡೆಸುತ್ತಿದ್ದರೆಂದು ತಿಳಿಯುತ್ತದೆ. ಬಹಳ ಮುಖ್ಯವಾಗಿ ಮಲತ್ರಯ ಬಂಧಿಯಾದ ಲೌಕಿಕನೊಬ್ಬನು (ಉಪಾಧಿಕನು) "ಕೇಳಿ ಸ್ವಾಮಿ ಇಷ್ಟು ದಿವಸಂತೂ ತನುಮನಧನಂಗಳನು ವಂಚಿಸಿಕೊಂಡದ್ದು ಹೋಗಲಿ" ಎಂದು ಹೇಳುವ, ಅದನ್ನು ಕೇಳಲು ಆಗದ ಮಠದಲ್ಲಿಯ ಶಿವಾನುಭಾವಿಗಳು (ಜಂಗಮಮೂರ್ತಿಗಳು) ಈತನಿಂದ ತಪ್ಪಿಸಿಕೊಳ್ಳಲು ಓಡಾಡುವುದನ್ನು ಗಮನಿಸಿದಾಗ ಆ ಕಾಲದ ಸ್ಪಷ್ಟ ಚಿತ್ರವೊಂದು ಅನಾವರಣಗೊಳ್ಳುತ್ತದೆ. ಗುರುಲಿಂಗ-ಜಂಗಮಕ್ಕೆ ತನು-ಮನ-ಧನ ಅರ್ಪಿಸಬೇಕೆಂಬ ಶರಣರ ಸಿದ್ಧಾಂತ ೧೬ನೇ ಶತಮಾನದ ವೇಳೆಗೆ ತಾತ್ವಿಕತೆ ಕಳಚಿಕೊಂಡು ಸೀಮಿತ ಜಾತಿಯ ಕಪಟ ಜಂಗಮರಿಗೆ ತನು-ಮನ-ಧನ ಅರ್ಪಿಸುವಂತಹ ದುಃಸ್ಥಿತಿಯನ್ನು ನೇರವಾಗಿ ಪ್ರತಿಭಟಿಸುವ, ವ್ಯಂಗ್ಯ ಮಾತುಗಳಿಂದ ವಿಡಂಬಿಸುವುದನ್ನು ಇಲ್ಲಿ ಕಾಣುತ್ತೇವೆ.

ಹೀಗೆ ಧರ್ಮದ ಹೆಸರಿನಲ್ಲಿ ಪುನಃ ಜಾತಿವ್ಯವಸ್ಥೆಯು ಪ್ರಭಲವಾಗಿ ಬೆಳೆಯುತ್ತ ಸಾಗಿರುವುದನ್ನು ಟೀಕಿನ ವಚನಕಾರರು ತಮ್ಮ ವ್ಯಾಖ್ಯಾನಗಳ ಮೂಲಕ ದೃಢಪಡಿಸಿರುವುದನ್ನು ಶ್ರೀ ಕಾಡಸಿದ್ದೇಶ್ವರರ ವಚನ ಟೀಕೆಗಳಲ್ಲಿಯು ಕಾಣಬಹುದಾಗಿದೆ. ವಿಚಿತ್ರವಾದರೂ ಸತ್ಯವೆಂದರೆ ಶಿವಶರಣರ ವಚನಗಳಲ್ಲಿ ಸಾಮಾಜಿಕ, ಸಾಂಸ್ಕೃತಿಕ ವಿಷಯಗಳ ಬಗ್ಗೆ ವಿವರಣೆಗಳಿದ್ದರೂ ಟೀಕಾಕಾರರು ಅಂತಹ ವಚನಗಳಿಗೆ ಸಾಮಾಜಿಕ ಇಲ್ಲವೇ ಸಾಂಸ್ಕೃತಿಕ ನೆಲೆಯಲ್ಲಿ ಟೀಕು ಬರೆಯುವ ಪ್ರಯತ್ನ ಮಾಡದಿರುವುದು. ಈ ಮಾತು ಬಹುತೇಕ ಎಲ್ಲ ವಚನಕಾರರ ಟೀಕುಗಳಿಗೂ ಅನ್ವಯವಾಗುತ್ತದೆ. ಇದಕ್ಕೆ ಕಾರಣ, ಟೀಕಾಕಾರರ ಸಾಂಪ್ರದಾಯಿಕ ನಿಲುವುಗಳು ಮತ್ತು ಧಾರ್ಮಿಕ ಚೌಕಟ್ಟಿನಲ್ಲಿಯೇ ವ್ಯಾಖ್ಯಾನ ಬರೆಯಬೇಕೆಂಬ ಪೂರ್ವನಿರ್ಧರಿತವಾದ ಮನೋಭಾವಗಳೆನ್ನಬಹುದು.

ಗುರು-ಲಿಂಗ-ಜಂಗಮ, ಅಷ್ಟಾವರಣಗಳ ಬಗ್ಗೆ ತಿಳಿಯದೇ ತಾವು ಶ್ರೇಷ್ಟರೆಂದು ಸಾಧಿಸುವವರನ್ನು ಕಾಡಸಿದ್ದೇಶ್ವರರು ಸೂತ್ರವೊಂದರಲ್ಲಿ ಹೀಗೆ ಹೇಳುತ್ತಾರೆ. "ನಾವು ಪರಮವಿರಕ್ತರು, ಪಟ್ಟದಯ್ಯಗಳು, ಚರಮೂರ್ತಿಗಳು ಗುರುಸ್ಥಳದ ಅಯ್ಯತನದ ಮೂರ್ತಿಗಳೆಂದು ಪಾದಪೂಜೆಯ ಮಾಡಿಸಿಕೊಂಡು ಪಾದವ ಪಲಿಸುವರೆಂದು ಭಕ್ತರಿಗೆ ತೀರ್ಥವೆಂದು ಕೊಡುವಂತವರು ಬೀದಿ ಬಜಾರದಲ್ಲಿ ಕುಳಿತು ಸೆರೆಯ ಮಾರುವ ಹೆಂಡಗಾರರು ಇವರಿಬ್ಬರು ಸರಿ ಎಂಬೆ"[೭] ಎಂದು ತುಂಬಾ ಕರ್ಣಕಠೋರವಾಗಿ ವಿಡಂಬಿಸಿದ್ದಾರೆ. ಆದರೆ, ಟೀಕಾಕಾರರು ಮಾತ್ರ ಇಂತಹ ವಚನಗಳಿಗೆ ಸಮಕಾಲೀನ ಸನ್ನಿವೇಶಗಳನ್ನು ಉದಾಹರಿಸಿ ಟೀಕು ಬರೆಯಬಹುದಿತ್ತು. ಅಂತಹ ಪ್ರಯತ್ನಗಳು ಟೀಕಾಕಾರರಿಂದ ನಡೆಯದಿರುವುದು ನಾಡಿನ ಸಾಂಸ್ಕೃತಿಕ ಇತಿಹಾಸದ ಮೇಲೆ ಕತ್ತಲೆ ಆವರಿಸಲು ಕಾರಣವಾಯಿತು. ವಚನಕಾರರಲ್ಲಿಯ ಸಮಾಜದ ವಿಡಂಬನೆಯ ನಿಷ್ಠುರತೆ ಟೀಕಾಕಾರರಲ್ಲಿ ಎಲ್ಲಿಯೂ ಕಂಡುಬರುವದಿಲ್ಲ. ಟೀಕಾಕಾರರು 'ವಚನ'ವೊಂದರ ಶಬ್ದಶಃ ಅರ್ಥ ನೀಡುವುದರ ಜೊತೆಗೆ, ಆ ವಚನದ ಸಮಾಜಶಾಸ್ತ್ರೀಯವಾದ ವಿಷಯಗಳನ್ನು ತಿಳಿಸಿದ್ದರೆ ನಾಡಿನ ಸಾಂಸ್ಕೃತಿಕ ಇತಿಹಾಸದ ಮೇಲೆ ಬೆಳಕು ಚೆಲ್ಲಬಹುದಾಗಿತ್ತು. ಆದರೆ, ಆ ರೀತಿಯಲ್ಲಿ ಟೀಕಾಕಾರರು ಚಿಂತನೆ ಮಾಡದಿರುವುದು ಅವರ ಹಲವಾರು ಮಿತಿಗಳಲ್ಲಿ

ಈ ಮಿತಿಯು ಇಂದು ಎದ್ದು ಕಾಣುವಂತಾಗಿದೆ. ಏಕೆಂದರೆ, ವಚನಕಾರ ಕಾಡಸಿದ್ದೇಶ್ವರರ ಹೇಳುವಂತೆ– " ಈ ವಚನದ ಬೇಧವ ತಿಳಿಯದಿದ್ದರೆ ಸತ್ತಹಾಗೆ ಸುಮ್ಮನೆ ಇರು ಎಂದ ಕಾಣಾ ನಿಮ್ಮ ಶರಣ ಕಾಡನೊಳಗಾದ ಶಂಕರಪ್ರಿಯ ಚನ್ನಕದಂಬ ಲಿಂಗನಿರ್ಮಾಯ ಪ್ರಭುವೆ"[೮] ಎಂದು ವಚನವನ್ನು ಸರಿಯಾಗಿ ಬೇಧಿಸದವನು ಸತ್ತಹಾಗೆ ಎಂದು ಹೇಳಿದ್ದರೂ, ವಚನ ಟೀಕಾಕಾರರು ಮಾತ್ರ ಕಠೋರವಾದ ಮಾತುಗಳನ್ನು ಗಮನಿಸಿಯು ಗಮನಿಸದ ಹಾಗೆ ಕೇವಲ ಧಾರ್ಮಿಕ ನೆಲೆಯಲ್ಲಿಯೇ ಟೀಕು ಬರೆದಿರುವುದನ್ನು ನೋಡಿದರೆ, ವೈವಿಧ್ಯತೆಗೆ ಆಸ್ಪದವಿಲ್ಲದ್ದರಿಂದ ಓದುಗರಲ್ಲಿ ಸಹಜವಾಗಿ ಬೇಸರವನ್ನುಂಟು ಮಾಡುತ್ತವೆ. ಹಾಗೆ ನೋಡಿದರೆ ಶಿವಶರಣರ ವಚನಗಳೇ ಸಮಾಜದ ಸರ್ವತೋಮುಖವಾದ ಆಯಾಮಗಳನ್ನು ಮುಕ್ತವಾಗಿ ತೆರೆದಿಡುವಲ್ಲಿ ಸಫಲವಾಗಿವೆಯೆನಿಸುತ್ತದೆ. ಉದಾಹರಣೆಗೆ ಇನ್ನೊಂದು ವಚನ ಗಮನಿಸಬಹುದು.

"ಭಕ್ತಿಗೆ ತೋಲಾಗಿ ಓಡುವಾತ ಜಂಗಮವಲ್ಲ। ಮಂತ್ರ ತಂತ್ರ ವಶೀಕರಣ ಕಲಿತು ಮೆರೆದಾಡುವಾತ ಜಂಗಮವಲ್ಲ। ವೇಷದ ಗುಣವನರಿಯದ ಹಾಸ್ಯಗಾರನ ಹಾಗೆ ವಿಭೂತಿ ರುದ್ರಾಕ್ಷಿ ಕಾವಿಲಾಂಛನವ ಧರಿಸಿ ತಿರುಗುವರೆಲ್ಲ ಜಂಗಮರಲ್ಲ। ಬೇಟೆಯ ನಾಯಿಯಂತೆ ವಿಷಯದಾಶೆಗೆ ಮುಂದುವರೆದು ತಿರುಗುವಾತ ಜಂಗಮನಲ್ಲ। ಇವರು ಜಂಗಮವೆಂದಡೆ ನಗುವರಯ್ಯ ನಿಮ್ಮ ಶರಣರು।......."[೯] ಎಂದು ಕಾಡಸಿದ್ದೇಶ್ವರರು 'ಜಂಗಮ'ರೆಂದರೆ ವೇಷಾಡಂಬರಕ್ಕಿಂತ ಸದ್ವಿಚಾರ ಗುಣಗಳನ್ನು ಹೊಂದಿದವರು ಎಂದು ಸ್ಪಷ್ಟವಾಗಿ ತಿಳಿಸುತ್ತಾರೆ.

ಕಾಶಿ, ಕೇದಾರ, ಶ್ರೀಶೈಲದಂತಹ ಪುಣ್ಯಕ್ಷೇತ್ರಗಳಲ್ಲಿ ದೇವರ ದರ್ಶನ ಮಾಡಿದರೆ ಪಾಪ ಪರಿಹಾರವಾಗುತ್ತದೆಂದು ನಂಬಿಕೊಂಡು ಪಾದಯಾತ್ರೆ ಮಾಡುವ ಭಕ್ತರ ಅಜ್ಞಾನ–ಮೌಢ್ಯತೆಯನ್ನು ಮತ್ತೊಂದು ವಚನದ ಮೂಲಕ ತಿಳಿಯಬಹುದು. ".....ಶೃತಿ ಪುರಾಣ ವಾಕ್ಯಗಳು ಕೇಳಬಲ್ಲಂಥ ಭಕ್ತಜನಂಗಳು, ಉಳಿದಂಥ ಕೆಲವು ಗಣಂಗಳು, ಇಂತೀ ಸರ್ವರೂ ಕೂಡಿ ಸಾಲಾ ಕಡಾ ಮಾಡಿ; ಹೊನ್ನು ತಂದು ಒಂದೊತ್ತು ಬರಿಗಾಲಿಲೆ ನೆಡವುತ್ತ, ಆಸತ್ತು–ಬೇಸತ್ತು, ಅಳಲಿ–ಬಳಲಿ ಶಿವಶಿವಾ ಹರಹರಾ ಎಂದು ಮಲ್ಲಯ್ಯನ ನೆನವುತ್ತ, ಎಡವುತ್ತ, ಮುಗ್ಗುತ್ತ ನಿನ್ನ ಪಾದವ ಎಂದು ಕಂಡೆವು ಎನ್ನುತ್ತ, ಸಕಲಲೋಕಾದಿಲೋಕಂಗಳೆಲ್ಲ ಇಂತೀ ಪರಿಯಲ್ಲಿ ಹೋಹರಯ್ಯಾ ಇವರಿಗೆ ಮಲ್ಲಯ್ಯನ ದರುಶನವಿಲ್ಲ. ಅವನ ಶಿಖರ ಕಾಣಬಾರದು ನೋಡೆಂದ ನಿಮ್ಮ ಶರಣ ಕಾಡನೊಳಗಾದ ಶಂಕರಪ್ರಿಯ ಚನ್ನಕದಂಬ ಲಿಂಗ ನಿರ್ಮಾಯ ಪ್ರಭುವೇ"[೧೦] ಎಂದಿದ್ದಾರೆ ಕಾಡಸಿದ್ದೇಶ್ವರರು. ಈ ವಚನಕ್ಕೆ ಟೀಕು ಬರೆದಿರುವುದಿಲ್ಲ. ಆದರೆ, ವಚನದಲ್ಲಿ ಧಾರ್ಮಿಕ ಮೌಢ್ಯ–ಕಂದಾಚಾರವನ್ನು ವಿಡಂಭಿಸುವ, ಎಷ್ಟೇ ತೊಂದರೆಯಾದರೂ ಪರವಾಗಿಲ್ಲ; ದೇವರನ್ನು ಕಂಡರೆ ಮುಕ್ತಿ ಲಭಿಸುತ್ತದೆಂಬ ಮೂಢನಂಬಿಕೆಯನ್ನು ವಚನಕಾರರೇ ವಿರೋಧಿಸಿ ವೈಚಾರಿಕ ಜಾಗೃತಿಯನ್ನುಂಟುಮಾಡಿರುವುದನ್ನು ಕಾಣುತ್ತೇವೆ. ಅಂದರೆ ದೇವರು ದೇಹದಲ್ಲಿದ್ದಾನೆ. ನಾವು ಮಾಡುವ ಕಾಯಕದಲ್ಲಿದ್ದಾನೆ. ಈ ಯಾವ ಪುಣ್ಯಕ್ಷೇತ್ರಗಳಲ್ಲಿ ಶಿವನು

ಕಾಣಲಾರನೆಂದು ಹೇಳಿರುವುದರಿಂದ ಇಂತಹ ಸಂಪ್ರದಾಯಗಳನ್ನು ಧಿಕ್ಕರಿಸುವುದನ್ನು ಹಲವಾರು ವಚನಗಳಿಂದ ಮನಗಾಣಲು ಸಾಧ್ಯವಿದೆ.

ಹೀಗೆ ತನು-ಮನ ಬಳಲಿಸಿ ದೇವರನ್ನು ಕಾಣಲು ಹೋಗುವುದನ್ನು, ಮಕ್ಕಳಿಗೆ ಅಯ್ಯತನವ ಮಾಡುವೆವೆಂಬ ಡಂಭಕರನ್ನು, ವೇದ-ಶಾಸ್ತ್ರ-ಪುರಾಣಗಳಲ್ಲಿ ನಂಬಿಕೆಯಿಟ್ಟಿರುವ ವ್ರತಭ್ರಷ್ಟರನ್ನು, ವಿಭೂತಿಯ ಬದಲಿಗೆ ಭಂಡಾರ ಹಚ್ಚುವವರನ್ನು, ಲಿಂಗದ ಬದಲಿಗೆ ತಾಯಿತ ಕಟ್ಟುವುದನ್ನು, ಇಷ್ಟಲಿಂಗ ಪೂಜೆಯ ಬದಲಿಗೆ ಸ್ಥಾವರ ಶೈವಲಿಂಗ ಪೂಜಿಸುವುದನ್ನು, ಸೋಮವಾರ ಉಪವಾಸ ವ್ರತವೆಂದು ಹೇಳಿ ಒಡಲುತುಂಬಿಕೊಳ್ಳುವ ಭಕ್ತರನ್ನು ವೀರಮಹೇಶ್ವರರೆಂದಡೆ "ಮೆಚ್ಚರಯ್ಯ ನಿಮ್ಮ ಶಿವಶರಣರು" ಎಂದು ಕಾಡಸಿದ್ದೇಶ್ವರರು ತಮ್ಮ ವಚನಗಳಲ್ಲಿ ನಿಷ್ಠುರವಾಗಿ ಟೀಕಿಸಿದ್ದಾರೆ. ಇಲ್ಲಿಯ ಟೀಕುಗಳು ಕೇವಲ ತಾತ್ವಿಕ ಅರ್ಥಕ್ಕೆ ಸೀಮಿತವಾಗಿರುವುದರಿಂದ ಟೀಕುಗಳಿಗಿಂತ ಇಲ್ಲಿಯ ವಚನಗಳು ಜಾತಿವ್ಯವಸ್ಥೆಯ ಸಾಂಪ್ರದಾಯಿಕ ಆಚರಣೆಗಳನ್ನು ಯಾವ ನಿರ್ಬಿಢೆಯಿಲ್ಲದೇ ಖಂಡಿಸಿರುವುದನ್ನು ಕಾಣುತ್ತೇವೆ.

ಕಾಡಸಿದ್ದೇಶ್ವರರಂತೆಯೇ ಬೆಡಗಿನ ವಚನಗಳನ್ನು ಬರೆದಿರುವ ತೋಂಟದ ಸಿದ್ಧಲಿಂಗಯತಿಗಳು "ಷಟ್‌ಸ್ಥಲಜ್ಞಾನಸಾರಾಮೃತ"ದಲ್ಲಿಯ ೭೦೧ ವಚನಗಳಲ್ಲಿ ಅರ್ಧಕ್ಕೂ ಹೆಚ್ಚು ಬೆಡಗಿನ ವಚನ ಬರೆದಿರುವುದರಿಂದ ಅವುಗಳಿಗೆ ಬರೆದ ಟೀಕೆಯು ತಾತ್ವಿಕ ಪ್ರಧಾನವೇ ಆಗಿವೆ. ಇಲ್ಲಿಯು ಕೂಡಾ ಲಿಂಗಾಯತ ಧರ್ಮದ ಶೈವ, ಶುದ್ಧಶೈವ, ವಿಶೇಷಶೈವ, ವೀರಶೈವ, ಗುರು-ಲಿಂಗ-ಜಂಗಮ, ಸ್ಥಾವರಗಳ ಬಗೆಗೆ ಟೀಕಾಕಾರರು ನೀಡಿರುವ ಅರ್ಥಗಳು ಮಹತ್ವದ್ದಾಗಿವೆ.

**ಉದಾಹರಣೆಗೆ:** ೧ ಶುದ್ಧ-ಶುದ್ಧಶೈವವು, ವಿಶೇಷ-ವಿಶೇಷ ವೀರಶೈವವು, ನಿರ್ವಾಣ-ನಿರಾಭಾರ ವೀರಶೈವವು. ೨. ಶುದ್ಧಶೈವ-ವೀರಣ್ಣ ಬಸವಣ್ಣ ಮೊದಲಾದ ಸ್ಥಾವರಲಿಂಗದ ಭಜನೆಯ ಮಾಡಲ್ಪಟ್ಟಂಥವರುಗಳೇ ಶುದ್ಧಶೈವರು; ವಿಶೇಷ-ಗುರುಲಿಂಗ ಜಂಗಮದ ಭಕ್ತಿಯನು ಮಾಡುತ್ತ ಅವರ ಪಾದೋದಕ ಪ್ರಸಾದ ಸೇವನೆಯ ಮಾಡಲ್ಪಟ್ಟಂಥವರುಗಳೇ ವಿಶೇಷ ವೀರಶೈವರು; ನಿರ್ವಾಣ-ಬೋದಡೆ ಬೋಳಮಸ್ತಕವನು ಮಾಡಿಕೊಂಡು ಕಂಥೆ ಬೊಂತೆಯನ್ನು ಹೊದ್ದುಕೊಂಡು ಮಲತ್ರಯಂಗಳಿಗೆ ವಿದೂರರಾಗಿ, ಭಕ್ತಿ ಜ್ಞಾನ ವೈರಾಗ್ಯ ಸಂಪನ್ನರಾಗಿ, ಐವತ್ತಾರು ದೇಶದಲ್ಲಿ ದಿಗ್ದೇಶಾಂತರೆಯನ್ನು ಮಾಡಲ್ಪಟ್ಟಂಥವರುಗಳೇ ನಿರಾಭಾರ ವೀರಶೈವರು"[೧೧] ಎಂದು ಟೀಕಾಕಾರ ಹೇಳಿರುವುದನ್ನು ಗಮನಿಸಿದರೆ ಶುದ್ಧಶೈವರೆಂದರೆ ವೀರಣ್ಣ, ಬಸವಣ್ಣ ಮುಂತಾದ ಸ್ಥಾವರಲಿಂಗದ ದೇವರನ್ನು ಭಜಿಸುವವರು. ವಿಶೇಷ ವೀರಶೈವರು ಎಂದರೆ ಗುರು-ಲಿಂಗ-ಜಂಗಮದ ಪಾದೋದಕ ಪ್ರಸಾದ ಸೇವನೆ ಮಾಡುವ ಭಕ್ತರೆಂದರ್ಥ. ನಿರಾಭಾರ ವೀರಶೈವರೆಂದರೆ ಸರ್ವಲಿಂಗ ಪರಿತ್ಯಾಗ ಮಾಡಿ, ಎಲ್ಲ ರೀತಿಯ, ಕರ್ಮಗಳಿಂದಲೂ ಅವಿದ್ಯೆ ಮುಂತಾದ ಉಪಾದಿಗಳಿಂದಲೂ ಮುಕ್ತರಾಗಿ, ಯಾವ ರೀತಿಯ ಕರ್ತವ್ಯಕ್ಕೂ ಬದ್ದರಾಗದೆ ಇರುವವರು"[೧೨] ಎಂದು ವಚನ ಪರಿಭಾಷಾ ಕೋಶದಲ್ಲಿ ಹೇಳಲಾಗಿದೆ. ಆದರೆ, ಇಲ್ಲಿ ತಲೆ ಬೋಳಿಸಿಕೊಂಡು, ಮಲತ್ರಯಂಗಳಿಂದ ಅಂದರೆ ಲೌಕಿಕ ಬಂಧನಗಳಿಂದ

ದೂರವಾಗಿ ಐವತ್ತಾರು ದೇಶಗಳಲ್ಲಿ ಸಂಚರಿಸಬಲ್ಲವರು ಎಂದು ಹೇಳಿರುವ ಟೀಕೆಯಿಂದಾಗಿ ಶೈವ, ಶುದ್ಧಶೈವ, ವೀರಶೈವ, ವಿಶೇಷ ವೀರಶೈವ, ನಿರಾಭಾರ ವೀರಶೈವ ಎಂಬ ಹಲವು ರೀತಿಯ ಪಂಗಡಗಳು ವೀರಶೈವರಲ್ಲಿದ್ದವು ಎಂಬುದು ತಿಳಿದುಬರುತ್ತದೆ. ಹಾಗೂ ಅವುಗಳಲ್ಲಿಯ ಭಿನ್ನತೆಯ ಅರಿವು ಸ್ಪಷ್ಟವಾಗುತ್ತದೆ. ಲೋಕಾನುಭವ ಬೆರೆತ ಇನ್ನೊಂದು ಉದಾಹರಣೆ ಇಲ್ಲಿದೆ. ಊರ ಹೊಲಸ ಪಯಿರನು ಮೇದ ಬಸವ ನಾಡಿಗ, ದೇಸಾಯಿ, ಶೆಟ್ಟಿ, ಸಾದರಿ, ದೊರೆದಾತರುಗಳು ಸತ್ತಿದ್ದಲ್ಲಿ ಅವರ ಹೆಸರ ಹೇಳಿ ಒಂದು ಶುದ್ಧ ಮುದ್ರೆಯನುಳ್ಳಂಥ ಒಂದು ಹೋರಿಯನು ತೆಗೆದುಕೊಂಡು ಬಂದು ಮಠಪತಿ ಗಣಾಚಾರಿ ಸ್ಥಾವರೀಕರು ಮೊದಲಾದವರು ಕೂಡಿ ಲಿಂಗಮುದ್ರೆಯನು ಒತ್ತಿ ಬಿಟ್ಟಲ್ಲಿ, ಅದಕ್ಕೆ ಹುಲ್ಲನು ಹಾಕಿ ನೀರನು ತೋರಿ, ಸಂರಕ್ಷಣವ ಮಾಡುವವರಿದ್ದಾರು"[೧೩] ಎಂದು ಟೀಕೆ ಬರೆಯಲಾಗಿದೆ. ಇದರಿಂದ ಲಿಂಗಮುದ್ರೆಯನು ಒತ್ತಿದ ಆಕಳು ಇಲ್ಲವೇ ಹೋರಿಯೊಂದನ್ನು ದೇವರಿಗೆ ಬಿಡುವ ಸಂಪ್ರದಾಯವಿತ್ತು. ಪಟ್ಟಣದ ನಾಡಿಗ, ದೇಸಾಯಿ, ಶೆಟ್ಟಿ, ಸಾದರಿ ಮುಂತಾದ ಪ್ರಮುಖರು ಸತ್ತಲ್ಲಿ ಅವರ ಹೆಸರಿನಲ್ಲಿ ಹೋರಿಯನ್ನು ದೇವರಿಗೆ ಬಿಡುವ ಪದ್ಧತಿ ಇತ್ತು. ಆದರೆ, ಇತ್ತೀಚಿನ ವರ್ಷಗಳಲ್ಲಿ ದೇವರಿಗೆ ಹೊತ್ತ ಹರಕೆ ಈಡೇರಿದರೆ, ಇನ್ನಾವುದೇ ಸಮಸ್ಯೆ ಪರಿಹಾರವಾದರೆ ಬೇಡಿಕೊಂಡ ದೇವರ ಹೆಸರಿನಲ್ಲಿ ಲಿಂಗಮುದ್ರೆ ಹಾಕಿಸಿ ಬಿಡಲಾಗುತ್ತಿದೆ. ಜೊತೆಗೆ ಮಠಪತಿ, ಗಣಾಚಾರಿ ಮುಂತಾದ ಸ್ಥಾವರಪೂಜೆ ಆರಾಧಕರು ಲಿಂಗಮುದ್ರೆ ಹಾಕುವ ಕಾಯಕ ಮಾಡುತ್ತಿದ್ದರೆಂಬುದು ತಿಳಿಯುತ್ತದೆ. ಇದರಿಂದ ವೀರಶೈವರಲ್ಲಿಯ ಹಲವಾರು ನಂಬಿಕೆ, ಸಂಪ್ರದಾಯಗಳು ಕಾಲದಿಂದ ಕಾಲಕ್ಕೆ ಹೇಗೆ ಭಿನ್ನಸ್ವರೂಪ ಪಡೆಯುತ್ತ ಸಾಗಿವೆ ಎಂಬುದನ್ನು ಅರಿಯಲು ಟೀಕಿನ ವಚನಗಳು ಅಂಜನದಂತೆ ಸಹಾಯ ಮಾಡುತ್ತವೆನ್ನಬಹುದು.

ತೋಂಟದಾರ್ಯರ 'ಷಟ್‌ಸ್ಥಲ ಜ್ಞಾನಸಾರಾಮೃತ ವಚನಗಳು' ಕೃತಿಯ ಟೀಕಾಕಾರರಲ್ಲಿ ಮೊದಲನೇ ಟೀಕಾಕಾರನು "ಶೈವರು–ನವಚೋಳರು, ನವಬಲ್ಲಾಳರು, ಷಟ್‌ಚಕ್ರವರ್ತಿಗಳು, ಷೋಡಶಮಹಾರಾಜರು, ಕಟ್ಟಿದ–ರಂಗಮಂಟಪವೆಂದು ಗರ್ಭಗೃಹವೆಂದು, ಮೌಳಿಯೆಂದು–ಗೋಪುರವೆಂದು, ಕಲಶವೆಂದು ನಿರ್ಮಿತಮಾಡಿದ, ಗುಡಿಯ–ದೇಗುಲನು"[೧೪] ಎಂಬ ಟೀಕೆ ಇದೆ. ಎರಡನೇಯ ಟೀಕೆಯಲ್ಲಿ "ಶೈವರು–ಶೈವ ಸಿದ್ಧಾಂತಿಗಳು, ಕಟ್ಟಿದ ಗುಡಿಯ–ಕಟ್ಟಿಸಿದಂತ ದೇವಾಲಯವನು, ಹೊಗಲೇಕೆ–ಪ್ರವೇಶಮಾಡುವಂತಾದು ಯಾತಕ್ಕೆ"[೧೫] ಎಂದು ಬರೆಯಲಾಗಿದೆ.

ಪ್ರಸ್ತುತ ಟೀಕೆಯಿಂದ ಚೋಳರು, ಬಲ್ಲಾಳರು ಆರು ಚಕ್ರಗಳಲ್ಲಿ ನಂಬಿಕೆಯಿರುವ ಶಕ್ತಿಸ್ಥಲದಲ್ಲಿ ಅಂತಸ್ಥವಾಗಿ ಚೇತನವುಳ್ಳ ಧ್ಯಾನಾಸಕ್ತರು ಮತ್ತು ಹಸಿವು, ನೀರಡಿಕೆ, ಶೋಕ, ಮೋಹ, ಜರೆ, ಮರಣಗಳನ್ನು ಆಧ್ಯಾತ್ಮಿಕ ಸಾಧನೆಯಿಂದ ಗೆಲ್ಲಬಲ್ಲಂತಹ ಅಂದರೆ, ಅಂಗಗುಣ ಅಳಿದು ಲಿಂಗಗುಣ ಸಂಪನ್ನರಾಗಿ ಮಹಾಲಿಂಗದಲ್ಲಿ ಐಕ್ಯವಾಗಬಲ್ಲವರು ಎಂದರ್ಥ. ಇದರಿಂದ ಟೀಕಿನ ವಚನಗಳು ಶೈವ ಸಿದ್ಧಾಂತದ ಸ್ಪಷ್ಟ ಚಿತ್ರಣ ತಿಳಿಸುವುದರ ಜೊತೆಗೆ ಧರ್ಮವೊಂದರ ತಾತ್ವಿಕ ಭಿನ್ನಾಭಿಪ್ರಾಯ ಅರಿಯಲು ಸಹಾಯಕವಾಗುತ್ತವೆ.

ಅಂದಿನ ಜಾತಿವ್ಯವಸ್ಥೆಯ ಬಗೆಗೂ ಕೂಡಾ ಟೀಕಿನ ವಚನಗಳು ನಿಖರವಾದ ಮಾಹಿತಿ ನೀಡುತ್ತವೆ. ಉದಾಹರಣೆಗೆ – "ಚಿಲುಮೆಯ ಅಗ್ಘವಣಿಯ ಕುಡಿದರೇನೋ ಜನ್ಮದ ಮೈಲಿಗೆಯ ತೊಳೆಯದನ್ನಕ್ಕರ?" ಎಂಬ ವಚನಕ್ಕೆ ಟೀಕೆ ಹೀಗಿದೆ: "ಜನ್ಮದ ಮೈಲಿಗೆಯ – ನಾನಾ ಯೋನಿ ಸಹಸ್ರಾಣಿ ಉತ್ಪತ್ಯವಾಗುವಂತಾ ಮಲೀನವನು, ತೊಳೆಯದನ್ನಕ್ಕರ – ಶ್ರೀಗುರುಮೂರ್ತಿಯ ಸ್ವಚ್ಛಾನಂದ ಜಲದಿಂದ ಪ್ರಕ್ಷಾಲನಂಗೈಯದ ಪರಿಯಂತರವು, ಚಿಲುಮೆಯಗ್ಗವಣೆಯ ಕುಡಿದರೇನೋ – ಕೆರೆಬಾವಿ ಕುಂಟೆಗಳಲ್ಲಿ ಹದಿನೆಂಟು ಜಾತಿ ನೂರೊಂದು ಕುಲದವರು ಅಗ್ಗಣೆಯ ಬಳಸುವಂತಾದುಂಟುಯೆಂದು ಹಳ್ಳ ಹೊಳೆಗಳಲ್ಲಿ ಬೇರೆ, ಕುಂಟೆಗಳಲ್ಲಿ ಬೇರೆ ಚಿಲುಮೆಯನು ತೆಗೆದು ಉದಕವನು ಪಾನವಮಾಡಿದರೇನೋ? ಅದರಿಂದ ಪ್ರಯೋಜನವಿಲ್ಲವು."[೧೬] ಅಂದರೆ, ಹುಟ್ಟಿನ ಮೈಲಿಗೆ ತೊಳೆಯಲು ಶ್ರೀಗುರುವಿನ ಆನಂದ ಜಲ ಮುಖ್ಯವೇ ಹೊರತು 'ಹದಿನೆಂಟು ಜಾತಿ ನೂರೊಂದು ಕುಲ'ದವರು ಬಳಸಿದ ಹಳ್ಳ, ಹೊಳೆ, ಕುಂಟೆಯ ಉದಕದಿಂದ ಪ್ರಯೋಜನವಿಲ್ಲವೆನ್ನುವ ಟೀಕಾಕಾರರು ಜಾತಿವ್ಯವಸ್ಥೆಯ ಆಳವಾದ ಬೇರುಗಳ ಪರಿಚಯ ಮಾಡಿಕೊಡುತ್ತಾರೆ. ಜೊತೆಗೆ ಜಾತಿ ವ್ಯವಸ್ಥೆಯ ಪ್ರಭಾವಕ್ಕೊಳಗಾಗಿ ಅದನ್ನು ಸಮರ್ಥಿಸುವುದನ್ನು ಟೀಕುಗಳಲ್ಲಿ ಕಾಣಬಹುದಾಗಿದೆ.

ಕ್ರಿ.ಶ. ೧೬೫೦ ರಿಂದ ೧೭೫೫ರ ಅವಧಿಯಲ್ಲಿ ಜೀವಿಸಿದ್ದರೆನ್ನಲಾಗುವ ಶ್ರೀ ಕಾಡಸಿದ್ದೇಶ್ವರರ ವಚನ ಟೀಕೆಗಳಲ್ಲಿ ಲೋಕಾನುಭವದ ಹಲವಾರು ದೃಷ್ಟಾಂತಗಳು, ಸಮಕಾಲೀನ ಸಮಾಜದ ಮೂಢನಂಬಿಕೆಗಳು, ಕಾಯಕ ಸಂಸ್ಕೃತಿಯ ಬಗೆಗೆ ಮಹತ್ತರವಾದ ಅಂಶಗಳು ಲಭ್ಯವಾಗುತ್ತವೆ. ಇವರ ವಚನವೊಂದಕ್ಕೆ ಬರೆಯಲಾದ ಸುದೀರ್ಘ ಟೀಕೆಯಿಂದ ನಾಡಿನ ಧಾರ್ಮಿಕ ಮತ್ತು ಸಾಮಾಜಿಕ ಸ್ಥಿತಿಗತಿಯನ್ನು ತಿಳಿಯಲು ಸಾಧ್ಯವಿದೆ.

**ವಚನ:** ಪಶುವಿಗೆ ಕರುವಿನ ಮಮಕಾರ, ಜಾರಸ್ತ್ರೀಗೆ ವಿಟನ ಮಮಕಾರ,
ದಾಸಿಗೆ ಶಿಶುವಿನ ಮಮಕಾರ ವೈಜಕ್ಕವ್ವೆಗಳು ನಿಮ್ಮ
ಮಮಕಾರದಲ್ಲಿರ್ದು ಕಾಡನೊಳಗಾದ ಶಂಕರಪ್ರಿಯ
ಚನ್ನಕದಂಬ ಲಿಂಗ ನಿರ್ಮಾಯ ಪ್ರಭುವೇ॥

**ಟೀಕು:** ವೈಜಕ್ಕಗಳೆಂದಡೆ ಕ್ರಿಯಾಶಕ್ತಿ ಸ್ವರೂಪವಾದ ಶರಣ ಸತಿಯೆಂಬ ಸ್ತ್ರೀಯಳು. ಅದೆಂತೆಂದಡೆ ಜೈನರ ಕುಲದೊಳಗೆ ವೈಜಕ್ಕ ಎಂಬವಳು ತನ್ನ ಕುಲದ ಮರ್ಯಾದೆಯಲ್ಲಿರ್ದು ಮಾರಹರನ ಭಕ್ತಿಗುಪ್ತದಿಂದ ಬಹುಕಾಲ ಆರು ಅರಿಯದೇ ಮಾಡುತ್ತಿರ್ಪಳು....... ಒಂದಾನೊಂದು ದಿವಸ ಆ ವೈಜಕ್ಕ ವಲ್ಲಭನ ಗುರುಗಳು ಚಾರವಾಕ ಗ್ರಾಮಕ್ಕೆ ಬರಲು ಆ ಗ್ರಾಮದ ಜೈನ ಚಾರ್ವಾಕರು ಕೂಡಿ ಪಾಳಿಯಂತೆ ಬೋಜನ ಮಾಡಿದರು. ಕಡೆಯಲ್ಲಿ ವೈಜಕ್ಕ ವಲ್ಲಭಂಗೆ ಬೋಜ ಪಾಳೆಯ ಚಾರ್ವಾಕರು ಪೇಳಲು ಆ ಪುರುಷನು ತನ್ನ ಸತಿಗೆ ಪೇಳಿದನು. ಆ...... ವೈಜಕ್ಕಗಳೆಂಬ ಅಕ್ಕಗಳಿಗೆ..... ದೀರ್ಘದಂಡ ನಮಸ್ಕಾರ ಮಾಡಿ ಭಿನ್ನೈಸಲು ಅವಾಗ್ಗೆ ವೈಜಕ್ಕಗಳು ಏಳುನೂರು ಬಸ್ತಿಯ ಕಿತ್ತು ಲಿಂಗಸ್ಥಾಪನೆಯ

ಮಾಡಿದಳು"[೧೭] ಎಂದು ಬರೆಯಲಾದ ವಚನ ಟೀಕೆಯಿಂದ ಜೈನಧರ್ಮೀಯಳಾದ ವೈಜಕ್ಕವ್ವೆ ಎಂಬವಳು ಮಾರಹರನ ಗುಪ್ತಭಕ್ತಿಯ ಪ್ರಭಾವದಿಂದ ಲಿಂಗಾಯತ ಧರ್ಮ ಸ್ವೀಕರಿಸಿ ಲಿಂಗಸ್ಥಾಪನೆ ಮಾಡಿದಳೆಂಬುದು ತಿಳಿದುಬರುತ್ತದೆ. ಇದರಿಂದ ಲಿಂಗಾಯತ ಧರ್ಮದ ಪ್ರಭಾವದಿಂದಾಗಿ ನಾಡಿನ ಜೈನರ ಬಸದಿಗಳು ಕಾಲಕ್ರಮೇಣವಾಗಿ ತಮ್ಮ ಅಸ್ತಿತ್ವ ಕಳೆದುಕೊಂಡುದಕ್ಕೆ ನಿದರ್ಶನದಂತಿದೆ. ಹೀಗೆ, ಅಂದಿನ ಧಾರ್ಮಿಕ ಮತ್ತು ಸಾಮಾಜಿಕ ಜೀವನದಲ್ಲಾದ ಬದಲಾವಣೆಗೆ ಕಾರಣವಾದ ಅಂಶಗಳನ್ನು ಖಚಿತಪಡಿಸಿಕೊಳ್ಳಲು ಟೀಕುಗಳು ನೆರವು ನೀಡುತ್ತವೆ.

ವಚನ ಟೀಕುಗಳಿಂದ ಟೀಕಾಕಾರರ ಸಮಕಾಲೀನ ಸಮಾಜದ ಪ್ರಭಾವಕಾರಿ ಶಿವಭಕ್ತರ ಬಗೆಗೆ ತಿಳಿಯಲು ಸಹಾಯವಾಗುತ್ತವೆ.

**ವಚನ:** "ಮಾನವರಿಗೆ ಮರ್ತ್ಯಲೋಕ, ದೇವರಿಗೆ ದೇವಲೋಕ"

**ಟೀಕು:** "ಭಿನ್ನ ಭಿನ್ನ ಭಕ್ತಿ ಕ್ರಿಯಗಳನಾಚರಿಸಿದ ಹೇರೂರ ಹೆಣ್ಣು, ನೀಲನೂರ ನಿಂಬವ್ವೆ, ಸಿರಿಯಾಳ ಚಂಗಳೆ, ವೈಜಕ್ಕಿ, ಸಿಂಧುಬಲ್ಲಾಳ, ಕಲಿಗಣನಾಥ, ಚಾರಮರಾಯ, ಗುರುಭಕ್ತಾಂಡಾರಿ, ವೀರಸಂಗಯ್ಯ, ವೈಲಯ್ಯ, ಗೂಗಿಭಕ್ತಿ ಸಂಕಿದೊಂಡಿ, ವೀರಬಲ್ಲಾಳ, ಬಳ್ಳೇಶ ಮಲ್ಲಯ್ಯ, ಚಿತ್ರಗಾರ ಸೋಮಯ್ಯಗಳು ಮೊದಲಾದ ಭಕ್ತಿಜ್ಞಾನಿಗಳಾದ ವೀರಶೈವ ಗಣಂಗಳು ಸ್ವರ್ಗಲೋಕದಲ್ಲಿ ವಾಸವಾಗಿರುವರೆಂಬುದೇ ದೇವರಿಗೆ ದೇವಲೋಕ"[೧೮] ಎಂದು ಹೇಳುವ ಮೂಲಕ ನಾಡಿನ ಶಿವಭಕ್ತರು ಮತ್ತು ಇತಿಹಾಸದ ಬಗೆಗೆ ತಿಳಿಯಲು ಆಧಾರಗಳಾಗುತ್ತವೆ. ಅಲ್ಲದೆ, ಬಸವಣ್ಣನವರು ಇಂಗಳೇಶ್ವರ ಗ್ರಾಮದ ವಿಪ್ರರಾಗಿದ್ದು, ಕಲ್ಯಾಣಪುರಕ್ಕೆ ಹೋಗಿ ಬಿಜ್ಜಳರಾಜನ ಪ್ರಧಾನನಾಗಿ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮವೆಂಬ ಜ್ಞಾನ ಕರಣಂಗಳಿಗೆ ಪರಮಾಮೃತ ಬೋಧೆಯ ನೀಡಿದ್ದು ಮತ್ತು ಇವರ ಸಮಕಾಲೀನ ಶರಣರ ಪ್ರಸ್ತಾಪ ಮಾಡಲಾಗಿದೆ. ಇದರಿಂದ ಶರಣರ ಕಾಲ, ಬೆಳೆದ ಪ್ರದೇಶದ ಬಗ್ಗೆ ಟೀಕುಗಳು ಸಹಾಯಕ ಆಕರಗಳಾಗಿ ಮಾಹಿತಿ ಒದಗಿಸುತ್ತವೆ. ತನ್ಮೂಲಕ ಕತ್ತಲಾವರಿಸಿದ ಇತಿಹಾಸದ ಮೇಲೆ ಬೆಳಕು ಚೆಲ್ಲಲು ಸಹಾಯಕಾರಿಯಾಗುತ್ತವೆ. ಇದಕ್ಕೆ ಪ್ರಸ್ತುತ ವಚನ ಸಂಕಲನದ ಟೀಕೆಯ (೩೬೨ನೇ ಪುಟ)ನ್ನು ಗಮನಿಸಬಹುದಾಗಿದೆ.

### ೨. ಸಾಮಾಜಿಕ ಅಧ್ಯಯನ

೧೨ನೇ ಶತಮಾನದಲ್ಲಿ ಕಲ್ಯಾಣದ ಅನುಭವ ಮಂಟಪದಲ್ಲಿ ನಡೆಯುತ್ತಿದ್ದ ಆಧ್ಯಾತ್ಮಿಕ ಚರ್ಚೆಯ ಪ್ರತಿಫಲವಾಗಿ ವಚನಗಳು ರಚನೆಯಾದವು. ನಾನಾ ಜಾತಿ-ಮತಗಳ ಭಕ್ತಜೀವಿಗಳು ವಚನಗಳನ್ನು ರಚಿಸಿದರು. ಅಂದಿನ ಸಮಾಜಮುಖಿ ಚಳುವಳಿಯ ಅಂಗವಾಗಿ ರಚನೆಯಾದ ವಚನಗಳು ಅವರಿಗರಿವಿಲ್ಲದಂತೆ ಸಾಹಿತ್ಯದ ಮತ್ತು ಧರ್ಮವೊಂದರ ಸ್ವರೂಪ ಪಡೆದುಕೊಂಡದ್ದು ಗಮನಾರ್ಹವಾದುದು.

ವೈದಿಕರ ವರ್ಣವ್ಯವಸ್ಥೆ, ಯಜ್ಞಯಾಗಗಳು, ಜೈನರ ಧಾರ್ಮಿಕ ಆಚರಣೆಯಲ್ಲಿಯ ಕಾಠಿಣ್ಯವಾದ ಅಂಶಗಳು, ಶೈವ ಸಂಪ್ರದಾಯಗಳಲ್ಲಿಯ ಬೀಭತ್ಸರೂಪದ ಆಚರಣೆಗಳನ್ನು ಶರಣರು ಪ್ರಬಲವಾಗಿ

ಖಂಡಿಸಿದರು. ಅದಕ್ಕಾಗಿ ಚಳುವಳಿಯನ್ನು ಹುಟ್ಟುಹಾಕಿದ ವಚನಕಾರರು ಜಾತಿ ಮತ ರಹಿತವಾದ, ಸರಳ ಆಚರಣೆಯುಳ್ಳ ಹೊಸಧರ್ಮವೊಂದರ ಉದಯಕ್ಕೆ ಪಣತೊಟ್ಟರು. ಸಮಾಜದ ಪರಿಷ್ಕರಣಕ್ಕೆ ಆದ್ಯತೆ ನೀಡಿದರು. ಬಸವಣ್ಣನವರು "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೆ ಎಂಬೆ; ಹಾರುವ ಮೊದಲು ಶ್ವಪಚಕಡೆಯಾಗಿ ಭವಿಯಾದವರನೆಲ್ಲರನೊಂದೆ ಎಂಬೆ" ಎಂದು ನಿಷ್ಠುರವಾಗಿ ಹೇಳುವ ಮೂಲಕ ವರ್ಣವ್ಯವಸ್ಥೆಯ ಬೇರುಗಳನ್ನು ಕಿತ್ತಲು ಯತ್ನಿಸಿದರು.

ಪೂರ್ವಾಶ್ರಮದಲ್ಲಿ ಬ್ರಾಹ್ಮಣರಾಗಿದ್ದ ಬಸವಣ್ಣನವರಿಗೆ ಆಗಾಗ ಜಾತಿಯ ಸೋಂಕು ಕಾಡಿರಬಹುದೇನೋ? ಅದಕ್ಕಾಗಿ "ಉತ್ತಮ ಕುಲದಲ್ಲಿ ಹುಟ್ಟಿಹೆನೆಂಬ ಕಷ್ಟದ ಹೊರೆಯ ಹೊರಿಸದಿರಯ್ಯ" "ಸೆಟ್ಟಿಯಂಬೆನೆ ಸಿರಿಯಾಳನ? ಮಡಿವಾಳನೆಂಬೆನೆ ಮಾಚಯ್ಯನ? ಡೋಹಾರನೆಂಬೆನೆ ಕಕ್ಕಯ್ಯನ? ಮಾದಾರನೆಂಬೆನೆ ಚನ್ನಯ್ಯನ? ಆನು ಹಾರುವನೆಂದರೆ ಸಂಗಯ್ಯ ನಗುವನಯ್ಯ" ಎನ್ನುವಲ್ಲಿ ಬಸವಣ್ಣನವರ ಮಾನಸಿಕ ತಳಮಳ ಮತ್ತು ಹೋರಾಟದ ಸ್ವರೂಪವನ್ನು ಅರಿಯಬಹುದಾಗಿದೆ. ಹಾಗೆಯೇ, ಅಲ್ಲಮಪ್ರಭುಗಳು "ವೇದವೆಂಬುದು ಓದಿನ ಮಾತು, ಶಾಸ್ತ್ರವೆಂಬುದು ಸಂತೆಯ ಸುದ್ಧಿ, ಪುರಾಣವೆಂಬುದು ಪುಂಡರ ಗೋಷ್ಠಿ" ಎಂದು ಹೀಯಾಳಿಸುವ ಮೂಲಕ ಅನಿಷ್ಠ ಪದ್ಧತಿಗಳನ್ನು ನಿರಾಕರಿಸುತ್ತ ಸಮಾಜ ಪರಿವರ್ತನೆಯ ದೀಕ್ಷೆ ತೊಟ್ಟರು ವಚನಕಾರರು. ಇವರೆಲ್ಲರ ಹೋರಾಟ ಬ್ರಾಹ್ಮಣ–ಶೂದ್ರ ವಧು–ವರರ ಅಂತರ್‌ಜಾತಿ ವಿವಾಹದ ಪ್ರಯುಕ್ತ ಮೇಲ್ವರ್ಗದ ಸಂಪ್ರದಾಯವಾದಿಗಳಿಂದಾಗಿ ದಿಕ್ಕುಪಾಲಾಯಿತು. ಸಂಪ್ರದಾಯವಾದಿಗಳು ಮತ್ತು ವಿಚಾರವಾದಿ ಶರಣರ ನಡುವೆ ಸಂಘರ್ಷ ಏರ್ಪಟ್ಟಿತು. ಜಾತಿವಾದಿಗಳ ಕೈ ಮೇಲಾದ ಪರಿಣಾಮ ಶರಣ ಚಳುವಳಿಯ ಸಮಾನತೆಯ ಸಮಾಜದ, ವಿಶ್ವಧರ್ಮದ ಸಿದ್ಧಾಂತಗಳಿಗೆ ಪ್ರಾಶಸ್ತ್ಯ ಲಭಿಸದೇ ಚಳುವಳಿಯ ಉದ್ದೇಶ ವಿಫಲವಾಯಿತೆನ್ನಬಹುದು.

ಈ ಹಿನ್ನೆಲೆಯಲ್ಲಿ ಈ ಕಾಲಘಟ್ಟದಲ್ಲಿ ರಚನೆಯಾದ ವಚನಗಳಿಗೆ ವಿಜಯ ನಗರ ಸಾಮ್ರಾಜ್ಯದ ಪ್ರೌಢದೇವರಾಯನ ಆಳ್ವಿಕೆಯಲ್ಲಿ ಅನೇಕ ವಿದ್ವಾಂಸರು ಟೀಕೆಗಳನ್ನು ಬರೆದರು. ಇಲ್ಲಿ ಪ್ರಮುಖವಾಗಿ ಲಿಂಗಾಯತ ದರ್ಮವೊಂದರ ಸಿದ್ದಾಂತಗಳನ್ನು ಶೋಧಿಸಿ, ಅವುಗಳಿಗೆ ಶಾಸ್ತ್ರದ ಚೌಕಟ್ಟನ್ನು ನೀಡಬೇಕೆಂಬ ಬಲವಾದ ಒತ್ತಡಗಳಿದ್ದುದರಿಂದ ಟೀಕಾಕಾರರು ತತ್ವಬದ್ಧವಾದ ಧಾರ್ಮಿಕ ವಚನಗಳಿಗೆ ಟೀಕೆಗಳನ್ನು ಬರೆಯುವದರತ್ತ ಗಮನಹರಿಸಿದರು. ಇದರಿಂದಾಗಿ ಶರಣರು ರಚಿಸಿದ ಸಂಸ್ಕೃತಿಪರವಾದ ಬಹುಮುಖಿ ನೆಲೆಯ ವಚನಗಳು ಟೀಕೆಗಳ ವ್ಯಾಪ್ತಿಗೆ ಬರದೇ ಇರುವದರಿಂದ ನಾಡಿನ ಸಂಸ್ಕೃತಿ, ಸಮಾಜ, ಜನಜೀವನದ ಸ್ಥಿತಿ, ರಾಜಕೀಯ, ಆಡಳಿತಕ್ಕೆ ಸಂಬಂಧಿಸಿದಂತಹ ಮಹತ್ವದ ವಚನಗಳು ವ್ಯಾಖ್ಯಾನಗಳಿಂದ ದೂರವುಳಿಯುವಂತಾಯಿತು.

ಟೀಕಾಕಾರರು ಸಾಹಿತ್ಯಿಕ ನೆಲೆಯಲ್ಲಿ ಚಿಂತನೆ ಮಾಡಿ ಎಲ್ಲ ವಚನಗಳಿಗೂ ವ್ಯಾಖ್ಯಾನ ಬರೆದಿದ್ದರೆ ನಿಜಕ್ಕೂ ನಾಡಿನ ಇತಿಹಾಸ ಮತ್ತು ಸಂಸ್ಕೃತಿಗೆ ಅಪಾರವಾದ ಕೊಡುಗೆ ನೀಡಲು ಸಾಧ್ಯವಿತ್ತು. 'ಕಳೆದು ಹೋದ ಮಾತಿಗೆ ಚಿಂತಿಸಿ ಫಲವಿಲ್ಲ' ಎಂಬಂತೆ ಈಗ ಲಭ್ಯವಿರುವ ಟೀಕಿನ ವಚನಗಳನ್ನು ಆಧಾರವಾಗಿಟ್ಟುಕೊಂಡು ಅಂದಿನ ಸಾಮಾಜಿಕ ಜನಜೀವನದ ವೈಶಿಷ್ಟಗಳನ್ನು ಇಲ್ಲಿ ಗುರುತಿಸಲಾಗುವುದು.

ಹಲವು ಸಂಪ್ರದಾಯ, ಮೂಢನಂಬಿಕೆಗಳಿಂದ ಕೂಡಿದ್ದ ಅಂದಿನ ಸಮಾಜದಲ್ಲಿ ದೀವಳಿಗೆ, ಶಿವರಾತ್ರಿ, ಯುಗಾದಿ, ನಾಗರಪಂಚಮಿ, ಚವತಿ ಮೊದಲಾದ ಹಬ್ಬಗಳನ್ನು ಆಚರಿಸುತ್ತಿದ್ದರು. ಹಚ್ಚಡ, ಪಾವಡ, ಶಲ್ಯಗಳನ್ನು ಹಬ್ಬಗಳಲ್ಲಿ ಭಕ್ತರು ಜಂಗಮರಿಗೆ ಕೊಡುವ ಸಂಪ್ರದಾಯವಿತ್ತು. ಕಲ್ಲನಾಗಪ್ಪನಿಗೆ ಹಾಲೆರೆಯುವ, ದೇವರಿಗೆ ನೈವೇದ್ಯಮಾಡುವ ರೂಢಿಗಳಿದ್ದವು. ದೇವರ ಹೆಸರಲ್ಲಿ ಪ್ರಾಣಿಬಲಿ ನೀಡುತ್ತಿದ್ದರಲ್ಲದೇ ಊರದೇವರು, ಕಾಡದೇವರೆಂದು ಬೇರೆ ಇದ್ದುದಕ್ಕೆ ಟೀಕಿನ ವಚನಗಳು ಸ್ಪಷ್ಟ ನಿದರ್ಶನವಾಗಿರುವುದನ್ನು ಇಲ್ಲಿ ಉದಾಹರಿಸಲಾಗುವುದು.

**ವಚನ:** "ಗಂಡ ಶಿವಲಿಂಗದೇವರ ಭಕ್ತ, ಹೆಂಡತಿ ಮಾರಿಮಸಣಿಯ ಭಕ್ತೆ
ಗಂಡ ಕೊಂಬುದು ಪಾದೋದಕ ಪ್ರಸಾದ,
ಹೆಂಡತಿ ಕೊಂಬುದು ಸುರೆಮಾಂಸ ಭಾಂಡಭಾಜನ ಶುದ್ಧ
ವಿಲ್ಲದವರ ಭಕ್ತಿ ಹೆಂಡದ ಮಡಿಕೆಯ ಹೊಜಗೆ
ತೊಳೆದಂತೆ ಕೂಡಲಸಂಗಮದೇವಾ!

**ಟೀಕು:** ಗಂಡ – ಆ ಸ್ತ್ರೀಯಳ ರಮಣನು, ಶಿವಲಿಂಗದೇವರ ಭಕ್ತ – ಮಾಂಗಲ್ಯಸ್ವರೂಪವಾದ ಲಿಂಗಪೂಜೆ ಮಾಡುವಲ್ಲಿ ಶ್ರದ್ಧೆಯುಳ್ಳಾತನು, ಹೆಂಡತಿ – ಆ ಭಕ್ತ ಸ್ತ್ರೀಯಳು, **ಮಾರಿಮಸಣಿಯ ಭಕ್ತೆ–ಊರೊಳಗೆ ಗುಡಿಯ ಕಟ್ಟಿಸಿಕೊಂಡು ಪೂಜಿಸಿಕೊಂಡಿರುವಂಥದೆ ಮಾರಿ, ಅಡವಿಯೊಳಗೆ ಗುಡಿಯ ಕಟ್ಟಿಸಿಕೊಂಡು ಪೂಜೆಯ ಕೈಕೊಂಡಿರುವಂಥದೆ ಮಸಣಿ.** ಈ ಮಾರಿಮಸಣಿಗೆ ನಡಕೊಂಬುವಲ್ಲಿ ಬಹುಶ್ರದ್ಧೆಯುಳ್ಳವಳಾಗಿರ್ಪಳು. ಪ್ರಸ್ತುತ ಶಬ್ದಾರ್ಥ ಟೀಕೆಯಿಂದ ಬಸವಣ್ಣನವರು ಅಂದು ಬಳಸಿದ ಮಾರಿಮಸಣಿ ಶಬ್ದಗಳ ನಿಜವಾದ ಅರ್ಥದರ್ಶನವಾಗುತ್ತದೆ. ಊರದೇವರು, ಕಾಡದೇವರೆಂದು ಪ್ರತ್ಯೇಕ ಇರುವುದರ ಜೊತೆಗೆ ಜಾತಿವ್ಯವಸ್ಥೆಯು ಅಂದು ಪ್ರಭಲವಾಗಿತ್ತೆಂಬುದನ್ನು ತಿಳಿಸುತ್ತದೆ.

ಇದೇ ವಚನದ "ಭಾಂಡ–ಭಾಜನ ಶುದ್ಧವಿಲ್ಲದವ"ರ ಎಂಬುದಕ್ಕೆ ಮನೆಯೊಳಗೆ ಬಳಕೆ ಮಾಡುವಂಥ ಭಾಂಡಗಳೇನೆ ಗುಡಿಯೊಳಗೆ ಬಳಕೆಯ ಮಾಡುತ್ತಿರ್ಪಳು. ಗುಡಿಯೊಳಗೆ ಬಳಕೆಯ ಮಾಡಿದಂಥ ಭಾಂಡಗಳನೇ ಮನೆಯೊಳಗೆ ಬಳಕೆಯ ಮಾಡುತ್ತಿರ್ಪಳು. ಈ ಭಾಂಡ ಭಾಜನ, ಶುದ್ಧವಿಲ್ಲದವರ–ನಿರ್ಮಲವಿಲ್ಲದವರ, ಭಕ್ತಿ – ಭಿನ್ನಭಕ್ತಿಯು, ಹೆಂಡದ ಮಡಕೆಯ ಹೊಜಗೆ ತೊಳೆದಂತೆ – ಸುರೆಯ ಹರವಿಯೆಂಬಂಥದು ಹೊರಗೆ ತೊಳೆದು ಬೂದಿಕಟ್ಟನು ಹಾಕಿ ಗಂಧಕಸ್ತೂರಿ ಕುಂಕುಮ ಅರಿಷಿಣಬೊಟ್ಟು. ಮೊದಲಾದವನ್ನು ಇಟ್ಟು ಮೇಲೊಂದು ಹೂವಿನ ಹಾರವನ್ನು ಹಾಕಿದಲ್ಲಿ ಹೊರಗೆ ನೋಡಿದರೆ ಘಮಘಮವೆಂದು ಪರಿಮಳಿಸಿ, ಒಳಗೆ ನೋಡಿದರೆ ಹೆಬ್ಬಾನ ಹಡಿಕೆ ನಾರುತ್ತಿಹುದು. ಹಾಂಗೆ, ಗಂಡ ಶಿವಲಿಂಗದೇವರ ಭಕ್ತನಾಗಿ ಹೆಂಡತಿ ಮಾರಿಮಸಣಿಯರ ಭಕ್ತೆಯಾದವರ ಸ್ಥಿತಿಯು, ಹೆಂಡದ ಗಡಿಗೆ ಹೊರಗೆ ತೊಳೆದು ಬೂದಿಕಟ್ಟನು ಕುಂಕುಮ ಅರಿಷಿಣಬೊಟ್ಟು ಮೊದಲಾದವನಿಟ್ಟು ಮೇಲೊಂದು ಹೂವಿನ ಹಾರವ ಹಾಕಿದಲ್ಲಿ ಹೊರಗೆ ನೋಡಿದರೆ ಘಮಘಮವೆಂದು ಪರಿಮಳಿಸಿ ಒಳಗೆ ನೋಡಿದರೆ ಹೆಬ್ಬಾನ ಹಡಿಕೆ ನಾರಿದ ಸ್ಥಿತಿಯು ಎರಡೂ ಒಂದೇ ಆಗಿರ್ಪವು.

ಕೂಡಲಸಂಗಮದೇವಾ – ಎಲೆ ಪರಶಿವಲಿಂಗವೆ."[೧೯] ಹೀಗೆ ಪ್ರಸ್ತುತ ವಚನ ಟೀಕೆಯಲ್ಲಿ ಸಮಾಜದ ಸ್ವಾಸ್ಥ್ಯಕ್ಕೆ "ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ" ಎಂದು ನಂಬಿದ್ದ ಬಸವಣ್ಣನವರು ಅವರಿಬ್ಬರಲ್ಲಿ ಭಿನ್ನಭೇದಗಳಿರುವುದನ್ನು ಕಂಡು "ಶುದ್ಧವಿಲ್ಲದವರ ಭಕ್ತಿ ಹೆಂಡದ ಮಡಿಕೆಯ ಹೊಜಿಗೆ ತೊಳೆದಂತೆ" ಎಂದು ವಿಡಂಬಿಸುತ್ತಾರೆ. ಒಂದೇ ಕುಟುಂಬದಲ್ಲಿ ಗಂಡನಾದವನು ಶಿವಲಿಂಗದೇವರ ಭಕ್ತ, ಹೆಂಡತಿ ಮಾರಿಮಸಣಿಯ ಭಕ್ತೆಯಾದುದರಿಂದ ಗಂಡನಿಗೆ ಪಾದೋದಕ ಪ್ರಸಾದ ಲಭಿಸಿದರೆ, ಹೆಂಡತಿಗೆ ಸುರೆಮಾಂಸವೇ ಗತಿಯೆಂದು ಹೇಳುತ್ತಾರೆ. 'ಮಾರಿ–ಮಸಣಿ' 'ಭಾಂಡ–ಭಾಜನ'ವೆಂಬ ಶಬ್ದಗಳಿಗಿರುವ ನೈಜವಾದ ಅರ್ಥವನ್ನು ಟೀಕಾಕಾರನು ಬರೆಯುವ ಮೂಲಕ ಅಂದಿನ ಸಮಾಜದಲ್ಲಿ ಏಕದೇವೋಪಾಸನೆಯ ಜೊತೆಗೆ ಬಹುದೇವೋಪಾಸನೆ ಇದ್ದುದನ್ನು ಶರಣರು ಪ್ರಭಲವಾಗಿ ಖಂಡಿಸಿರುವುದು ತಿಳಿಯುತ್ತದೆ.

ಹೀಗೆ, ಅಂದಿನ ಸಮಾಜದಲ್ಲಿ ಕ್ಷುದ್ರ ದೇವರುಗಳನ್ನು ಗುಡಿಕಟ್ಟಿ ಪೂಜಿಸುವ, ದೇವಾಲಯಗಳಿಗೆ ದಾನ ದಕ್ಷಿಣೆ ನೀಡುವ ಮೂಢಸಂಪ್ರದಾಯಗಳಿರುವುದನ್ನು ಕಂಡ ಶರಣರು 'ದಾನ'ದ ಬದಲಿಗೆ 'ದಾಸೋಹ' ಸಿದ್ಧಾಂತವನ್ನು ಪ್ರತಿಪಾದಿಸಿದರು. ಸಮಾಜದ ನಾನಾವರ್ಗದವರು ತಾವು ಗಳಿಸಿದ ಸಂಪತ್ತಿನ ಬಹುಭಾಗವನ್ನು ದ್ವಿಜರ ಹೆಸರಿನಲ್ಲಿ ಭೂದಾನ, ಗೋದಾನ, ದೀಪದಾನ ರೂಪದಲ್ಲಿ ವ್ಯರ್ಥವಾಗಿ ಪೋಲು ಮಾಡುತ್ತಿದ್ದರು. ಷೋಡಶದಾನಗಳ ಪಟ್ಟಿ, ದೇವಾಲಯಕ್ಕೆ ದಾನ ನೀಡಿದವರ ಪಟ್ಟಿ ಮುಂತಾದ ವಿಷಯಗಳನ್ನು ಶಾಸನಗಳಲ್ಲಿ ಕೆತ್ತಿಸುವ ಸಂಪ್ರದಾಯಗಳಿದ್ದವೆಂಬುದಕ್ಕೆ ಲಭಿಸಿದ ಶಾಸನಗಳು ಆಧಾರವಾಗಿರುವಂತೆಯೇ ಟೀಕಿನ ವಚನಗಳು ಪೂರಕಮಾಹಿತಿ ನೀಡಿ ಪ್ರಾಚೀನ ಇತಿಹಾಸವನ್ನು ಕಟ್ಟಿಕೊಡುವಲ್ಲಿ ಮಹತ್ವದ ಪಾತ್ರವಹಿಸುತ್ತವೆ.

ಗೃಹಿಣಿಯರು ಮನೆಯಲ್ಲಿ ಹಿತ್ತಾಳೆ, ಕಂಚು ತಾಮ್ರ ಮತ್ತು ಮಣ್ಣಿನ ಮಡಕೆಗಳಿಂದ ತಯಾರಿಸಿದ ವಸ್ತುಗಳನ್ನು ಮನೆಯಲ್ಲಿ ಬಳಸುತ್ತಿದ್ದರು. ಅಡಿಗೆ ಮಾಡಿದ ಪಾತ್ರೆಗಳ ಹೆಗಲು ತೊಳೆದು ಬೂದಿಯ ಕಟ್ಟು ಬರೆಯುತ್ತಿದ್ದರು. ಐರಾಣಿಗಡಿಗೆ, ಜಕ್ಕಣಿಯರ ಗಡಿಗೆಗಳನ್ನು ದೇವರೆಂದು ಆರಾಧಿಸುತ್ತಿದ್ದರು. ಊಟಕ್ಕೆ ಅಡ್ಡಣಿಗೆ – ಕಂಚಿನ ಗಂಗಾಳ ಬಳಸುತ್ತಿದ್ದರು. ಊಟದಲ್ಲಿ ಹಸರಂಬಲಿ (ಹೆಸರಕಾಳು + ಹರವೆಸೊಪ್ಪು), ಗೋಧಿ, ಅವರೆ, ಹೆಸರು ಕಾಳಿನ ಗುಗ್ಗರಿ, ಹಲಚೆಗಡಬು, ಸಜ್ಜೆ–ಜೋಳ–ಅಕ್ಕಿ ಮುಟ್ಟಿಗೆಗಳನ್ನು ತಿನ್ನುತ್ತಿದ್ದರು.

ಧಾನ್ಯಗಳನ್ನು ಕಣಜ, ಪಣತಗಳಲ್ಲಿ ಸಂಗ್ರಹಿಸಿಡುತ್ತಿದ್ದರು. ಆಕಳ ಕರು ಹೋರಿಗಳನ್ನು ಮೈ ತೊಳೆದು ಅವುಗಳಿಗೆ ಗಂಧ ಕಸ್ತೂರಿ ಕುಂಕುಮ ಮೊದಲಾದ ಸುಗಂಧ ದ್ರವ್ಯ ಹಚ್ಚಿ, ಹೂವಿನ ಹಾರಹಾಕಿ ಮುದ್ದಾಡುತ್ತಿದ್ದರು. ನಾಡಿಗ, ದೇಸಾಯಿ ಮನೆತನದ ಸ್ತ್ರೀಯರು ಸ್ನಾನಮಾಡಿ ಮಡಿಯುಟ್ಟು, ಬಾಚಿಬೈತಲೆ ತೆಗೆದುಕೊಂಡು ಹಣೆಯಲ್ಲಿ ವಿಭೂತಿ, ಕಸ್ತೂರಿ ತಿಲಕವಿಡುತ್ತಿದ್ದರು. ತಲೆಯಲ್ಲಿ ಮಲ್ಲಿಗೆ, ಚೆಂಡು, ಕೇದಗೆ, ಸಂಪಿಗೆ ಹೂ ಮುಡಿದು ಬೀದಿಬಜಾರದಲ್ಲಿ ತಿರುಗಾಡುತ್ತಿದ್ದರಂತೆ.

ಶ್ರೀಮಂತರ ಮನೆಯಲ್ಲಿ ಕೆಲಸಮಾಡುವ ಸೇವಕಿಯರು ಮಾಸಿದ ಸೀರೆ ಉಟ್ಟುಕೊಂಡು, ತಂಗುಳ ಕೂಳು ತಿಂದು ಮುಂಜಾನೆಯಿಂದ ಸಂಜೆವರೆಗೆ ಒಳಚಾಕರಿ ಹೊರಚಾಕರಿ ಮಾಡುತ್ತಿದ್ದರು. ವಿಧವೆಯರು ಮಂಗಲವಸ್ತು ಧರಿಸುತ್ತಿರಲಿಲ್ಲ. ಹೀಗೆ, ಶ್ರೀಮಂತವರ್ಗದ ಮಹಿಳೆಯರು, ಸೂಳೆ-ಬಸವಿ-ದಾಸಿ-ವೇಶ್ಯೆಯರೆಂಬ ಬಡವರ್ಗದ ಮಹಿಳೆಯರು ಸಮಾಜದಲ್ಲಿದ್ದರು. ಆರುಂಧತಿ, ಕೈಕೇಯಿ, ಅನಸೂಯಾದೇವಿಯರು ಸ್ತ್ರೀ ಸಮಾಜಕ್ಕೆ ಆದರ್ಶವಾಗಿದ್ದರು.

"ಅಂತರ್‌ಜಾತಿಯ ವಿವಾಹಗಳು ಸಮಾಜದಲ್ಲಿ ನಡೆಯುತ್ತಿದ್ದವು. ಅನ್ಯಜಾತಿಯ ವಧುವನ್ನು ವರನ ಜಾತಿಗೆ ಬರಮಾಡಿಕೊಳ್ಳುವಾಗ ಅನುಸರಿಸಿದ ಆಚರಣೆ ಹೀಗಿದೆ: ಬಡಿಗೇರ ಕುಲದಲ್ಲಿ ಹುಟ್ಟಿದ ಮಾಚಲದೇವಿಯನ್ನು ಶುದ್ಧ ಕ್ಷತ್ರಿಯಳನ್ನಾಗಿ ಮಾಡಲು ಮೂರು ಲಕ್ಷ ದ್ರವ್ಯ ತೆಗೆದುಕೊಂಡು ಅದರಿಂದ ಒಂದು ಸುವರ್ಣದ ಗೋವನ್ನು ಮಾಡಿಸಿ, ಅದರ ಹೊಟ್ಟೆಯೊಳಗೆ ಪಂಚಾಮೃತ ತುಂಬಿಸುತ್ತಿದ್ದರು. ಆಮೇಲೆ, ಚಿನ್ನದ, ಬೆಳ್ಳಿಯ ಮತ್ತು ಕಬ್ಬಿಣದ ಕೊಪ್ಪರಿಗೆಗಳಿಗೆ ಕ್ರಮವಾಗಿ ಹಾಲು ಮೊಸರು ಸ್ವಾದೋದಕ ತುಂಬಿಸಿ, ಸುವರ್ಣದ ಆಕಳ ಬಾಯಲ್ಲಿ ಹೊಗಿಸಿ, ಪುಚ್ಚದಿಂದ ತೆಗೆಯಿಸಿ, ಚಿನ್ನದ ಕೊಪ್ಪರಿಗೆಯಲ್ಲಿರುವ ಹಾಲಲ್ಲಿ ಸ್ನಾನ ಮಾಡಿಸಿ ಒಂದನೆಯ ಜನ್ಮವಾಯಿತ್ತೆಂದೂ, ಬೆಳ್ಳಿಕೊಪ್ಪರಿಗೆಯ ಮೊಸರಲ್ಲಿ ಸ್ನಾನ ಮಾಡಿಸಿ ಎರಡನೆಯ ಜನ್ಮವಾಯಿತ್ತೆಂದೂ, ಕಬ್ಬಿಣದ ಕೊಪ್ಪರಿಗೆಯಲ್ಲಿರುವ ಸ್ವಾದೋದಕದಲ್ಲಿ ಸ್ನಾನ ಮಾಡಿಸಿ ಮೂರನೆಯ ಜನ್ಮವಾಯಿತೆಂದು ಹೇಳಿದರೆ ಬಡಿಗೇರ ಕುಲದವಳು ಆಗ ಶುದ್ಧ ಕ್ಷತ್ರಿಯಳಾಗುತ್ತಿದ್ದಳು ಎಂಬ ಸಾಮಾಜಿಕ ನಂಬಿಕೆ ಇತ್ತು."[೨೦]

ಸ್ತ್ರೀ ಸಮಾಜದಲ್ಲಿ ಏಳು ವರ್ಷದವಳಿಗೆ ಕೊಡಗೂಸು, ಎಂಟು ವರ್ಷದವಳಿಗೆ ಗೌರಿ, ಒಂಬತ್ತು ವರ್ಷದವಳಿಗೆ ಕನ್ನಿಕೆ, ಹನ್ನೆರಡು ವರ್ಷದವಳಿಗೆ ಕುಮಾರಿತಿ ಎಂದು ಕರೆಯುತ್ತಿದ್ದರು. ಶ್ರೀಮಂತರು ಮದುವೆಯಾದ ಮಗಳಿಗೆ ಪಟ್ಟೆಮಂಚ, ಠಾಣಾದೀವಿಗೆ, ಎಮ್ಮೆ, ಕರು, ಸೇವಕರನ್ನು ಕೊಡುವ ಪದ್ಧತಿಯಿತ್ತು. ಅಡಗೂಳಜ್ಜಿ ಪೇಟೆಮನೆ ಪುರಪಟ್ಟಣಗಳಲ್ಲಿ ಮನೆ ಕಟ್ಟಿಸಿಕೊಂಡಿರುತ್ತಿದ್ದಳು. ಕಳ್ಳರು, ಸುಳ್ಳರು, ಹಾದಿಗರು ಅವಳ ಮನೆಗೆ ಬಂದು ಊಟಮಾಡಿ ಹೋಗುತ್ತಿದ್ದರು. ಪರಪುರುಷನನ್ನು ಬಯಸಿ ಗಂಡನನ್ನು ಬಿಟ್ಟುಹೋದ ಹೆಣ್ಣಿನ ಸೀರೆ ಸೆರಗು ಹರಿದು, ಓಡಿಸಿ ಬಿಡುವ ನಿಯಮವಿತ್ತು. ವೇಶ್ಯೆಯರು ಸಂತೆ ಪೇಟೆಗಳಲ್ಲಿ ಹುಲ್ಲು ಗುಡಿಸಲು ಕಟ್ಟಿಕೊಂಡು ವಾಸಿಸುತ್ತಿದ್ದರು.

"ಅಲ್ಲದೇ ಸತಿಸಹಗಮನ ಪದ್ಧತಿಯು ಬಸವಣ್ಣನವರ ವಚನಗಳಿಗೆ ಟೀಕೆ ಹುಟ್ಟಿದ ಕಾಲದಲ್ಲಿ ಇನ್ನೂ ಜೀವಂತವಾಗಿತ್ತೆಂಬುದು ತಿಳಿಯುತ್ತದೆ. ಅಂದರೆ, ಯುದ್ಧದಲ್ಲಿ ಮಡಿದ ಪತಿಯನ್ನು ಕೂಡಲು ಸಿದ್ಧಳಾದ ಪತ್ನಿಯು ಮೈಗೆ ಎಣ್ಣೆ ಅರಿಶಿಣ ಹಚ್ಚಿಕೊಂಡು ತಲೆಯಲ್ಲಿ ಹೂ ಮುಡಿದುಕೊಂಡು ಮನೆ ಮನೆಗೆ ಹೋಗಿ ಕೋರೂಟ ಮಾಡುತ್ತ ಇಪ್ಪತ್ತೇಳು ದಿವಸ ಮಾಸ್ತಿಯಾಗಿ ಮೆರೆದು ಕೊನೆಯಲ್ಲಿ ಸತಿಯ ಕಲ್ಲಿನ ಮೇಲೆ ನಿಂತುಕೊಂಡು ಕೈಯಲ್ಲಿ ಲಿಂಬೆಹಣ್ಣು ಹಿಡಿದುಕೊಂಡು ಕಿಚ್ಚಿನಲ್ಲಿ ಜೀಳುತ್ತಿದ್ದ ಸಂಗತಿ ಗೊತ್ತಾಗುತ್ತದೆ."[೨೧]

"ಕೂದಲು ಬಿದ್ದಲ್ಲಿ ಕುಂತಳಾಪುರ, ಅಸ್ಥಿ ಬಿದ್ದಲ್ಲಿ ಅಸ್ಥಿಲಾಪುರ, ಮಜ್ಜೆ ಬಿದ್ದಲ್ಲಿ ಮಜ್ಜಲಾಪೂರ ಹೆಸರಿನ ಗ್ರಾಮಗಳಾಗುತ್ತಿದ್ದವು. ಗ್ರಾಮಸ್ಥರು ಚಾವಡಿ, ಹೆಬ್ಬಾಗಿಲಗಳಲ್ಲಿ ಕುಳಿತುಕೊಂಡಿರುತ್ತಿದ್ದರು. ಗ್ರಾಮದ ಮಧ್ಯದಲ್ಲಿ "ಕುರುಹಗಲ್ಲ"ಕ್ಕೆ ಹತ್ತೆಂಟು ಕೊಡ ನೀರು ಹಾಕಿ, ಅದನ್ನು ದೇವರೆಂದು ಆರಾಧಿಸುತ್ತಿದ್ದರು. ಮದುವೆ ಮುಂಜಿಗೆ ದೇವತಾ ಕಾರ್ಯಗಳು ಅತ್ಯಂತ ಸಂಭ್ರಮದಿಂದ ಜರುಗುತ್ತಿದ್ದವು. ಸಾಲದ ಬಡ್ಡಿ ಪ್ರಸಂಗಗಳಿಂದಾಗಿ ಹೆಣ್ಣು ಗಂಡಿನ ಸಂಬಂಧ ಹಾಗೂ ಮನೆತನದ ನೆಂಟಸ್ಥಿಕೆ ಕೆಡುತ್ತಿದ್ದವು. ಬೀದಬಜಾರದಲ್ಲಿ ಓಣಿ ಹುಡುಗರು ಹೆಣ್ಣು ಗೊಂಬೆ ಗಂಡುಗೊಂಬೆಗೆ ಮದುವೆ ಮಾಡಿ ಸಂಭ್ರಮದಿಂದ ಆಡುತ್ತಿದ್ದರು. ಹಂಚು, ಕಲ್ಲು, ಹರಳನ್ನು ಸಂಗ್ರಹಿಸಿ ಅವನ್ನು ಹುಗ್ಗಿ–ಹೋಳಗಿ–ತುಪ್ಪ–ಸಕ್ಕರಿಯೆಂದು ತಿಳಿದು 'ಮದುವೆ ಆಟ' ವಾಡುತ್ತಿದ್ದರು."[೨೨]

ಅಗ್ನಿಪ್ರಳಯ, ಜಲಪ್ರಳಯ, ಶಕ್ತಿಪ್ರಳಯಗಳು ಆಗಾಗ ಸಂಭವಿಸುತ್ತಿದ್ದವು. ಕಾಡು ರಸ್ತೆಯಲ್ಲಿ ನಡೆದುಕೊಂಡು ಹೋಗುವವರಿಗೆ ಹುಲಿ, ಕರಡಿಗಳ ಭಯ, ಕಳ್ಳರ ಭಯ, ಭೂತ ಪಿಶಾಚಿ ರಾಕ್ಷಸಗಳ ಭಯ ಕಾಡುತ್ತಿತ್ತು. ಜಲಪ್ರವೇಶ, ಅಗ್ನಿ ಪ್ರವೇಶಗಳ ಮೂಲಕ ಪ್ರಾಣತ್ಯಾಗ ಮಾಡುವ ಬಲಿದಾನ ಮರಣಗಳು ಚಲಾವಣೆಯಲ್ಲಿದ್ದವು. ಬ್ರಾಹ್ಮಣರ ಹೆಣಗಳನ್ನು ಒಂಟಿ ಕಳ್ಳಿಯ ಬಡಿಗೆಯ ಮೇಲೆ ಕಟ್ಟಿ ಹೊತ್ತುಕೊಂಡು ಹಳ್ಳದ ಕೊರಕಲಿಗೆ ಹೋಗಿ, ಅಲ್ಲಿ ಕಿಚ್ಚಿನಿಂದ ಸುಡುತ್ತಿದ್ದರು. ಅಂದಿನವರು ನಾಯಿಗಳ ಮೇಲೆ ಅಪಾರ ನಂಬಿಕೆ ಇಟ್ಟುಕೊಂಡಿದ್ದರು. ಬೇಟೆಯಲ್ಲಿ ಜಯಿಸಿದ ನಾಯಿಗೆ ಸಜ್ಜೇನು ಸುಪ್ಪಾಣಿ ಎಂದು ಹೆಸರಿಡುತ್ತಿದ್ದರೆಂಬುದಕ್ಕೆ ಈ ವಚನಟೀಕೆ ಗಮನಿಸಬಹುದು.

**ವಚನ:** ಅಂದಣವನೇರಿದ ಸೊಣಗನಂತೆ ಕಂಡಡೆ ಬಿಡದು ತನ್ನ
ಮುನ್ನಿನ ಸ್ವಭಾವವನು ಸುಡು! ಸುಡು! ಮನವಿದು
ವಿಷಯಕ್ಕೆ ಹರಿವುದು. ಮೃಢ ನಿಮ್ಮನನುದಿನ ನೆನೆಯ
ಲೀಯದು. ಎನ್ನೊಡೆಯ ಕೂಡಲಸಂಗಮದೇವಾ, ನಿಮ್ಮ
ಚರಣವ ನೆನೆವಂತೆ ಕರುಣಿಸು ಸೆಜಗೊಡ್ಡಿ ಬೇಡುವೆನು
ನಿಮ್ಮ ಧರ್ಮ."

**ಟೀಕು:** "ಕಿರಾತ ಅರಸರು ಬೇಟೆಯಲ್ಲಿ ಜಯಿಸಿದ ನಾಯಿಗೆ 'ಸಜ್ಜೇನು ಸುಪ್ಪಾಣಿ' ಎಂದು ಪ್ರೀತಿಯಿಂದ ಕರೆಯುತ್ತಿದ್ದರು. ಅಲ್ಲದೇ ನಾಯಿಯ ಕಿವಿಗೆ ಚಿನ್ನದ ಮುರುವು, ಕಾಲಿಗೆ ಚಿನ್ನದ ಗಗ್ಗರಿ, ಮೈಮೇಲೆ ಶಕಲಾತಿ ಜೂಲವನ್ನು ಹೋಲಿಸುತ್ತಿದ್ದರು. ತಾನು ಸೇವಿಸುವ ಆಹಾರವನ್ನೇ ಅರಸನು ಆ ನಾಯಿಗೆ ನೀಡುವ ಮೂಲಕ ಪ್ರೀತಿ ತೋರಿಸುತ್ತಿದ್ದರು"[೨೩] ಎಂದು ವಚನದ ತಾತ್ವಿಕ ಅರ್ಥದ ಜೊತೆಗೆ ತನ್ನ ಸಮಕಾಲೀನ ಸಮಾಜದ ಘಟನೆಗಳನ್ನು ಟೀಕಾಕಾರರು ಬಳಸುವ ಮೂಲಕ ತೀವ್ರ ಕುತೂಹಲವುಂಟು ಮಾಡುತ್ತಾರೆ.

ವ್ಯಾಪಾರ, ಸಾಲವಸೂಲಿ, ಹೆಣ್ಣು ನೋಡಲು ಹೋಗುವಾಗ ಜೋಡುಕೊಡ, ಇಬ್ಬರು ಹಾರುವರು, ಮಾಂಸದ ಗುದಿ, ಸುರೆಯ ಹರವಿಗಳು ಎದುರು ಬಂದರೆ ಶುಭವೆಂದೂ, ಜಂಗಮರನ್ನು ಆಮಂತ್ರಿಸಲು

ಹೊರಟಾಗ ಒಂಟಿಕೊಡ, ಒಂಟಿಬ್ರಾಹ್ಮಣ, ಹೊಗೆಸುಟ್ಟಿ, ಕಟ್ಟಿಗೆ ಹೊರೆಗಳು ಹಾಯ್ದುಹೋದರೆ ಅಶುಭವೆಂದು ಭಾವಿಸುತ್ತಿದ್ದರು. ಹಸ್ತಸಾಮುದ್ರಿಕ, ಕಣಿ ಕೇಳುವಲ್ಲಿ ಜನರಿಗೆ ಅಪಾರ ನಂಬಿಕೆಯಿತ್ತು ಭವಿಷ್ಯಕಾರರು – ಇದು ನಾಗಪ್ಪನ ಕಾಟ. ಆದುದರಿಂದ ಹೊಸಮುಂಡಾಸ, ಹೊಸ ಅಂಗಿ, ಹೊಸ ದೋತರ, ಉಂಗುರ, ಉಡದಾರಗಳನ್ನು ನಾಗಪ್ಪನಿಗೆ ಏರಿಸಿದಲ್ಲಿ ಚಳಿಜ್ವರ ಪರಿಹಾರವಾಗುತ್ತದೆಂದು ಹೇಳುತ್ತಿದ್ದರು.

ಪುಣ್ಯತೀರ್ಥ, ಪುಣ್ಯಕ್ಷೇತ್ರಗಳಲ್ಲಿ ನಿಕ್ಷಿಪ್ತ ದ್ರವ್ಯವಿದ್ದು, ಬೆಂತರ ಅದನ್ನು ಕಾಯ್ದುಕೊಂಡಿರುತ್ತದೆಂಬ ನಂಬಿಕೆ ಜನರಲ್ಲಿತ್ತು. ಅಲ್ಲದೇ, ರಾಜಭಯ, ಚೋರ ಭಯ, ಅಗ್ನಿಭಯಗಳಿಂದ ದ್ರವ್ಯ ನಾಶವಾಗಬಾರದೆಂದು ತಂಬಿಗಿ, ತಪೇಲಿ, ಕೊಡಗಳಲ್ಲಿ ತುಂಬಿ ಗಚ್ಚು ಗಾರೆಗಳಿಂದ ಮಾಡಿದ ಆಳವಾದ ತಗ್ಗಿನಲ್ಲಿ ಹೂಳುತ್ತಿದ್ದರು. ಕೆಲವು ಸಲ ಹೂತ ದ್ರವ್ಯವನ್ನು ಹೊರತೆಗೆಯಲು ಪ್ರಯತ್ನಿಸುವಲ್ಲಿ ಅದು ಮಕ್ಕಳು ಇಲ್ಲವೇ ಕಿರುಬೆರಳುಗಳ ಬಲಿ ಬೇಡುವುದೆಂಬ ನಂಬಿಕೆಯಿತ್ತು. ಅದಕ್ಕಾಗಿ, ದ್ರವ್ಯಾಂಜನ, ದಿಕ್ಕಂಜನ, ಭೂತಾಂಜನ, ಪಾತಾಳಾಂಜನಗಳ ಬಳಕೆ ರೂಢಿಯಲ್ಲಿತ್ತು. ಹೀಗೆ ಹಲವು ಮೌಢ್ಯ ಸಂಪ್ರದಾಯಗಳು ಸಮಾಜದಲ್ಲಿ ಬೇರೂರಿದ್ದವೆಂಬುದು ವಚನ ಟೀಕುಗಳಿಂದ ತಿಳಿಯುತ್ತದೆ.

**೩. ಆರ್ಥಿಕ ಅಧ್ಯಯನ**

ಪ್ರತಿಯೊಬ್ಬ ಮಾನವನು ಕಾಯಕದಿಂದ ಬದುಕಬೇಕೆಂಬುದು ಶರಣರ ಅಪೇಕ್ಷೆಯಾಗಿತ್ತು. ಕಾಯಕವು ಸತ್ಯ ಶುದ್ಧವಾಗಿರಬೇಕಲ್ಲದೇ, ಕರ್ತವ್ಯ ನಿರತನಾದಾಗ ಗುರು–ಲಿಂಗ–ಜಂಗಮದ ಹಂಗು ಹರಿಯಬೇಕೆಂದು ಹೇಳುವ ಮೂಲಕ "ಕಾಯಕವೇ ಕೈಲಾಸ"ವೆಂಬುದನ್ನು ಪ್ರತಿಪಾದಿಸಿದರು. ಈ ಕಾಯಕಕ್ಕೆ ಎರಡು ಮುಖಗಳಿವೆ. ಒಂದು ಸಂಪಾದನೆ. ಇನ್ನೊಂದು ದಾಸೋಹ. ಚನ್ನಬಸವಣ್ಣನವರು ಹೇಳುವಂತೆ "ತನುಮನ ಬಳಲಿಸಿ ತಂದು ದಾಸೋಹವ ಮಾಡುವುದು" ಎಂಬುದನ್ನು ಅರಿತಾಗ ದುಡಿಮೆಯಿಂದ ಬಂದುದನ್ನು ಸಂಗ್ರಹಿಸಿಟ್ಟುಕೊಳ್ಳದೇ ಪರೋಪಕಾರಿಗಳಾಗಿ ಸಮಾಜಕ್ಕೆ ಬಳಸಿದಲ್ಲಿ ಜೀವನವು ಸಾರ್ಥಕವೆಂಬುದು ಶರಣರ ಸಿದ್ಧಾಂತವಾಗಿತ್ತು. ಶರಣೆ ಆಯ್ದಕ್ಕಿ ಲಕ್ಕಮ್ಮನಂತೂ 'ಆಸೆಯೆಂಬುದು ಅರಸಂಗಲ್ಲದೇ, ಶಿವಭಕ್ತರಿಗೆ ಉಂಟೇ ಅಯ್ಯ?' ಎಂದು ಪ್ರಶ್ನಿಸುವ ಮೂಲಕ ಶರಣರಾದವರ ಜೀವನ ಮೌಲ್ಯಗಳು ಹೇಗಿರಬೇಕೆಂಬುದನ್ನು ಖಚಿತಪಡಿಸಿದ್ದಾರೆ. ವಚನಗಳಲ್ಲಿ ಪ್ರಸ್ತಾಪಿತವಾಗಿರುವ ಆರ್ಥಿಕ ಚಿಂತನೆಗಳನ್ನು ಟೀಕಾಕಾರರು ವಿವರಿಸುವ ರೀತಿ ಅನನ್ಯವಾದದ್ದು ನಿದರ್ಶನಕ್ಕೆ.

"ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೇ ಸತ್ಪಾತ್ರಕ್ಕೆ ಸಲ್ಲದಯ್ಯ, ನಾಯಿಯ ಹಾಲು ನಾಯಿಮರಿಗಲ್ಲದೇ ಪಂಚಾಮೃತಕ್ಕೆ ಸಲ್ಲದಯ್ಯ, ಕೂಡಲಸಂಗನ ಶರಣರಿಗಲ್ಲದೇ ಮಾಡುವ ಅರ್ಥ ವ್ಯರ್ಥ ಕಂಡಯ್ಯ" ಎಂದಿದ್ದಾರೆ. 'ಅರ್ಥ' ಎಂದರೆ ಸಂಪಾದನೆ ಎಂದರ್ಥ. ಸತ್ಯಶುದ್ಧವಾದ ಕಾಯಕದಿಂದ ಗಳಿಸಿದ ಸಂಪಾದನೆಯನ್ನು ಶಿವಶರಣರಿಗೆ ನೀಡಬೇಕು. ಹಾಗೆ ನೀಡದೇ, ಸಂಗ್ರಹಿಸಿಟ್ಟುಕೊಂಡರೆ ಸ್ಥಾವರವಾಗಿ ಹಾಳಾಗುತ್ತದೆ. ಸಂಪತ್ತನ್ನು ಕೂಡಾ ಮುಚ್ಚುಮರೆಯಿಲ್ಲದೇ ಮುಕ್ತವಾಗಿಟ್ಟುಕೊಂಡು 'ಜಂಗಮ'

ಗೊಳಿಸಬೇಕೆಂಬುದು ಬಸವಣ್ಣನವರ ಉದ್ದೇಶ. ಇಲ್ಲದಿದ್ದರೆ 'ಅರ್ಥ–ವ್ಯರ್ಥ'ವೆನ್ನುತ್ತಾರೆ. ಮತ್ತೊಂದು ವಚನದಲ್ಲಿ "ಶಿವಶರಣರಿಗಲ್ಲದೇ ಕಡಬಡ್ಡಿಯ ಕೊಡಲಾಗದು" ಎಂದು ಸ್ಪಷ್ಟಪಡಿಸಿದ್ದಾರೆ. ಹೀಗೆ ತುಂಬಾ ಸರಳವಾದ ವಚನಗಳಿದ್ದರೂ ಕೆಲವೊಮ್ಮೆ ಕೆಲವು ಶಬ್ಧಗಳ ಅರ್ಥಕ್ಕಾಗಿ ತಡಕಾಡುವ ಸ್ಥಿತಿ ಎದುರಾಗುತ್ತದಲ್ಲದೇ ಅರ್ಥಗ್ರಹಣವಾಗದೇ ತಪ್ಪು ಸಂದೇಶ ನೀಡುವಂತಹ ಘಟನೆಗಳು ನಡೆದುಬಿಡುತ್ತವೆ. ಕೆಳಗಿನ ವಚನವನ್ನು ಗಮನಿಸಿ :

"ಧರೆಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ
ಹರದ ಕುಳ್ಳಿರ್ದ ನಮ್ಮ ಮಹಾದೇವಸೆಟ್ಟಿ
ಒಮ್ಮನವಾದರೆ ಒಡನೆ ನುಡಿವನು
ಇಮ್ಮನವಾದರೆ ನುಡಿಯನು
ಕಾಣಿಯ ಸೋಲ ಅರ್ಧಕಾಣಿಯ ಗೆಲ್ಲ
ಜಾಣ ನೋಡವ್ವ ನಮ್ಮ ಕೂಡಲಸಂಗಮದೇವ"

ಇಲ್ಲಿ ಮನುಷ್ಯ ದೇಹವನ್ನೇ ಅಂಗಡಿಗೆ ಹೋಲಿಸಲಾಗಿದೆ. ದೇಹದ ಒಡೆಯ ಶಿವನು. ಆತನೇ ಮಹಾದೇವಸೆಟ್ಟಿ. ಪ್ರಸ್ತುತ ವಚನ ತುಂಬಾ ಸರಳವೆಂದು ಮೇಲ್ನೋಟಕ್ಕೆ ಭಾವಿಸಿದರೂ ಕೂಡಾ ಇಲ್ಲಿಯ "ಕಾಣಿಯ ಸೋಲ ಅರ್ಧಕಾಣಿಯ ಗೆಲ್ಲ" ಎಂದರೇನು? ಈ ಪ್ರಶ್ನೆಗೆ ಉತ್ತರ ಸಿಗುವದು ಕಷ್ಟ. ಆದರೆ, ಟೀಕಾಕಾರರು **ಕಾಣಿಯ ಸೋಲ ಎಂದರೆ "ಅವರಿಗೆ ಹೆಚ್ಚಾಗಿ ಎಚ್ಚವ ತೂಗಿಕೊಟ್ಟು ತಾ ಕಡಿಮೆಯಾಗಿ ರೊಕ್ಕವ ತೆಗೆದುಕೊಂಬಾತನಲ್ಲವು ; ಅರ್ಧಗಾಣಿಯಗೆಲ್ಲ ಎಂದರೆ ಅವರಿಗೆ ಕಡಿಮೆಯಾಗಿ ಎಚ್ಚವ ತೂಗಿಕೊಟ್ಟು ತಾನು ಹೆಚ್ಚಾಗಿ ರೊಕ್ಕವ ತೆಗೆದುಕೊಳ್ಳನು"**[೨೪] ಎಂದು ಟೀಕೆ ಬರೆಯುವ ಮೂಲಕ ನಿಖರವಾದ ಉತ್ತರ ನೀಡುತ್ತಾರೆ. ಇದನ್ನರಿತ ಓದುಗ ವಚನದ ಕೊನೆಯ ಸಾಲು **"ಜಾಣ ನೋಡವ್ವ ನಮ್ಮ ಕೂಡಲಸಂಗಮದೇವ"** ಎಂಬುದರ ಅರ್ಥಗ್ರಹಣವಾಗಲು ಸಾಧ್ಯವಾಗುತ್ತದೆ. ಯಾರಿಗೂ ಅನ್ಯಾಯವಾಗದಂತೆ ವ್ಯಾಪಾರ ಮಾಡುವ ಶಿವಸ್ವರೂಪಿ ಮಹದೇವಸೆಟ್ಟಿಯ ಆದರ್ಶ ಇನ್ನೂ ಸ್ಪಷ್ಟವಾಗುತ್ತದೆ.

ಅಂಗಡಿ, ವ್ಯವಹಾರ ಮಾಡುತ್ತಿದ್ದ ಸೆಟ್ಟರು ಅಂದರೆ ಬಣಜಿಗರು ಚೀಲಗಳಲ್ಲಿ ಧಾನ್ಯಗಳನ್ನು ತುಂಬಿ ಹೊಲಿಯಲು ದಬ್ಬಣವನ್ನು ಬಳಸುತ್ತಿದ್ದರು. ಅದಕ್ಕಾಗಿ 'ಬಣಜಿಗ'ರಿಗೆ "ದಬ್ಬಣ ಕಾಯಕ ಮಾಡುತ್ತಿದ್ದರೆಂಬ"[೨೫] ಉಲ್ಲೇಖ ಟೀಕಿನ ವಚನದಿಂದ ತಿಳಿಯುತ್ತದೆ. ಅಲ್ಲದೆ, ವ್ಯಾಪಾರಿಗಳು ಒಟ್ಟಿಲಬೆನಕನನ್ನು ಪೂಜಿಸುವ ಸಂಪ್ರದಾಯವಿತ್ತೆಂಬುದು ತಿಳಿಯುತ್ತದೆ. ಸಿಂಬೆ, ಸಬರ, ಬಲುಹು, ಗೂಟ, ಹಗ್ಗ, ಕಣ್ಣಿ, ಕಡತ ಬಳಪ ಮೊದಲಾದ ವ್ಯಾಪಾರದ ಸಾಮಗ್ರಿಗಳನ್ನು; ಗಂಟೆ, ಸರಪಳಿ ಕಟ್ಟಿ, ಚಿಗುಳಿ ತಂಬಿಟ್ಟು, ನೆನೆಗಡಲಿ, ಬಾಳೆಹಣ್ಣಿನ ನೈವೇದ್ಯ ಹಿಡಿದು "ದೇವರೆ ನಮ್ಮೆತ್ತು ಅಲ್ಲಿಗಲ್ಲಿಗೆ ಸತ್ತು ಹೋಗದ ಹಾಂಗೆ ಮಾಡು. ಸರಕು ಸುಲಿಗೆ ಹೋಗಿ ಲುಕ್ಸಾನವಾಗದ ಹಾಗೆ ಮಾಡು. ರಾಜಭಯ, ಚೋರಭಯ, ಅಗ್ನಿಭಯಗಳಿಂದ ಉಳಿಸು; ಇಮ್ಮಡಿ ಇಮ್ಮಡಿ ಲಾಭ ಬರುವ ಹಾಂಗೆ

ಮಾಡು"[೨೬] ಎಂದು ವ್ಯಾಪಾರಿಗಳು ಬೇಡಿಕೊಳ್ಳುತ್ತಿದ್ದರು. ಇದೇ ಒಟ್ಟಿಲ ಬೆನಕನ ಪೂಜೆ. ಒಟ್ಟಿಲ ಬೆನಕ, ವ್ಯಾಪಾರಿಗಳ ದೇವರೆಂಬುದು ಇದರಿಂದ ತಿಳಿಯುತ್ತದೆ ಎಂದು ಡಾ.ಬಿ.ಆರ್. ಹಿರೇಮಠ ಅಭಿಪ್ರಾಯಪಡುತ್ತಾರೆ. ಅಲ್ಲದೇ, "ಕರ್ನಾಟಕ, ಆಂಧ್ರಪ್ರದೇಶಗಳಲ್ಲಿ ಲಭಿಸುವ ಕೆಲವು ಕನ್ನಡ-ತೆಲುಗು ಶಾಸನಗಳು ಬಣಜಿಗರು ಬೆನಕನ ಭಕ್ತರೆಂಬುದನ್ನು ತಿಳಿಸುತ್ತವೆ."[೨೭] ಎಂದು ಹೇಳಿರುವುದರಿಂದ ಈ ಬಗ್ಗೆ ಹೆಚ್ಚಿನ ಅಧ್ಯಯನ ನಡೆಸಲು ಮಹತ್ವದ ಸುಳಿಹುಗಳು ವಚನ ಟೀಕೆಗಳಿಂದ ಲಭಿಸುವಂತಾಗಿದೆ. ಹಾಗೂ ಪುರುಷರು ವ್ಯಾಪಾರ ಮಾಡಿದರೆ, ಸ್ತ್ರೀಯು ಗಳಿಸಿಕೊಟ್ಟ ಲಾಭದ ಹಣದಿಂದ ಮನೆಯ ವ್ಯವಹಾರ ಸಾಗಿಸುತ್ತಿದ್ದಳು. ಸ್ವಕುಲದ ಕನ್ಯೆಯೊಂದಿಗೆ ಮದುವೆ ಮಾಡಿಕೊಳ್ಳುತ್ತಿದ್ದರು.

ಘಟ್ಟ-ಬೆಟ್ಟಗಳಲ್ಲಿ ಕಾಲ್ನಡಿಗೆ ಮೂಲಕ ಕರಾವಳಿ ಮತ್ತು ಇತರೆ ಪ್ರದೇಶಗಳಲ್ಲಿ ಎತ್ತುಗಳ ಮೂಲಕ ಸರಕು ಸಾಗಿಸುತ್ತಿದ್ದರು. ಸುಂಠಿ, ಮೆಣಸು, ಅಡಕೆ, ಲವಂಗ, ಯಾಲಕ್ಕಿ, ಜಾಜಿಕಾಯಿ, ಜಾಪತ್ರಿಗಳ ವ್ಯಾಪಾರವು ನಡೆಯುತ್ತಿತ್ತು. ಸಾಮಾನುಗಳ ಸಂಗ್ರಹಣೆಗಾಗಿ ವಾಳ್ಯೆ ಉಗ್ರಾಣದ ಮನೆಗಳಿದ್ದವು. ಸರಕು ಸಾಗಣೆಗೆ ತಳಸುಂಕ, ಮೇಲುಸುಂಕ, ಮಾರ್ಗಸುಂಕಗಳನ್ನು ತಪ್ಪದೇ ಸಲ್ಲಿಸಬೇಕಾಗುತ್ತಿತ್ತು. ಕೆಲವೊಮ್ಮೆ ಮಾರ್ಗಮಧ್ಯದಲ್ಲಿ ನುಚ್ಚುಗಳ್ಳರು, ಪಂಜುಗಳ್ಳರು. ವ್ಯಾಪಾರಿಗಳನ್ನು ಚೆನ್ನಾಗಿ ಥಳಿಸಿ, ವಸ್ತು ಒಡವೆ, ಲೆಕ್ಕದ ಕಡತಗಳನ್ನು ದೋಚಿಕೊಂಡು ಹೋಗುತ್ತಿದ್ದರೆಂಬುದು ವಚನ ಟೀಕೆಗಳಿಂದ ತಿಳಿದುಬರುತ್ತದೆ.

ಕಲ್ಲುಗಾಣಗಳಿಂದ ಎಣ್ಣೆ ತಯಾರಿಸುವವರು ಗಾಣಿಗರು. ಎಳ್ಳು ಅಗಸೆ ಕುಸಬೆಗಳನ್ನು, ಹಿಪ್ಪೆಬೀಜ-ಹೊನ್ನೆಬೀಜ-ಬೇವಿನಬೀಜಗಳನ್ನು ಎಣ್ಣೆ ತೆಗೆಯಲು ಬಳಸುತ್ತಿದ್ದರು. "ತುಂಬಿದ ಹೊಳೆಯನ್ನು ದಾಟಿಸುವ ಅಂಬಿಗನಿಗೆ ರೊಟ್ಟಿಬುತ್ತಿ ವಸ್ತ್ರ ಹಾಗೂ ದುಡ್ಡು ದುಗ್ಗಾಣಿಗಳನ್ನು ಸಂಭಾವನೆಯಾಗಿ ಕೊಡುವ ಪದ್ಧತಿಯಿದ್ದಿತು."[೨೮] ಅದರಂತೆ, ಕೆಲವರು ಇಂದಿನಂತೆ ಕೋಟಾನಾಣ್ಯ, ರೂಪಾಯಿಗಳನ್ನು ಬಳಸುತ್ತಿದ್ದರೆಂಬುದಕ್ಕೆ ಟೀಕಿನ ವಚನಗಳಿಂದ ತಿಳಿಯುತ್ತಲಿದ್ದು ಆ ವಚನ-ಟೀಕೆ ಇಲ್ಲಿದೆ.

**ವಚನ:** "ಬಚ್ಚಲ ನೀರು ತಿಳಿಯಾದಡೇನು? ಸಲ್ಲದ ಹೊನ್ನು ಎಲ್ಲಿದ್ದಡೇನು?
ಆಕಾಶದ ಮಾವಿನ ಫಲವೆಂದಡೇನು?
ಕೊಯ್ಯಲಿಲ್ಲ ಮೆಲ್ಲಲಿಲ್ಲ! ಕೂಡಲಸಂಗನ ಶರಣರನು
ಭಾವವಿಲ್ಲದವರು ಎಲ್ಲಿದ್ದಡೇನು, ಎಂತಾದಡೇನು?

**ಟೀಕೆ:** 'ಸಲ್ಲದ ಹೊನ್ನು' ಎಂದು ಬಸವಣ್ಣನವರು ಈ ವಚನದಲ್ಲಿ ಬಳಸಿದ್ದಾರೆ. ಇದಕ್ಕೆ ಟೀಕಾಕಾರನು 'ವೆಂಗಿವರಹ' ಎಂದು ಕರೆದಿದ್ದಾನೆ. "ಟಂಕಸಾಲೆಯ ಮನೆಯಲ್ಲಿ ನೋಟಕ್ಕೂ ತೂಕಕ್ಕೂ ಸಲುವಳೆಯಲ್ಲದ ವೆಂಗಿವರಹನು ಎಲ್ಲಿದ್ದಡೇನು? ಐವತ್ತಾರು ದೇಶದ ಪ್ಯಾಟಿಮನೆ ಪುರಪಟ್ಟಣ ಸ್ಥಾನಂಗಳಲ್ಲಿ ಮಳಿಗೆ ಮನೆಗಳಿಗೆ ತೆಗೆದುಕೊಂಡೊಯ್ದು ಕೊಟ್ಟು ಎಚ್ಚವನ್ನು ತೂಗಿ ಕೊಡೆಂದರೆ ಅದನು ತೆಗೆದುಕೊಂಡು ಎಚ್ಚವನು ತೂಗಿ ಕೊಟ್ಟಾರೆ? ಕೊಡರು. ಇದು ವೆಂಗಿವರಹ ಎಂದು ಹಿಂದಕ್ಕೆ ಬಿಡುತ್ತಿಹರು. ಹಾಂಗೆ, ಎಂದು ವಿವರಿಸಿರುವುದರಿಂದ ಆಯಾಕಾಲದ ಭಾಷೆ,

ಅದರರ್ಥಗಳು ಯಾವ ರೀತಿಯಲ್ಲಿ ಬಳಸಲ್ಪಡುತ್ತಿದ್ದವೆಂಬುದಕ್ಕೆ ಟೀಕಿನ ವಚನಗಳು ಆಧಾರವೊದಗಿಸುತ್ತವೆ. ಅಲ್ಲದೇ, ವರಹ, ಹೊನ್ನು, ಹಾಗ, ಕಾಸು, ಅಡ್ಡ ರೂಪಾಯಿಗಳು ಚಲಾವಣೆಯಲ್ಲಿದ್ದವು. 'ವೆಂಗಿವರಹ'ವನ್ನು ಮೋಸಗಾರರು ಇಂದಿನ ಕೋಟಾರೂಪಾಯಿಯಂತೆ ಬಳಸುತ್ತಿದ್ದರು. ಧಾನ್ಯ ಅಳೆಯಲು ಖಂಡುಗ, ಕೊಳಗದ ಮಾಪುಗಳಿದ್ದವು. ಭೂಮಿಯನ್ನು ಮತ್ತರ (ಎಂದರೆ ೧೦೦ ಮಾರು) ಪ್ರಮಾಣಿನಿಂದ ಅಳೆಯುತ್ತಿದ್ದರು. ಹೀಗೆ, ಅಂದಿನ ಆರ್ಥಿಕ ಸ್ಥಿತಿಗತಿಯನ್ನು ತಿಳಿಯಲು ಟೀಕಿನವಚನಗಳು ಮಹತ್ವದ ಪಾತ್ರ ವಹಿಸುತ್ತವೆ. ಉದಾಹರಣೆಗೆ:

**ವಚನ:** ದಿಟಪುಟಭಕುತಿ ಸಂಪುಟ ನೆಲೆಗೊಳ್ಳದಾಗಿ ಟೀವಕ ಟಿಂಬಕ
ನಾಡಿಸುತ್ತಿದ್ದಿತಯ್ಯ ನಿನ್ನ ಮಾಯೆ. ಕೂಡಲಸಂಗಮದೇವಯ್ಯ
ಹೊನ್ನು ಹೆಣ್ಣು ಮಣ್ಣು ತೋಜಿ॥

**ಟೀಕು:** ಟೀವಕ–ಉದ್ಧಿಮೆ ವ್ಯಾಪಾರಂಗಳ ಮಾಡಿಸುವುದಕ್ಕೆ ಘಟ್ಟ ಬೆಟ್ಟ ಕರಾವಳಿಯ ಹತ್ತಿ ಹೋಗುವಲ್ಲಿ ಉಸುರು ತೆರೆಗಟ್ಟಿ ಹೋಯಿಸುತ್ತಿಹುದಯ್ಯ, ಟಿಂಬಕನಾಡಿಸುತ್ತಿದ್ದಿತ್ತಯ್ಯ – ಘಟ್ಟ ಬೆಟ್ಟ ಕರಾವಳಿಗಳ ಇಳಿದು ಬರುವಲ್ಲಿ ಮೂಗಿನ ತೆಂಬೆಗಳು ಪಟಪಟನೆಂದು ಹಾರುವ ಹಾಂಗೆ ಮಾಡಿಸುತ್ತಿಹುದಯ್ಯ"[೩೦] ಎಂದು ಶಬ್ಧಸಹಿತ ಅರ್ಥ ನೀಡಿರುವುದರಿಂದ ವ್ಯಾಪಾರ ಮಾಡುವವರ ಸ್ಥಿತಿಗತಿಯ ಪರಿಚಯ ಓದುಗರಿಗಾಗುತ್ತದೆ. ಅದೇ ರೀತಿ ಕಾಡಸಿದ್ದೇಶ್ವರರ ವಚನಗಳಿಗೆ ಟೀಕು ಬರೆದ ಟೀಕಾಕಾರನ ಆಶಯ ಹೀಗಿದೆ.

**ವಚನ:** ಹಾದಿ ಹೊಲವ ಮಾಡಿ ಮೂರೆತ್ತು ಹೂಡಿ ಆ ಮೂರೆತ್ತಿಗೆ
ಒಂದು ನಗಾ ಕಟ್ಟಿ ನೇಗಲಿಯ ಹೂಡಿ ಕರಕಿಯ ಬಿಟ್ಟು
ಕಣಗಿಲ ತೆಗೆದು ಹೊಲ ಹಸನಮಾಡಿ ಗೋದಿ ಕಡಲಿ
ಜೋಳ ಮೊದಲಾದ ಹದಿನೆಂಟು ಧಾನ್ಯ ಜೀನಸವಿಲ್ಲದೆ
ಬಿತ್ತಿ ಬೆಳೆದು ಹಕ್ಕಿ ಹೊಡೆಯದೆ ಹೊಲವ ಮಾಡಿ
ಕಾಯಕವ ಮಾಡುತ್ತಿರ್ದೆನಯ್ಯ ಕಾಡನೊಳಗಾದ
ಶಂಕರ ಪ್ರಿಯ ಚನ್ನಕದಂಬ ಲಿಂಗನಿರ್ಮಾಯ ಪ್ರಭುವೇ॥

**ಟೀಕು:** "ಹತ್ತು ಹೊನ್ನಿಗೆ ಹೊಲವ ಮಾಡಿ, ಹತ್ತು ಕಂಡಗವ ಧಾನ್ಯವ ಬೆಳೆದು ಹಗೆಯ ಮೆಟ್ಟಿ ಹಗೆಯ ಹಾಕಿ ಮುಂದೆ ಮಾರಿ ಕಡಬಡ್ಡಿಯ ಕೊಟ್ಟು ತೆಗೆದುಕೊಂಬರು ಭಕ್ತರೆಂತಪ್ಪರಯ್ಯ..... ಇಂತವರ ಭಕ್ತರೆಂದರೆ ನಗುವರಯ್ಯ"[೩೧] ಎಂದು ಹೇಳುವಲ್ಲಿ ಹೊನ್ನು, ಹೊಲ, ಕಂಡಗಧಾನ್ಯ, ಹಗೆಯಹಾಕಿ, ಕಡಬಡ್ಡಿ ಮುಂತಾದ ಉತ್ತರ ಕರ್ನಾಟಕ ಪ್ರದೇಶದ ಭಾಷಾ ಬಳಕೆಯ ಜೊತೆಗೆ ಹತ್ತು ಹೊನ್ನಿಗೆ ಬೇರೊಬ್ಬರ ಹೊಲ ಮಾಡುವುದು, ಧಾನ್ಯಗಳನ್ನು ಹಗೆಯಲ್ಲಿ ಹಾಕುವುದು, ಧಾನ್ಯವನ್ನು ಕಡಬಡ್ಡಿಗೆ ಮಾರಾಟ ಮಾಡುವ ಪದ್ಧತಿಯ ಬಗ್ಗೆ ತಿಳಿದುಬರುತ್ತದೆ.

ಕಾಯಕ ಮತ್ತು ದಾಸೋಹ ತತ್ವಕ್ಕೆ ಪ್ರಾಮುಖ್ಯತೆ ನೀಡಿದ ಶಿವಶರಣರಂತೆ ಶ್ರೀ ಕಾಡಸಿದ್ದೇಶ್ವರರ ವಚನಗಳಲ್ಲಿ ಕೂಡಾ ಹಲವಾರು ರೀತಿಯ ಕಾಯಕ ಮಾಡುತ್ತಿದ್ದ ಸುಮಾರು ೫೭ ಜನ ಶರಣರ ಬಗ್ಗೆ ಪ್ರಸ್ತಾಪಿಸಲಾಗಿದೆ. ಕೆಳವರ್ಗದವರು, ಲಿಂಗಾಯತರು, ಬ್ರಾಹ್ಮಣರು, ಮುಸ್ಲಿಂರು ಮಾಡುತ್ತಿದ್ದ ನಾನಾ ಕಾಯಕದ ಬಗೆಗೆ ನೀಡಲಾಗಿರುವ ವಿವರಣೆಯಿಂದ ಕಾಯಕ ಸಂಸ್ಕೃತಿಯ ಬಗ್ಗೆ ಅಧ್ಯಯನ ಮಾಡಲು ವಚನ ಟೀಕುಗಳು ಪ್ರೇರಕವಾಗುತ್ತವೆ.

**೪. ರಾಜಕೀಯ ಅಧ್ಯಯನ**

'ಆನಿ ಬಿಜ್ಜಳಂಗೆ ಅಂಜುವೆನೆ ಅಯ್ಯ' 'ಬಿಜ್ಜಳನ ಭಂಡಾರ ಎಮಗೇಕಯ್ಯ, ಆಸೆಯೆಂಬುದು ಅರಸಿಂಗಲ್ಲದೇ ಶಿವ ಭಕ್ತರಿಗುಂಟೆ ಅಯ್ಯ?' ಎಂದು ಶಿವಶರಣರು ತಮ್ಮ ವಚನಗಳಲ್ಲಿ ನಿರ್ಭಿಢೆಯಿಂದ ಹೇಳುವ ಮೂಲಕ ೯೦೦ ವರ್ಷಗಳ ಹಿಂದೆಯೇ ರಾಜತ್ವವನ್ನು ಪ್ರತಿಭಟಿಸುವ ದಿಟ್ಟತನ ತೋರಿದರು. ಜನಸಾಮಾನ್ಯರನ್ನು ದೇವರ ಹೆಸರಿನಲ್ಲಿ ಶೋಷಣೆಗೆ ಒಳಪಡಿಸುತ್ತಿದ್ದ ಪುರೋಹಿತಶಾಹಿ ವ್ಯವಸ್ಥೆಯನ್ನು, ಅನಿಷ್ಟ ಸಂಪ್ರದಾಯಗಳನ್ನು ಹೊಡೆದೋಡಿಸುವ ಮೂಲಕ ಸಕಲ ಜೀವಾತ್ಮರಿಗೆ ಲೇಸನ್ನು ಬಗೆಯಲು, ಸಮಾನತೆಯ ಸಮಾಜ ಕಟ್ಟಲು ವಚನಕಾರರು ಆಂಧೋಲನವನ್ನೇ ನಡೆಸಿದರು.

"ಹರಿಹರನ ಕೊಂಡಗುಳಿ ಕೇಶಿರಾಜ, ತೆಲುಗ ಬೊಮ್ಮಯ್ಯ, ಬಾಹೂರ ಬೊಮ್ಮಯ್ಯ ಹಾಗೂ ಕೆಂಬಾವಿ ಬೋಗಣ್ಣರನ್ನು ಕುರಿತ ರಗಳೆಗಳಲ್ಲಿ ರಾಜತ್ವದೊಂದಿಗೆ ಶರಣರು ನಿರ್ಭಿತಿಯಿಂದ ವರ್ತಿಸುವ, ರಾಜತ್ವವನ್ನು ಧಿಕ್ಕರಿಸುವ ಅಂಶಗಳನ್ನು ಗುರುತಿಸಬಹುದು. ಶರಣರು ಕೇಶಿರಾಜ, ತೆಲುಗ ಬೊಮ್ಮಯ್ಯ ಅರಸನಿಗೆ ನಮಸ್ಕರಿಸದೆ, ಶಿವಲಿಂಗ, ಗುರುಪಾದ ಮುದ್ರಿಕೆಯ ಮೂಲಕ ನಮಸ್ಕರಿಸುವಂತಹ, ಶರಣನೊಬ್ಬ ಅಂತ್ಯಜನಾಗಿದ್ದರೂ ನೇರವಾಗಿ ಬಹಿರಂಗವಾಗಿ ನಮಸ್ಕರಿಸುವಂತಹ ಮೌಲ್ಯವನ್ನು ಶರಣ ಸಾಹಿತ್ಯದಲ್ಲಿ ಗುರುತಿಸಬಹುದು. ಪ್ರಭುವರ್ಗವು ವರ್ಣಾಶ್ರಮ ರಕ್ಷಣೆಗಾಗಿ ಹೆಣಗುತ್ತಿದ್ದಂತಹ ಸಂದರ್ಭದಲ್ಲಿ ವಿರೋಧವೆಂಬಂತೆ ವರ್ಗಭೇದ, ವರ್ಣಭೇದಗಳನ್ನು ಗಣಿಸದೆ ಅಂತ್ಯಜರೊಂದಿಗೆ ಸಾಮಾನ್ಯರೊಂದಿಗೆ ಸಹಗೋಷ್ಠಿ ಸಹಬೋಜನವನ್ನು ಕೈಗೊಳ್ಳುವಂತಹ ವಾತಾವರಣವನ್ನು ನಿರ್ಮಿಸಿದ್ದು ಮಹತ್ತರವಾದದ್ದು"[೨] ಎನ್ನುವ ಡಾ.ಸಿ. ನಾಗಭೂಷಣ ಅವರ ಅಭಿಪ್ರಾಯ ವಚನಕಾರರ ಕಾಲದ ಮತ್ತು ನಂತರದಲ್ಲಿ ಇದ್ದ ರಾಜಕೀಯದ ಸ್ಥಿತಿಗತಿಯನ್ನು ಅರಿಯಲು ಪೂರಕವಾಗುತ್ತದೆ.

ಅರಿವಿನ ವ್ಯಕ್ತಿತ್ವವುಳ್ಳ ಶಿವಶರಣರು ರಾಜತ್ವದ ವಿರುದ್ಧವಾಗಿ ಈಜುವ ಶಕ್ತಿಯನ್ನು ಪಡೆದುಕೊಂಡಿದ್ದರೆ, ಜನಸಾಮಾನ್ಯರು ಮಾತ್ರ "ಯಥಾ ರಾಜಾ ತಥಾ ಪ್ರಜಾ" ಎಂಬಂತೆಯೇ ಬದುಕುವ ಸ್ಥಿತಿಯು ಇತ್ತು. ಹೀಗಾಗಿ, ಬಹುತೇಕರು ರಾಜನ ಬಗ್ಗೆ ಅಪಾರ ಗೌರವ ಹೊಂದಿರುತ್ತಿದ್ದರು. ಯುದ್ಧಕ್ಕೆ ಹೋಗುವ ಮೊದಲು ಯೋಧರು ರಾಜನಿಂದ ರಣವೀಳ್ಯವನ್ನು ಪಡೆಯುತ್ತಿದ್ದರು. ರಾಜನ ನಂತರದಲ್ಲಿ ಪುರಪಟ್ಟಣಗಳಲ್ಲಿಯ ಅಧಿಕಾರಿ ವರ್ಗ, ನಾಡಿಗ, ದೇಸಾಯಿ, ಸೆಟ್ಟಿ, ಚೌಧರಿಗಳು, ಗೌಡ, ಕುಲಕರ್ಣಿ, ದಳವಾಯಿಗಳು ಅಂದಿನ ಆಡಳಿತ ವ್ಯವಸ್ಥೆಯಲ್ಲಿ ಪ್ರಮುಖವಾದ ಪಾತ್ರ ನಿರ್ವಹಿಸುತ್ತಿದ್ದರೆಂಬುದಕ್ಕೆ ಟೀಕಿನ ವಚನಗಳು ಆಧಾರಗಳಾಗಿವೆ.

ಈ ರೀತಿಯ ವ್ಯವಸ್ಥೆಯ ನಡುವೆಯೂ ಕೂಡಾ ತಮ್ಮ ಸ್ವಾಭಿಮಾನಕ್ಕೆ ಧಕ್ಕೆ ಬಂದರೆ ರಾಜ-ಮಹಾರಾಜರನ್ನು ವಿರೋಧಿಸುವಂತಹ ಘಟನಾವಳಿಗಳು ಅಲ್ಲಲ್ಲಿ ನಡೆಯುತ್ತಿದ್ದವು ಎಂಬುದಕ್ಕೆ ಟೀಕಿನ ವಚನಗಳೇ ಸಾಕ್ಷಿ ಒದಗಿಸುತ್ತವೆ.

**ವಚನ:** ದೂಷಕನವನೊಬ್ಬ ದೇಶವ ಕೊಟ್ಟಡೆ,
ಆಶೆ ಮಾಡಿ ಅವನ ಹೊರೆಯಲ್ಲಿರಬೇಡ;
ಮಾದಾರ ಶಿವಭಕ್ತನಾದಡೆ, ಆತನ ಹೊರೆಯಲ್ಲಿ
ಭೃತ್ಯಾಚಾರಿಯಾಗಿಪ್ಪುದು, ಕರಲೇಸಯ್ಯ!
ತೊತ್ತಾಗಿಪ್ಪುದು ಕರಲೇಸಯ್ಯ!
ಕಾಡ ಸೊಪ್ಪು ತಂದು ಓಡಿನಲ್ಲಿ ಹುರಿದಟ್ಟು
ಕೂಡಿಕೊಂಡಿಪ್ಪುದು ನಮ್ಮ ಕೂಡಲಸಂಗನ
ಶರಣರ....."

**ಟೀಕು:** ದೂಷಕನವನೊಬ್ಬ ದೇಶವ ಕೊಟ್ಟಡೆ - "ಜೈನ ಚಾರ್ವಾಕರಾಗಲಿ ಕಿರಾತರಾಗಲಿ ವೈಷ್ಣವರಾಗಲಿ ಹತ್ತೆಂಟು ಲಕ್ಷ ವರಹದ ರಾಜ್ಯವನಾಳಿಕೊಂಡಿರುವರು. ಆ ಗ್ರಾಮದಲ್ಲಿ ಇಪ್ಪಂತಹ ಶಿವಾಚಾರವನುಳ್ಳಂಥ ನೂರಾರು ಶಿವಭಕ್ತರಾಗಿರುವರು. ಆ ಊರು ದೊರೆಯಾದಂಥವನು ಇವನ ಗುರು ನರ, ಇವರ ಲಿಂಗ ಶಿಲೆ, ಇವರ ಜಂಗಮ ಮಾನವ, ಇವರ ಪಾದೋದಕ ನೀರು, ಇವರ ಪ್ರಸಾದ ಎಂಜಲು ಹೀಗೆಂದು ಅಷ್ಟಾವರಣ ಪಂಚಾಚಾರ ದೂಷಣೆಯ ಮಾಡಿದಲ್ಲಿ ಆ ಊರ ದೈವದವರಾದವರು ಕೇಳಿ, ಏನೋ ನಮ್ಮ ದೈವವಾದ ಅಷ್ಟಾವರಣ ಪಂಚಾಚಾರವನ್ನು ದೂಷಣೆಯ ಮಾಡುತ್ತೈದಾನಂತೆ. ಇವನ ದೇಶ ಯಾರಿಗೆ ಬೇಕು? ಇವನ ಕೋಶ ಯಾರಿಗೆ ಬೇಕು? ಇವನ ಭೂಮಿ ಯಾರಿಗೆ ಬೇಕು? ಸೀಮೆ ಯಾರಿಗೆ ಬೇಕು? ಎಂದು ಹೆಡಿಗೆಮೊರವನ್ನು ಕಟ್ಟಿಕೊಂಡು ಪರದೇಶಕ್ಕೆ ಹೋಗುತ್ತಿರ್ದಲ್ಲಿ, ಆ ದೊರೆಯ ಎಡಬಲದಲ್ಲಿದ್ದಂಥ ಮಂತ್ರಿ ಪ್ರಧಾನರು ದೇವರು ಈ ಊರದೈವದವರು ಊರಬಿಟ್ಟು ಹೋಗುತ್ತೈದಾರೆಂದು ಹೇಳಿದಲ್ಲಿ, ಯಾಕೆ ಹೋಗುತ್ತೈದಾರೆಂದು ಕೇಳುವನು....."[೩೩] ಎಂಬ ಸುದೀರ್ಘವಾದ ಟೀಕೆ ಬರೆಯುವ ಮೂಲಕ ಲಿಂಗಾಯತ ಧರ್ಮದ ಅಷ್ಟಾವರಣ, ಪಂಚಾಚಾರಗಳನ್ನು ಧೂಷಣೆ ಮಾಡಿದ ರಾಜನ ವಿರುದ್ಧ ಬಂಡಾಯವೇಳುವ ಘಟನೆಯೊಂದನ್ನು ಪ್ರಸ್ತುತ ಟೀಕೆಯಲ್ಲಿ ದಾಖಲಿಸಿರುವುದರಿಂದ 'ಪರಧರ್ಮ ಸಹಿಷ್ಣುತೆ' ಇಲ್ಲದ ರಾಜನ ಸ್ಥಿತಿ ಏನಾಗಬಹುದೆಂಬುದಕ್ಕೆ ಸಾಕ್ಷಿಯಾಗಿದೆ.

ನಂತರ ಪ್ರಧಾನಿಯ ಮೂಲಕ ಅರಸನು ಹೇಳಿ ಕಳಿಸಿದರೂ ಊರಿಗೆ ಬರಲು ದೈವದವರು ನಿರಾಕರಿಸುತ್ತಾರೆ. ಅಂತಿಮವಾಗಿ ಇನ್ನು ಮೇಲಾದರೂ ಅರಸನಿಗೆ ಬುದ್ಧಿಬರಬಹುದೆಂದು ದೈವದವರು ಊರಿಗೆ ಬರುವ ಮೂಲಕ ಸುಖಾಂತ್ಯವಾಗುವುದನ್ನು ಇಲ್ಲಿ ಕಾಣುತ್ತೇವೆ. "ಯಥಾ ರಾಜಾ ತಥಾ ಪ್ರಜಾ" ಎಂಬ ಗತಪರಂಪರೆಯ ಉಕ್ತಿಗೆ ಕೆಲವೊಮ್ಮೆ ಅರ್ಥವಿಲ್ಲದಂತೆ ರಾಜಶಕ್ತಿಯ ಎದುರು ಜನಶಕ್ತಿ

ಸಿಡಿದು ನಿಲ್ಲುವ ಮನೋಧರ್ಮ ಹೊಂದಿದ್ದರೆಂಬುದಕ್ಕೆ ಪ್ರಸ್ತುತ ಟೀಕಿನ ವಚನ ಸ್ಮರಣೀಯ ದಾಖಲೆಯಾಗುತ್ತದೆ.

**೫. ಸಾಹಿತ್ಯಿಕ ಅಧ್ಯಯನ**

ಶಿವಶರಣರ ವಚನಗಳನ್ನು ಸ್ವರವಚನಗಳಾಗಿ ಪರಿವರ್ತಿಸಿ ಈ ನಾಡಿನ ಜನಮನದಲ್ಲಿ ಘಟ್ಟಿಗೊಳಿಸಲು ಮಾಡಿದ ಪ್ರಯತ್ನ ನಾಡಿನ ಸಂಸ್ಕೃತಿಯ ಇತಿಹಾಸದಲ್ಲಿ ಸ್ಮರಣೀಯವೆನ್ನಬಹುದು. ಡಾ. ಎಲ್. ಬಸವರಾಜು ಅವರು "ಶರಣರು ಕೇವಲ ವಚನಗಳನ್ನು ಮಾತ್ರ ಬರೆದಿರದೆ ಜೊತೆಗೆ ಹಾಡುಗಳನ್ನೂ ಬರೆದಿರುವರು ಎಂದು ಸಾಧಿಸಲೆತ್ನಿಸಿದ್ದಾರೆ. ಅದಕ್ಕಾಗಿ ವಚನವೆಂದಿರುವ ಕಡೆಗಳಲ್ಲೆಲ್ಲ ಅದು ಹಾಡೇ ಆಗಿತ್ತೆಂದು ಗ್ರಹಿಸಿಕೊಂಡಿದ್ದಾರೆ."[೩೪] ಈ ರೀತಿಯ ಗ್ರಹಿಕೆ ಮತ್ತು ನಿರ್ಣಯದ ಮಾತುಗಳಿಗೆ ಡಾ. ಶಿವಾನಂದ ವಿರಕ್ತಮಠರು ತಮ್ಮ ಸಂಶೋಧನಾ ಪ್ರಬಂಧದಲ್ಲಿ ಹೀಗೆ ಹೇಳುತ್ತಾರೆ. "ವಚನಗಳಲ್ಲಿ ಸ್ವಯಂ ಪ್ರತಿಭೆಯ ವಿಕಾಸವಿದ್ದರೆ, ಸ್ವರವಚನಗಳಲ್ಲಿ ಅನುಕರಣ ಪ್ರತಿಭೆಯ ವಿಲಾಸವಿದೆ. ವಸ್ತು ಸ್ಥಿತಿ ಹೀಗಿರುವಾಗ ಇವುಗಳ ರಚನೆಯ ಬಗೆಗೆ ನಿರ್ಣಯದ ಮಾತುಗಳನ್ನಾಡುವುದು ಕಷ್ಟವಾಗುತ್ತದೆ. ಕಾಲಗರ್ಭದಲ್ಲಿ ಹುದುಗಿರುವ ಪುರಾತನ ಶರಣ ಸಾಹಿತ್ಯವೆಲ್ಲ ಬೆಳಕು ಕಂಡಾಗಲೇ ಅದು ಸಾಧ್ಯವೆಂದು ಕಾಣುತ್ತದೆ. ಆದುದರಿಂದ ಡಾ. ಎಲ್. ಬಸವರಾಜು ಅವರು ತರ್ಕಿಸುವಂತೆ ಮಹಾಲಿಂಗದೇವ, ಜಕ್ಕಣಾರ್ಯರು ಕೇವಲ ಸೂತ್ರಗಳನ್ನು ಬರೆದು, ವಚನಗಳನ್ನು (ಹಾಡು) ನೂರೊಂದು ಸ್ಥಲದಲ್ಲಿ ಜೋಡಿಸಿದವರಲ್ಲ. 'ಪರಮ ವೀರಶೈವಾಗಮಾಚಾರ್ಯನಾದ ಮಹಾಲಿಂಗದೇವ' ಭಕ್ತಿ ಭಂಡಾರಿ ಜಕ್ಕಣಾರ್ಯರು ವಚನಗಳ ಜೋಡಣೆಯ ಜೊತೆ ಜೊತೆಗೆ ಆ ದೆಸೆಯಲ್ಲಿ ಇನ್ನೂ ಹಲವಂದದ ಮಣಿಹ ಕೈಗೊಂಡ ಮಹಾನುಭಾವಸಿದ್ಧರೂ, ಸ್ವಾನುಭಾವವೇದ್ಯರೂ ಆಗಿದ್ದಾರೆ"[೩೫] ಎಂದು ಅಭಿಪ್ರಾಯಪಟ್ಟಿದ್ದಾರೆ. ಇದರಿಂದ ಕನ್ನಡದ ಹಾಡುಗಬ್ಬ ಪರಂಪರೆಗೆ ಇವರಿಬ್ಬರೂ ನಾಂದಿಹಾಡಿದರೆನ್ನಬಹುದು. ಅಂದರೆ, ೧೫ನೇ ಶತಮಾನವು ಕನ್ನಡ ಟೀಕಾಸಾಹಿತ್ಯ ಪರಂಪರೆಗೆ ಅಡಿಪಾಯ ಹಾಕುವುದರ ಜೊತೆಜೊತೆಗೆ ವಚನಗಳನ್ನು ಸ್ವರವಚನ ಅಥವಾ ಹಾಡುಗಬ್ಬಗಳನ್ನಾಗಿ ಜನಸಮ್ಮುಖಗೊಳಿಸಲು ಮಾಡಿದ ಪ್ರಯತ್ನಗಳಿಂದಾಗಿ ಗದ್ಯ ಪ್ರಧಾನವಾಗಿದ್ದ ಟೀಕೆ ಪದ್ಯ ಪ್ರಧಾನವಾಗಿ ಹಾಡುಗಬ್ಬವೆನಿಸಿದವು. ಇದರಿಂದ ಟೀಕಾಸಾಹಿತ್ಯ ಲಯ ಪ್ರಧಾನವನ್ನು, ಗೇಯಗುಣವನ್ನೊಳಗೊಂಡ ಹಾಡು ಸಂಪ್ರದಾಯಕ್ಕೂ ಪ್ರೇರಣೆಯಾಯಿತೆನ್ನಬಹುದು.

ಈ ಹಿನ್ನೆಲೆಯಲ್ಲಿ ಬಸವಣ್ಣನವರ ವಚನವೊಂದಕ್ಕೆ ಜಕ್ಕಣಾರ್ಯರು ಬರೆದ ಸ್ವರವಚನದ ಮಾದರಿಯೊಂದನ್ನು ಇಲ್ಲಿ ಉದಾಹರಿಸಲಾಗಿದೆ. ಅಂದರೆ ವಚನ, ಮುಂದಿನವರಿಗೆ ಸ್ವರವಚನ ವಸ್ತುವಾಗಿ ಸೃಜನಗೊಂಡ ನಿದರ್ಶನವನ್ನು ಗಮನಿಸಬಹುದು.

**ಬಸವಣ್ಣನ ವಚನ :** ಒಕ್ಕುದ ಮಿಕ್ಕುದನುಂಡು ಕಿವಿವಿಡಿದಾಡುವ
ಶರಣರ ಮನೆಯ ಡಿಂಗರಿಗ ನಾನು.
ಕೂಡಲಸಂಗನ ಶರಣರ ಮನೆಯ ಭಕ್ತಿಯ ಮರುಳನಾನು
ಬಿಡದೆ ಬಾಗಿಲಮೆಂಜಲ ಕಾಯ್ದಿಪ್ಪೆನು

ಕಿಂಕಲದಿಂದ ನಿಮ್ಮ ಶರಣರ ಮನೆಯ ಒಕ್ಕುದಕೊಂಡಿಪ್ಪ,
ಕಿಂಕರನು ನಾನು ಕೂಡಲಸಂಗದೇವ.
ಅಹುದೆಂದರಿಯ, ಆಗದೆಂದರಿಯ, ಆದಿಪಥವ ತೋರಲರಿಯ
ಸಹಜವನರಿಯ, ಸತ್ಯವನರಿಯ, ನಿಮ್ಮ ಶರಣರ
ಒಕ್ಕುದ ಮಿಕ್ಕುದನುಂಡಿಪ್ಪ ಕೂಡಲಸಂಗಮದೇವ.

**ಜಕ್ಕಣಾರ್ಯನ ಸ್ವರವಚನ:** ರಾಗ 'ವರಾಳಿ'

"ನಿಮ್ಮ ಶರಣರ ಒಕ್ಕುದ ಮಿಕ್ಕುದ
ಕೊಂಡೆನ್ನ ತನುಮನ ಶುದ್ಧವಾದುದಯ್ಯ ॥ಪಲ್ಲವಿ॥

ಒಡೆಯರು ಮನೆಗೆ ಬಂದರೆ ಎ
ನ್ನೊಡಲಾಸೆಯ ನಾನಜಿಯದೆ
ಸಕಲಪದಾರ್ಥವ ನೀಡಿ ಅವ
ರೊಕ್ಕುದ ಹಾರಿಕೊಂಡಿಪ್ಪೆನಯ್ಯ ॥೧॥

ಆಚಾರ ವಿಚಾರವ ನಾನಜಿಯೆನು
ಜ್ಞಾನಾನುಭವದ ಹೊಲಬನಜಿಯೆನು
ಶಿವನಿಮ್ಮ ಪ್ರಸಾದಿಗಳ
ಪ್ರಸಾದವೆನಗೆ ಪ್ರಾಣವಯ್ಯ ॥೨॥

ಆವ ಪದವಿಯಂತುಟಲ್ಲವೆನಗೆ
ನಿಮ್ಮ ಶರಣರ ಶೇಷ ಪ್ರಸಾದ
ಜೀವನವೆನಗದು ಬಾಳುವೆಯಾಗಿ
ಬೇರೆ ಮತ್ತನ್ಯವನಜಿಯೆನಯ್ಯ ॥೩॥

ಗುರುಲಿಂಗ ಜಂಗಮದಾರೋಗಣೆಯ
ಮಾಡಿದೆಡೆಯೊಳೆನ್ನ ಪ್ರಾಣವನಿಕ್ಕಿ
ಉಡುಗಿ ಒಕ್ಕಪ್ರಸಾದವಕೊಂಡು
ಪರಮಸುಖಿಯಾದೆನು ಕೂಡಲಸಂಗಯ್ಯ"[೨೬] ॥೪॥

ಹೀಗೆ, ವಚನಗಳ ಗದ್ಯಭಾಷೆಯನ್ನು ರಾಗ ತಾಳ ಗೇಯಗಳಿಂದ ಕೂಡಿದ ಸಂಗೀತಭಾಷೆಯನ್ನಾಗಿಸಿ ಪಲ್ಲವಿಯೊಂದಿಗೆ ಹಾಡಿನ ರೂಪ ನೀಡಿದ ಜಕ್ಕಣಾರ್ಯರಂತವರ ಸೃಜನಶೀಲ ಪ್ರತಿಭೆ ಮತ್ತು ಸ್ವಧರ್ಮವನ್ನು ಸಮಾಜಮುಖಿಗೊಳಿಸಲು ಮಾಡಿದ ಪ್ರಯತ್ನಗಳು ನಾಡಿನ ಸಾಂಸ್ಕೃತಿಕ ಹಿರಿಮೆಯ ಪ್ರತೀಕವೆನ್ನಬಹುದು.

ಇದಲ್ಲದೇ, ಮೂವತ್ತೆರಡು ರಾಗ, ಅರವತ್ತುನಾಲ್ಕು ಮಿಶ್ರರಾಗಗಳಿಂದ ಸ್ವರವಚನಗಳನ್ನು ಹಾಡುತ್ತಿದ್ದರಲ್ಲದೇ ಶಾಸ್ತ್ರೀಯ ಸಂಗೀತಕ್ಕೆ ಪ್ರೋತ್ಸಾಹವಿತ್ತು. ಶಿವಶಾಸ್ತ್ರ, ಶಿವಾಗಮ, ಶಿವಪುರಾಣ, ಆಧ್ಯರವಚನ ಅಧ್ಯಯನದ ವಿಷಯಗಳಾಗಿದ್ದ ಬಗ್ಗೆ ತಿಳಿಯುತ್ತದೆ. ಸಂಗೀತಕ್ಕೆ ಬಳಸುವ ವಾದ್ಯಗಳು, ಆಹಾರಪದ್ಧತಿ, ಕೆರೆಗಳು, ನಾನಾ ಬೆಳೆಗಳು, ಹೂಬಳ್ಳಿಗಳ ವೈವಿಧ್ಯತೆಯನ್ನು ಟೀಕಾಕಾರರು ಪ್ರಸ್ತಾಪಿಸುವದರಿಂದ ಕನ್ನಡಿಗರ ಸಾಂಸ್ಕೃತಿಕ ಹಿರಿಮೆಯನ್ನು ಅರಿಯಲು ಟೀಕಿನ ವಚನಗಳು ಕೈದೀವಿಗೆಯಂತಿರುವುದನ್ನು ಕಾಣಬಹುದು.

**೬. ಭಾಷಿಕ ಅಧ್ಯಯನ**

ಶಿವಶರಣರ ವಚನಗಳಿಗೆ ಕಾಲಾಂತರದಲ್ಲಿ ಬರೆಯಲಾದ ಟೀಕುಗಳಿಂದ ಕನ್ನಡ ಭಾಷೆಯ ವೈವಿಧ್ಯತೆ, ಇತರೆ ಭಾಷೆಗಳಿಂದಾದ ಪ್ರಭಾವ, ವಚನಗಳಲ್ಲಿಯ ಪದಶಃ ಅರ್ಥ ವಿವರಣೆಗಳಿಂದ ಕನ್ನಡ ನಿಘಂಟು ರಚನೆ ಮಾಡಬಹುದಾಗಿದೆ. ಅಲ್ಲದೇ, ವಚನಗಳಿಗೆ ಟೀಕು ಬರೆಯುವ ಕಾಲದಲ್ಲಿ ಕನ್ನಡ ಪದಗಳಿಗೆ ಸಂಸ್ಕೃತದ ಅರ್ಥ ಹೇಳಿರುವುದು ಕಂಡುಬರುವುದರಿಂದ ಸಂಸ್ಕೃತ ಭಾಷೆಯ ಪ್ರಭಾವ ಪುನಃ ಮರುಕಳಿಸಿದ ರೀತಿಯನ್ನು, ಅದರ ಕಾರಣಗಳನ್ನು ಅರಿಯಲು ಸಾಧ್ಯವಿದೆ.

**ಉದಾಹರಣೆಗೆ:**

"ವಿಷ-ಕ್ವೇಡ, ಬೆಳದಿಂಗಳು-ಜೋತ್ಸ್ನೆ, ಕಿಚ್ಚು-ಶಿಖಿ, ಕತ್ತಲೆ-ಕಾವಳ, ಅಗ್ನಿ-ಪಾವಕ, ಮುತ್ತು-ಮೌಕ್ತಿಕ, ಚಿಪ್ಪ್-ಸೂಕ್ತಿಕ, ಕಳ್ಳರು-ತಸ್ಕರರು, ಶಿಶು-ಅರ್ಭಕ, ಕಲ್ಲು-ಪಾಷಾಣ, ಹುಲ್ಲು-ತೃಣ, ಮೇದ-ಭಕ್ಷಿಸಿದ, ಹುಲಿ-ವ್ಯಾಘ್ರ, ಹೊಲನ-ತಕ್ಕಲಿನ, ಹೊರಳು-ಉಠನಂಗೈ, ಹಂದಿ-ಶೂಕರ, ಹಸಿವು-ದೀಪನ, ಕಹಿ-ತಿಕ್ತ, ಬತ್ತಿ-ರಜ್ಜ, ನೆಲ್ಲು-ವ್ರೀಹಿ, ನೂಲೆಳೆ-ಕಾರ್ಪಾಸತಂತು, ಚೇಳು-ವೃಶ್ಚಿಕ, ಅಸತ್ಯ-ಶಠಕ, ಹುತ್ತ-ವಾಲ್ಮೀಕ, ಕಾಗೆ-ವಾಯಸ, ಸಂಸಾರ-ಸಂಸೃತಿ, ಹೆಸರು-ಅಭಿಧಾನ, ಮಳೆ-ವೃಷ್ಟಿ, ಹೊಯ್ಯು-ಸ್ರವಿಸು, ತುಚ್ಛ-ಕ್ಷೀಣಾತ್ಮ, ಹದ್ದು-ಗೃಧ್ಧ" - ಹೀಗೆ ತುಂಬಾ ಸರಳವಾದ ಕನ್ನಡ ಪದಗಳಿಗೆ ಸಂಸ್ಕೃತ ಭಾಷೆಯ ಅರ್ಥ ಹೇಳಿದ್ದಾರೆ. ಕಠಿಣವಾದುದನ್ನು ಸರಳಗೊಳಿಸಿ ಹೇಳುವುದಕ್ಕೆಂದೆ ಟೀಕುಗಳ ರಚನೆಯಾಗಿರುವಾಗ ಇಲ್ಲಿ ಮಾತ್ರ ಸರಳ ಪದಗಳಿಗೆ ಸಂಸ್ಕೃತದ ವಿದ್ವತ್‌ಮಾದರಿಯ ಅರ್ಥ ನೀಡಿರುವುದು ಅಚ್ಚರಿಯಾಗಿ ಕಾಣುತ್ತದೆ.

ಈ ದಿಶೆಯಲ್ಲಿ ಟೀಕು ರಚನೆಯ ಕಾಲ, ಟೀಕಾಕಾರನ ಪ್ರದೇಶ, ಪ್ರಭಾವ ಮತ್ತು ಉದ್ದೇಶಗಳನ್ನು ಅರಿಯುವ ಮೂಲಕ ಧರ್ಮ-ಭಾಷೆ ಮತ್ತು ಸಂಸ್ಕೃತಿಯ ನಡುವಿನ ಸಂಘರ್ಷವನ್ನು ತಿಳಿಯಲು ಟೀಕಿನ ವಚನಗಳು ಸಹಾಯಕವಾಗಲಿವೆ. ಅಲ್ಲದೇ, ಒಂದೇ ಪದಕ್ಕೆ ಒಬ್ಬರು ಸಂಕ್ಷೇಪ್ತ, ಇನ್ನೊಬ್ಬರೂ ವಿಸ್ತೃತ ಅರ್ಥ ನೀಡಿರುವುದನ್ನು ಕಾಣಬಹುದಾಗಿದೆ.

**ಉದಾಹರಣೆಗೆ:** ಶೈವರು ಕಟ್ಟಿದ ಗುಡಿಯ ಹೊಗಲೇಕೆ (೨೬೭)

**ಟೀಕೆ:** ಶೈವರು-ಶೈವ ಸಿದ್ಧಾಂತಿಗಳು, ಕಟ್ಟಿದ ಗುಡಿಯ-ಕಟ್ಟಿಸಿದಂಥ ದೇವಾಲಯವನು, ಹೊಗಲೇಕೆ-ಪ್ರವೇಶ ಮಾಡುವಂತಾದು ಯಾತಕ್ಕೆ"[೩೬] ಎಂದು ನೇರವಾದ ಅರ್ಥ ನೀಡಲಾಗಿದೆ. ಇದೇ ವಚನಕ್ಕೆ

ಇನ್ನೋರ್ವ ಟೀಕಾಕಾರನು (I) – "ಶೈವರು–ನವಚೋಳರು, ನವಬಲ್ಲಾಳರು, ಷಟ್ಚಕ್ರವರ್ತಿಗಳು, ಷೋಡಶಮಹಾರಾಜರು, ಕಟ್ಟಿದ–ರಂಗಮಂಟಪವೆಂದು ಗರ್ಭಗೃಹವೆಂದು, ಮೌಳಿಯೆಂದು–ಗೋಪುರವೆಂದು, ಕಲಶವೆಂದು ನಿರ್ಮಿತಮಾಡಿದ, ಗುಡಿಯ–ದೇಗುಲನು"[೩೮] ಎಂದು ವಿಸ್ತೃತ ಟೀಕೆ ಬರೆದಿದ್ದಾನೆ.

ಇನ್ನು ಕೆಲವರು 'ಓದಿ ಮರುಳಾದಿಯೋ ಕೂಸಿಭಟ್ಟರೆ' ಎಂಬ ನಾಣ್ಣುಡಿ ಸೇರಿದಂತೆ ಗಾದೆಮಾತುಗಳಿಗೆ ಲೋಕಾನುಭವದ ದೃಷ್ಟಾಂತ ನೀಡಿ ತುಂಬಾ ವಿಸ್ತಾರವಾಗಿ ಟೀಕು ಬರೆದಿದ್ದಾರೆ. ಇದರಿಂದ ಪ್ರಾದೇಶಿಕ ಭಾಷೆಯ ಶೈಲಿ, ಟೀಕಾಕಾರನ ಲೋಕಾನುಭವ ಮತ್ತು ಸಮಕಾಲೀನ ಸಂಸ್ಕೃತಿ–ಆಚರಣೆಗಳನ್ನು ಗುರುತಿಸಿ ಅಧ್ಯಯನ ಮಾಡಬಹುದಾಗಿದೆ. ಡಾ. ವೀರಣ್ಣ ರಾಜೂರ ಅವರು ತೋಂಟದಾರ್ಯರ ವಚನಗಳ ಟೀಕೆ ಕುರಿತು "ಮೂರು ನಾಲ್ಕನೆಯ ಟೀಕೆಗಳು ಹೇರಳ ಕನ್ನಡ ದೇಶಿ ಸಂಸ್ಕೃತ ಪದಗಳನ್ನು ಕೆಲವು ಪದಗಳ ಧಾತು ಮೂಲ, ಅವುಗಳಿಗಿರುವ ಅರ್ಥವಿವರಗಳನ್ನು ತುಂಬಿಕೊಂಡು ಸಮೃದ್ಧ ಶಬ್ಧಕೋಶಗಳಾಗಿ ನಿಂತಿವೆ"[೩೯] ಎಂದು ಹೇಳಿರುವ ಅಭಿಪ್ರಾಯದಲ್ಲಿ ಅತಿಶಯೋಕ್ತಿ ಇಲ್ಲ.

ಬಸವಣ್ಣನವರ ಟೀಕಿನ ವಚನಗಳ ೧ನೇ ಸಂಪುಟದ ೪೬ನೇ ವಚನಕ್ಕೆ ಬರೆದ ಟೀಕೆಯನ್ನು ಗಮನಿಸಬಹುದು.

"ಆಸೆ – ಅನ್ನಾಚ್ಛಾದನ ಹೊನ್ನು ಹೆಣ್ಣು ಮಣ್ಣಾಗಬೇಕೆಂಬ ಅಪೇಕ್ಷೆಯು. **ಆಮಿಷ** – ಹೊನ್ನಿದ್ದು ಹೊನ್ನಾಗಬೇಕು, ಹೆಣ್ಣಿದ್ದು ಹೆಣ್ಣಾಗಬೇಕು, ಮಣ್ಣಿದ್ದು ಮಣ್ಣಾಗಬೇಕು ಎಂಬುದೇ ಆಸೆಯೊಳಗಣ ಅತಿಕಾಂಕ್ಷೆಯು. ತಾಮಸ–ಅಜ್ಞಾನವು, ಹುಸಿ–ಅನೃತವು, ವಿಷಯ–ಪ್ರಪಂಚು. ಇದಕ್ಕೆ ಇನ್ನೊಬ್ಬ ಟೀಕಾಕಾರ "ಶಬ್ದಸ್ಪರ್ಶರೂಪುರಸಗಂಧಂಗಳೆಂಬ" ಎಂದು ಬರೆಯುವ ಮೂಲಕ ಟೀಕು ಮಾದರಿಗಳ ಅನುಕರಣೆಯ ಜೊತೆಗೆ ಸ್ವತಂತ್ರವಾದ ಅರ್ಥಗಳನ್ನು ಬರೆಯುವವರು ಇದ್ದರೆಂಬುದು ತಿಳಿಯುತ್ತದೆ. ಬಹುತೇಕ ಟೀಕಾಕಾರರು ವಚನಗಳ ಒಂದೊಂದು ಪದಕ್ಕೂ ಅರ್ಥ ಹೇಳಿರುವುದರಿಂದ ಶಬ್ದಾರ್ಥಗಳ ನಿಘಂಟುವಿನಂತೆ ಕಂಡುಬರುತ್ತವೆ. **ಉದಾಹರಣೆಗೆ** – "ಕುಟಿಲ–ಕಾಪಟ್ಯ, ಕುಹಕ–ಚಾಡಿಯು, ಕ್ಷುದ್ರತ್ವ–ತಸ್ಕರತ್ವವು, ಕ್ರೋಧ–ಸಿಟ್ಟು, ಮಿಥ್ಯೆ–ಸಟೆಯು, ಇವನೆನ್ನ– ಇವು ಒಂಬತ್ತು ದುರ್ಗುಣಂಗಳೆನ್ನ, ನಾಲಗೆಯ ಮೇಲಿಂದ – ಎನ್ನ ರಸನೆಯ ಮೇಲಿಂದ, ಅತ್ತ–ಆಚೆಗೆ, ತೆಗೆದು–ಕಡೆಗೆ ಮಾಡಿ, ಕಳೆಯಯ್ಯಾ–ಬೇರ್ಪಡಿಸಯ್ಯ"[೪೦] ಎಂದು ಬರೆಯಲಾಗಿದೆ. ಇದರಿಂದ ವಚನಗಳಲ್ಲಿಯ ಮಾರಿ–ಮಸಣಿ, ಭಾಂಡ–ಭಾಜನ, ಆಸೆ–ಆಮಿಷ ಮುಂತಾದ ಜೋಡು ಶಬ್ದಗಳಲ್ಲಿಯ ಅರ್ಥವ್ಯತ್ಯಾಸದ ಸೂಕ್ಷ್ಮಗಳನ್ನು ಅರಿಯಲು ಟೀಕಿನ ವಚನಗಳು ಸಹಾಯ ಮಾಡುತ್ತವೆ.

ಕೆಲವು ವಚನಗಳಲ್ಲಿಯ ಪದಗಳಿಗೆ ಬರೆದ ಟೀಕುಗಳನ್ನು ಈ ಕೆಳಗಿನಂತೆ ಗಮನಿಸಬಹುದು.

| **ವಚನಪದ** | **ಟೀಕಾರ್ಥ** |
|---|---|
| **ಚೌಪಥ ಪಟ್ಟಣ –** | ನಾಲ್ಕುದಾರಿ ಕೂಡಿದ ಪಟ್ಟಣ. |

ಹಸುಗೂಸು – ಎಳೆಯ ಶಿಶುವು.

ಕುಮಾರಿ – ಹನ್ನೆರಡು ವರುಷದ ಬಾಲಕುಮಾರಿಯರು.

ಕೊಡಗೂಸು – ಏಳು ವರುಷದವಳು.

ಸಿಂಗಿ – ಭಯಂಕರ ವಿಷ.

ಸಿಂಬಕ – ಸೇವಕ, ತೊತ್ತು.

ಸವಣ – ಜೈನ ಸನ್ಯಾಸಿ.

ಸಾಲಬಟ್ಟಡೆ – ರಿಣಸ್ತರಾದರೆ.

ಆಲದಮರ – ವಟವೃಕ್ಷ.

ಪರದೈವಂಗಳು – ನೀಚ ದೈವಂಗಳು.

ಹೋಮ – ಹದಿನೆಂಟು ಧಾನ್ಯಂಗಳನು ತುಪ್ಪ ತೈಲದಲ್ಲಿ ಸಮ್ಮಿಶ್ರವಮಾಡಿ.
– ಅಗ್ನಿಪುರುಷನಿಗೆ ಆಹುತಿ ಕೊಡುವುದು.

ನೇಮ – ಚಾಂದ್ರಾಯಣ ಕುಶ್ಮಾಂದಾಯಣ ಮೊದಲಾದ ೧೪ ವ್ರತಂಗಳು.

ನೆನೆ – ಲಿಂಗಧ್ಯಾನ, ಲಿಂಗಸ್ಮರಣೆ.

ಅಶ್ವಯಾಗ – ನೂರಾವೊಂದು ಕುದುರೆಯನ್ನು ತಂದು ಯಾಗ ಮಾಡುವುದು.

ಅಕ್ಷರ – ಐವತ್ತೆರಡಕ್ಷರಂಗಳನ್ನು ಕಲಿತುಕೊಂಡು.

ತೋಯ – ಉದಕವು, ಅಡಕೆ – ಹಾಗಕ್ಕಿಂತ ಸಣ್ಣನಾಣ್ಯ.

ಪಾವಕ – ಅಗ್ನಿಯ. ಅನಿಮಿಷ – ದೇವತೆ, ಒಬ್ಬ ಶರಣ.

ಸಮೀರಣ – ವಾಯು. ಅಯ್ಯತನ – ಗುರುತ್ವ, ಘನತೆ.

ಹುತ್ತ – ವಾಲ್ಮೀಕ. ಆದ್ಯರು – ಪ್ರಾಚೀನ ಶರಣರು.

ಕಳ್ಳದಮ್ಮ – ಸಲ್ಲದ ದುಡ್ಡು. ಅವಲೋಹ – ಕೀಳು ಲೋಹ.

ಸಾದು – ಪರಿಮಳದ್ರವ್ಯ. ಉರಸಜ್ಜೆ – ಎದೆಯ ಮೇಲಿನ ಲಿಂಗ, ಕುಡಗೆ

ಹೊಲೆಯ – ಹಿರೇಕುಲದ ಭಕ್ತ. ಹಾಗ – ಒಂದು ಸಣ್ಣ ನಾಣ್ಯ.

ಮಾದಿಗ – ಚಾಂಡಾಲ. ಸಸಿನ – ನೇರ.

ಸಲ್ಲದ ಹೊನ್ನು – ಖೊಟ್ಟಿನಾಣ್ಯ

ಕುಜುಹ ಪೂಜಿಸು– ಸ್ಥಾವರಲಿಂಗ ಪೂಜಿಸುವವ

ಆಸೆ – ಅನ್ನಾಚ್ಛಾದನ ಹೊನ್ನು ಹೆಣ್ಣುಮಣ್ಣಾಗಬೇಕೆಂಬ ಅಪೇಕ್ಷೆಯು.

ಆಮಿಷ – ಆಸೆಯೊಳ ಅತಿಕಾಂಕ್ಷೆಯು (ಹೊನ್ನು ಮಣ್ಣು ಹೆಣ್ಣು ಇದ್ದೂ ಹೆಚ್ಚು ಅಪೇಕ್ಷಿಸುವುದು)

ಮಾರಿ – ಊರೊಳಗೆ ಗುಡಿಕಟ್ಟಿಸಿಕೊಂಡು ಪೂಜಿಸಿಕೊಳ್ಳುವುದು.

ಮಸಣಿ – ಅಡವಿಯೊಳಗೆ ಗುಡಿಕಟ್ಟಿಸಿಕೊಂಡು ಪೂಜಿಸಿಕೊಳ್ಳುವುದು

ಉಬಯ ಭ್ರಷ್ಟ – ಇಹಪರಗಳಿಗೆ ಹೊರತಾದವ.

ಅಂಬುದಿ – ಸಮುದ್ರ, ದೇಹ ಕ್ಷಪಣ – ಸನ್ಯಾಸಿ.

ಮತ್ತರ – ನೂರು ಮಾರು. ಕೌಪೀನ – ಲಂಗೋಟಿ.

ಕಳ್ಳದಮ್ಮ – ಸಲ್ಲದ ದುಡ್ಡು ಕೊಳಗ – ಧಾನ್ಯ ಅಳೆಯುವ ಸಾಧನ

ಸಿನೆಹಾಳು – ಸುಡಗಾಡಿಗೆ ಸಮಾನ. ಗಂಜಳ – ಹೊಲಸು ನಾತ.

ಒಕ್ಕುದು – ಎಡೆಬಳಸಿ ಸೂಸಿದುದು.

ತಾಳಸಂಪುಟ – ಮಾತನ್ನು ಉತ್ಪಾದಿಸುವ ತಾಳುಗೆಯ ಪೆಟ್ಟಿಗೆ.

ಮಿಕ್ಕುದು – ಉಂಡುಳಿಸಿದುದು.

ಪರುಷ – ಪಂಚಲೋಹಗಳುಳ್ಳದ್ದು. ತಿಮಿರ – ಕತ್ತಲೆ

ಸಸಿನ – ಆಭರಣವಾಗಿ, ಅಲಂಕಾರವಾಗಿ,ತ್ರಾಹಿ – ರಕ್ಷಿಸು.

ಲಿಂಗಯ್ಯ – ಪರಶಿವಲಿಂಗ

ಜುಗ – ನಾಲ್ಕು ಯುಗಗಳು ೧೮ ಸಲ ಮರಳಿಬರುವ ಕಾಲ ಪ್ರಮಾಣ.

ಸ್ಥಾವರ – ಇಷ್ಟಲಿಂಗವು

ಜಂಗಮ – ಚರಲಿಂಗವು. ಜೋಳವಾಳಿ – ಯೋಧ, ಸೈನಿಕ.

ಶರಣರಿಗೆ – ಜಂಗಮಮೂರ್ತಿಗಳಿಗೆ.ತ್ರಿಪುಂಡ್ರ – ವಿಭೂತಿಯ ಮೂರು ಬೆರಳಿನ ಅಡ್ಡರೇಖೆಗಳು

ಎಱೆ – ಉದಕದ ಅಭಿಷೇಕ. ದಂಡಿಗೆ – ವೀಣೆಯ ಕೋಲು.

ಭಾಂಡವ – ದ್ರವ್ಯ, ಭಾಜನ – ಪಾತ್ರೆ,

ಯಂಗಿವರಹ – ಕಳ್ಳನಾಣ್ಯ ವೇಳೆವಾಳಿ – ಒಡೆಯನಿಗಾಗಿ ಆತ್ಮ ಬಲಿಯಾಗುವ ವ್ಯಕ್ತಿ.

ಸೂಳೆಯ ಮಗ – ಮಾಯಾಂಶಿಕವಾದ ಜೀವನು.

ಆರಾಧ್ಯ – ಶ್ರೀಗುರುನಾಥನು, ಆಚಾರ್ಯನು.

ಭಕ್ತಿ – ಶಿವಶ್ರದ್ಧೆಯು ಪ್ರಮಥರು – ಶಿವನ ಗಣಂಗಳು.

ದೀಕ್ಷೆಯ – ಶಿವೋಪದೇಶ ಪ್ರತಿಷ್ಠೆ – ಸ್ಥಾವರಲಿಂಗ,

ಅಳಿಮನ – ಬಡಮನದವ ಬಳ್ಳ – ಅಳೆಯುವ ಪ್ರಮಾಣ.

ಶರಣೆನ್ನು – ನಮಸ್ಕರಿಸು.

ಮತ್ತರ – ಹೊಲ ಅಳೆಯುವ ಒಂದು ಅಳತೆ ಪ್ರಮಾಣ ಅಥವಾ ನೂರು ಮಾರು.

| | | | | | |
|---|---|---|---|---|---|
| ನಿಚ್ಚನಿಚ್ಚ | – | ದಿನದಿನಂಪ್ರತಿ. | ಯೋಜನ | – | ನಾಲ್ಕು ಹರದಾರಿ. |
| ಸಣಬು | – | ಗೊಬ್ಬರ ಪುಂಡಿನಾರೇ ತುಂಬಿರ್ಪುದು. | | | |
| ತಾಮಸ | – | ಅಜ್ಞಾನವು. | ತೊಡರು | – | ಬಿರುದು ಬಾವಲಿ |
| ಕೂಳು | – | ಅನ್ನ | ತೋಯ | – | ನೀರು, |
| ಆಯತಲಿಂಗ | – | ಇಷ್ಟಲಿಂಗ, | ಅರ್ಣವ | – | ಸಮುದ್ರ |
| ಅಭಂಗ | – | ನಾಶವಿಲ್ಲದ, ತೊಂದರೆ ಮಾಡದಿರುವ. | ಅಶನ | – | ಆಹಾರ |
| ಅಭ್ರ | – | ಮೋಡ. | ಆಕುಳ | – | ಚಿಂತೆ, |
| ಅಟಮಟ | – | ಸುಳ್ಳು, ಮೋಸ, | ಆಮಯ | – | ರೋಗ, |
| ಅಂಡಲೆ | – | ತೊಂದರೆ ಕೊಡು. | ಓಗರ | – | ಅನ್ನ, ಆಹಾರ. |
| ಅತಿಗಳೆ | – | ಬಿಡು, ತ್ಯಜಿಸು. | ಏಡಿಸು | – | ಅಣಕಿಸು. |
| ಉಪಾಸ್ತೆ | – | ಉಪಾಸನೆ. | ಎಣಿಸು | – | ಯೋಚಿಸು. |
| ಋಣಪಾತಕ | – | ಋಣಗೇಡಿ. | ಎಟುವ | – | ಎಡವಟ್ಟ. |
| ಓಜ | – | ಒಡೆಯ, ಹಿರಿಯ. | ಕಿರಾತರು | – | ಕಾಡುಜನರು, ಬೇಡರು. |
| ಕಾಟಿ | – | ಅಂಬಲಿ, ಗಂಜಿ. | ಗಾವಿಲ | – | ಹಳ್ಳಿಯ ಮನುಷ್ಯ. |
| ಗುಂಡಿಗಪ್ಪರ | – | ತೆಗ್ಗಾದ ಭಿಕ್ಷಾಪಾತ್ರೆ. | ನಿರಂಗಸಂಗಿ | – | ನಿರ್ದೇಹಿ. |
| ಪಾಷಂಡಿ | – | ದೇವರಲ್ಲಿ ವಿಶ್ವಾಸವಿಲ್ಲದವ. | ಪಾಳೆಯ | – | ದಂಡಿನ ಬೀಡು. |
| ಭೂಭಾರಿ | – | ನಿರುಪಯುಕ್ತ. | ಪರಮಾರ್ಥ | – | ಸತ್ಯ. |
| ಪಾಗ | – | ವೀರಶೈವರ ಪಂಚ ಮುದ್ರೆಗಳಲ್ಲಿ ಒಂದು. | ಭವ | – | ಪರಮಾತ್ರ. |
| ರತಿ | – | ಪ್ರೀತಿ | ವಕ್ತ್ರ | – | ಮುಖ. |
| ಸೋಜಿ | – | ವಿಷದ ಕುಂಬಳಕಾಯಿ. | ಸೊಮ್ಮು | – | ಆಸ್ತಿ. |
| ಸಂಸೃತಿ | – | ಸಂಸಾರ | ಹೊತ್ತಾರೆ | – | ನಸುಕಿನಲ್ಲಿ. |
| ಹರಿ | – | ಪ್ರಾಣವಾಯು, ಹಾವು, ಸಿಂಹ. | ಹೋರು | – | ಕಾದಾಡು. |
| ಹದೆ | – | ಪ್ರೀತಿಸು | ಹಡಿಕೆ | – | ಹೊಲಸು. |
| ಅಗ್ಘವಣಿ | – | ಪೂಜೆಗೆ ಬಳಸುವ ನೀರು. | ಅಡಗು | – | ಮಾಂಸ. |
| ಅಭವ | – | ಶಿವ | ಅನಾನಂದ | – | ದುಃಖ. |
| ಕಂಠೀರವ | – | ಸಿಂಹ | ಕೊಂಡೆಯ | – | ಚಾಡಿಕೋರ. |

| | | | | | |
|---|---|---|---|---|---|
| ಪಾಗ | – | ಮುಂಡಾಸು, ರುಮಾಲು. | ಪೂರ್ವಾಶ್ರಯ | – | ಮೊದಲಿನ ಸ್ವಭಾವ |
| ಬಣಗರು | – | ನೀಚರು. | ಸಿರಿವರ | – | ಲಕ್ಷ್ಮೀಯ ಗಂಡ, ನಾರಾಯಣ. |
| ಹಂದೆ | – | ಹೇಡಿ. | ಹಾಲಂಬಿಲ | – | ಹುಳಿಗಂಜಿ. |
| ಹೂಸಕರು | – | ಸುಳ್ಳು ಹೇಳುವವರು. | ಹೊಲಬು | – | ಮರ್ಮ, ಜ್ಞಾನ. |

**ಗಾದೆಗಳು:** ಯಾವುದೇ ಭಾಷೆಯ ಸೊಬಗು ಇಲ್ಲವೇ ಜನರ ಬದುಕಿನ ಅನುಭವಗಳು ಜಾನಪದ ಸಂಕಥನಗಳಾದ ಗಾದೆ, ಒಗಟು, ಒಡಪುಗಳಲ್ಲಿ ಗಟ್ಟಿಗೊಂಡಿರುತ್ತದೆ. ಲೋಕಾನುಭವದಿಂದ ಹುಟ್ಟಿದ ಗಾದೆಗಳಿಗೂ ವಚನಟೀಕೆಗಳು ಇಂಬು ನೀಡಿರುವುದನ್ನು ಮರೆಯುವಂತಿಲ್ಲ. ಆ ಹಿನ್ನೆಲೆಯಲ್ಲಿ ಟೀಕಾಕಾರರು ಬಳಸಿದ ಗಾದೆಗಳು ಅವರ ಬದುಕಿನ ಸಾಂಸ್ಕೃತಿಕ ಅನನ್ಯತೆಗೆ ಹಿಡಿದ ಕನ್ನಡಿಯಾಗಿವೆ.

ವಚನಗಳಿಗೆ ಬರೆಯಲಾದ ಟೀಕುಗಳಲ್ಲಿ ಟೀಕಾಕಾರರು ಸಂದರ್ಭಕ್ಕೆ ತಕ್ಕಂತೆ ಅನೇಕ ಕಡೆಗಳಲ್ಲಿ ಸಮಕಾಲೀನ ಸಂದರ್ಭದ ಗಾದೆ ಮಾತುಗಳನ್ನು ಬಳಸುವ ಮೂಲಕ ನಾಡಿನ ಜನಜೀವನದ ಆಚಾರ–ವಿಚಾರ, ಜೀವನಮೌಲ್ಯ, ಜನಪದರ ಭಾಷೆ, ಪ್ರಾದೇಶಿಕತೆಯ ಸೊಗಡನ್ನು ಅರಿಯಲು ಸಹಾಯಕವಾಗಿವೆ.

**ಉದಾಹರಣೆಗೆ**
* ಹುತ್ತದ ಮೇಲೆ ಬಡಿದರೆ ಸರ್ಪನ ಕೊಂದಂತಾಯಿತೇ?"
* ಹೊಲಸು ಹಿಡಿಯಬಹುದು, ಪರಸ್ತ್ರೀ ಗಮನಮಾಡಬಾರದು"
* ಮನೆಯೊಳಗೆ ಹಡದಾರ ಗದ್ದಲುಂಟು"
* ಹಂದಿ ಬಾಯೊಳಗಿನ ತುತ್ತು ನಾಯಿ ಬಂದು ಕಚ್ಚಿದಂತೆ"
* ಹಿತ್ತಲಕ್ಕೆ ಹಳೆ ಎಮ್ಮಿ ಮನಸೋತಹಾಗೆ"
* ಹಾಳಕೇರಿಗೆ ಹಂದಿ ಜಪ ಇಟ್ಟಹಾಗೆ"
* ಹಡಿಕಿಗೆ ಶ್ವಾನ ಮೆಚ್ಚಿದ ಹಾಗೆ"
* ಹೊಟ್ಟು ಕುಟ್ಟೆ ಗಾಳಿಗೆ ತೂರಿದಂತೆ ಆಯಿತು"
* ನಮಾಜ ಮಾಡಲು, ಮಸೂತಿಯ ಸುಟ್ಟು"
* ಹಣವಿಲ್ಲದೇ ಉಪ್ಪು ಕೊಂಡುಂಬುವರು ಬಯಲದೇಶದವರು"
* ಮುದ್ರಿಕಿ ಪಶುವಿಂಗೆ ಭಯವಿಲ್ಲ"
* ಜಡಚಕ್ರದೊಳಗೆ ಧಾನ್ಯವ ನೀಡಿ ಹಿಟ್ಟೆಂದಡೆ ಹಿಟ್ಟಾಗಬಲ್ಲುದೆ?"
* ಬೆಲ್ಲದ ಕುಳ್ಳಿಂಗೆ ಮೂಷಕನು ಮುತ್ತಿ ಕುಳ್ಳು ಬೈಲಾದ ಹಾಂಗೆ"

ಹೀಗೆ ಕನ್ನಡ ಟೀಕಿನ ವಚನಗಳಲ್ಲಿ ಬಳಕೆಯಾದ ಗಾದೆಗಳನ್ನು ಕುರಿತು ಅಧ್ಯಯನ ಮಾಡುವ ಅಗತ್ಯವಿದೆ. ಇದರಿಂದ ನಾಡಿನ ಆಯಾ ಕಾಲದ ಭಾಷೆ, ಸಂಸ್ಕೃತಿ, ಬಳಕೆಯ ವಸ್ತುಗಳು, ಧಾರ್ಮಿಕ

ಆಚಾರಗಳು, ಮೂಢನಂಬಿಕೆಗಳು, ಕೌಟುಂಬಿಕ ಸ್ಥಿತಿ, ವ್ಯವಹಾರ ಮತ್ತು ಸಮಾಜದ ಸ್ಥಿತಿಗತಿಯನ್ನು ಅರಿಯಲು ಸಾಧ್ಯವಾಗಲಿದೆ. ಅಷ್ಟೇ ಏಕೆ, ಕನ್ನಡ ಕಾವ್ಯ ಕೃತಿಗಳಿಗೆ ಬರೆದ ಟೀಕಾಗ್ರಂಥಗಳು, ಗದ್ಯ ಕೃತಿಗಳಿಗೆ ಬರೆದ ಟೀಕಾಗ್ರಂಥಗಳು, ಶಾಸ್ತ್ರ ಕೃತಿಗಳಿಗೆ ಬರೆದ ಟೀಕಾಗ್ರಂಥಗಳು ಎಂದು ವಿಭಾಗಿಸಿ ಅವುಗಳಲ್ಲಿಯ ಸಾಂಸ್ಕೃತಿಕ ಅಧ್ಯಯನ ಮಾಡಬಹುದಾಗಿದೆ. ಇದರಿಂದ ಆಯಾ ಕಾಲದ ಇತಿಹಾಸ, ಭಾಷೆ, ಸಂಸ್ಕೃತಿ ಮತ್ತಿತರ ವಿಷಯಗಳ ಮೇಲೆ ಬೆಳಕು ಚೆಲ್ಲಬಹುದು. ಡಾ. ರಂಗರಾಜ ವನದುರ್ಗ ಅವರು ಹೇಳುವಂತೆ “ಕರ್ನಾಟಕ ಸಂಸ್ಕೃತಿಯ ನೈಜವಾದ ನೆಲಬೆಲೆಗಳು ಗೊತ್ತಾಗಬೇಕಾದರೆ ಹಲವು ಮುಖಾಮುಖಿಗಳು ನಡೆಯಬೇಕಿದೆ. ಗೆದ್ದವರ ಚರಿತ್ರೆಗಿಂತ ಸೋತವರ, ಶರಣಾದವರ ವ್ಯಥೆ ಕೇಳಬೇಕಿದೆ. ಈ ನೆಲದ ನಾಯಕರು ರಾಮ ಭೀಮರಷ್ಟೇ ಅಲ್ಲ; ಸೋತ ರಾವಣ, ದುರ್ಯೋಧನರು ಆಗಬೇಕಿದೆ. ರಾಮನ ಗೆಲುವಿಗೆ ಶ್ರಮಿಸಿದ ವಾನರರು, ಸೋತರಾಕ್ಷಸರು ನಮ್ಮ ಅಧ್ಯಯನಕ್ಕೆ ಆಕರವಾಗಬೇಕಿದೆ. ದ್ರಾವಿಡರನ್ನು ದ್ರಾವಿಡರಿಂದಲೇ ಹೊಡೆದುರುಳಿಸುವ ತಂತ್ರದ ಹಿಂದೆ ಅಡಗಿರುವ ರಾಜಕಾರಣವನ್ನು ಅರ್ಥೈಸಬೇಕಿದೆ. ಈ ಕಾರಣದಿಂದ ನಮ್ಮ ಅಧ್ಯಯನದ ಸಾಧ್ಯತೆಗಳನ್ನು ಪ್ರಧಾನ ಸಂಸ್ಕೃತಿಯ ವಿರುದ್ಧ ಉಪಸಂಸ್ಕೃತಿಯನ್ನು, ಆಧುನಿಕ ಸಂಸ್ಕೃತಿಯ ವಿರುದ್ಧ ಆದಿಮ ಸಂಸ್ಕೃತಿಯನ್ನು, ವ್ಯಾಪಕ ಸಂಸ್ಕೃತಿಯ ವಿರುದ್ಧ ಅವ್ಯಾಪಕ ಸಂಸ್ಕೃತಿಯನ್ನು, ಶಿಷ್ಟ ಸಂಸ್ಕೃತಿಯ ವಿರುದ್ಧ ಜನಪದ ಸಂಸ್ಕೃತಿಯನ್ನು, ಸ್ಮೃತಿ ಸಂಸ್ಕೃತಿಯ ವಿರುದ್ಧ ವಿಸ್ಮೃತಿ ಸಂಸ್ಕೃತಿಯನ್ನು, ಏಕ ಸಂಸ್ಕೃತಿಯ ವಿರುದ್ಧ ಬಹುಸಂಸ್ಕೃತಿಯನ್ನು, ವಿಧಾನ ಸಂಸ್ಕೃತಿಯ ವಿರುದ್ಧ ಅಧೀನ ಸಂಸ್ಕೃತಿಯನ್ನು, ಸುಖ ಸಂಸ್ಕೃತಿಯ ವಿರುದ್ಧ ಶ್ರಮ ಸಂಸ್ಕೃತಿಯನ್ನು, ರಾಜಸಂಸ್ಕೃತಿಯ ವಿರುದ್ಧ ಪ್ರಜಾ ಸಂಸ್ಕೃತಿಯನ್ನು, ಅಕ್ಷರ ಸಂಸ್ಕೃತಿಯ ವಿರುದ್ದ ಅನಕ್ಷರ ಸಂಸ್ಕೃತಿಯನ್ನು, ಪುರುಷ ಸಂಸ್ಕೃತಿಯ ವಿರುದ್ಧ ಸ್ತ್ರೀ ಸಂಸ್ಕೃತಿಯನ್ನು, ವ್ಯಷ್ಠಿ ಸಂಸ್ಕೃತಿಯ ವಿರುದ್ಧ ಸಮಷ್ಟಿ ಸಂಸ್ಕೃತಿಯನ್ನು, ವಸಾಹತು ಸಂಸ್ಕೃತಿಯ ವಿರುದ್ಧ ದೇಶಿ ಸಂಸ್ಕೃತಿಯನ್ನು, ಯಜಮಾನ ಸಂಸ್ಕೃತಿಯ ವಿರುದ್ಧ ಶ್ರಮಜೀವಿ ಸಂಸ್ಕೃತಿಯನ್ನು ಮುಖಾಮುಖಿ ಮಾಡುವ ಮೂಲಕ ಹೊಸ ಸಾಧ್ಯತೆಗಳನ್ನು ಸಾಧಿಸಬೇಕಿದೆ. ಹಾಗಾದಾಗ ಮಾತ್ರ ಇಲ್ಲಿಯ ಸಾಹಿತ್ಯ, ಸಂಗೀತ, ಕಲೆ, ಶಿಲ್ಪ, ಉಡುಗೆ, ಬಣ್ಣ, ಜಾತಿ, ಜನಾಂಗ, ನಡೆ–ನುಡಿಗಳಿಗೆ ಬೆಲೆ ಬರುತ್ತದೆ; ಅಸ್ತಿತ್ವ ಸಿಗುತ್ತದೆ. ಪ್ರಧಾನ ಸಂಸ್ಕೃತಿಯ ಅಧ್ಯಯನಗಳನ್ನು ಪುನರ್ ಮೌಲೀಕರಣಕ್ಕೆ ಒಳಪಡಿಸುವ ಮೂಲಕ ಪುನರ್ ವ್ಯಾಖ್ಯಾನ, ಪುನರ್ ಬರಹ, ಪುನರ್ ಓದುಗಳು ಪ್ರಾಪ್ತವಾಗಬೇಕಿದೆ. ಇದು ಸಾಧ್ಯವಾದರೆ ಏಕಮುಖತೆ ಬಿದ್ದು ಬಹುಮುಖತೆ ಬರುತ್ತದೆ. ಹೊಸ ಸತ್ಯ ಅನಾವರಣಗೊಳ್ಳುತ್ತದೆ”[೪೧] ಎಂಬ ಮೌಲಿಕವಾದ ಅಭಿಪ್ರಾಯಗಳನ್ನು ಕನ್ನಡದ ಒಟ್ಟು ಟೀಕಾ ಸಾಹಿತ್ಯದ ಸಾಂಸ್ಕೃತಿಕ ಸಂಶೋಧನೆಗೆ ತೊಡಗುವವರು ಅಳವಡಿಸಿಕೊಂಡು ಕಾರ್ಯ ಮಾಡಬೇಕಾಗಿದೆ. ಇದರಿಂದ ಕನ್ನಡಿಗರ ಸಾಂಸ್ಕೃತಿಕ ಪರಂಪರೆಯ ನೈಜವಾದ ಘಟನೆಗಳನ್ನು ಶೋಧ ಮಾಡಿ ಪ್ರಧಾನ ಸಂಸ್ಕೃತಿಯ ಹುಸಿಸತ್ಯಗಳನ್ನು ಅನಾವರಣಗೊಳಿಸುತ್ತ ಮೋಡದ ಮರೆಯಲ್ಲಿರುವ ಮುತ್ತಿನ ಹನಿಗಳನ್ನು ಸುಂದರ ಹಾರವಾಗಿ ಪೋಣಿಸುವ ಗುರುತರ ಜವಾಬ್ದಾರಿ ಸಂಶೋಧಕರ ಮೇಲಿದೆ. ಪ್ರತಿಸಂಸ್ಕೃತಿಯನ್ನು ಕುರಿತು ಡಾ. ರಹಮತ್ ತರೀಕೆರೆಯವರು “ಪ್ರಧಾನ ಸಂಸ್ಕೃತಿಯ

ನಾಶದ ಬೆನ್ನಮೇಲೆ ಪರ್ಯಾಯ ಸಂಸ್ಕೃತಿ ನಿರ್ಮಿಸುವ ಮಹತ್ ಆಸೆ ಇಲ್ಲಿಯದು"[೪೨] ಎಂಬ ವೈಚಾರಿಕ ಸಂಶೋಧನೆಯ ಜಾಡುಹಿಡಿದು ಯಜಮಾನ ಸಂಸ್ಕೃತಿಯ ನಂಬಿಕೆಗಳನ್ನು, ಪವಿತ್ರೀಕರಿಸಲಾದ ಸಾಂಸ್ಕೃತಿಕ ಆಕೃತಿಗಳ ಪಾವಿತ್ರ್ಯವನ್ನು ಪ್ರಶ್ನಿಸುವ ಇಲ್ಲವೇ ನಾಶಮಾಡುವುದರತ್ತ ಮುನ್ನುಗ್ಗಬೇಕಾಗಿದೆ. ಈ ನೆಲೆಯಲ್ಲಿ ಸಮಗ್ರ ಟೀಕಾ ಸಾಹಿತ್ಯದ ಸಾಂಸ್ಕೃತಿಕ ಜೀವನದ ತೆರೆಮರೆಯ ಚಿತ್ತಾರಗಳನ್ನು ಹೆಕ್ಕಿ ತೆಗೆಯುವ ಪ್ರಾಮಾಣಿಕ ಪ್ರಯತ್ನ ನಡೆಯಬೇಕಾಗಿದೆ.

ಒಟ್ಟಾರೆ, ಟೀಕಿನ ವಚನಗಳ ಕುರಿತು ಡಾ. ವೀರಣ್ಣ ರಾಜೂರ ಅವರು ಹೇಳುವಂತೆ "ಧಾರ್ಮಿಕ, ಸಾಮಾಜಿಕ, ಭಾಷಿಕ, ಸಾಹಿತ್ಯಿಕ ಅಂಶಗಳೂ ಸೇರಿಕೊಂಡಿರುವುದರಿಂದ ಈ ಟೀಕೆಗಳನ್ನು ವಿಭಿನ್ನ ನೆಲೆಗಳಲ್ಲಿ ಅಧ್ಯಯನ ಮಾಡಲು ಅವಕಾಶಗಳು ತೆರೆದುಕೊಂಡಿವೆ"[೪೩] ಎಂಬುದರಲ್ಲಿ ಎರಡು ಮಾತಿಲ್ಲ. ಈ ದಿಶೆಯಲ್ಲಿ ೧೨ನೇ ಶತಮಾನದ ವಚನಗಳು ಮತ್ತು ಅವುಗಳಿಗೆ ಬರೆಯಲಾದ ಟೀಕುಗಳನ್ನು ಇಟ್ಟುಕೊಂಡು ಸಾಂಸ್ಕೃತಿಕ ಅಧ್ಯಯನ ನಡೆಯಬೇಕಾಗಿದೆ. ಇದರಿಂದ ನಾಡಿನ ಇತಿಹಾಸ, ಸಂಸ್ಕೃತಿಯನ್ನು ಪುನರ್‌ಕಟ್ಟಿಕೊಡಲು ಸಾಧ್ಯವಿದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಾಯವು ಸಂಸ್ಕೃತಿಯ ಮರುಚಿಂತನೆಗೆ ತೊಡಗಲು ಪ್ರೇರಣೆ ನೀಡಬಹುದೆಂಬ ಆಶಯವಿದೆ.

**ಅಡಿಟಿಪ್ಪಣಿಗಳು**

೧. ಬಸವಣ್ಣನ ಕಲ್ಯಾಣ ಹುಡುಕುತ್ತಾ – ಡಾ. ಲತಾ. ಮೈಸೂರು ಅವರ ಪಿಎಚ್.ಡಿ ಪ್ರಬಂಧದ 'ಮುನ್ನುಡಿ', ಮೊದಲ ಮುದ್ರಣ – ೨೦೧೧, ಪ್ರಕಟನೆ – ಲಕ್ಷ್ಮೀ ಮುದ್ರಣ, ಚಾಮರಾಜಪೇಟೆ, ಬೆಂಗಳೂರು.

೨. ಬಸವಣ್ಣನವರ ಟೀಕಿನ ವಚನಗಳು:(ಸಂ.) ಡಾ.ಎಂ.ಎಂ.ಕಲಬುರ್ಗಿ, ಸಂಪುಟ–೧, ಪ್ರಕಟಣೆ – ೧೯೬೮, ಕ.ವಿ.ವಿ.ದ ಬಸವೇಶ್ವರ ಪೀಠದ ಪ್ರಕಟಣೆ, ಧಾರವಾಡ.

೩. ಅದೇ, ಪುಟ – ೧೧೩, ವಚನ – ೧೨೩

೪. ಅದೇ, ಪುಟ – ೬೦

೫. ಸಾಹಿತ್ಯ ಪರಿಶೋಧನ : ಡಾ. ಬಿ.ಆರ್. ಹಿರೇಮಠ, ೧೯೯೮, ಪುಟ–೧೩೮, ಪ್ರಕಟನೆ – ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬. ಬಸವಣ್ಣನವರ ಟೀಕಿನ ವಚನಗಳು:(ಸಂ.) ಡಾ.ಎಂ.ಎಂ.ಕಲಬುರ್ಗಿ, ಸಂಪುಟ–೧, ವಚನ–೪೧, ಪುಟ – ೪೬.

೭. ಕಾಡಸಿದ್ದೇಶ್ವರ ವಚನಗಳು : (ಸಂ.) ಎ.ಎಲ್. ಹಿರೇಮಠ, ಪ್ರ–೧೯೮೬, ಪ್ರಕಾಶನ–ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳಿ, ಮೂರು ಸಾವಿರಮಠ ಹುಬ್ಬಳ್ಳಿ, ಪುಟ–೬೪,೬೫.

೮. ಅದೇ, ಪುಟ ೬೭, ೬೮.

೯. ಅದೇ, ಪುಟ – ೬೩

೧೦. ಅದೇ, ಪುಟ – ೧೦೫

೧೧. ಶಿವಸಂಗಮ : (ಸಂ.) ಡಾ. ವಿ.ಬಿ. ಶಿರೂರ, ತೋಂಟದಾರ್ಯರ ಟೀಕಿನ ವಚನಗಳು, (ಲೇ.) ಡಾ. ವೀರಣ್ಣ ರಾಜೂರ, ಪ್ರ–೨೦೦೬, ಪುಟ–೨೯೦.

೧೨. ವಚನ ಪರಿಭಾಷಾಕೋಶ, (ಸಂ.) ಡಾ.ಎನ್.ಜಿ. ಮಹಾದೇವಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧, ಪುಟ–೨೧೮.

೧೩. ಶಿವಸಂಗಮ, ಸಂ. ಡಾ.ಬಿ.ವಿ. ಶಿರೂರ ಪ್ರ ೨೦೦೬, ಪುಟ–೨೯೪, ೨೯೫.

೧೪. ಅದೇ, ಪುಟ – ೩೦೩

೧೫. ಅದೇ, ಪುಟ – ೩೦೩

೧೬. ಅದೇ, ಪುಟ – ೩೧೧

೧೭. ಶ್ರೀ ಕಾಡಸಿದ್ದೇಶ್ವರ ವಚನಗಳು : (ಸಂ.) ಎ.ಎಲ್. ಹಿರೇಮಠ, ಜಗದ್ಗುರು ಮೂರು ಸಾವಿರಮಠ ಹುಬ್ಬಳ್ಳಿ–೧೯೮೯, ಪುಟ–೩೬೧,೩೬೨.

೧೮. ಅದೇ, ಪುಟ – ೧೦೦

೧೯. ಬಸವಣ್ಣನವರ ಟೀಕಿನ ವಚನಗಳು : (ಸಂ.) ಡಾ. ಎಂ.ಎಂ. ಕಲಬುರ್ಗಿ, ಸಂಪುಟ.೧, ವಚನ – ೧೦೭, ಪುಟ–೯೬, ೯೭

೨೦. ಸಾಹಿತ್ಯ ಪರಿಶೋಧನ – ಡಾ. ಬಿ.ಆರ್. ಹಿರೇಮಠ, ಪುಟ – ೧೪೯.

೨೧. ಅದೇ, ಪುಟ – ೧೪೯

೨೨. ಅದೇ, ಪುಟ – ೧೪೭

೨೩. ಅದೇ, ಪುಟ – ೧೪೧

೨೪. ಬಸವಣ್ಣನವರ ಟೀಕಿನ ವಚನಗಳು : (ಸಂ.) ಡಾ. ಎಂ.ಎಂ. ಕಲಬುರ್ಗಿ, ಸಂಪುಟ.೧, ಪುಟ– ೧೧೯, ೧೨೦

೨೫. ಅದೇ, ಸಂಪುಟ – ೧, ಪುಟ – ೧೧೬

೨೬. ಸಾಹಿತ್ಯ ಪರಿಶೋಧನ – ಡಾ. ಬಿ.ಆರ್. ಹಿರೇಮಠ, ಪುಟ – ೧೩೯, ೧೪೦.

೨೭. ಅದೇ, ಅಡಿಟಿಪ್ಪಣಿ, ಪುಟ – ೧೪೦

೨೮. ಅದೇ, ಪುಟ – ೧೪೦

೨೯. ಬಸವಣ್ಣನವರ ಟೀಕಿನ ವಚನಗಳು : (ಸಂ.) ಡಾ. ಎಂ.ಎಂ. ಕಲಬುರ್ಗಿ, ಸಂಪುಟ.೧, ಪುಟ.೧೧೬

೩೦. ಅದೇ, ಪುಟ – ೩೦

೩೧. ಶ್ರೀ ಕಾಡಸಿದ್ದೇಶ್ವರ ವಚನಗಳು : (ಸಂ.) ಎ.ಎಲ್. ಹಿರೇಮಠ, ಪ್ರ – ೧೯೮೯, ಪುಟ.೫೭

೩೨. ಶರಣ ಸಾಹಿತ್ಯ ಸಂಸ್ಕೃತಿ – ಕೆಲವು ಅಧ್ಯಯನಗಳು, ಡಾ.ಸಿ. ನಾಗಭೂಷಣ, ಕಸಾಪ, ಪ್ರಕಟಣೆ–೨೦೦೦, ಪುಟ–೧೬೪

೩೩. ಬಸವಣ್ಣನವರ ಟೀಕಿನ ವಚನಗಳು – (ಸಂ.) ಡಾ. ಎಂ.ಎಂ. ಕಲಬುರ್ಗಿ, ಸಂಪುಟ.೧, ಪುಟ–೧೨೬

೩೪. ಶಿವದಾಸ ಗೀತಾಂಜಲಿ ಡಾ. ಎಲ್. ಬಸವರಾಜು, ಪುಟ – ೮೭, ೮೮

೩೫. ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ – ಡಾ. ಶಿವಾನಂದ ವಿರಕ್ತಮಠ ಕವಿವಿ ಧಾರವಾಡ–೧೯೭೮, ಪುಟ–೨೨೫

೩೬. ಅದೇ, ಪುಟ – ೨೫೧

೩೭. ಶಿವಸಂಗಮ, (ಸಂ.) ಡಾ. ಬಿ.ವಿ. ಶಿಶೂರ, ೨೦೦೬, ಪುಟ–೩೦೩

೩೮. ಅದೇ, ಪುಟ – ೩೦೩

೩೯. ಅದೇ, ಪುಟ – ೩೧೫

೪೦. ಬಸವಣ್ಣನವರ ಟೀಕಿನ ವಚನಗಳು – (ಸಂ.) ಡಾ. ಎಂ.ಎಂ. ಕಲಬುರ್ಗಿ, ಸಂಪುಟ.೧, ಪುಟ.೪೯

೪೧. ವಿಚಾರ ಸಾಹಿತ್ಯ, (ಸಂ.) ಗುರುಲಿಂಗ ಕಾಪಸೆ, ೨೦೦೧, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಣೆ, ಪುಟ – ೮೦, ೮೧

೪೨. ಅದೇ, ಪುಟ – ೮೨

೪೩. ಶಿವಸಂಗಮ, (ಸಂ.) ಡಾ. ಬಿ.ವಿ. ಶಿರೂರ, ೨೦೦೬, ಪುಟ–೩೧೬

***

೭

## ಸಮಾರೋಪ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಚನ ಸಾಹಿತ್ಯ ಮೂರು ನೆಲೆಯಲ್ಲಿ ಅಧ್ಯಯನಕ್ಕೆ ಒಳಪಟ್ಟಿದೆ. ಈ ನೆಲೆಗಳನ್ನು ವಿದ್ವಾಂಸರು ಸಂಗ್ರಹ, ಸಂಕಲನ, ಸಂಪಾದನೆ ಎಂದು ಗುರುತಿಸಿದ್ದಾರೆ. ಪ್ರಸ್ತುತ ಕನ್ನಡ ಟೀಕಿನ ವಚನಗಳು : ಒಂದು ಅಧ್ಯಯನ ಎಂಬ ಮಹಾಪ್ರಬಂಧ ವಚನ ಸಂಕಲನ ಯುಗದ ಅಧ್ಯಯನದ ಶಿಸ್ತನ್ನು ನಿರ್ವಚಿಸುವ ಪ್ರಯತ್ನವಾಗಿದೆ.

ಕಾವ್ಯ ಸಾಹಿತ್ಯದ ಬೆನ್ನಹಿಂದೆಯೇ ವಿಮರ್ಶಾ ಸಾಹಿತ್ಯ ಹುಟ್ಟಿಕೊಳ್ಳುತ್ತದೆ. ಹೀಗಾಗಿ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕೆಲವು ಶಾಸ್ತ್ರಕೃತಿಗಳಿಗೆ, ಆಚರಣೆಯ ವಚನಗಳಿಗೆ, ಬೆಡಗಿನ ವಚನಗಳಿಗೆ ಟೀಕು, ವಿಮರ್ಶಾ ರೂಪದ ಟೀಕು ಬರೆಯಲಾಗಿದೆ. ಇಂತಹ ಟೀಕಾಸಾಹಿತ್ಯ ಕುರಿತಂತೆ ವಚನ ಸಾಹಿತ್ಯದಲ್ಲಿ ಪ್ರಯೋಗಗೊಂಡ ನೆಲೆ ಮತ್ತು ಹಿನ್ನೆಲೆಯನ್ನು ಶೋಧಿಸುವ ಪ್ರಯತ್ನವಾಗಿದೆ ಕನ್ನಡ ಟೀಕಿನ ವಚನಗಳು : ಒಂದು ಅಧ್ಯಯನ.

ಟೀಕು ಪ್ರಾಚೀನ ಅಧ್ಯಯನದ ಪ್ರಕಾರವಾಗಿ, ಪಠ್ಯವಿಷಯವಾಗಿ ಸ್ಥಾನ ಪಡೆದಿತ್ತು ಎಂಬುದಕ್ಕೆ "ಟೀಕಂ ಬರೆಯಲ್ ಸಮಗ್ರರ್ ಅಭ್ಯಾಸಿಸುವರ್" ಎಂಬಂತಹ ಶಾಸನೋಕ್ತ ಉಲ್ಲೇಖಗಳು ಮತ್ತು ಕರ್ನಾಟಕದಲ್ಲಿ ಕಂಡುಬರುವ ಟೀಕಿನ ಮಠಗಳು ನಿದರ್ಶನವಾಗಿವೆ.

ಪ್ರಸ್ತುತ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಕುರಿತಂತೆ ಅಧ್ಯಾಯ ಒಂದರಲ್ಲಿ ಸಾದ್ಯಾಂತಿಕವಾಗಿ ಚರ್ಚಿಸಲಾಗಿದೆ. ಸೃಜನಶೀಲ ಸಾಹಿತ್ಯದಷ್ಟೇ ಶ್ರಮ ಮತ್ತು ಪಾಂಡಿತ್ಯವನ್ನು ಅಪೇಕ್ಷಿಸುವ ಟೀಕಾಸಾಹಿತ್ಯದ ಅರ್ಥ ಒಂದೇ ಆಗಿದ್ದರೂ ಕನ್ನಡದಲ್ಲಿ ನುಡಿ, ಭಾವಾರ್ಥ, ನಿರ್ವಚನ, ಸಾರ ವಚನಾರ್ಥ, ಸಾರಾಮೃತ, ಪ್ರವಚನ, ಟಿಪ್ಪಣಿ, ಅನ್ವಯ, ದೃಷ್ಟ ಎಂದು ಮುಂತಾಗಿ, ಪ್ರಾಕೃತದಲ್ಲಿ ಚೂರ್ಣಿ, ನಿರ್ಯುಕ್ತಿ, ಪದ್ಧತಿ, ವೃತ್ತಿ, ಭಾಷ್ಯ ಎಂದು ಗುರುತಿಸಲಾಗಿದೆ. ಅದೇ ರೀತಿ ಸಂಸ್ಕೃತ ಸಾಹಿತ್ಯದಲ್ಲಿ ವಾರ್ತಿಕ, ವ್ಯಾಖ್ಯಾನ, ಭಾಷ್ಯ, ತಾತ್ಪರ್ಯ, ಸಟೀಕು, ವೃತ್ತಿ, ನಿರ್ಣಯ, ನ್ಯಾಸ ಎಂದು

ಮುಂತಾಗಿ ಕರೆಯಲಾಗಿದೆ. ಈ ಎಲ್ಲ ಮೂಲದ ಅರ್ಥಗಳನ್ನು ಗ್ರಹಿಸಿ ಟೀಕಾಸಾಹಿತ್ಯದ ಅರ್ಥ. ಉಗಮ, ಲಕ್ಷಣ ಹಾಗೂ ಸ್ವರೂಪವನ್ನು ಅಧ್ಯಾಯ ಎರಡರಲ್ಲಿ ಚರ್ಚಿಸಲಾಗಿದೆ. ಟೀಕುವಿನ ಸ್ವರೂಪಕ್ಕೆ ಸಂಬಂಧಿಸಿದಂತೆ ಸೋಪಾಜ್ಞ ಟೀಕು, ಉಪನ್ಯಾಸಮಾಲಾ ಟೀಕು ಟುಪ್‌ಟೀಕು, ಲಘುಭಾಷ್ಯ, ಮಹಾಭಾಷ್ಯ, ಅರ್ಥ ವೃತ್ತಿ, ಅನ್ವಯ ವೃತ್ತಿ, ಲಘುವೃತ್ತಿ, ಬೃಹತ್ ವೃತ್ತಿ, ತಾತ್ವಿಕಾರ್ಥ, ತಾತ್ಪರ್ಯಾರ್ಥ, ಪ್ರತಿಪದಾರ್ಥ ಮುಂತಾದ ಸ್ವರೂಪಗಳನ್ನು ಕುರಿತು ಪ್ರೌಢ ರೀತಿಯ ಅಧ್ಯಯನ ಮಾಡುವ ಅವಕಾಶ ಇರುವುದನ್ನು ಚರ್ಚಿಸಲಾಗಿದೆ.

ಯಾವುದೇ ವಿಷಯಕ್ಕೆ ಒಂದು ಪರಂಪರೆ ಇರುವಂತೆ ಕನ್ನಡ ಟೀಕಾ ಸಾಹಿತ್ಯಕ್ಕೂ ಒಂದು ಪರಂಪರೆ ಇದೆ. ಪ್ರಾಯಶಃ ಸಾಹಿತ್ಯ ಸೃಷ್ಟಿಯ ಬೆನ್ನಹಿಂದೆಯೇ ಹುಟ್ಟಿಕೊಂಡು ಬರುವ ವಿಮರ್ಶಾ ಸಾಹಿತ್ಯದಂತೆ ಟೀಕಾ ಸಾಹಿತ್ಯವು ಕೂಡಾ ಆಯಾ ಕಾಲಘಟ್ಟದಲ್ಲಿ ಸೃಷ್ಠಿಯಾಗಿರುವುದನ್ನು ಗಮನಿಸಬಹುದು. ಅಧ್ಯಯನದ ಅನುಕೂಲಕ್ಕಾಗಿ ಕನ್ನಡ ಟೀಕಾ ಸಾಹಿತ್ಯ ಪರಂಪರೆಯನ್ನು, ಜೈನಟೀಕಾ ಸಾಹಿತ್ಯ, ಲಿಂಗಾಯತ ಟೀಕಾ ಸಾಹಿತ್ಯ, ಬ್ರಾಹ್ಮಣ ಟೀಕಾ ಸಾಹಿತ್ಯವೆಂದು ವರ್ಗೀಕರಿಸಿಕೊಂಡು ಅಧ್ಯಾಯ ಮೂರರಲ್ಲಿ ಪರಾಮರ್ಶಿಸಲಾಗಿದೆ. ಒಂದು ಕೃತಿ ಸೃಜನಾತ್ಮಕ ಉತ್ಪಾದನೆಯಾದರೆ, ಆ ಉತ್ಪಾದನೆಯ ಉಪ ಉತ್ಪಾದನೆ ಎಂಬಂತೆ ಅಥವಾ ಅಗತ್ಯ ಸಾಮಗ್ರಿಗಳ ತಯಾರಿಕೆ ಎಂಬಂತೆ ಸೃಷ್ಟಿಗೊಂಡ ಈ ಟೀಕಾ ಸಾಹಿತ್ಯ ಪರಂಪರೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪ್ರತ್ಯೇಕವಾಗಿ ದಾಖಲಿಸುವ ಮತ್ತು ಚರ್ಚೆ ಮಾಡುವ ಅಂಶವಾಗಿದೆ.

ವಚನ ಸಾಹಿತ್ಯ ಪ್ರಕಟನೆಗೆ ನಮ್ಮ ನಾಡಿನಲ್ಲಿ ಐತಿಹಾಸಿಕ ಚರಿತ್ರೆ ಇದೆ. ಕ್ರೈಸ್ತ ಮಿಶನರಿಗಳ ಆದಿಯಾಗಿ ಫ.ಗು. ಹಳಕಟ್ಟಿ ಮುಂತಾದ ದೇಸಿ ಪಂಡಿತರು, ಕರ್ನಾಟಕ ವಿಶ್ವವಿದ್ಯಾಲಯಗಳ ಕನ್ನಡ ವಿಭಾಗಗಳು, ಕರ್ನಾಟಕ ಧಾರ್ಮಿಕ ಸಂಸ್ಥೆಗಳಾದ ಮಠ ಮಾನ್ಯಗಳಂತಹ ಸಾಮೂಹಿಕ ಪ್ರಯತ್ನದ ಜೊತೆಗೆ ವ್ಯಕ್ತಿ ಒಡೆತನದ ಪ್ರಯತ್ನಗಳು ನಿರಂತರವಾಗಿ ನಡೆದು ಬಂದಿರುವುದನ್ನು ಗಮನಿಸಬಹುದು. ಈ ಎಲ್ಲ ಪ್ರಯತ್ನದಂತೆ ವಚನಗಳಿಗೆ ಬರೆದ ಟೀಕಾಸಾಹಿತ್ಯದ ಪ್ರಕಟಣಾ ಇತಿಹಾಸವು ಅಷ್ಟೇ ಕುತೂಹಲಕಾರಿಯಾದ ಸಂಗತಿಯಾಗಿದೆ. ಈ ಅಂಶವನ್ನು ಅಧ್ಯಾಯ ನಾಲ್ಕರಲ್ಲಿ ಸಾದಾರಪೂರ್ವಕವಾಗಿ ಚರ್ಚಿಸಲಾಗಿದೆ. ಅಂದರೆ, ಕೆಲವು ವಚನಗಳಿಗೆ ಆ ಕಾಲಘಟ್ಟದಲ್ಲಿ ಬರೆದ ಪ್ರಾಚೀನ ಟೀಕಾ ಗ್ರಂಥಗಳ ಪ್ರಕಟನಾ ಇತಿಹಾಸ ಮತ್ತು ಆಧುನಿಕ ಸಂದರ್ಭಗಳಲ್ಲಿ ವಚನಗಳನ್ನು ಅಧ್ಯಯನ ಮಾಡಿ ಅವುಗಳಿಗೆ ತಮ್ಮದೇ ಆದ ಭಾವಾರ್ಥಗಳನ್ನು ಬರೆದು ಪ್ರಕಟಿಸಿದ ಮಹನೀಯರ ಪ್ರಯತ್ನವನ್ನು ಪ್ರಸ್ತುತ ಅಧ್ಯಾಯದಲ್ಲಿ ದಾಖಲಿಸಲಾಗಿದೆ.

ಸೃಜನಶೀಲ ಕೃತಿಗಳಂತೆ ಹುಟ್ಟಿಬಂದ ವಚನ ಸಾಹಿತ್ಯ ಟೀಕಾ ಕೃತಿಗಳು ರಸ, ಗುಣ, ಅಲಂಕಾರ ರೀತಿ, ಧ್ವನಿ ಮುಂತಾದ ಕಾವ್ಯ ಪ್ರಸ್ಥಾನಗಳ ದೃಷ್ಟಿಯಿಂದ ಅಧ್ಯಯನ ಯೋಗ್ಯವಾದ ಕೃತಿಗಳಾಗಿವೆ. ಈ ಕಾರಣದಿಂದಲೇ ಒಬ್ಬ ವಚನಕಾರನ ವಚನಗಳಿಗೆ ಹಲವು ಮಂದಿ ಟೀಕೆ ಬರೆದಿರುವುದು ಅವರ ಕಾವ್ಯ ಪ್ರತಿಭೆಗೆ ನಿದರ್ಶನವಾಗಿದೆ. ಹೀಗಾಗಿ, ಟೀಕಿನ ವಚನಗಳ ಕೃತಿರಚನೆಯ ಧಾರ್ಮಿಕ, ಸಾಹಿತ್ಯಿಕ

ಉದ್ದೇಶಗಳಿಂದ ರಚನೆಯಾದ ಪ್ರಾಚೀನ ಟೀಕಾ ಕೃತಿಗಳ ಸಮೀಕ್ಷೆಯನ್ನು ಅಧ್ಯಾಯ ಐದರಲ್ಲಿ ಮಾಡಲಾಗಿದೆ.

ಪ್ರಸ್ತುತ ಅಧ್ಯಾಯ ಎರಡು ಭಾಗವಾಗಿ ಟಿಸಿಲೊಡೆದಿದೆ. ಒಂದು, ಏಕವ್ಯಕ್ತಿ ವಚನಗಳಿಗೆ ಬರೆದ ಟೀಕಾಕೃತಿಗಳು. ಎರಡು, ಅನೇಕ ವ್ಯಕ್ತಿ ವಚನಗಳಿಗೆ ಬರೆದ ಟೀಕಾಕೃತಿಗಳು. ಇಲ್ಲಿ ಬಸವಣ್ಣನವರ ವಚನಗಳಿಗೆ ಐದು ಜನ ಟೀಕಾಕಾರರು, ತೋಂಟದ ಸಿದ್ಧಲಿಂಗೇಶ್ವರರ ವಚನಗಳಿಗೆ ಐದು ಜನ ಟೀಕಾಕಾರರು ಟೀಕೆಗಳನ್ನು ಬರೆದಿರುವುದು ಟೀಕಾ ಸಾಹಿತ್ಯದ ಇತಿಹಾಸದಲ್ಲಿ ಪರಮಾವಧಿ ನಿದರ್ಶನ. ಅದೇ ರೀತಿ ಅಲ್ಲಮಪ್ರಭುದೇವರ ಟೀಕಿನ ವಚನಗಳು, ಕಾಡಸಿದ್ದೇಶ್ವರ ಟೀಕಿನ ವಚನ ಕೃತಿಗಳು ಒಬ್ಬ ವ್ಯಕ್ತಿಯ ವಚನಗಳಿಗೆ ಒಬ್ಬನೇ ಟೀಕು ಬರೆದ ಅಖಂಡ ಕೃತಿಗಳು ಲಭ್ಯವಿವೆ. ಇನ್ನು ಅನೇಕ ವಚನಕಾರರ ವಚನಗಳನ್ನು ಸಂಗ್ರಹಿಸಿ ಸ್ಥಲಕಟ್ಟುಗಳ ಹಿನ್ನೆಲೆಯಲ್ಲಿ ಉದಾಹರಣೆ ಷಟಸ್ಥಲ, ಷೋಡಶಸ್ಥಲ, ಏಕೋತ್ತರ ಶತಸ್ಥಲ ಎಂದು ಮುಂತಾಗಿ ಸಂಯೋಜಿಸಿ ಅವುಗಳಿಗೆ ಟೀಕು ಬರೆದಿರುವುದು ಕಂಡುಬರುತ್ತದೆ. ಇವುಗಳಲ್ಲಿ ಕಲ್ಲುಮಠದ ಪ್ರಭುದೇವರ ಲಿಂಗಲೀಲಾ ವಿಲಾಸ ಚಾರಿತ್ರ, ಜಕ್ಕಣಾರ್ಯರ ನೂರೊಂದು ಸ್ಥಲ, ಮಹಾಲಿಂಗದೇವರ ಏಕೋತ್ತರ ಶತಸ್ಥಲ, ಸಿಂಗಳದ ಸಿದ್ಧಬಸವರಾಜನ ಸಕಲಪುರಾತನರ ಬೆಡಗಿನ ವಚನಗಳ ಟೀಕು, ಅದೇ ರೀತಿ ಕಟ್ಟಿಗೆಹಳ್ಳಿ ಸಿದ್ಧಲಿಂಗ, ಚನ್ನವೀರಾಚಾರ್ಯ, ಸಂಪಾದನೆ ಸಿದ್ಧವೀರ ಮತ್ತು ಪರ್ವತ ಶಿವಯೋಗಿ ಅವರ ಟೀಕುಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಸಮೀಕ್ಷಿಸಲಾಗಿದೆ.

ಸಂಸ್ಕೃತಿ ಎನ್ನುವುದು ಜನಸಮ್ಮತನಾದ ಜೀವನ ಪದ್ಧತಿ. ಈ ಪದ್ಧತಿಗೆ ಸಾಹಿತ್ಯ ಕೃತಿಗಳು ಹೊರತಾಗಿಲ್ಲ. ಅಂದರೆ, ಜನಬದುಕಿನ ಪ್ರತಿಬಿಂಬಗಳಾಗಿ ಸಾಹಿತ್ಯ ಕೃತಿಗಳು ಹುಟ್ಟಿಕೊಂಡಿರುತ್ತವೆ. ಈ ಕಾರಣದಿಂದ ಸಾಹಿತ್ಯ ಕೃತಿಗಳಂತೆ ಟೀಕಾಸಾಹಿತ್ಯ ಕೃತಿಗಳನ್ನು ಸಾಂಸ್ಕೃತಿಕವಾಗಿ ನಿರ್ವಚನ ಮಾಡುವ ಅಗತ್ಯ ಇರುವುದನ್ನು ಅಧ್ಯಾಯ ಆರರಲ್ಲಿ ಪ್ರಸ್ತಾಪಿಸಲಾಗಿದೆ. ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಹಿತ್ಯಿಕ ಮತ್ತು ಭಾಷಿಕ ನೆಲೆಗಳಲ್ಲಿ ಕನ್ನಡ ಟೀಕಿನ ವಚನಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ದೇವರು, ಧರ್ಮ, ಆಚಾರ, ವಿಚಾರ, ಭಾಷೆ, ಸಾಹಿತ್ಯ, ಸಮಕಾಲೀನ ಸಮಾಜದ ಬಹುಮುಖ ಬದುಕಿನ ಅಭಿವ್ಯಕ್ತಿಗಳಾಗಿ ವಚನ ಸಾಹಿತ್ಯದಲ್ಲಿ ಹೇಗೆ ಮೂಡಿಬಂದಿವೆ ಎಂಬುದನ್ನು ಟೀಕಾಕಾರರು ಅದರ ಒಳ ಮತ್ತು ಹೊರಮೈಯನ್ನು ಅನಾವರಣಗೊಳಿಸುವುದರ ಮೂಲಕ ಒಂದು ಕಾಲಘಟ್ಟದ ಬದುಕಿನ ವಿವರಗಳನ್ನು ಕಾಣಲು ಸಾಧ್ಯವಾಗುತ್ತದೆ. ಇದರಿಂದ ಟೀಕಾ ಸಾಹಿತ್ಯ ಒಂದು ಕೃತಿಗೆ ಬರೆದ ಭಾಷಿಕ ಅಧ್ಯಯನ, ಸಾಮಾಜಿಕ ಅಧ್ಯಯನ, ಧಾರ್ಮಿಕ ಅಧ್ಯಯನ ಹೀಗೆ ಸಾಂಸ್ಕೃತಿಕ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುವ ಹಿನ್ನೆಲೆಯಲ್ಲಿ ಟೀಕಿನ ವಚನಗಳು ಹೆಚ್ಚು ಪ್ರಸ್ತುತವೆನಿಸುತ್ತವೆ. ಈ ಎಲ್ಲ ಸಾಂಸ್ಕೃತಿಕ ಸಂಗತಿಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಒಂದು ಕೃತಿಗೆ ವ್ಯಾಖ್ಯಾನ ಬರೆಯುವದೆಂದರೆ ಅದರ ಅಂತರಾರ್ಥವನ್ನು ಸರಳೀಕರಿಸಿ ಹೇಳುವುದು ಎಂಬುದು ಸಾಮಾನ್ಯ ತಿಳುವಳಿಕೆ. ಆದರೆ, ಈ ತಿಳುವಳಿಕೆಗೆ ಅಪವಾದವೆಂಬಂತೆ ಬಹುತೇಕ ಟೀಕೆಗಳು

ಧಾರ್ಮಿಕ ಪರಿಪೇಕ್ಷೆಯಲ್ಲಿ ವಿಪರೀತ ಅರ್ಥವನ್ನು ಹಚ್ಚುವುದರ ಮೂಲಕ ಸರಳೀಕರಣದಿಂದ ಸಂಕೀರ್ಣತೆಯ ಕಡೆಗೆ ಹೋಗಿರುವ ಸಾಧ್ಯತೆಗಳನ್ನು ಈ ಮಹಾಪ್ರಬಂಧದಲ್ಲಿ ಗಮನವಿಟ್ಟು ಚರ್ಚಿಸಲಾಗಿದೆ. ಒಂದರ್ಥದಲ್ಲಿ ಟೀಕಾ ಸಾಹಿತ್ಯದ ಪಾಂಡಿತ್ಯ ಮುಖವನ್ನು ಆ ಮೂಲಕ ದೇಶಿ ಸಾಹಿತ್ಯ ಪ್ರಕಾರವಾದ ವಚನಸಾಹಿತ್ಯ ವೇದಾಗಮಗಳತ್ತ ಮುಖ ಮಾಡಲು ಕಾರಣಗಳೇನಿರಬಹುದು? ಎಂಬುದನ್ನು ಚರ್ಚಿಸಲಾಗಿದೆ.

* ಕನ್ನಡ ಟೀಕಿನ ವಚನಗಳು ಲೌಕಿಕತೆಗಿಂತ ಅಲೌಕಿಕ ಪ್ರಧಾನವಾಗಿದ್ದು ಧರ್ಮದ ತತ್ವ ಸಿದ್ಧಾಂತಗಳಿಗೆ ಮಹತ್ವ ನೀಡಿವೆ.
* ವಚನಗಳ ಸಂಕಲನ ಮತ್ತು ಸಂಪಾದನ ಕೃತಿಗಳಂತೆಯೇ ಟೀಕು ಇಲ್ಲವೇ ವ್ಯಾಖ್ಯಾನ ಆಧಾರಿತ ಕೃತಿಗಳ ದೊಡ್ಡ ಪರಂಪರೆ ಬೆಳೆದು ಬಂದಿರುವುದನ್ನು ಅಧ್ಯಯನದಿಂದ ತಿಳಿಯಬಹುದು.
* ವಚನ ಟೀಕುಗಳಲ್ಲಿ ಶಬ್ದಾರ್ಥ ಪ್ರಧಾನ, ಭಾವಾರ್ಥ ಪ್ರಧಾನ, ಪ್ರತಿ ಪದಾರ್ಥ, ವಿವರಣ ಪ್ರಧಾನ, ಕಠಿಣ ಪದಪ್ರಧಾನ, ವಾಕ್ಯಪ್ರಧಾನ, ವಾಕ್ಯ ಹಿಮ್ಮೆಟ್ಟಿಸಿ ಬರೆದ ಟೀಕು, ವಾಚ್ಯ ಇಲ್ಲವೇ ತತ್ವಾರ್ಥವುಳ್ಳ ಉಭಯ ಪ್ರಧಾನವಾದ ಟೀಕು ಹೀಗೆ ಹಲವು ಆಯಾಮಗಳಲ್ಲಿ ಬೆಳೆದು ಬಂದಿರುವುದನ್ನು ಗುರುತಿಸಲಾಗಿದೆ.
* ಪ್ರಾಚೀನ ವಚನಗಳಿಗೆ ಶಬ್ದಾರ್ಥ ಸಹಿತವಾಗಿ ಟೀಕು ಬರೆದಿರುವುದರಿಂದ ಈ ಟೀಕೆಗಳು ಕನ್ನಡ ವಚನ ನಿಘಂಟು ಎಂಬ ಪ್ರತ್ಯೇಕ ಆಕರಗಳಾಗುತ್ತವೆ.
* ವಚನ ಟೀಕುಗಳಂತೆಯೇ ಲಿಂಗಾಯತ ಕಾವ್ಯ ಮತ್ತು ಶಾಸ್ತ್ರ ಗಂಥಗಳಿಗೆ ಬರೆಯಲಾದ ಟೀಕುಕೃತಿಗಳನ್ನು ಸಮಗ್ರವಾಗಿ ಗುರುತಿಸಿ ಅಧ್ಯಯನ ಮಾಡಲು ಅವಕಾಶವಿರುವುದನ್ನು ಈ ಮಹಾಪ್ರಬಂಧದ ಮೂಲಕ ವಿದ್ವಾಂಸರ ಗಮನಕ್ಕೆ ತರುವ ಪ್ರಯತ್ನವಾಗಿದೆ.
* ಸೃಜನಶೀಲತೆಯ ಜೊತೆಗೆ ಶಾಸ್ತ್ರಸಮ್ಮತ ಲಕ್ಷಣ ಹೊಂದಿದ ಟೀಕಾ ಸಾಹಿತ್ಯವು ಹಲವು ಸ್ವರೂಪಗಳನ್ನು ಮೈಗೂಡಿಸಿಕೊಂಡು, ಸ್ವತಂತ್ರ ಅಧ್ಯಯನದ ಶಿಸ್ತಾಗಿ ಬೆಳೆಯುತ್ತ ಬಂದಿರುವುದನ್ನು ಗಮನಿಸಬಹುದು. ವಿಶೇಷವಾಗಿ, ವಚನಗಳಿಗೆ ಬರೆದ ಟೀಕಾಕೃತಿಗಳನ್ನು "ಕನ್ನಡ ಟೀಕಿನ ವಚನಗಳು : ಒಂದು ಅಧ್ಯಯನ" ಎಂಬ ಹೆಸರಿನಲ್ಲಿ ವಚನ ಟೀಕುಗಳ ಸಮಗ್ರ ಅಧ್ಯಯನ ಮಾಡಿದ ಪ್ರಯತ್ನವೇ ಈ ಮಹಾಪ್ರಬಂಧ.

***

## ಪರಾಮರ್ಶನ ಗ್ರಂಥಗಳು


೧. ಅಧ್ಯಯನದ ವಿಧಿವಿಧಾನಗಳು, (ಸಂ.) ಡಾ.ಕೆ.ರವೀಂದ್ರನಾಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೨. ಅಂತರಂಗದಲ್ಲೊಂದು ಕುರುಕ್ಷೇತ್ರ, ಶಿವಲಿಂಗಶಾಸ್ತ್ರೀ ಹಿರೇಮಠ, ಶ್ರೀ ರಾಜಗುರು ಪ್ರಭುರಾಜೇಂದ್ರ ಗ್ರಂಥಮಾಲೆ, ಗುಡೂರ, ತಾ. ಹುನಗುಂದ ಜಿ. ಬಾಗಲಕೋಟ, ೨೦೦೨.

೩. ಅಲ್ಲಮಪ್ರಭುವಿನ ಟೀಕಿನ ವಚನಗಳು, (ಸಂ.) ಇಮ್ಮಡಿ ಶಿವಬಸವಸ್ವಾಮಿಗಳು, ಮೈಸೂರು ಶಿವರಾತ್ರೀಶ್ವರ ಗ್ರಂಥಮಾಲೆ, ೧೯೮೬.

೪. ಅಲ್ಲಮನ ವಚನ ಚಂದ್ರಿಕೆ, ಎಲ್. ಬಸವರಾಜು, ಲೋಹಿಯಾ ಪ್ರಕಾಶನ, ಬಳ್ಳಾರಿ, ೩ನೇ ಆವೃತ್ತಿ, ೨೦೦೧.

೫. ಅಲ್ಲಮಪ್ರಭು ಕುರಿತ ಅನುಸಂಧಾನಗಳು, ಡಾ. ರಾಮಲಿಂಗಪ್ಪ ಟಿ, ಬೇಗೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೬. ಅಲ್ಲಮಪ್ರಭು ಮತ್ತು ಶೈವಪ್ರತಿಭೆ, ಡಿ. ಆರ್. ನಾಗರಾಜ್, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೨೦೧೦.

೭. ಆಧುನಿಕ ಗದ್ಯ ಸಾಹಿತ್ಯ, (ಸಂ.) ಕೆ. ಗೋಪಾಲಕೃಷ್ಣರಾಯರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೩.

೮. ಉಪನಿಷತ್ತು ಮತ್ತು ವಚನಗಳು ತೌಲನಿಕ ಅಧ್ಯಯನ, ಶಿವಕುಮಾರ ಶಿವಾಚಾರ್ಯರು ಚರಂತಿಮಠ, ಲಿಂಗಾಯತ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರ ರುದ್ರಾಕ್ಷಿಮಠ, ಬೆಳಗಾವಿ, ೨೦೦೪.

೯. ಕನ್ನಡ ಸಾಹಿತ್ಯ ಚರಿತ್ರೆ ಸಂಪುಟಗಳು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೨೦೦೮.

೧೦. ಕನ್ನಡ ಟೀಕಾ ಸಾಹಿತ್ಯ, ಡಾ.ಕೆ. ರವೀಂದ್ರನಾಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೧೧. ಕರ್ನಾಟಕ ಕವಿಚರಿತೆ (ಸಂಪುಟಗಳು), ಡಾ. ಆರ್. ನರಸಿಂಹಾಚಾರ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೨.

೧೨. ಕನ್ನಡ ನಿಘಂಟು ಸಂಪುಟಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೦.

೧೩. ಕನ್ನಡಪರ ಚಿಂತನೆ ಮತ್ತು ಪರಂಪರೆ, ಡಾ. ಕಾ.ವೆಂ. ಶ್ರೀನಿವಾಸಮೂರ್ತಿ, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ, ತಾ. ಚಿಕ್ಕೋಡಿ, ಜಿ. ಬೆಳಗಾವಿ, ೨೦೦೦.

೧೪. ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಡಾ. ಎಂ. ಎಂ. ಕಲಬುರ್ಗಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩.

೧೫. ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ ಸಂಪುಟಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೧೬. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ–ಸಂಪುಟಗಳು, (ಸಂ.) ಹೆಚ್. ದೇವಿರಪ್ಪ, ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾಲಯ.

೧೭. ಕನ್ನಡ ಸಂಶೋಧನೆ ತಾತ್ವಿಕ ವಿಚಾರ, ಡಾ. ರಹಮತ್ ತರೀಕೆರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೧೮. ಕನ್ನಡ ಹಸ್ತಪ್ರತಿಶಾಸ್ತ್ರ ಒಂದು ಅಧ್ಯಯನ, ಡಾ. ಬಿ. ಕೆ. ಹಿರೇಮಠ, ಕಸಬಾ ಜಂಬಗಿ, ಮುಧೋಳ, ಜಿ. ಬಾಗಲಕೋಟ.

೧೯. ಕರ್ನಾಟಕದ ಸಾಂಸ್ಕೃತಿಕ ಸಂಘರ್ಷ ಒಂದು ಅಧ್ಯಯನ, ಡಾ. ಬಿ. ಎಸ್. ಗೀತಾ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮.

೨೦. ಕನ್ನಡ ಸಾಹಿತ್ಯ ಮತ್ತು ಮತಧರ್ಮ, ಡಾ. ಲಕ್ಷ್ಮಿನಾರಾಯಣ ಅರೋರಾ, ಕನ್ನಡ ಅಧ್ಯಯನ ಮತ್ತು ಸಂಶೋಧನ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ, ಮೈಸೂರು, ೨೦೧೦.

೨೧. ಕನ್ನಡ ಅಧ್ಯಯನಪೀಠದ ಹಸ್ತಪ್ರತಿಸೂಚಿ, (ಸಂ.) ಬಿ. ಆರ್. ಹಿರೇಮಠ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨.

೨೨. ಕನ್ನಡ ನಾಡಿನ ಚರಿತ್ರೆ, ಡಾ. ಎಸ್. ಸಿ. ನಂದೀಮಠ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೯.

೨೩. ಕನ್ನಡ ಸಾಹಿತ್ಯ ಸಮೀಕ್ಷೆ, ಡಾ. ಜಿ. ಎಸ್. ಶಿವರುದ್ರಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯.

೨೪. ಕನ್ನಡ ಸಾಹಿತ್ಯ ಚರಿತ್ರೆ – ಸಂಪುಟ–೧, ಪ್ರ. ಸಂ. ಡಾ.ಹಾ.ಮಾ. ನಾಯಕ್ (ಸಂ.) ಡಾ.ಟಿ.ವಿ. ವೆಂಕಟಾಚಲಶಾಸ್ತ್ರೀ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ೧೯೭೪.

೨೫. ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ, ಡಾ.ಬಸವರಾಜ ಕಲ್ಗುಡಿ, ಬೆಂಗಳೂರು ವಿಶ್ವವಿದ್ಯಾಲಯ, ೧೯೮೩.

೨೬. ಕನ್ನಡ ದಾಖಲು ಸಾಹಿತ್ಯ, ಡಾ. ಕೆ. ರವೀಂದ್ರನಾಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೨೭. ಕಾಡಸಿದ್ದೇಶ್ವರರ ವಚನಗಳು, (ಸಂ.)ಪ್ರೊ. ಎ.ಎಲ್. ಹಿರೇಮಠ ಮೂರುಸಾವಿರಮಠ, ರಜತಮಹೋತ್ಸವ ಪ್ರಕಟನೆ, ಹುಬ್ಬಳ್ಳಿ, ೧೯೮೬.

೨೮. ಗ್ರಂಥ ಸಂಪಾದನೆ ಎಳೆಗಳು, ಡಾ. ವೈ. ಸಿ. ಬಾನುಮತಿ, ವಿಸ್ಮಯ ಪ್ರಕಾಶನ, ಮೌನ,೩೬೬, ನವಿಲುರಸ್ತೆ, ಕುವೆಂಪುನಗರ, ಮೈಸೂರು,೨೦೦೯.

೨೯. ಗೌರವ, ಸಂ.ಶಿ. ಭೂಸನೂರಮಠ ಅಭಿನಂದನ ಗ್ರಂಥ, (ಸಂ.) ಡಾ. ಬಿ.ವಿ. ಶಿರೂರ, ಲಿಂಗಾಯತ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ ಗದಗ, – ೧೯೮೯.

೩೦. ಚನ್ನಬಸವಪುರಾಣ, ಗದ್ಯಾನುವಾದ: ಎಂ. ಚಂದ್ರಶೇಖರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭.

೩೧. ಚನ್ನಬಸವಣ್ಣನವರ ವಚನ ವ್ಯಾಖ್ಯಾನ, (ಸಂ.) ಜಿ. ಎಸ್. ಕಾಪಸೆ, ವ್ಯಾಖ್ಯಾನ, ಸಿದ್ಧರಾಮೇಶ್ವರ ಶರಣರು, ಬೆಲ್ದಾಳ, ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೫.

೩೨. ಚಾರಿತ್ರಿಕ ದಾಖಲೆಗಳು, ಶರ್ಮ ತಿ. ತಾ. ಕನ್ನಡ ಸಾಹಿತ್ಯ ಪರಿಷತ್ತು, ೧೯೭೩.

೩೩. ಜಂಗಮದಿಂದ ಸ್ಥಾವರಕ್ಕೆ, (ಸಂ.) ಡಾ. ಮೃತ್ಯುಂಜಯ ರುಮಾಲೆ, ಸಾಯಿಮಣಿ ಪ್ರಕಾಶನ, ಹೊಸಪೇಟೆ, ಬಳ್ಳಾರಿ ಜಿಲ್ಲೆ, ೨೦೦೯.

೩೪. ಜಕ್ಕಣಾರ್ಯ ವಿರಚಿತ ಏಕೋತ್ತರ ಶತಸ್ಥಲೀ, (ಸಂ.) ಇಮ್ಮಡಿ ಶಿವಬಸವಸ್ವಾಮಿಗಳು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೦೭

೩೫. ತೋಂಟದ ಸಿದ್ಧಲಿಂಗೇಶ್ವರ ಸಮಗ್ರ ಸಾಹಿತ್ಯ (ಸಮಗ್ರ ಸಂಪುಟಗಳು) (ಸಂ.) ಡಾ. ವೀರಣ್ಣ ರಾಜೂರ, ಧಾರ್ಮಿಕ ದತ್ತಿ ಇಲಾಖೆ, ಎಡೆಯೂರು ಕ್ಷೇತ್ರ.

೩೬. ತೋಂಟದ ಸಿದ್ಧಲಿಂಗಶಿವಯೋಗಿಗಳ ಷಟ್‌ಸ್ಥಲಜ್ಞಾನ ಸಾರಾಮೃತ, (ಸಂ.) ಡಾ. ಆರ್.ಸಿ. ಹಿರೇಮಠ, ಶ್ರೀ ನಿ.ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು, ಮುರುಘಾಮಠ, ಧಾರವಾಡ, ೧೯೯೪.

೩೭. ತೋಂಟದ ಸಿದ್ಧಲಿಂಗಯತಿಗಳ ಷಟ್‌ಸ್ಥಲಜ್ಞಾನಸಾರಾಮೃತ ವ್ಯಾಖ್ಯಾನ: ಡಾ. ಎನ್. ಜಿ. ಮಹಾದೇವಪ್ಪ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೧೦

೩೮. ತೋಂಟದ ಸಿದ್ಧಲಿಂಗೇಶ್ವರ, ಡಾ. ಸಿ. ನಾಗಭೂಷಣ, ಸಿದ್ಧಲಿಂಗೇಶ್ವರ ಪ್ರಕಾಶನ, ಸರಸ್ವತಿ ಗೋದಾಮು, ಗುಲಬರ್ಗಾ, ೨೦೦೬.

೩೯. ದಾಸಿಮಯ್ಯನವರ ವಚನಗಳ ವ್ಯಾಖ್ಯಾನ, ಡಾ. ವಿಜಯಕುಮಾರ ಮಹಾನುಭಾವಿಗಳು, ಪ್ರಭುದೇವ ಗ್ರಂಥ ಮಾಲೆ, ಜೋಗ್ ಫಾಲ್ಸಮಠ ಮಾವಿನಗುಂಡಿ, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ, ೨೦೦೮.

೪೦. ನಿರ್ವಚನ, ಡಾ.ಎಂ.ಎಂ.ಕಲಬುರ್ಗಿ, ಬಸವಧರ್ಮ ಪ್ರಸಾರ ಸಂಸ್ಥೆ, ಹಿರೇಮಠ ಸಂಸ್ಥಾನ ಬಾಲ್ಕಿ, ಬೀದರ, ೨೦೧೦.

೪೧. ಡಾ. ಫ.ಗು. ಹಳಕಟ್ಟಿಯವರ ಶಿವಾನುಭವ ಪತ್ರಿಕೆ ಲೇಖನ ಸೂಚಿ, ಡಾ. ಎಸ್. ಆರ್. ಗುಂಜಾಳ, ಬಿಎಲ್‌ಡಿಇ ಸಂಸ್ಥೆ, ಬಿಜಾಪುರ, ೧೯೪೧–೪೨.

೪೨. ಪರಮಮೂಲಜ್ಞಾನ ಷಟ್‌ಸ್ಥಲ (ಚಿಕ್ಕ ವೀರಣ್ಣೊಡೆಯ ವಿರಚಿತ), (ಸಂ.) ಡಾ. ಎಂ. ಎಸ್. ಸುಂಕಾಪೂರ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಯ, ಧಾರವಾಡ, ೧೯೭೭.

೪೩. ಪ್ರಭುದೇವರ ವಚನ ವ್ಯಾಖ್ಯಾನ, ಡಾ. ವಿಜಯಕುಮಾರ ಮಹಾನುಭಾವಿಗಳು, ಪ್ರಭುಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್, ಬೆಂಗಳೂರು, ೨೦೦೪.

೪೪. ಪ್ರಭುದೇವರ ಷಟ್ಸ್ಥಲದ ವಚನಗಳು, ಡಾ. ಎಲ್. ಬಸವರಾಜು, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೫.

೪೫. ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಡಾ. ವಿ. ಶಿವಾನಂದ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮.

೪೬. ಬಸವಣ್ಣನವರ ಟೀಕಿನ ವಚನಗಳು, ಸಂಪುಟ–೧,೨, (ಸಂ.) ಡಾ.ಎಂ.ಎಂ. ಕಲಬುರ್ಗಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಬಸವೇಶ್ವರ ಪೀಠ, ಪ್ರಕಟಣೆ–೧೯೭೮

೪೭. ಬಸಣ್ಣನನ್ನು ಕುರಿತ ಕಥಾನಕಗಳ ತಾತ್ವಿಕ ಸ್ವರೂಪ: ಡಾ. ಶೈಲಜಾ ಪವಾಡಶೆಟ್ರ, ಸ್ನೇಹಾ ಪ್ರಿಂಟರ್ಸ್, ಅತ್ತಿಗುಪ್ಪೆ, ವಿಜಯನಗರ, ೨ನೇ ಹಂತ, ಬೆಂಗಳೂರು, ೨೦೦೮.

೪೮. ಬಸವೇಶ್ವರ ವಚನ ದೀಪಿಕೆ, ಡಾ. ಎಚ್. ತಿಪ್ಪೇರುದ್ರಸ್ವಾಮಿ, ಮೈಸೂರು ಶಿವರಾತ್ರೀಶ್ವರಮಠ, ೧೯೯೫.

೪೯. ಬಸವಣ್ಣನ ಕಲ್ಯಾಣ ಹುಡುಕುತ್ತಾ, ಡಾ. ಲತಾ, ಮೈಸೂರು ಅಭಿನವ ಪ್ರಕಾಶನ, ಬೆಂಗಳೂರು, ೨೦೧೧.

೫೦. ಬಸವ ವಚನಾಮೃತ ಭಾಗ–೧,೨, (ಸಂ.) ಡಾ. ಎಲ್. ಬಸವರಾಜು, ಬಸವ ಸಮಿತಿ, ಬೆಂಗಳೂರು, ೧, ೨೦೦೭.

೫೧. ಬಸವ ವಚನಾಮೃತ, (ಸಂ.) ಜಗದ್ಗುರು ಮಾತೆ ಮಹಾದೇವಿ, ವಿಶ್ವಕಲ್ಯಾಣ ಮಿಷನ್, ಬಸವಮಂಟಪ, ನಂ:೨೦೩೫, ೨೦ನೇ ಮುಖ್ಯರಸ್ತೆ, ೨ನೇ ಹಂತ, ರಾಜಾಜಿನಗರ, ಬೆಂಗಳೂರು, ೨೦೦೯.

೫೨. ಬಸವ ಬೋಧಾಮೃತ, ಹರ್ಡೇಕರ ಮಂಜಪ್ಪನವರು, ವಿಶ್ವಕಲ್ಯಾಣ ಮಿಷನ್, ರಾಜಾಜಿನಗರ, ಬೆಂಗಳೂರು, ೨೦೦೫

೫೩. ಬಸವಣ್ಣನವರ ವಚನ ಸಂಪುಟ, (ಸಂ.) ಡಾ. ಎಂ. ಎಂ. ಕಲಬುರ್ಗಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧.

೫೪. ಬಸವತತ್ವ ಪ್ರದೀಪಿಕೆ, ಸಿದ್ದರಾಮಶರಣರು ಬೆಲ್ದಾಳ, ಡಿ. ಎಂ. ಧನ್ನೂರ. ಬಸವತತ್ವ ಮಹಾವಿದ್ಯಾಲಯ, ಬಸವಕೇಂದ್ರ, ಶ್ರೀ ಮುರುಘಾಮಠ, ಚಿತ್ರದುರ್ಗ, ೧೯೯೯.

೫೫. ಬಸವಣ್ಣನವರ ವಚನಗಳು (ಅರ್ಥಸಹಿತ), ಜಿ. ವಿ. ಶಾಸ್ತ್ರಿ, ಪಾರುಪ್ರಕಾಶನ, ಗದಗ, ಐದನೇ ಮುದ್ರಣ.

೫೬. ಬಸವೋತ್ತರ ಯುಗದ ವಚನ ಸಾಹಿತ್ಯ–ವಿಚಾರ ಸಂಕಿರಣ ಲೇಖನಗಳು, (ಸಂ.) ಡಾ. ಗುರುಪಾದ ಮರೇಗುದ್ದಿ, ನಿಜಲಿಂಗೇಶ್ವರ ಗ್ರಂಥಮಾಲೆ, ನಿಡಸೋಸಿ, ೧೯೯೩.

೫೭. ಬಸವೋತ್ತರ ಯುಗದ ವಚನಕಾರರು, ಡಾ.ವೀರಣ್ಣ ರಾಜೂರ, ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ, ಸುಕ್ಷೇತ್ರ ಹಾರಕೂಡ, ತಾ. ಬಸವಕಲ್ಯಾಣ, ಜಿ. ಬೀದರ, ೨೦೦೧.

೫೮. ಬಸವೋತ್ತರ ಯುಗದ ವಚನ ಸಾಹಿತ್ಯ, ಡಾ. ವಿಜಯಕುಮಾರ ಕಟಗಿಹಳ್ಳಿಮಠ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮.

೫೯. ಬಿಡಿಮುತ್ತುಗಳು, ಡಾ. ಎಸ್. ಶಿವಣ್ಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪.

೬೦. ಬೆಡಗಿನ ವಚನಗಳು, ಡಾ. ಎಲ್. ಬಸವರಾಜು, ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾನಿಲಯ, ಜ್ಞಾನಸಹ್ಯಾದ್ರಿ, ಶಂಕರಘಟ್ಟ ಜಿಲ್ಲೆ, ೧೯೯೮.

೬೧. ಬೆಡಗಿನ ೧೦೧ ವಚನಗಳ ಪ್ರವಚನ, ಶಿವಲಿಂಗಶಾಸ್ತ್ರೀ ಹಿರೇಮಠ, ಶ್ರೀ ರಾಜಗುರು ಪ್ರಭುರಾಜೇಂದ್ರ ಗ್ರಂಥಮಾಲೆ, ಗುಡೂರ, ತಾ. ಹುನಗುಂದ ಜಿ. ಬಾಗಲಕೋಟ, ೨೦೦೧.

೬೨. ಬೆಡಗಿನ ವಚನಗಳ ಪರಿಭಾಷಾಕೋಶ, ಡಾ. ಜಯಶ್ರೀ ದಂಡೆ, ಬಸವ ಸಮಿತಿ, ಬಸವಭವನ, ಬೆಂಗಳೂರು, ೨೦೦೨.

೬೩. ಬೆಡಗಿನ ಬಿನ್ನಾಣ, ಅನ್ನದಾನೀಶ್ವರ ಶಿವಯೋಗಿಗಳು ಮುಂಡರಗಿ, ಅನ್ನದಾನೀಶ್ವರ ಸಂಸ್ಥಾನಮಠ, ಮುಂಡರಗಿ, ೨೦೦೩.

೬೪. ಭಾರತೀಯ ತತ್ವಜ್ಞಾನ–ವೈಚಾರಿಕ ಮತ್ತು ಸಾಮಾಜಿಕ ಸಂಘರ್ಷ, ಮರಾಠಿಮೂಲ, ಎಸ್. ಜಿ. ಸರ್‌ದೇಸಾಯಿ. ಅನುವಾದ, ಗೌರೀಶ ಕಾಯ್ಕಿಣಿ, ನವಕರ್ನಾಟಕ ಪಬ್ಲಿಕೇಶನ್ಸ್ ಲಿಮಿಟೆಡ್, ಬೆಂಗಳೂರು, ೧೯೮೨.

೬೫. ಮಾರ್ಗ ಸಂಪುಟಗಳು, ಡಾ. ಎಂ. ಎಂ. ಕಲಬುರ್ಗಿ, ಕರ್ನಾಟಕ ಬುಕ್ ಎಜೆನ್ಸಿ, ಬೆಂಗಳೂರು.

೬೬. ಮಹಾಮಾರ್ಗ, ಸದಾನಂದ ಕನವಳ್ಳಿ, ವೀರಣ್ಣ ರಾಜೂರ, ವೀರಶೈವ ಅಧ್ಯಯನ ಸಂಸ್ಥೆ, ೧೯೯೮

೬೭. ಮಹಾಲಿಂಗದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, (ಸಂ.) ಸಂ. ಶಿ. ಭೂಸನೂರಮಠ. ಶಿವಬಸವಸ್ವಾಮಿಗಳು ರುದ್ರಾಕ್ಷಿಮಠ, ಬೆಳಗಾವಿ, ೧೯೭೪.

೬೮. ಲಿಂಗಲೀಲಾವಿಲಾಸ ಚಾರಿತ್ರ, (ಸಂ.) ಸಂ. ಶಿ. ಭೂಸನೂರಮಠ, ಮುರುಘಾಮಠ, ಧಾರವಾಡ, ೧೯೫೬.

೬೯. ಲಿಂಗಲೀಲಾವಿಲಾಸ ಚಾರಿತ್ರ ಸಂಗ್ರಹ, ಜಯಾ ರಾಜಶೇಖರ, ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ, ೨೦೦೧.

೭೦. ಲಿಂಗಾಯತ, ಜೈನ ಮತ್ತು ಬ್ರಾಹ್ಮಣ ಧರ್ಮಗಳು, ಮತಗಳ ಒಂದು ತೌಲನಿಕ ಅಧ್ಯಯನ – ಡಾ. ಹಿರೇಮಲ್ಲೂರು ಈಶ್ವರನ್, ಪ್ರಿಯದರ್ಶಿನಿ ಪ್ರಕಾಶನ, ವಿಜಯನಗರ, ಬೆಂಗಳೂರು, ೨೦೦೮, (ದ್ವಿಮು.)

೭೧. ಲಿಂಗಾಯತ ಧರ್ಮದ ಕೈಪಿಡಿ, ಡಾ. ಎಸ್. ಆರ್. ಗುಂಜಾಳ, ಬಸವಸೇವಾ ಪ್ರತಿಷ್ಠಾನ, ಬೀದರ, ೨೦೦೮.

೭೨. ವಚನ ಸಾಹಿತ್ಯ ದ್ವಿತಿಯ ಘಟ್ಟ, (ಸಂ,) ಡಾ. ಎಸ್. ವಿದ್ಯಾಶಂಕರ, ಸರ್ಪಭೂಷಣ ಶಿವಯೋಗೀಶ್ವರ ಮಠ, ಕೆಂಪೇಗೌಡ ವೃತ್ತ ಬೆಂಗಳೂರು, ೧೯೯೯.

೭೩. ವಚನ ಪರಿಭಾಷಾಕೋಶ, (ಸಂ.) ಡಾ. ಎನ್. ಜಿ. ಮಹಾದೇವಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧.

೭೪. ವಚನ ಸಂಶೋಧನ, ಡಾ. ವೀರಣ್ಣ ರಾಜೂರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪.

೭೫. ವಚನ ಸಾಹಿತ್ಯದಲ್ಲಿ ಸಮಾಜೋ-ಭಾಷಿಕ ಚಿಂತನೆಗಳು, ಡಾ. ವಿ. ಶಿವಾನಂದ, ಶ್ರೀ ಬಸವೇಶ್ವರ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೩.

೭೬. ವಚನ ಸಂಕಲನ ಸಂಪುಟಗಳು (ನಾಲ್ಕು), (ಸಂ.) ಡಾ. ಎಂ.ಎಂ. ಕಲಬುರ್ಗಿ ಇತರರು, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ ಲಿಂಗಾಯತ ಅಧ್ಯಯನ ಸಂಸ್ಥೆ, ಗದಗ, ೧೯೯೨.

೭೭. ವಚನ ನಿಘಂಟು, ಡಾ. ಮೃತ್ಯುಂಜಯ ರುಮಾಲೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ ಲಿಂಗಾಯತ ಅಧ್ಯಯನ ಸಂಸ್ಥೆ, ಗದಗ, ೨೦೦೩.

೭೮. ವಚನ ಸಾಹಿತ್ಯ, ಅನ್ನದಾನೀಶ್ವರ ಶ್ರೀಗಳು ಮುಂಡರಗಿ, ಎಸ್.ಆರ್. ಪಾಟೀಲ. ಪ್ರತಿಷ್ಠಾನ, ಗುಲಬರ್ಗಾ, ೧೯೯೭.

೭೯. ವಚನ ಸಾಹಿತ್ಯ ನಡೆದು ಬಂದ ದಾರಿ, ಡಾ. ಎಸ್.ಆರ್. ಗುಂಜಾಳ, ಶರಣಪ್ಪ ಗುಡದಿನ್ನಿ, ಬಸವ ಸಮಿತಿ, ಬೆಂಗಳೂರು, ೨೦೦೮.

೮೦. ವಚನಗಳ ದೇಸೀಗುಣ, ಡಾ. ವೀರಣ್ಣ ದಂಡೆ, ಕನ್ನಡ ಸಾಹಿತ್ಯ ಪರಿಷತ್ತು, ೨೦೦೪.

೮೧. ವಚನ ನಿರ್ವಚನ, ಡಾ. ಪಿ.ವಿ. ನಾರಾಯನ, ಪುಸ್ತಕಾಲಯ ಪ್ರಕಾಶಕರು, ಮೈಸೂರು-೪, ೧೯೯೦.

೮೨. ವಚನ ಸಾಹಿತ್ಯ : ವೈಚಾರಿಕ ಅಧ್ಯಯನ, ಡಾ. ಎಚ್.ತಿಪ್ಪೇರುದ್ರಸ್ವಾಮಿ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೪.

೮೩. ವಚನ ವೈಭವ, ವಿ. ಎಸ್. ಚರಂತಿಮಠ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪.

೮೪. ವಚನಧರ್ಮಸಾರ, ಎಂ. ಆರ್. ಶ್ರೀನಿವಾಸಮೂರ್ತಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೦.

೮೫. ವಚನ ಸನ್ನಿಧಿ, ಡಾ. ಚೆನ್ನಕ್ಕ ಪಾವಟೆ, ಚೆನ್ನಗಂಗಾ ಪ್ರಕಾಶನ, ಧಾರವಾಡ, ೧೯೯೩

೮೬. ವಚನಸಾಹಿತ್ಯ ಮೀಮಾಂಸೆ, (ಸಂ.) ವೀರಣ್ಣ ದಂಡೆ, ಬಸವಸಮಿತಿ, ಬಸವ ಭವನ, ಬೆಂಗಳೂರು, ೨೦೦೭.

೮೭. ಶರಣರ ಅನುಭವ, ಅನುಭಾವ, ಅನುಭೂತಿ: ಡಾ. ಆರ್.ಆರ್. ದಿವಾಕರ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

೮೮. ವಚನ ಸಂಕಲನ ಸಂಪುಟಗಳು, ಡಾ. ಎಂ.ಎ.೦ ಕಲಬುರ್ಗಿ ಇತರರು, ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ, ೧೯೯೨.

೮೯. ವಚನಸಾಹಿತ್ಯ ದರ್ಶನ, ಸಿ.ವಿ. ಕೆರಿಮನಿ ಅವರ ಷಷ್ಟ್ಯಬ್ದಿಗಾಗಿ ಪ್ರಕಟಿಸಿ ಗ್ರಂಥ, (ಸಂ.) ಬಿ.ವಿ. ಗುಂಜೆಟ್ಟಿ ಇತರರು, ಸೋಮೇಶ್ವರ ಪ್ರಕಾಶನ, ಲಕ್ಷ್ಮೇಶ್ವರ, ೨೦೦೧.

೯೦. ವಚನಮುಖದಲ್ಲಿ ಶರಣ ದರ್ಶನ, ಪ್ರೊ. ಬ.ಗಿ. ಯಲ್ಲಚ್ಚಿ ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ, ಇಲಕಲ್ಲ, ೧೯೯೭.

೯೧. ವಚನ ನವನೀತ : ಲಿಂಗಾನಂದ ಸ್ವಾಮಿಗಳು, ವಿಶ್ವಕಲ್ಯಾಣ ಮಿಷನ್, ರಾಜಾಜಿನಗರ, ಬೆಂಗಳೂ, ೧೯೯೬.

೯೨. ವಚನ ರಶ್ಮಿ : ಲಿಂಗಾನಂದ ಸ್ವಾಮಿಗಳು, ಸುಯಿಧಾನ ಸುಗ್ರಂಥ ಮಾಲೆ, ವಿಶ್ವಕಲ್ಯಾಣ ಮಿಷನ್, ರಾಜಾಜಿನಗರ ಬೆಂಗಳೂರು, ೧೯೯೩.

೯೩. ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ ಡಾ. ಪಿ.ವಿ. ನಾರಾಯಣ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ, ೧೯೯೪.

೯೪. ವಿಚಾರ ಸಾಹಿತ್ಯ ೨೦೦೦, (ಸಂ.) ಡಾ. ಜಿ.ಆರ್. ತಿಪ್ಪೇಸ್ವಾಮಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧.

೯೫. ವೀರಶೈವ ಹಸ್ತಪ್ರತಿ ಪುಷ್ಟಿಕೆಗಳು, (ಸಂ.) ಎಸ್. ಶಿವಣ್ಣ ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ತೋಂಟದಾರ್ಯ ಸಂಸ್ಥಾನಮಠ, ಗದಗ, ೧೯೯೪

೯೬. ವೀರಶೈವ ಅಪ್ರಕಟಿತ ಗ್ರಂಥ ಸೂಚಿ, ಎಸ್. ಶಿವಣ್ಣ, ಜಗದ್ಗುರು ತೋಂಟದಾರ್ಯಮಠ, ಗದಗ, ೧೯೮೨.

೯೭. ವೀರಶೈವ ಸಾಹಿತ್ಯ ಮತ್ತು ಇತರ ಲೇಖನಗಳು, ಪ್ರೊ. ಸಿ. ಮಹಾದೇವಪ್ಪ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೦.

೯೮. ವೀರಶೈವ ದರ್ಶನ-ತೌಲನಿಕ ವಿವೇಚನೆ, ಡಾ. ವೀರಣ್ಣ ರಾಜೂರ, ಶ್ರೀ ಬಸವೇಶ್ವರ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೦.

೯೯. ವೀರಶೈವ ಸಾಹಿತ್ಯಾವಲೋಕನ, ಡಾ. ಎಸ್. ಎಂ. ಹಿರೇಮಠ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೬

೧೦೦. ವೀರಶೈವ ತತ್ವಾರ್ಥ ವಿವೇಚನೆ, ಡಾ. ಬಿ. ವಿ. ಮಲ್ಲಾಪೂರ, ಜಗದ್ಗುರು ಗಂಗಾಧರ ಧರ್ಮಪ್ರಚಾರ ಮಂಡಳಿ, ಮೂರು ಸಾವಿರಮಠ, ಹುಬ್ಬಳ್ಳಿ, ೧೯೮೭.

೧೦೧. ವಿಶೇಷಾನುಭವ ಷಟ್‌ಸ್ಥಲ, (ಸಂ.) ಡಾ. ಆರ್. ಸಿ. ಹಿರೇಮಠ, ಕನ್ನಡ ಅಧ್ಯಯನ ಪೀಠ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೭೧.

೧೦೨. ವಿಶ್ವಧರ್ಮ ಪ್ರವಚನ, ಜಗದ್ಗುರು ಮಾತೆಮಹಾದೇವಿ, ವಿಶ್ವಕಲ್ಯಾಣ ಮಿಷನ್, ಬಸವಮಂಟಪ, ರಾಜಾಜಿನಗರ, ೨ನೇ ಬ್ಲಾಕ್, ಬೆಂಗಳೂರು, ೧೯೯೭ (ಎರಡನೇ ಆವೃತ್ತಿ).

೧೦೩. ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ, ದೇಜಗೌ ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೪.೧೧೪. ವಚನ ಸಾಹಿತ್ಯದ ಪ್ರಾಚೀನ ಆಕರಕೋಶ, (ಸಂ) ಡಾ. ಎಂ. ಎಂ. ಕಲಬುರ್ಗಿ, ವಿಜಯಶ್ರೀ ಹಿರೇಮಠ, ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ, ೧೯೯೧.

೧೦೪. ಶರಣರ ಬೆಡಗಿನ ಬೆಳಕು, ಸಿದ್ಧರಾಮೇಶ್ವರ ಶರಣರು ಬೆಲ್ದಾಳ, ಮಹಾಮನೆ ಪ್ರಕಾಶನ, ಕೌಠಾ, ಬೀದರ, ೧೯೯೧

೧೦೫. ಶರಣ ಸಾಹಿತ್ಯ ಸಂಸ್ಕೃತಿ ಕೆಲವು ಅಧ್ಯಯನಗಳು, ಡಾ. ಸಿ. ನಾಗಭೂಷಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೦.

೧೦೬. ಶರಣರ ಆಯ್ದ ವಚನಗಳ ವ್ಯಾಖ್ಯಾನ ಸಂಪುಟ-೧೧, ವ್ಯಾಖ್ಯಾನ ಪ್ರೊ. ರವೀಂದ್ರ ಸಿಂಪಿ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥ ಮಾಲೆ, ಮೈಸೂರು, ೨೦೦೯.

೧೦೭. ಶರಣರ ಆಯ್ದ ವಚನಗಳು ವ್ಯಾಖ್ಯಾನ ಸಂಪುಟ-೦೮, ವ್ಯಾಖ್ಯಾನ ಡಾ. ಸಂಗಮೇಶ ಬಿರಾದಾರ, ಜಗದ್ಗುರು, ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೯.

೧೦೮. ಶರಣತತ್ವ ವಿವೇಚನೆ, ಭಾಗ-೨, ಪ್ರೊ. ಬಿ. ವಿರೂಪಾಕ್ಷಪ್ಪ, ಬಸವ ಸಮಿತಿ, ಬೆಂಗಳೂರು, ೨೦೦೫.

೧೦೯. ಶಾಸ್ತ್ರೀಯ ಸಂಪುಟಗಳು, ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ, ಸಪ್ನಬುಕ್ ಹೌಸ್, ಬೆಂಗಳೂರು, ೧೯೯೯.

೧೧೦. ಶಿವದಾಸಗೀತಾಂಜಲಿ, ಡಾ. ಎಲ್. ಬಸವರಾಜು, ಜಗದ್ಗುರು ಶಿವರಾತ್ರೀಶ್ವರಮಠ ಗ್ರಂಥಮಾಲೆ, ಮೈಸೂರು. ದ್ವಿಮು, ೧೯೯೦.

೧೧೧. ಶಿವಸಂಗಮ (ಸಂಸ್ಮರಣಗ್ರಂಥ) (ಸಂ.) ಡಾ. ಬಿ.ವಿ. ಶಿರೂರು ಸುಕ್ಷೇತ್ರ ಹಿರೇಮಠ, ಬೆದಮಟ್ಟಿ, ತಾ. ಯಲಬುರ್ಗ, ಜಿ. ಕೊಪ್ಪಳ, ೨೦೦೯.

೧೧೨. ಶಿವಾನುಭವ ಶಬ್ಧಕೋಶ, ಡಾ. ಫ.ಗು. ಹಳಕಟ್ಟಿ, ಶ್ರೀ ಬಸವೇಶ್ವರ ಪೀಠ, ಕರ್ನಾಟಕ ವಿಶ್ವವಿದ್ಯಾಯ, ಧಾರವಾಡ. ತೃತಿಯ ಮುದ್ರಣ, ೨೦೦೩.

೧೧೩. ಶಿವದಾಸ ಗೀತಾಂಜಲಿ, (ಸಂ.) ಎಲ್. ಬಸವರಾಜು, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೧೯೯೦.

೧೧೪. ಶ್ರೀ ಬಸವೇಶ್ವರರ ವಚನಗಳು ಶಬ್ದಾರ್ಥಸಹಿತ, ಎಂ. ಕೆ. ಶಿರಗುಪ್ಪ, ಬಸವತತ್ತ್ವ ಪ್ರಚಾರ ಸಂಸ್ಥೆ, ವಿಜಾಪುರ, ೧೯೯೫.

೧೧೫. ಶೈವಾಗಮಗಳು ಮತ್ತು ವಚನ ಸಾಹಿತ್ಯ, ಡಾ. ಎಂ. ಶಿವಕುಮಾರಸ್ವಾಮಿ, ಶ್ರೀಬಸವೇಶ್ವರ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೨೦೦೩

೧೧೬. ಸಕಲಪುರಾತನರ ಬೆಡಗಿನ ವಚನಗಳು, (ಸಂ.) ಡಾ. ಎಂ.ಎಸ್. ಸುಂಕಾಪೂರ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮.

೧೧೭. ಸಾಹಿತ್ಯ ಪರಿಶೋಧನ, ಡಾ. ಬಿ.ಆರ್. ಹಿರೇಮಠ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೮.

೧೧೮. ಸಾಹಿತ್ಯ ವಿಮರ್ಶೆ, ೧೯೮೫, (ಸಂ.) ಭಗವಾನ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೬.

೧೧೯. ಸಂಪಾದನೆಯ ಸಾರಾಮೃತ, (ಸಂ.) ಡಾ. ಬಿ.ಆರ್. ಹಿರೇಮಠ, ಜಗದ್ಗುರು ತೋಂಟದಾರ್ಯಮಠ, ಗದಗ, ೧೯೮೮.

೧೨೦. ಸಂಶೋಧನ ಲೇಖನಗಳು, (ಸಂ.) ಡಾ. ವಿ.ಜಿ. ಪೂಜಾರ, ಪ್ರಸಾರಾಂಗ, ಗುಲಬರ್ಗಾ, ೨೦೦೫.

೧೨೧. ಸ್ವರ ಏಕೋತ್ತರ ಶತಸ್ಥಲ ಟೀಕೆ, (ಸಂ.) ಡಾ. ಬಿ.ವಿ. ಶಿರೂರ, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೦೭

೧೨೨. ಹಸ್ತಪ್ರತಿ ಸೂಚಿ, (ಸಂ.) ಎಸ್. ಶಿವಣ್ಣ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದ ಲಿಂಗಾಯತ ಅಧ್ಯಯನ ಸಂಸ್ಥೆ, ಗದಗ, ೧೯೮೫.

೧೨೩. ಹಸ್ತಪ್ರತಿ ಅಧ್ಯಯನ ಸಂಪುಟ-೩, ಸಂಚಿಕೆ-೧, ಡಾ. ಎಫ್.ಟಿ. ಹಳ್ಳಿಕೇರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೧೨೪. ಹಸ್ತಪ್ರತಿ ಅಧ್ಯಯನ, ಸಂಪುಟ ೫, ಸಂಚಿಕೆ-೧, ೨, (ಸಂ.) ಡಾ. ಕೆ. ರವೀಂದ್ರನಾಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೧೨೫. ಹಸ್ತಪ್ರತಿ ವ್ಯಾಸಂಗ ಕನ್ನಡ ಹಸ್ತಪ್ರತಿ ಭಂಡಾರಗಳು, (ಸಂ.) ಡಾ. ಎಫ್. ಟಿ. ಹಳ್ಳಿಕೇರಿ, ಡಾ. ಕೆ. ರವೀಂದ್ರನಾಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೧೨೬. ಹಸ್ತಪ್ರತಿಶಾಸ್ತ್ರ, ಡಾ. ಎಂ.ಎಂ. ಕಲಬುರ್ಗಿ, ಸ್ನೇಹ ಪ್ರಕಾಶನ, ಬೆಂಗಳೂರು, ೧೯೯೩.

೧೨೭. ಹಸ್ತಪ್ರತಿ ಕ್ಷೇತ್ರಕಾರ್ಯ, ಡಾ. ಎಫ್.ಟಿ. ಹಳ್ಳಿಕೇರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೧೨೮. ಹದಿನೈದನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ, ಪ್ರೊ. ಕೆ. ನಾಗೇಂದ್ರಪ್ಪ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬.

೧೨೯. ಷಣ್ಮುಖ ಶಿವಯೋಗಿಗಳು ಒಂದು ಅಧ್ಯಯನ, ಡಾ. ರಾಜಶೇಖರ ದಾನರಡ್ಡಿ, ತುಷಾರ ಪ್ರಕಾಶನ, ಗದಗ, ೨೦೧೧

೧೩೦. ಷಟ್‌ಸ್ಥಲ : ಒಂದು ಅಧ್ಯಯನ, ಅನ್ನದಾನೀಶ್ವರ ಶಿವಯೋಗಿಗಳು ಮುಂಡರಗಿ, ಶ್ರೀ ಬಸವೇಶ್ವರ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೩

೧೩೧. ಷಟ್‌ಸ್ಥಲಜ್ಞಾನಸಾರಾಮೃತ ಟೀಕೆ, (ಸಂ.) ಡಾ. ಎಸ್. ವಿದ್ಯಾಶಂಕರ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೮೭.

**ಪತ್ರಿಕೆಗಳು**

೧. ಕನ್ನಡ ಅಧ್ಯಯನ, (ಸಂ.) ಡಾ. ಎ.ವಿ. ನಾವಡ, ಸಂಪುಟ-೧೧, ಸಂಚಿಕೆ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫, (ತ್ರೈಮಾಸಿಕ)

೨. ಕನ್ನಡ ಅಧ್ಯಯನ (ಸಂ.) ರಹಮತ್ ತರೀಕೆರೆ, ಬಿಸಿಲು ಸಂಚಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫, (ತ್ರೈಮಾಸಿಕ)

೩. ಕಲ್ಯಾಣ ಕಿರಣ, ಸಂಪುಟ, (ಸಂ.) ಜಗದ್ಗುರು ಮಾತೆಮಹಾದೇವಿ, ಮಾಸಿಕ ಪತ್ರಿಕೆಗಳು, ವಿಶ್ವಕಲ್ಯಾಣ ಮಿಷನ್, ರಾಜಾಜಿನಗರ ಬೆಂಗಳೂರು.

೪. ಬಸವಮಾರ್ಗ, ಮಾಸಿಕ ಪತ್ರಿಕೆ ಸಂಪುಟಗಳು, (ಸಂ.) ಲಿಂಗಾನಂದ ಸತ್ಯಂಪೇಟೆ, ಶಹಾಪೂರ, ಯಾದಗಿರಿ ಜಿಲ್ಲೆ.

೫. ಬಸವ ಬೆಳಗು, ತ್ರೈಮಾಸಿಕ ಪತ್ರಿಕೆ, ಸಂಪುಟ–೨, ೧೯೯೩, ಸಂಚಿಕೆ – ೪, ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನಮಠ, ಇಲಕಲ್ಲ.

೬. ಬಸವಪಥ, ಮಾಸಿಕ ಸಂಪುಟಗಳು, ಅಕ್ಟೋಬರ್–೨೦೧೦, ಬಸವಸಮಿತಿ, ಬಸವ ಭವನ, ಬೆಂಗಳೂರು.

೭. ಸಪ್ನಲೋಕ, ಮಾಸಿಕ ಪತ್ರಿಕೆ, ಮಾರ್ಚ್, ೨೦೦೨, (ಸಂ.) ಡಾ. ಎಸ್. ವಿದ್ಯಾಶಂಕರ, ಸ್ನೇಹಾ ಪ್ರಿಂಟರ್ಸ್ ಅತ್ತಿಗುಪ್ಪೆ, ವಿಜಯನಗರ, ೨ನೇ ಹಂತ, ಬೆಂಗಳೂರು.

೮. ಲಿಂಗಾಯತ (ಸಂ.) ಡಾ. ಎನ್.ಜೆ. ಮಹಾದೇವಪ್ಪ, ಸಂಪುಟ–೪, ಸಂಚಿಕೆ–೫, ಆಗಸ್ಟ್, ೨೦೦೯, ನಾಗನೂರ ರುದ್ರಾಕ್ಷಿಮಠ, ಶಿವಬಸವನಗರ, ಬೆಳಗಾವಿ.

೯. ಲಿಂಗಾಯತ, ಸಂಪುಟ–೪, ಸಂಚಿಕೆ–೧೨, ೨೦೧೦, ಶ್ರೀನಾಗನೂರ ರುದ್ರಾಕ್ಷಿಮಠ, ಶಿವಬಸವನಗರ, ಬೆಳಗಾವಿ.

೧೦. ಹಸ್ತಪ್ರತಿ ಅಧ್ಯಯನ (ಸಂ.) ಡಾ. ಎಫ್.ಟಿ. ಹಳ್ಳಿಕೇರಿ, ಸಂಪುಟ–೩, ಸಂಚಿಕೆ–೨, ಜನೇವರಿ–ಜೂನ್ ೨೦೦೬, ಪ್ರಸಾರಾಂಗ, ಕ.ವಿ.ವಿ. ಹಂಪಿ.

***